


ಕನ್ನಡ ಭಾಷಾಸೇವಕ

LIBRARY EDITION

# A CRITICAL COLLECTION
OF
# SARVAJNA VACHANAS

FOR STUDENTS OF KANARESE LITERATURE
WITH
INTRODUCTION, NOTES, ANALYSES, CONTENTS,
DIFFERENT READINGS, INDEX TO
THE BEGINNINGS OF VERSES
ETC., ETC.

ತ್ರಿಪದಿರೂಪವಾಗಿ ರಚಿಸಿದ

# ಸರ್ವಜ್ಞ ವಚನಗಳು

ಸಂಶೋಧಿತವಾದ ಸಂಪೂರ್ಣ ಸಂಗ್ರಹ
ವಿಶೇಷಾವೃತ್ತಿ

ಪಂಡಿತರಿಂದ ಪರಿಶೋಧಿತವಾಗಿ ಮುನ್ನುಡಿ, ಪ್ರಸ್ತಾವನೆ, ಗ್ರಂಥಕರ್ತನನುಡಿ, ವಿಷಯಸೂಚಿಕೆ,
ವಿಷಯಾನುಕ್ರಮಣಿಕೆ, ಗ್ರಂಥಶುದ್ಧೀಕರಣಾಧಾರ, ವಿಷಯವಿಭಜನೆ, ಪಾಠಾಂತರ,
ಸಟೀಕತಾತ್ಪರ್ಯ ಸಹಿತ ವಿಶೇಷ ಟಿಪ್ಪಣಿ, ಪದ್ಯಾನುಕ್ರಮಣಿಕೆ, ಪರಿಶಿಷ್ಟ
ಇತ್ಯಾದಿ ವಿವಿಧ ಸಹಾಯಗಳಿಂದ ಕನ್ನಡ ಸಾಹಿತ್ಯ ವಿದ್ಯಾರ್ಥಿ
ಗಳಿಗಾಗಿ ತಯಾರಿಸಿದ್ದು.

---

ಚೆನ್ನಪ್ಪ ಉತ್ತಂಗಿ
ಕೆ. ಇ. ಮಿಶನ್ ಹಾಯ್‌ಸ್ಕೂಲ್, ಧಾರವಾಡ.

---

ಧಾರವಾಡ ಕರ್ನಾಟಕ ಪ್ರಿಂಟಿಂಗ ವರ್ಕ್ಸ, ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟಿತು.
೧೯೨೭



ಮೊದಲನೆಯ ಆವೃತ್ತಿ } ಬೆಲೆ ೨-೧೨-೦ { ಪ್ರತಿಗಳು ೧೦೦೦

# ಸಮರ್ಪಣ

ವಚನಪುಷ್ಪಗಳಿಂದ ತುಂಬಿ ಘಮಘಮಿಸುವ

**ಸರ್ವಜ್ಞನ ಈ ಗ್ರಂಥವನ್ನು**

ಕನ್ನಡ ವಾಙ್ಮಯ ನಿಷ್ಣಾತರೂ

ಭಾಷಾಸೇವಾತತ್ಪರರೂ

ಆದ

ರಾವಬಹಾದ್ದೂರ ಪ್ರಾಕ್ತನವಿಮರ್ಶ ವಿಚಕ್ಷಣ

**ಆರ್. ನರಸಿಂಹಾಚಾರ್ಯ**

ಎಮ್. ಎ., ಎಮ್. ಆರ್. ಎ. ಎಸ್.

ಇವರ ಚರಣಾರವಿಂದಗಳಿಗೆ

ಸನ್ಮಾನಪೂರ್ವಕವಾಗಿ

ಸಮರ್ಪಿಸಿರುವೆನು.

ಚನ್ನಪ್ಪ ಉತ್ತಂಗಿ

# ಸರ್ವಜ್ಞ !

ಮುಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು ।
ಹಿಂಡನಗಲಿದ ಗಜದಂತೆ ಇಪ್ಪವರ ।
ಕಂಡು ನಂಬುವದು ಸರ್ವಜ್ಞ ॥

ಕರದಿ ಕಪ್ಪರ ಉಂಟು ಹಿರಿದೊಂದು ನಾಡುಂಟು ।
ಹರನೆಂಬ ದೈವ ನಮಗುಂಟು ತಿರಿವರ್ರಿಂ ।
ಸಿರಿವಂತರಾರು ? ಸರ್ವಜ್ಞ ॥

ಕರೆಯುದಲೆ ಬರುವವನ ಬರೆಯುದಲೆ ಓದುವನ ।
ಬರಿಗಾಲಿನಿಂದ ನಡೆವನ ಕರತಂದು ।
ಕೆರದಿ ಹೊಡೆಯೆಂದ ಸರ್ವಜ್ಞ ॥

ಕಂಡುದನು ಆಡೆ ಭೂ । ಮಂಡಲವು ಮುನಿಯುವದು ।
ಕೊಂಡಾಡುತಿಚ್ಛೆ ನುಡಿದರೆ ಜಗವೆಲ್ಲ ।
ಮುಂಡಾಡುತಿಹುದು ಸರ್ವಜ್ಞ ॥

ನಿಶ್ಚಯುವ ಬಿಡದೊಬ್ಬ । ರಿಚ್ಛೆಯಲಿ ನುಡಿಯದಿರು ।
ನೆಚ್ಚಿ ಒಂದೂರೊಳಿರದಿರು ಶಿವನಿನ್ನ ।
ಇಚ್ಛೆಯೊಳಿಹನು ಸರ್ವಜ್ಞ ॥

ಕಪ್ಪರದಲುಂಬುವರು ಒಪ್ಪರದಿ ನಡೆಯುವರು ।
ತಪ್ಪಿದರೆ ಹಲ್ಲ ಕಳೆವರು ಮಹಾತ್ಮರ ।
ಒಪ್ಪವಂ ನೋಡ ಸರ್ವಜ್ಞ ॥

---



ಸರ್ವಜ್ಞಮೂರ್ತಿ

# ಸರ್ವಜ್ಞಮೂರ್ತಿ!

ಓರ್ವನಿಗೆ ಸೇರಿದುದು ಸರ್ವರಿಗೆ ಸೇರುವವೆ? ।
ಗರ್ವದಿಂದಲ್ಲ, ದಿಟವೇಳ್ವೆ ಜನಮನದಿ ।
ಬೇರ್ವರಿದನೊಬ್ಬ ಸರ್ವಜ್ಞ ॥ ೧ ॥

ತಗದ* ಕೆಲಸದ ಬೇರನಗಿದು ಒಗೆಯುವ ನುಡಿಸು ।
ಮುಗಿದ ಮನದೊಂದು ಹೊಸಚೆಲ್ವು ಮೈದೋರೆ ।
ಜಗದಿ ಹೆಸರದಕೆ ಸರ್ವಜ್ಞ ॥ ೨ ॥

ಸರಸ ಮಾತುಗಳಲ್ಲಿ ಬೆರಸಿ ಸಿಡಿಲಿನ ನೀರ ।
ಸುರಿಸಿದನು ವಚನ ಘುಡಘುಡಿಸಿ ಕಿರಿಗನ್ನ† ।
ಡರಸನಿವನೊಬ್ಬ! ಸರ್ವಜ್ಞ ॥ ೩ ॥

ಬಿಟ್ಟಿಲ್ಲ ಭೇದವನು! ಸುಟ್ಟಿಲ್ಲ ಸುಡುಜಗಳ!
ಪಟ್ಟಿರುವ‡ ಜನರನೆಬ್ಬಿಸಲು ನೀ ಮತ್ತೆ ।
ಹುಟ್ಟಿ ಬಾ ಇಂದು! ಸರ್ವಜ್ಞ ॥ ೪ ॥

—ದತ್ತಾತ್ರಯ ಬೇಂದ್ರೆ.

---

* ತಕ್ಕದಲ್ಲದ. † brief and terse Kanarese. ‘ ಕಿರಿದರೊಳೆ ಪಿರಿದ-ರ್ಥಮಂ.’ ( ನೃಪತುಂಗ ). ‡ನಿದ್ರಿಸುವ.

ಎಲ್ಲ ಬಲ್ಲವರಿಲ್ಲ! ಬಲ್ಲವರು ಬಹಳಿಲ್ಲ! ।
ಬಲ್ಲಿದರಿದ್ದು ಬಲವಿಲ್ಲ! ಸಾಹಿತ್ಯ ।
ವೆಲ್ಲವರಿಗಿಲ್ಲ! ಸರ್ವಜ್ಞ ॥

# ಮುನ್ನುಡಿ

ಸರ್ವಜ್ಞನು ಕನ್ನಡ ಭಾಷೆಯಲ್ಲಿ ಒಬ್ಬ ಮಹತ್ವದ ಕವಿಯೆನಿಸಿಕೊಂಡಿರತ್ತಾನೆ. ಇವನಷ್ಟು ಲೋಕಪ್ರಿಯ ಕವಿಯು ಕನ್ನಡದಲ್ಲಿ ಯಾರೂ ಆಗಿ ಹೋಗಿಲೆಂದು ಹೇಳಿದರೆ ತಪ್ಪಾಗದು. ಇವನಲ್ಲಿರುವದೊಂದು ವಿಶೇಷತರವಾದ ಸಂಗತಿಯೇನಂದರೆ, ಇವನು ತನ್ನ ಕವಿತೆಗಳಲ್ಲಿ ನೈತಿಕ ಹಾಗು ಸಾಮಾಜಿಕ ವಿಷಯಗಳನ್ನು ಹೆಚ್ಚಾಗಿ ನಿರೂಪಿಸಿರುವನಲ್ಲದೆ ಅವುಗಳನ್ನು ವ್ಯವಹಾರಿಕ ರೀತಿಯಿಂದ ಬಹು ಸೊಗಸಾದ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಹೇಳಿರುವನು. ಇದೇ ಅವನ ಲೋಕಪ್ರಿಯತೆಗೆ ಮುಖ್ಯ ಕಾರಣವೆಂದು ಹೇಳಬೇಕು.

ಈ ತರದ ಗ್ರಂಥಗಳು ಪಾಶ್ಚಿಮಾತ್ಯ ಭಾಷೆಯಲ್ಲಿ ಹೆರಳವಾಗಿರುವವು. ಇವುಗಳಲ್ಲಿ ಜಗತ್ತಿನ ನಾನಾತರದ ವ್ಯವಹಾರಗಳು ನಾನಾದೃಷ್ಟಿಯಿಂದ ವಿವೇಚಿಸಲ್ಪಟ್ಟಿರುತ್ತವೆ. ಇದರಂತೆಯೇ ಸರ್ವಜ್ಞನಾದರೂ ವ್ಯವಹಾರವನ್ನವಲಂಬಿಸಿ ತನ್ನ ನೈತಿಕ ತತ್ವಗಳನ್ನು ಬೋಧಿಸಿದ್ದಾನೆ. ಇವನು ಜಗತ್ತಿನಲ್ಲಿ ನಡೆಯುವ ನಾನಾ ವ್ಯವಹಾರಗಳನ್ನು ಬಹು ಚನ್ನಾಗಿಯೂ ಸೂಕ್ಷ್ಮವಾಗಿಯೂ ನಿರೀಕ್ಷಿಸಿರುವನು. ಇವಲ್ಲದೆ ಅವನು ಅವುಗಳ ಗುಣಾವಗುಣಗಳನ್ನು ಚನ್ನಾಗಿ ಅರಿತುಕೊಂಡು ಅವುಗಳನ್ನು ಬಹು ಮಾರ್ಮಿಕ ರೀತಿಯಿಂದ ತನ್ನ ಉಕ್ತಿಗಳಲ್ಲಿ ವಿವರಿಸುತ್ತಾನೆ. ಇದರಲ್ಲಿ ಅವನ ಉದ್ದೇಶವು ಜನರಿಗೆ ಜಗತ್ತಿನ ನಿಜಸ್ಥಿತಿಯನ್ನು ತಿಳಿಸಿ, ಅವರನ್ನು ಯುಕ್ತಮಾರ್ಗಕ್ಕೆ ಹಚ್ಚುವದೇ ಇರುತ್ತದೆ. ಸರ್ವಜ್ಞನಂತೆಯೇ ವಚನಕಾರರಾದರೂ ತಮ್ಮ ಉಕ್ತಿಗಳಲ್ಲಿ ನೀತಿಯ ತತ್ವಗಳನ್ನು ಬೋಧಿಸಿದ್ದಾರೆ. ವಚನಕಾರರಿಗೂ ಸರ್ವಜ್ಞನಿಗೂ ಭಾಷಾಸಾಮ್ಯತೆ ಹಾಗೂ ವಿಚಾರಸಾಮ್ಯತೆ ಬಹಳ ಇರುತ್ತದೆ. ಧಾರ್ಮಿಕವಿಷಯದಲ್ಲಿ ಸರ್ವಜ್ಞನು ವಚನಕಾರರ ಅನುಯಾಯಿಯಾಗಿದ್ದರೂ ಇವನ ನಿರೂಪಣಾ ಪದ್ಧತಿಯಲ್ಲಿ ಮಾತ್ರ ಒಂದು ಮಹತ್ವದ ಅಂತರವು ತೋರಿ ಬರುತ್ತದೆ. ಅದೇನಂದರೆ– ಸರ್ವಜ್ಞನು ತನ್ನ ನೀತಿಯ ತತ್ವಗಳನ್ನು ವ್ಯವಹಾರಿಕ ದೃಷ್ಟಿಯಿಂದ ವಿವೇಚಿಸಿದ್ದಾನೆ. ಆದರೆ ವಚನಕಾರರು ಕೇವಲ ಧಾರ್ಮಿಕ ದೃಷ್ಟಿಯಿಂದ ಅವುಗಳನ್ನು ವಿವೇಚಿಸಿದ್ದಾರೆ.

ಇದರಿಂದೆ ಸರ್ವಜ್ಞನ ವಚನಗಳು ಹೆಚ್ಚಿಗೆ ವ್ಯಾಪಕ ಸ್ವರೂಪವನ್ನು ಹೊಂದಿ ಅವು ಎಲ್ಲ ಧರ್ಮದವರಿಗೂ ಪ್ರಿಯವಾಗಿವೆ.

ವಚನಕಾರರಂತೆಯೇ ಶತಕಕಾರರಾದರೂ ಕನ್ನಡವಲ್ಲಿ ನೀತಿಯ ತತ್ವಗಳನ್ನು ಬೋಧಿಸಿದ್ದಾರೆ. ಇವರಲ್ಲಿ ಸೋಮೇಶ್ವರ, ನಿಜಲಿಂಗ, ಮಾಯಿದೇವ, ಕನಕದಾಸ ಮೊದಲಾದವರೇ ಮುಖ್ಯರಿರವರು. ಇವರೆಲ್ಲರು ನೀತಿಯ ತತ್ವಗಳನ್ನು ತಮ್ಮ ಉಕ್ತಿಗಳಲ್ಲಿ ಸಾಮಾನ್ಯವಾಗಿಯೂ ಬಹು ಸೊಗಸಾಗಿಯೂ ವರ್ಣಿಸಿದ್ದಾರೆ. ಆದರೆ ಸಮಾಜದ ನಿಜಸ್ಥಿತಿಯನ್ನು ಕಂಡುಕೊಂಡು ಅದರ ಗುಣಾವಗುಣಗಳನ್ನು ವಿವರಿಸುವಲ್ಲಿ ಮಾತ್ರ ಸರ್ವಜ್ಞನು ಅವರೆಲ್ಲರಿಗೂ ಮಿಗಿಲಾದವನಾಗಿರುತ್ತಾನೆ. ಅವನು ಯಾವ ವಿಷಯವನ್ನು ತೆಗೆದುಕೊಂಡರೂ ತನ್ನ ನಾಮಕ್ಕೆ ಸರಿಯಾಗಿ ಅದರಲ್ಲಿ ತನ್ನ ಬಹು ಶ್ರುತತ್ವವನ್ನು ತೋರಿಸಿದ್ದಾನೆ. ಮತ್ತು ಟೀಕಾತ್ಮಕ ರೀತಿಯಿಂದ ಅವುಗಳನ್ನು ಮರ್ಮಭೇದಕವಾಗಿ ವಿವೇಚಿಸಿದ್ದಾನೆ. ಆದ್ದರಿಂದ ಸರ್ವಜ್ಞನು ಕನ್ನಡದಲ್ಲಿ ಒಬ್ಬ ಮಹತ್ವದ ಟೀಕಾತ್ಮಕ ವಿವೇಚನಕಾರನಾಗಿ ಹೋಗಿರುನೆಂದು ಹೇಳಬಹುದು.

ಅವನ ವಿವೇಚನಾಪದ್ಧತಿಯಾದರೂ ವಿಷಯಗಳನ್ನು ಮನಸ್ಸಿನಲ್ಲಿ ಬಹು ದೃಢವಾಗಿ ಮೂಡಿಸುವಂಥಾದ್ದಿರುತ್ತದೆ. ಇದಕ್ಕೆ ಅವನ ಭಾಷಾಸರಣಿಯು ಬಹು ಸೊಗಸಾಗಿರುವದೇ ಮುಖ್ಯ ಕಾರಣ. ಅವನ ವಾಕ್ಯಗಳಲ್ಲಿ ದೊಡ್ಡ ದೊಡ್ಡ ಗಡುಚಾದ ಶಬ್ದಗಳಾವವೂ ಇರುವದಿಲ್ಲ. ಯಾವಾಗಲೂ ಅವನು ಅಚ್ಚಗನ್ನಡ ಸಣ್ಣ ಸಣ್ಣ ಶಬ್ದಗಳನ್ನು ಪ್ರಯೋಗಿಸುವದುಂಟು. ಅಲ್ಲಲ್ಲಿ ಪ್ರಾಸುಗಳನ್ನು ಜೋಡಿಸುವ ಅವನ ಜಾಣ್ಮೆಯು ಬಹು ಮಿಗಿಲಾದದ್ದು; ಇದರಿಂದ ಅವನ ಪದ್ಯಗಳು ಅಚ್ಚುಕಟ್ಟಾಗಿಯೂ ಅಂದವಾಗಿಯೂ ಇವೆ. ಅವುಗಳನ್ನೋದಿದ ಕೂಡಲೆ ಅವು ಗಾದೆಯ ಮಾತುಗಳೋ ಏನೋ ಎಂಬಂತೆ ಭಾಸವಾಗುತ್ತದೆ. ಈ ಮೇರೆಗೆ ಸರ್ವಜ್ಞನು ಕನ್ನಡ ನಾಡಿನಲ್ಲಿ ಒಬ್ಬ ನೀತಿಜ್ಞನೂ ವ್ಯವಹಾರವಿದನೂ ಟೀಕಾಕಾರನೂ ಆಗಿಹೋಗಿಪ್ಪ ಕನ್ನಡ ವಾಙ್ಮಯದಲ್ಲಿ ಅವನು ಒಂದು ಅತ್ಯುಚ್ಚ ಪದವಿಯನ್ನು ಹೊಂದಿದ್ದಾನೆಂದು ಹೇಳತಕ್ಕದ್ದು.

ಇಂಥ ಸರ್ವಜ್ಞನ ವಚನಗಳನ್ನು ಬಹು ಕಷ್ಟಪಟ್ಟು ಶೋಧಿಸಿ, ಕನ್ನಡಿಗರ ಎದುರಿಗೆ ಮ॥ ರಾ॥ ರಾ॥ ಚನ್ನಪ್ಪ ಉತ್ತಂಗಿ ಇವರು ಇಟ್ಟಿದ್ದಕ್ಕೆ ಕನ್ನಡಿ

ರೆಲ್ಲರೂ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ ಸರಿ. ಈ ಕಾರ್ಯದಲ್ಲಿ ತಮಗೆ ಒದಗಿದ ತೊಂದರೆಗಳನ್ನು ಅವರು ಈ ಗ್ರಂಥದಲ್ಲಿ ವಿವರಿಸಿದ್ದಾರೆ. ಅದನ್ನು ನೋಡಿ ಯಾರ ಮನಸ್ಸಾದರೂ ಕರಗದೆ ಇರದು. ಇಂಥ ಸಂಶೋಧನ ಕಾರ್ಯಗಳಲ್ಲಿ ಅತ್ಯಂತ ಮಾನಸಿಕ ಹಾಗು ಶಾರೀರಿಕ ಶ್ರಮವು ಬೀಳುತ್ತದೆ. ಇದನ್ನೆಲ್ಲ ಸಹಿಸಬೇಕಾದರೆ ಕೈಕೊಂಡ ಕಾರ್ಯದಲ್ಲಿ ನಿಚ್ಚಟವಾದ ನಿಷ್ಕಾಮ ಪ್ರೀತಿಯು ಬೇಕು. ಇಂಥ ಪ್ರೀತಿಯು ಗ್ರಂಥಕರ್ತರಲ್ಲಿ ಇದ್ದುದರಿಂದಲೇ ಅವರಿಂದ ಈ ಕಾರ್ಯವು ಸಿದ್ಧಿಗೆ ಹೋಗಿರುವದು. ಇದಕ್ಕಾಗಿ ಗ್ರಂಥಕರ್ತರು ಎಲ್ಲ ಕನ್ನಡಿಗರ ಹೊಗಳಿಕೆಗೆ ಅತ್ಯಂತ ಪಾತ್ರರಾಗಿರುವರು.

| | |
|---|---|
| ಬಿಜಾಪುರ. | ರಾ॥ ಸಾಹೇಬ ಫ. ಗು. ಹಳಕಟ್ಟಿ. |
| ತಾ॥೧೨ ೬-೨೩. | ಬಿ. ಎ. ಎಲ್. ಎಲ್.ಬಿ. |



|| ಕಂದ ||

ಕುರಿವಂತು ಪೆರರ ಬಗೆಯುಂ ।
ತೆರೆದಿರೆ ಪೆರರ್ಗರಿಪಲಾರ್ಪವಂ ಮಾತರಿವಂ ॥
ಕಿರಿದರೊಳೆ ಪಿರಿದುಮರ್ಥಮು ।
ನರಿಪಲ್ನೆರೆ ವಾತನಾತನಿಂದಂ ನಿಪುಣಂ ॥

—ನೃಪತುಂಗ.

|| ಕಂದ ||

ಕಿವಿಯಿಂ ಬಗೆವುಗುವೊಡೆಕೊಂ ।
ಕುವೆತ್ತ ಪೊಸನುಡಿಯೆ ಪುಗುಗುಮುಳಿದುದು ಸರುಸ್ಸೈ ॥
ತವರಚನೆ ಮಾಡಿ ಸರುಸ್ಸೈ ।
ತುವೋಕುಮೇಂ ಬಗೆಯ ಬಟ್ಬೆಯುಂ ಮುಟ್ಬುಗುಮೇ ॥

ಮೃದುಮಧುರ ವಚನ ರಚನೆಯೊ ।
ಳುದಾತ್ತಮರ್ಥ ಪ್ರತೀತಿಯುಂ ಕೇಳ್ವಜನ ।
ಕ್ಕಿದಿರೊಳ್ಕುಡದಂದದು ಕ ।
ಬ್ಬದೊಳಿದರ್ಿಂ ಕವಿಯ ಮನದೊಳಿರ್ದಂತೆವಲಂ ॥

—ಪಂಪ.

|| ಚಂಪಕಮಾಲಾ ವೃತ್ತ ||

ಮರನೀಗುಂ ಮಣಿಯೀಗುವೊಂದು ಪಶುವೀಗುಂ ಕೇಳಿವೆಂದೋಳಿ-
ಯೊಳ್ ।
ಪುರುಡಂ ಪುಟ್ಟಿಸಿ ಕಾಷ್ಟಮುಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ ॥
ಮರುಳಂ ಪೋಪುರುಳಾಗಿಪರ್ ... ... ... ।

—ನೇಮಿಚಂದ್ರ.

# ಗ್ರಂಥಕರ್ತನ ಎರಡು ನುಡಿಗಳು

**ವಾಚಕಮಹಾಶಯರೇ!** ನಾನೊಬ್ಬ ತಿರುಳುಗನ್ನಡ ತಿರುಕ. ತಿಳಿಗನ್ನಡಕ್ಕಿಂತ ತಿರುಳುಗನ್ನಡವೆಂಬ ತುಪ್ಪದನ್ನದ ಮೇಲೆಯೇ ನನಗೆ ಹೆಚ್ಚು ಅಪೇಕ್ಷೆ. ದಿನಾಲು ಅವನ್ನೇ ಬೇಡುವ ಈ ಮೂಳನಿಗೆ ನೀಡುವವರು ಯಾರು? ಸರ್ವಜ್ಞನ ವಚನಗಳೆಂಬ ಸುವಾಸನೆಯ ಸಣ್ಣಕ್ಕಿಕಾಳುಗಳು ಕನ್ನಡ ನಾಡ ನಡುಬೀದಿಯಲ್ಲಿ ಮಣ್ಣು ಬೆರೆದು ಬಿದ್ದದ್ದೇ ನನಗೊಂದು ಹಬ್ಬವಾಯಿತು. ದಿನಾಲು ಅವನ್ನು ಮಣ್ಣೊಡನೆ ಕಟ್ಟಿತಂದು ಹಸನುಮಾಡಿ, ತೊಳೆದು, ಎಸರಿಟ್ಟು, ಬಿಸಿಬೋನವನ್ನು ಬಿಸಿದಿಡಲು ಕೇಳುವದೇನದೆ! ಬಡಿಸಿದರೆ ಮನೆಯೆಲ್ಲ ಗಮಗಮ ವಾಸನೆ. ಬಾಯಲ್ಲಿ ಹಾಕಿಕೊಂಡರೆ ಬಹು ರುಚಿ. ಹೊಟ್ಟೆಗಂತೂ ಅತಿಹಿತ. ಸರ್ವರಿಗೆ ಅವರವರ ತರದಂತೆ ರುಚಿಸಿ ಕ್ಷೇಮವನ್ನು ಕೊಡುವ ಈ ವಿಲಕ್ಷಣ ಆಹಾರವು ಸದಾ ಸಿದ್ಧವಾಗಿದ್ದು ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ಗುಣಗಳವರಿಗೂ ಅನಾಯಾಸವಾಗಿ ದೊರೆಯುವಂತೆ ಅವನ್ನು **ಪಾರಮಾರ್ಥಿಕ, ನೈತಿಕ, ಲೌಕಿಕ**ವೆಂಬ ಮೂರು ಬೇರೆ ಬೇರೆ ತಬಕಗಳಲ್ಲಿ ಬಡಿಸಿದ್ದೇನೆ. ಕನ್ನಡಿಗರೆಲ್ಲರು ತಮ ತಮಗೆ ಬೇಕಾದ ತಬಕಗಳನ್ನು ಮುಂದೆಳೆದು ಈ ಷಡ್ರಸಾನ್ನವನ್ನು ತಿಂದು ತೇಗಿ ಆನಂದಗೊಂಡು ಆಯುರಾರೋಗ್ಯವನ್ನು ಪಡೆಯಲೆಂಬುವದೇ ನನ್ನ ಅಭೀಷ್ಟವಾಗಿದೆ.

ಸರ್ವಜ್ಞನೆಂದರೆ ಬಾಯಿಗೆ ಬಂದಂತೆ ಬೊಗಳಿದ ಕವಿಯೆಂದು ಅವನ ಬಗ್ಗೆ ಅನೇಕ ವರ್ಷಗಳವರೆಗೆ ತಿರಸ್ಕಾರವನ್ನು ತಾಳಿದ್ದ ನಾನು ಫಕ್ಕನೆ ಅವನ ವಚನಗಳನ್ನಭ್ಯಾಸಿಸ ಜಾಗ್ರತನಾದದ್ದು ಹೇಗೆ? ಅವನ ಗ್ರಂಥವನ್ನು ಸಂಶೋಧಿಸುವ ಮಟ್ಟಿಗೆ ನನ್ನನ್ನು ಪ್ರೇರಿಸಿದ ಸಂಗತಿಯಾವದು? ಎಂದು ತಿಳಿಯಲು ವಾಚಕರಲ್ಲಿ ವಾಂಛೆಯುಂಟಾಗಬಹುದು. ಇದಕ್ಕೆ ವಿಲಾಯತಿಯ ಒಬ್ಬ ಮಿಶನರಿಯವರೇ ಮೂಲಕಾರಣರೆಂದು ನಾನಿಲ್ಲಿ ಹೇಳದಿರಲಾರೆನು. ಅವರನ್ನು ಕುರಿತು ಈ ಮುಂದಿನ ವಿಸ್ತಾರವು ಒಂದು ಪ್ರಕಾರವಾಗಿ ಕನ್ನಡದ ಅಭಿಮಾನಿಗಳನ್ನು ನಾಚಿಸುತ್ತಿದ್ದರೂ ಮತ್ತೊಂದು ಪ್ರಕಾರವಾಗಿ ಅವರೆಲ್ಲ

ರನ್ನು ಮಾತೃಭಾಷಾಸೇವೆಗೆ ಪ್ರೋತ್ಸಾಹಪಡಿಸುತ್ತಿರುವದು. ಹೇಗಂದರೆ—ನಾನು ಕೆಲವು ವರ್ಷಗಳ ಹಿಂದೆ ಬಾಸೆಲ್ ಮಿಶನ್ನಿಗೆ ಸೇರಿದ ಮಿಶನರಿಗಳಲ್ಲೊಬ್ಬರಿಗೆ ಕನ್ನಡವನ್ನು ಕಲಿಸುತ್ತಿದ್ದಾಗ್ಗೆ ಸರ್ವಜ್ಞನ ಪದ್ಯಗಳನ್ನು ಹೇಳಿಕೊಡಬೇಕಾಗಿ ಬಂತು. ಸುಲಭಭಾಷೆಗೆ ಮೆಚ್ಚಿದ ಆ ಪರದೇಶಸ್ಥರು ಸಹಜವಾಗಿ ಇವನ ಪದ್ಯಗಳನ್ನು ಪ್ರೀತಿಯಿಂದ ಓದುತ್ತ ಅಲ್ಲಲ್ಲಿಗೆ ತಮ್ಮ ವಿಚಾರಗಳೂ ಅವನ ವಿಚಾರಗಳೂ ಬಹುಮಟ್ಟಿಗೆ ಹೋಲುತ್ತಿರುವದನ್ನು ಕಂಡು ಚಕಿತರಾಗಿ ಸರ್ವಜ್ಞನು ಹುಟ್ಟಿದ ಸ್ಥಳವು ಯಾವದು ? ಅವನು ಯಾವ ಮತಸ್ಥನಿದ್ದನು ? ಎಂದು ಪ್ರಶ್ನಿಸುವವರಾದರು. ಆ ಕಾಲಕ್ಕೆ ಈ ವಿಷಯದಲ್ಲಿ ಅವರಂತೆ ಅಜ್ಞಾನಿಯಾಗಿದ್ದ ನಾನು ಏನೊಂದು ಅರಿಯೆನೆಂದು ಬಹು ವ್ಯಸನದಿಂದ ಉತ್ತರ ಕೊಟ್ಟೆನು. ಆದರೆ ಅವರು, ಬೇರೆ ಪದ್ಯಗಳನ್ನೋದುತ್ತ ಹೋದಂತೆ ತಿರುಗಿ ಪ್ರೇರಿತರಾಗಿ ಕವಿಯು ಬದುಕಿದ ಕಾಲ, ಅವನು ಬೆಳೆದ ಪರಿಸ್ಥಿತಿ, ಆ ಕಾಲದಲ್ಲಿ ಕರ್ನಾಟಕದ ವಾತಾವರಣ, ಇವೇ ಮೊದಲಾದ ಸಂಗತಿಗಳನ್ನು ಕುರಿತು ಮತ್ತೂ ಮತ್ತೂ ಪ್ರಶ್ನಿಸಲು ನಾನು ನಿರುತ್ತರನಾಗಿ ತಲೆ ಅಲ್ಲಾಡಿಸಿದ ಹೊರತು ಬೇರೊಂದು ಉಪಾಯತೋರದೆ ಕೆಲವು ನಿಮಿಷಗಳವರೆಗೆ ಸುಮ್ಮನೇ ಕುಳಿತುಕೊಂಡವನು ತಿರುಗಿ ಅಭ್ಯಾಸವನ್ನು ಮುಂದರಿಸಿ ನಾಲ್ಕೈದು ಪದ್ಯಗಳ ಅರ್ಥವನ್ನು ಹೇಳುತ್ತಲೇ ಸಮಯವು ಮುಗಿದು ಹೋದ್ದರಿಂದ ಎಂದಿನಂತೆ ಮನೆಗೆ ಬಂದೆನು. ನಾನು ಸರ್ವಜ್ಞನನ್ನು ಬಿಟ್ಟುಬಂದರೂ ಸರ್ವಜ್ಞನು ನನ್ನನ್ನು ಬಿಡಲೊಲ್ಲನು ! ಎಲ್ಲಿ ಹೋದರೂ ಇವನ ಸಂಬಂಧವಾದ ಯೋಚನೆಗಳೇ ನನ್ನ ತಲೆಯೊಳಗೆ ತುಂಬಿ ಆ ಮಿಶನರಿಯವರು ಮಾಡಿದ ಪ್ರಶ್ನೆಗಳ ಬಗ್ಗೆ ಮೊದಲು ಅವನ ಗ್ರಂಥವನ್ನೇ ಶೋಧಿಸಬೇಕೆಂದು ನಿಶ್ಚಯಮಾಡಿಕೊಂಡೆನು. ಮರುದಿನ ಎಂದಿನಂತೆ ಕನ್ನಡವನ್ನು ಹೇಳಿಕೊಡಲಿಕ್ಕೆ ನಾನು ಅವರಲ್ಲಿಗೆ ಹೋದಾಗ ಮಹಾರಾಷ್ಟ್ರದಲ್ಲಿ ಕೆಲಸಮಾಡುತ್ತಿರುವ ನೆಲ್ಸನ್ ಫ್ರೆಜರ್ ಎಂಬವರು ಆಂಗ್ಲಭಾಷೆಯಲ್ಲಿ ಮುದ್ರಿಸಿದ ತುಕಾರಾಮನ ಅಭಂಗದ ಎರಡು ಸಂಪುಟಗಳು ಅವರ ಮೇಜಿನ ಮೇಲಿಟ್ಟಿರುವದನ್ನೂ ಮಹಾರಾಷ್ಟ್ರದವರು ತುಕಾರಾಮನನ್ನು ಮುಂದಕ್ಕೆ ತಂದಂತೆ ಕನ್ನಡಿಗರೂ ಸರ್ವಜ್ಞನನ್ನು ತರಬೇಕೆಂಬ ಉದ್ದೇಶದಿಂದಲೋ ಏನೋ ತಿಳಿಯದು. ಅವರು ಇವನ ವಚನಗಳನ್ನು ಆಂಗ್ಲ ಭಾಷೆಗೆ ಪರಿವರ್ತಿಸುತ್ತಿರುವದನ್ನೂ ಕಂಡೆನು. ಕಷ್ಟಕರವಾದ ಈ ಕೆಲಸವು ಸಾಂಗವಾಗಿ ಸಾಗು

ನಂತೆ ಅವರು ಇವನ ಪದ್ಯಗಳದೊಂದು ವರ್ಣಾನುಕ್ರಮಣಿಕೆಯನ್ನು ಮಾಡಿದ್ದಲ್ಲದೆ ಅವನ ಕೋಶರಚನೆಗೆ ಸವರಿಸುತ್ತಿದ್ದದ್ದೂ ನನಗೆ ತಿಳಿದು ಬಂತು. ಇದರಿಂದ ನನ್ನಲ್ಲಿ ಅಪೂರ್ವಜಾಗ್ರತೆಯುಂಟಾಗಿ ನಾನೂ ಇವರ ಪದ್ಧತಿಯನ್ನನುಸರಿಸಿ ಕೆಲಸಮಾಡಬೇಕೆಂಬ ಹವ್ಯಾಸವು ಹುಟ್ಟಿತು. ಇದೇ ಸಮಯಕ್ಕೆ ಕಲಕತ್ತೆಯಿಂದ ಕೆಲಸದ ನಿಮಿತ್ತ ವರ್ಗವಾಗಿ ಧಾರವಾಡಕ್ಕೆ ಬಂದು, ಹೋದ ಹೋದಲ್ಲಿ ತಾವು ಕಂಡ ವೈಚಿತ್ರ್ಯಗಳನ್ನು ಬರೆದಿಡುತ್ತಿದ್ದ ರೇಲ್ವೆಯ ಅಧಿಕಾರಸ್ಥರೊಬ್ಬರು ಕನ್ನಡಿಗರ ಆಚಾರವಿಚಾರಗಳನ್ನು ತಿಳಿಯಲೆತ್ನಿಸುತ್ತ ಹೇಗೆಯೋ ಸರ್ವಜ್ಞನ ವಿಷಯವಾಗಿ ಕೇಳಿ, ಅವನ ವಿಚಾರಗಳಿಗೆ ಮೆಚ್ಚಿ, ಅವನದೊಂದು ಗ್ರಂಥವನ್ನು ಕೊಂಡು ಕೊಂಡು, ತಮಗೆ ಕನ್ನಡವು ಬಾರದ್ದರಿಂದ ಅನೇಕರ ಸಹಾಯವನ್ನು ಕೇಳುತ್ತ, ಯಾರೂ ತಮ್ಮ ಸಮಯವನ್ನು ಇದಕ್ಕೆ ವೆಚ್ಚ ಮಾಡಮಾನಸ್ಸಿಲ್ಲದಿರುವದನ್ನು ಕಂಡು ವ್ಯಾಕುಲಚಿತ್ತರಾಗಿದ್ದವರು ಒಂದು ದಿನ ದೈವಯೋಗದಿಂದ ನನ್ನಲ್ಲಿಗೆ ಬಂದು ತಮ್ಮ ವೃತ್ತಾಂತವನ್ನು ಹೇಳುವವರಾದರು. ನಾನು ಅವರಿಗೆ ನನ್ನಿಂದಾಗುವಷ್ಟು ಸಹಾಯಮಾಡುವವಕ್ಕೆ ಒಪ್ಪಿಕೊಂಡು ಅವರ ಅನುಕೂಲದಂತೆ ವಾರಕ್ಕೊಮ್ಮೆ ಕೂಡಿ ಬರುವವನ್ನು ಗೊತ್ತುಮಾಡಿ ಅವರಿಂದ ಅಂಕಿತವಾದ ಪದ್ಯಗಳನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿಕೊಟ್ಟ ಬಳಿಕ ಅವರು ಪುನಃ ಅವುಗಳನ್ನು ಬಂಗಾಲಿ ಭಾಷೆಯಲ್ಲಿ ಪದ್ಯರೂಪವಾಗಿ ರಚಿಸಿ ಕಲಕತ್ತೆಯ ಒಂದು ವರ್ತಮಾನಪತ್ರದಲ್ಲಿ ಪ್ರಸಿದ್ಧಮಾಡಹತ್ತಿದರು. ಸರ್ವಜ್ಞನ ವಿಚಾರಗಳಿಗೆ ಮನವೊಲಿದ ಅವರು ಒಂದು ದಿನ ನನ್ನೊಡನೆ ಸಂಭಾಷಿಸುವಲ್ಲಿ ಅವನ ಗ್ರಂಥವನ್ನು ವಿವಿಧ ಹಿಟ್ಟುಗಳಿಂದ ತುಂಬಿ ತಯಾರಿಸಿ ತಂದಿಟ್ಟ ತಂಬಿಟ್ಟಿನ ತಬಕಕ್ಕೆ ಸರಿಮಾಡಿ ಹೇಳಿದ್ದಲ್ಲದೆ ಒಮ್ಮೆ ತಮಗೊಬ್ಬ ಕನ್ನಡಿಗನು—ಅದು ಕನ್ನಡದ ಜೀವಾಳದಿಂದ ತುಂಬಿ ತುಳುಕುತ್ತ ಕನ್ನಡದ ಸೌಂದರ್ಯದ ಸೊಬಗಿನಿಂದ ಮೆರೆಯುತ್ತ ತಿರುಳುಗನ್ನಡದ ತನಿಗಂಪನ್ನು ಬಹುದೂರದವರೆಗೆ ಬೀರುತ್ತ ಕಂಗೊಳಿಸುವ ಕರ್ನಾಟಕದ ಹೂದೋಟವೆಂದೂ ಅದರಲ್ಲಿ ಕೆಲವು ದಿನಸ ತಿರುಗಾಡಿದರೆ ಸಾಕು ನನ್ನಂಥ ಪರದೇಶಸ್ಥನ ವಸ್ತ್ರಗಳಾದರೂ ಸುವಾಸಿಸದಿರಲಾರವೆಂದೂ ಹೇಳಿದನೆಂಬದಾಗಿ ನನಗೆ ತಿಳಿಸಿದರು. ಈ ಎಲ್ಲ ಸಂಗತಿಗಳನ್ನು ಮನಸ್ಸಿಗೆ ತಂದು ಪರ್ಯಾಲೋಚಿಸಲು ನನ್ನಲ್ಲುಂಟಾದ ಕಸವಿಸಿಯು ಅಷ್ಟಿಷ್ಟಲ್ಲ. ಸಾವಿರಾರು ಮೈಲು ದೂರದಿಂದ ಬಂದು ಸ್ವಲ್ಪ ಕನ್ನಡವನ್ನಭ್ಯಾಸಿಸಿದ ಆ ವಿಭಾಯತಿಯು

ಮಿಶನರಿಯವರೂ ನೂರಾರು ಮೈಲು ದೂರದಿಂದ ಬಂದು ಏನೂ ಕನ್ನಡವನ್ನ
ರಿಯದ ಆ ವಂಗ ಬಂಧುಗಳೂ ತಮ್ಮ ದೇಶದ ಕವಿಯಲ್ಲದ ಸರ್ವಜ್ಞನ
ವಿಷಯಕ್ಕೆ ಇಷ್ಟು ಪ್ರಯಾಸಪಡುತ್ತಿರಲು ಕರ್ನಾಟಕಸ್ಥನೂ ಕನ್ನಡಿಗನೂ
ಸರ್ವಜ್ಞನು ಜನಿಸಿದ ಜಿಲ್ಹೆಯಲ್ಲಿ ಜನಿಸಿದವನೂ ಆಗಿರುವ ನಾನು ಈ ವಿಷಯ
ದಲ್ಲಿ ನಿಶ್ಚಿಂತನಾಗಿ ಕೈಮುಚ್ಚಿ ಕೂತುಕೊಳ್ಳುವದು ಕೇವಲ ಲಾಂಛನವೆಂದು ಆ
ದಿವಸದಿಂದಲೇ ಸರ್ವಜ್ಞನ ಸೇವೆಗೆ ಕಂಕಣಬದ್ಧನಾದೆನು. ಆದರೆ ಮಾಡು
ವದೇನು ? ಸರಸ್ವತಿಯೂ ಲಕ್ಷ್ಮಿಯೂ ಸದ್ಯಕ್ಕೆ ನಮ್ಮ ದೇಶವನ್ನು ಬಿಟ್ಟು
ವಿಲಾಯತಿಯಲ್ಲಿ ವಾಸಮಾಡುವಂತೆ ತೋರುತ್ತಿರುವದರಿಂದ ಸ್ವದೇಶಸ್ಥರು
ಸ್ವಭಾಷೆಯಲ್ಲಿ ಕೈಕೊಂಡ ಕೆಲಸಕ್ಕೂ ಅವರ ಅಭಿಪ್ರಾಯಕ್ಕೂ ಮರ್ಯಾದೆ
ಇಲ್ಲದಂತಾಗಿದೆ. ನಮ್ಮ ದೇಶದಲ್ಲಿ ಬೆಳೆಯುವ ಹತ್ತಿಯು ನಮ್ಮ ಶರೀರಕ್ಕೆ ಉ
ಷ್ಣತೆಯನ್ನುಂಟುಮಾಡಬೇಕಾದರೆ ಎಷ್ಟು ಬೆಲೆಯಾಗುವದೆಂದು ವಿಲಾಯತಿಯ
ವರು ಹೇಳಬೇಕಲ್ಲದೆ ಈ ದೇಶಸ್ಥರು ಹೇಳಲಾಗದು. ಈ ಮಾತು ಮಾನಸಿಕ
ಹುಟ್ಟುವಳಿಯಾದ ನಮ್ಮ ವಾಙ್ಮಯದ ವಿಷಯದಲ್ಲಿಯೂ ಸತ್ಯವಾಗಿದೆ. ಇದಕ್ಕೆ
ವೇದ, ಭಗವದ್ಗೀತಾದಿ ಗ್ರಂಥಗಳೇ ಉತ್ತಮ ನಿದರ್ಶನ. ಅಷ್ಟೇಕೆ? ಜಗದ್ವಿಖ್ಯಾತ
ನಮ್ಮ ರವೀಂದ್ರನಾಥ ಠಾಗೋರವರು ಮೊನ್ನೆ ಮೊನ್ನೆ ರಚಿಸಿದ ಗೀತಾಂಜಲಿ
ಯನ್ನು ನೋಡಿರಿ! ಅದು ಬಂಗಾಲಿ ಭಾಷೆಯಲ್ಲಿರುವವರೆಗೆ ಯಾರೂ ಅದನ್ನು
ಮೂಸಲಿಲ್ಲ. ದೇಶಸ್ಥರಲ್ಲಿ ಕೆಲವರು ಅದನ್ನು ಹೊಗಳಿದರೂ ಕೇಳುವವರಿದ್ದಿಲ್ಲ.
ಅದು ಇಂಗ್ಲಿಷಿನಲ್ಲಿ ಭಾಷಾಂತರವಾಗಿ ಸಂಭಾವನೆ ಪಡದದ್ದೇ ತಡ. ತಿಳಿದ
ವರೂ ತಿಳಿಯದವರೂ ಅದನ್ನು ತಲೆಯಮೇಲಿಟ್ಟು ಕುಣಿಯಲಾರಂಭಿಸಿದರು.
ಈಗೀಗ ಈ ವಿಷಯದಲ್ಲಿ ಜನರ ಅಭಿಪ್ರಾಯವು ಬೇರೆಯಾಗತೊಡಗಿದೆ. ಆದರೆ
ಇದುವರೆಗೆ ವಿಲಾಯತಿಯವರು ಹೊಗಳಬೇಕು ನಮ್ಮವರು ತಲೆಯಮೇಲಿಟ್ಟು
ಮೆರಿಸಬೇಕೆಂಬದು ಸಾಮಾನ್ಯಸೂತ್ರವಾಗಿದ್ದದರಿಂದಲೂ ಬಂಗಾಲ, ಮಹಾ
ರಾಷ್ಟ್ರ, ಗುಜರಾಥ, ತೆಲಗು, ತಮಿಳ ಮುಂತಾದ ದೇಶಗಳಲ್ಲಿರುವ ಸಾಹಿತ್ಯ
ವಿದ್ಯಾರ್ಥಿಗಳು ತಮ್ಮ ತಮ್ಮ ವಾಙ್ಮಯದಲ್ಲಿರುವ ಬೆಲೆಯುಳ್ಳ ವಿಚಾರಗಳನ್ನು
ಲೋಕದ ದೃಷ್ಟಿಗೆ ಹಾಕಲೆತ್ನಿಸುತ್ತಿರಲು ಕನ್ನಡಿಗರು ಮಾತ್ರ ತಮ್ಮವುಗಳನ್ನು
ಲೋಭಿಯಂತೆ ಹುಗಿದಿಟ್ಟುಕೊಂಡು ಕೂತಿರುವರೆಂದು ನನ್ನ ಅಲ್ಪಬುದ್ಧಿಗೆ
ತೋರಿದ್ದರಿಂದಲೂ ಸರ್ವಜ್ಞನ ವಚನಗಳನ್ನು ಮೊದಲು ಇಂಗ್ಲಿಷಿನಲ್ಲಿ ಪ್ರಸಿದ್ಧ

ಮಾಡಬೇಕೆಂದು ನಿಶ್ಚಯಿಸಿಕೊಂಡೆನು. ಹೀಗಾಗಿ ವಿಲಾಯತಿಯವರಿಗೆ ಮೆಚ್ಚುಗೆಯಾದ ಕೆಲವು ಪದ್ಯಗಳನ್ನು ಮೊದಲು ಶುದ್ಧವಾಗಿ ಮುದ್ರಣವಾದ ಪ್ರಾಕಾವ್ಯಮಾಲಿಕೆಯೊಳಗಿಂದ ತೆಗೆದು ಅವುಗಳನ್ನು ಇಂಗ್ಲಿಷಿನಲ್ಲಿ ತರಜುಮೆ ಮಾಡಿ ನಾನು ಕನ್ನಡವನ್ನು ಹೇಳಿಕೊಡುತ್ತಿದ್ದ ಆ ಮಿಶನರಿಯವರ ಮುಂದೆ ಓದಿ ಹೇಳಿದೆನು. ಇದನ್ನು ನೋಡಿ ಅವರು ಆನಂದಗೊಂಡು ತಾವು ಕೈಕೊಂಡ ಕೆಲಸವು ನನ್ನಿಂದ ಹೆಚ್ಚು ಚನ್ನಾಗಿ ಸಾಗಬಹುದೆಂದು ತಮ್ಮದನ್ನೆಲ್ಲ ನನಗೆ ಕೈವರ್ತಿಸಿದರು. ಈ ಕಾರ್ಯಭಾಗವು ಆದಷ್ಟು ಉತ್ತಮವಾಗಿ ನೆರವೇರುವಂತೆ ಪ್ರಾಕ್ಕಾವ್ಯಮಾಲಿಕೆಯಲ್ಲಿಲ್ಲದ ಕೆಲವು ಪದ್ಯಗಳನ್ನೂ ಇದಕ್ಕೆ ಸೇರಿಸಲೆತ್ನಿಸಿದೆನು. ಇದರ ದೆಸೆಯಿಂದ ಬಳ್ಳಾರಿಯ ಪ್ರತಿಯನ್ನು ಓದಿ ನೋಡಲು ಅದರಲ್ಲಿ ಮುದ್ರಣ ದೋಷಗಳಲ್ಲದೆ ಇನ್ನೂ ಅನೇಕತರದ ದೋಷಗಳಿರುವವೆಂದು ತಿಳಿದು ಬಂತು. ಹೀಗಿದ್ದರೂ ಅದರೊಳಗಿಂದ ನನಗೆ ಬೇಕಾದ ಪದ್ಯಗಳನ್ನು ಆರಿಸಿತೆಗೆದು ತಿಳಿಯದೆ ಇದ್ದಲ್ಲಿ ಹೇಗಾದರೂ ಒಂದು ಅರ್ಥವನ್ನು ಮಾಡಿ ಅವನ್ನು ಇಂಗ್ಲಿಷಿನಲ್ಲಿ ಪದ್ಯರೂಪವಾಗಿ ಬರೆಯಲಾರಂಭಿಸಿದೆನು. ಹತ್ತಿಪ್ಪತ್ತು ಪದ್ಯಗಳನ್ನು ತರಜುಮೆ ಮಾಡುತ್ತಲೇ ನನ್ನೊಳಗೆ ಸಂದೇಹ ಹುಟ್ಟಹತ್ತಿತು. ಮುಂದಿನ ಕಾಲದಲ್ಲಿ ಯಾರೊಬ್ಬರು ಇವನ ಗ್ರಂಥವನ್ನು ಶುದ್ಧೀಕರಿಸಿ ಮೂಲವನ್ನು ಮಾರುಪಡಿಸಿದರೆ ನಾನು ಕೈಕೊಂಡ ಕೆಲಸವು ನೀರಿನಲ್ಲಿ ಹೋಮಮಾಡಿದಂತಾಗುವದಲ್ಲದೆ ಸುಮ್ಮನೆ ಸರ್ವಜ್ಞನ ವಿಷಯಕ್ಕೆ ತಪ್ಪಾದ ಅಭಿಪ್ರಾಯವನ್ನು ಬಿತ್ತಿದ ದೋಷಕ್ಕೂ ಗುರಿಯಾಗುವನೆಂದು ಅದನ್ನು ಬಿಟ್ಟು ಗ್ರಂಥಶುದ್ಧೀಕರಣದ ಯೋಚನೆಗೊಳಗಾದೆನು. ಒಮ್ಮೆ ಮೂಲವು ಖಂಡಿತವಾಯಿತೆಂದರೆ ನಾನು ಕೈಕೊಂಡ ಕೆಲಸವು ಸರಾಗವಾಗಿ ಸಾಗುವದೆಂಬು ಆದಿನದಿಂದ ತರಜುಮೆಯ ಕೆಲಸವನ್ನು ನಿಲ್ಲಿಸಿ ಗ್ರಂಥಸಂಶೋಧನೆಗೆ ಕೈ ಹಚ್ಚಿದೆನು. ಈ ಕೆಲಸದಲ್ಲಿ ಬಲ್ಲವರು ಯಾರಾದರು ನೆರವಾದರೆ ಅದನ್ನು ಆದಷ್ಟು ಬೇಗನೇ ಮುಗಿಸಿ ನಾನು ಮೊದಲಿಟ್ಟ ಕೆಲಸವನ್ನು ತೀವ್ರವಾಗಿ ತೀರಿಸಬೇಕೆಂದು ತವಕದಾತುರದಿಂದ ಹಂಬಲಿಸುತ್ತಿರಲು ಮದ್ರಾಸದ ವಿಶ್ವವಿದ್ಯಾಲಯದಲ್ಲಿ ತಮ್ಮ ಅಭ್ಯಾಸವನ್ನು ತೀರಿಸಿ ಸಂಸ್ಕೃತವಲ್ಲಿ ಬಹುಮಾನದ ಪದಕವನ್ನು ಪಡೆದ ಕನ್ನಡಾಭಿಮಾನಿಗಳಾದ ನನ್ನ ಸ್ನೇಹಿತರೊಬ್ಬರು ದೈವಯೋಗದಿಂದ ಇದೇ ಸಮಯಕ್ಕೆ ಧಾರವಾಡಕ್ಕೆ ಬಂದು ನಾನು ಕಲಿಸುತ್ತಿದ್ದ ಶಾಲೆಯಲ್ಲಿಯೇ ಶಿಕ್ಷಕೋದ್ಯೋಗವನ್ನು ವಹಿಸಿಕೊಂಡರು.

ಇದರಿಂದ 'ರೋಗಿ ಬಯಸಿದ್ದೇ ವೈದ್ಯ ಹೇಳಿದ್ದು' ಎಂಬ ಲೋಕೋಕ್ತಿಯಂತೆ ಪರಸ್ಪರ ಅಭಿಪ್ರಾಯಗಳು ಎರಕವಾಗಿ ಒಂದೇ ಉದ್ದೇಶದಿಂದ ಕೆಲಸಮಾಡಲನು ಕೂಲವಾಯಿತು. ಈ ಕೆಲಸದಲ್ಲಿ ಅವರು ಪ್ರತಿಜ್ಞಾಪೂರ್ವಕವಾಗಿ ಸಹಾಯ ಮಾಡುವದಕ್ಕೆ ಮನಸ್ಸುಮಾಡಿದ್ದರಿಂದ ಸರ್ವಜ್ಞನ ಕೆಲಸಕ್ಕೆ ಮತ್ತೊಂದು ಮೂಡಲೆತ್ತು ಹೆಗಲು ಕೊಟ್ಟಂತಾಯಿತು. ಆದರೆ ಮಾಡುವದೇನು ? 'ತಾನೊಂದು ಬಗೆದರೆ ದೈವವೊಂದು ಬಗೆಯಿತು' ಎಂಬ ನಾಣ್ಣುಡಿಯಂತೆ ಕೆಲಸಕ್ಕೆ ಕೈ ಹಚ್ಚಿದ ಎಂಟೇ ತಿಂಗಳೊಳಗಾಗಿ ಅವರಿಗೆ ಬೇರೆ ಕಡೆಗೆ ವರ್ಗವಾದ್ದರಿಂದ 'ಕೈಗೆ ಬಂದ ತುತ್ತು ಬಾಯಿಗೆ ಬಾರದಂತಾಯಿತು.' ಹೀಗಿದ್ದರೂ ಅವರು ಊರಲ್ಲಿದ್ದ ಸ್ವಲ್ಪ ಸಮಯದಲ್ಲಿ ಉಭಯತರು ಸರ್ವಜ್ಞನ ಮುದ್ರಣದ ಪ್ರತಿಗಳನ್ನು ತೆಗೆದುಕೊಂಡು ದಿನಾಲು ಮೂರು ತಾಸುಗಳಂತೆ ಕೆಲಸಮಾಡಿದರೆ ವಿಚಾರಪೂರ್ವಕವಾಗಿ ಒಮ್ಮೆ ಅವನ ಗ್ರಂಥವನ್ನು ಓದಿಮುಗಸಲಿಕ್ಕೆ ಸುಮಾರು ಒಂದುವರೆ ತಿಂಗಳು ಬೇಕಾಯಿತು. ನಾವು ಓದುತ್ತ ಹೋದಂತೆ ಮೇಗಾರೆ ಕಂಡ ದೋಷಗಳ ಅಡಿಯಲ್ಲಿ ಮಾಡುತ್ತ ಹೋದ ಗುರುತುಗಳನ್ನು ಲೆಕ್ಕಿಸಿ ನೋಡಲು ಅವು ಬಹು ಸ್ವಲ್ಪವೆಂದು ತಿಳಿದದ್ದರಿಂದ ಈ ಕೆಲಸವು ಮೂರುನಾಲ್ಕು ತಿಂಗಳಲ್ಲಿಯೇ ತೀರಬಹುದೆಂದೂ ಪಂಡಿತರ ಸಹಾಯವು ದೊರೆತರೆ ಇದನ್ನು ಒಂದೆರಡು ತಿಂಗಳಲ್ಲಿಯೇ ಮುಗಿಸಬಹುದೆಂದೂ ನೆನಸಿಕೊಂಡೆನು. ಹೀಗಾಗಿ ಧಾರವಾಡದ ಟ್ರೇನಿಂಗ ಕಾಲೇಜದ ಕನ್ನಡ ಪಂಡಿತರಾದ ಶ್ರೀ ಮೂರ್ತಾಚಾರ್ಯ ಕಟ್ಟಿ ಇವರಲ್ಲಿಗೆ ಹೋಗಿ ನನ್ನ ಮನವೆಯನ್ನು ಹೇಳಿಕೊಳ್ಳಲು ಅವರು—ಇಂದಿಗೆ ಎಂಟು ದಿವಸಗಳ ಹಿಂದೆ ಸರ್ವಜ್ಞನ ಕೆಲಸವನ್ನು ಕೈಕೊಂಡ ಒಬ್ಬರು ನಿಮ್ಮಂತೆ ನನ್ನ ಸಹಾಯವನ್ನು ಕೇಳುತ್ತ ಬಂದಿದ್ದರು. ಅವರಂತೆ ನೀವೂ ಹೇಳುವದರಿಂದ ಪಂಡಿತರು ಬೇಕಾದ್ದು ಮಾಡಬಹುದೆಂದು ನೀವೆಲ್ಲರು ತಿಳಿದಂತೆ ತೋರುತ್ತದೆ. ಸರ್ವಜ್ಞನ ಗ್ರಂಥವನ್ನು ಸರಿಪಡಿಸುವದು ವಾಙ್ಮಯದೃಷ್ಟಿಯಿಂದ ಅತ್ಯವಶ್ಯವಿದ್ದು ಅದನ್ನು ವ್ಯಾಕರಣಾದಿ ದೋಷಗಳಿಲ್ಲದಂತೆ ತಿದ್ದುವದು ದೊಡ್ಡ ಮಾತಾಗಿರದಿದ್ದರೂ ನಾನು ಮೂಲ ಪ್ರತಿಗಳಿಲ್ಲದೆ ನಿಮಗೆ ಈ ಕೆಲಸದಲ್ಲಿ ಕೈಕೊಡಲಾರೆನು. ಒಂದುವೇಳೆ ಗ್ರಂಥವನ್ನು ಸ್ವತಂತ್ರವಾಗಿ ತಿದ್ದಿದರೆ ದೋಷಗಳು ಹೆಚ್ಚಾಗಬಹುದಲ್ಲದೆ ಪಾಂಡಿತ್ಯದಿಂದ ವಿಶೇಷ ಪ್ರಯೋಜನವಾಗದು. ಅನೇಕರ ಪಾಂಡಿತ್ಯವು ಕೂಡಿಯೇ ಗ್ರಂಥವು ಈ ಸ್ಥಿತಿಗೆ ಬಂದಿರುವದು. ಕಾರಣ, ನೀವು, ಮೂಲ ಪ್ರತಿ

ಗಳು ದೊರೆತರೆ ಮಾತ್ರ ಈ ಕೆಲಸಕ್ಕೆ ಕೈಹಾಕತಕ್ಕದ್ದು. ಇಲ್ಲವಾದರೆ ಅದನ್ನು ಇದ್ದಂತೆ ಬಿಡುವದೇ ಉತ್ತಮವೆಂದು ನನ್ನ ಅಭಿಪ್ರಾಯ. ಆದರೆ ನೀವು ಕೈಬರಹದ ಪ್ರತಿಗಳನ್ನು ದೊರಕಿಸಿ ನಿಮ್ಮಿಂದಾಗಬಹುದಾದ ಕೆಲಸವನ್ನೆಲ್ಲ ಮಾಡಿ ತೀರಿಸಿದ ಬಳಿಕ ದೋಷಗಳೇನಾದರು ಉಳಿದರೆ ಅವುಗಳನ್ನು ಪರಿಹರಿಸಲು ಸಾಮರ್ಥ್ಯವಿದ್ದಷ್ಟು ಮಟ್ಟಿಗೆ ಸಹಾಯ ಮಾಡುವವಕ್ಕೆ ನಾನು ಸದಾ ಸಿದ್ಧನಿದ್ದೇನೆಂಬುವದನ್ನು ಮಾತ್ರ ಎಂದಿಗೂ ಮರೆಯಬಾರದೆಂದು ಹೇಳಿದರು. ಅಂತೂ ಇಂತೂ 'ಹಿಂದಿನ ಮನೆಯ ಕೋರಾನ್ನ ಹೋಯಿತು ಮುಂದಿನ ಮನೆಯ ಭಿಕ್ಷಾನ್ನ ಹೋಯಿತು' ಎಂಬ ಗಾದೆಯಂತೆ ಇತ್ತ ತರಜುಮೆಯ ಕೆಲಸವೂ ನಿಂತಿತು: ಅತ್ತ ಸಂಶೋಧನೆಯ ಕೆಲಸವೂ ತಣ್ಣಗಾಯಿತು. ಕೈಬರಹದ ಪ್ರತಿಗಳನ್ನು ಗೊತ್ತುಹಚ್ಚುವ ಬೇರೊಂದು ಕೆಲಸವು ಬೆನ್ನಿಗೆ ಹತ್ತಿತು. ಆದರೆ ಮಾಡುವದೇನು? ಮೊದಲೇ ತಿರುಕಮೂಳ. ಇಂಥವನಿಗೆ ಕೈಬರಹದ ಪ್ರತಿಗಳನ್ನು ಕರೆದುಕೊಡುವವರು ಯಾರು ? ಹೇಗಾದರು ಲಜ್ಜೆಯನ್ನು ತೊರೆದು ಬೇಡುವ ಹೊರತು ಬೇರೊಂದು ಮಾರ್ಗಕಾಣದೆ ಹೋದ ಹೋದಲ್ಲಿ ಸರ್ವಜ್ಞನ ಕೈಬರಹದ ಪ್ರತಿಗಳು ನಿಮ್ಮಲ್ಲಿರುವವೋ ನಿಮ್ಮಲ್ಲಿ ದೊರೆಯುವವೋ ಎಂದು ಕಂಡ ಕನ್ನಡಿಗರನ್ನು ಕೇಳಹತ್ತಿದೆನು. ಕೆಲವರು ಕೇಳುತ್ತಲೇ ಅತ್ತನಡೆ ಎನ್ನುವರು. ಕೆಲವರು ಹುಡುಕಿ ನೋಡಿ ಇಲ್ಲವೆನ್ನುವರು. ಇದ್ದರೂ ಕೊಡಲಿಕ್ಕೆ ಮನಸ್ಸಿಲ್ಲದ ಕೆಲವರು ಮತ್ತೆ ಬಾ ಎನ್ನುವರು. ಹೀಗೆ ಮನೆಮಠಾಂತರಗಳನ್ನು ತಿರುತಿರುಗಿ ಸಾಕಾಗಿ, ಒಂದು ಪ್ರತಿಯಾದರೂ ದೊರೆಯದೆ ಒಂದುದಿನ ಹಣೆಗೆ ಕೈಯೂರಿ ಕೂತಿರಲು ನನ್ನೊಳಗೆ ಹತ್ತುಮಂದಿಗೆ ಹಲ್ಲುಬಾಯ್ದೆರೆದು ಹೊತ್ತು ಕಳೆಯುವದಕ್ಕಿಂತ ಓಲೆಗಳ ಕುಬೇರರಾದ ನಮ್ಮ ಶ್ರೀಮಾನ್ ಆರ್. ನರಸಿಂಹಾಚಾರ್ಯರ ಬೆನ್ನುಬಿದ್ದರಾಯಿತು; ನನ್ನ ಬಡತನವೇ ಹಿಂಗುವದು; ಹಿಂಗದಿದ್ದರೂ ಅವರಿಗೆ ಬಾಯ್ದೆರೆದು ನಾನೆಂದೂ ಬರಿಗೈಯಾಗಿ ಬರೆನೆಂಬ ಯೋಚನೆಯಂಕುರಿಸಿ ಅವರಿಗೆ ಒಂದು ಕಾಗದವನ್ನು ಬರೆದೆನು. ಅದಕ್ಕವರು ಸರ್ವಜ್ಞನ ಅನೇಕ ಕೈಬರಹದ ಪ್ರತಿಗಳನ್ನು ಪರೀಕ್ಷಿಸಲು ತಮಗೆ ಅನುಕೂಲವಾಗಿದ್ದರೂ ಅವೆಲ್ಲವುಗಳನ್ನು ಕೈಗಡವಾಗಿ ತೆಗೆದುಕೊಂಡದ್ದರಿಂದ ಅವರವರಿಗೆ ಹಿಂದಕ್ಕೆ ಕಳುಹಿಸಬೇಕಾಗಿ ಸದ್ಯಕ್ಕೆ ತಮ್ಮಲ್ಲಿ ಒಂದು ಪ್ರತಿಯಾದರೂ ಉಳಿದಿಲ್ಲವೆಂದೂ ಈ ಕೆಲಸವನ್ನು ಒಂದು ವರ್ಷದ ಹಿಂದೆ ಕೈಕೊಂಡಿದ್ದ ಮ. ರಾ. ರಾ. ರಾಮಚಂದ್ರರಾವ ಹನುಮಂತ

ದೇಶಪಾಂಡೆ ಎಸ್. ಎ. ಎಂಬವರು ನಿಮ್ಮಲ್ಲಿಯೇ ಇರುವದರಿಂದ ಅವರಿಂದ ನಿಮಗೇನಾದರು ಸಹಾಯವಾಗಬಹುದೆಂದೂ ಉತ್ತರ ಬರೆದರು. ಅವರ ಸೂಚನೆಯಂತೆ ಮೇಲೆ ಹೇಳಿದ ಆ ಮಹನೀಯರ ಬಳಿಗೆ ಹೋಗಿ ಕೇಳಲು ಅವರು ಎತದ್ ಕಾರಣದಿಂದಲೇ ತಮ್ಮ ಕೆಲಸವು ನಿಂತುಹೋಗಿರುವದೆಂದೂ ನಿಮಗೇನಾದರು ಪ್ರಯೋಜನಕ್ಕೆ ಬೀಳುವಂತಿದ್ದರೆ ತೆಗೆದುಕೊಂಡು ಹೋಗಬಹುದೆಂದೂ ಒಂದು ಕೈಬರಹದ ಪ್ರತಿಯನ್ನು ಕೊಟ್ಟರು. ಅದನ್ನು ತಂದು ಓದಿನೋಡಲು ಕಾಲಜ್ಞಾನ ಗ್ರಂಥವೆಂದು ಕಂಡುಬಂತು. ಇದರಿಂದ ಸರ್ವಜ್ಞನ ವಚನಗಳನ್ನು ತಿದ್ದಲು ಯಾವ ಸಹಾಯವೂ ಆಗಲಿಲ್ಲ. ಹೀಗಾಗಿ ಪ್ರತಿ ಪ್ರಯತ್ನವೂ ಮಿಂದಿಕ್ಕುಕಾಣದೆ 'ದುಡಿಯುವವರಿಗೆ ದೇವರು ಸಹಾಯ ಮಾಡುತ್ತಾ'ನೆಂಬ ಮಾತು ನಮ್ಮಂಥ ಅಲ್ಪರ ವಿಷಯವಾಗಿ ಹೇಳಿದ್ದಲ್ಲವೆಂದು ನನ್ನೊಳಗಂದುಕೊಂಡು ನಿರಾಶೆಯಿಂದ ಎಲ್ಲವನ್ನು ಮೂಲೆಗೊಗೆದು ಕೆಲವು ದಿವಸ ಸುಮ್ಮನೆ ಕೂತುಕೊಂಡೆನು. ಆದರೆ 'ದುಡ್ಡು ಕೊಟ್ಟು ಹಚ್ಚಬೇಕು ಎರಡು ದುಡ್ಡು ಕೊಟ್ಟು ಬಿಡಿಸಬೇಕು' ಎಂಬ ಲೋಕೋಕ್ತಿಯಂತೆ ಹೆಗಲು ಕೊಟ್ಟ ಮೇಲೆ ಮೂರ್ಖಛಲದಿಂದ ಎಳೆಯುವದರ ಹೊರತು ಬೇರೊಂದನ್ನು ಅರಿಯದ ನಾನು ಸಮಯವಿದ್ದಾಗ್ಗೆಲ್ಲ ಸರ್ವಜ್ಞನ ವಚನಗಳನ್ನು ವಿಶೇಷ ಉದ್ದೇಶವಿಲ್ಲದೆ ಸುಮ್ಮನೇ ಓದುತ್ತ ಬಂದೆನು. ಆದರೆ ಮದ್ರಾಸದಿಂದ ಬಂದ ಆ ಸ್ನೇಹಿತರು ಕೆಲಸವು ಎಲ್ಲಿಯವರೆಗೆ ಬಂತೆಂಬದರ ಬಗ್ಗೆ ತಮಗೆ ತಿಳಿಸುತ್ತಿರಬೇಕೆಂದು ಹೇಳಿದ್ದರಿಂದ ಅವರಿಗೆ ಮಾತ್ರ ಈ ಸಂಬಂಧವಾಗಿ ಆಗಿಂದಾಗ್ಗೆ ವರ್ತಮಾನ ಕಳಿಹಿಸುತ್ತ ಬಂದೆನು. ಈ ವಿಷಯದಲ್ಲಿ ಯಥಾಪ್ರಯತ್ನಪಡುತ್ತಿದ್ದ ಅವರು ಒಂದು ದಿನ ನನ್ನನ್ನು ಕಂಡು, ಮದ್ರಾಸದಲ್ಲಿ ತಮಗೊಬ್ಬ ಸ್ನೇಹಿತರಿರುವರೆಂದೂ ಅವರನ್ನು ಕೇಳಿದರೆ ಈ ಬಗ್ಗೆ ಏನಾದರೂ ತಿಳಿಯಬಹುದೆಂದೂ ಅವರಿಗೆ ಒಂದು ಕಾಗದವನ್ನು ಬರೆದರು. ಅದಕ್ಕವರು ಮದ್ರಾಸದ ಪ್ರಾಚ್ಯಕೋಶಾಲಯದಲ್ಲಿ ಎರಡು ಪ್ರತಿಗಳಿರುವವು; ಬೇಕಾದರೆ ನೀವು ಗ್ರಂಥಭಾಂಡಾರದ ಅಧ್ಯಕ್ಷರ ಕಡೆಗೆ ಮುಂಗಡ ಹಣ ಕಳುಹಿಸಿ ಅವುಗಳನ್ನು ತರಿಸಿಕೊಳ್ಳಬಹುದೆಂದು ತಿಳಿಸಿದರು. ಮುಂದೆ ಅವರು ಕೇಳಿದಷ್ಟು ಹಣ ಕಳುಹಿಸಿ ಅವು ಬರೆದು ಬರಲಿಕ್ಕೆ ನಾಲ್ಕೈದು ತಿಂಗಳು ಬೇಕಾಯಿತು. ದೈವಯೋಗದಿಂದ ಇದೇ ಸಮಯಕ್ಕೆ ಮೈಸೂರು ಪ್ರಾಚ್ಯಕೋಶಾಲಯದಿಂದಲೂ ಎರಡು ಪ್ರತಿಗಳು ದೊರೆತವು. ಅಂತೂ ಒಂದು

ವರ್ಷದೊಳಗಾಗಿ ಬೇರೆ ಬೇರೆ ಕಡೆಯಿಂದ ಹತ್ತೆಂಟು ಪ್ರತಿಗಳು ಹಸ್ತಗತವಾದವು. ಅವುಗಳನ್ನು ಒಂದಕ್ಕೊಂದು ಸರಿಹಚ್ಚಿ ಓದಿನೋಡಲು ಅವುಗಳಿಗೂ ಈಗಿನ ಮುದ್ರಣ ಗ್ರಂಥಗಳಿಗೂ ಅಜಗಜಾಂತರವಿರುವದಲ್ಲದೆ ಪದ್ಯಗಳ ಕ್ರಮಸಂಧಾನ ದಲ್ಲಿಯೂ ಬಹಳ ಅವ್ಯವಸ್ಥೆ ಇರುವದೆಂದು ಕಂಡುಬಂತು. ವೇಷಮಾತ್ರದಿಂದ ದೇಶಭಕ್ತರೆನ್ನಿಸಿಕೊಂಡು ನುಡಿಯಲ್ಲಿ ಮಾತ್ರ ಸಮಾಜಗಳ ಐಕ್ಯಕ್ಕೂ ದೇಶೋನ್ನ ತೆಗೂ ಪೇಚಾಡುತ್ತಿರುವ ಅನೇಕ ದೇಶಸೇವಕರಿಗಿಂತ ಸರ್ವಜ್ಞನಂಥವನೊಬ್ಬನು ಒಮ್ಮೆ ನಮ್ಮ ಕರ್ನಾಟಕಪೀಠವನ್ನಲಂಕರಿಸಲನುಕೂಲವಾಯಿತೆಂದರೆ ಹೇಳ ಲಾರದಷ್ಟು ಪ್ರಯೋಜನವಾಗಬಹುದೆಂದು ನನ್ನ ಅಲ್ಪಬುದ್ಧಿಗೆ ತೋರಿದ್ದರಿಂದ ಹೇಗಾದರೂ ಅವನ ಗ್ರಂಥಸಂಶೋಧನೆಗೆ ಕೈಹಾಕಿದ್ದೇನೆ. ಅದನ್ನು ಆದಷ್ಟು ಸಂಪೂರ್ಣತೆಗೆ ಒಯ್ಯಬೇಕೆಂಬ ಯೋಚನೆಯುಂಕುರಿಸಿ ಕವಿಯ ವಿಚಾರಗಳು ಓದುವವರಿಗೆ ತಟ್ಟನೇ ಹೊಳೆಯುವಂತೆ ಗ್ರಂಥವನ್ನು ವಿಷಯಾನುಕ್ರಮವಾಗಿ ವ್ಯವಸ್ಥೆಗೊಳಿಸಲೆತ್ನಿಸಲು ಅದನ್ನು ಸಮೂಲ ಹೊಸದಾಗಿಯೇ ಬರೆಯುವ ಪ್ರಸಂಗ ಬಂತು. ಅಂತೂ ಇಂತೂ ನವಾಜು ಮಾಡಹೋಗಿ ಮಸೀದಿಯೇ ಕೊರಳಿಗೆ ಬಿದ್ದಂತಾಯಿತು! ಹೀಗಾಗಿ ಕೈಬರಹದ ಎಲ್ಲ ಪ್ರತಿಗಳನ್ನು ಮುಂ ದಿಟ್ಟು ಸೂಕ್ಷ್ಮವಾಗಿ ಓದಿನೋಡಲು ಒಂದು ಪ್ರತಿಯು ಇನ್ನೊಂದು ಪ್ರತಿಗೆ ಹೊಂದುತ್ತಿರಲಿಲ್ಲ. ಹೊಂದಿದರೂ ಬರಹ ದೋಷದಿಂದ ತಿಳಿಯಲು ಕಷ್ಟ. ತಿಳಿ ದರೂ ಇದರಲ್ಲಿ ದೊರೆಯುವ ಪದ್ಯವು ಅದರಲ್ಲಿಲ್ಲ. ಒಂದು ಪ್ರತಿಯು ಆರಂಭ ದಲ್ಲಿ ಬರುವ ವಚನವು ಒಮ್ಮೆ ಮತ್ತೊಂದು ಪ್ರತಿಯ ಅಂತ್ಯದಲ್ಲಿ, ಮತ್ತೊಮ್ಮೆ ಬೇರೊಂದು ಪ್ರತಿಯ ಮಧ್ಯದಲ್ಲಿ ಸಿಕ್ಕುವದು. ಹೀಗಾಗಿ ಪದ್ಯಗಳನ್ನು ಸರಿ ಹಚ್ಚಿ ನೋಡುವಲ್ಲಿ ಪುಟಗಳನ್ನು ತಿರುತಿರುವಿ ಸಾಕಾಗಿ ಕೆಲವು ಪ್ರತಿಗಳಿಗೆ ವರ್ಣಾನುಕ್ರಮಣಿಕೆಯನ್ನು ಮಾಡಬೇಕಾಯಿತು. ಇಂಥ ಹೊರಗಿನ ಸೌರಣೆ ಯಲ್ಲಿಯೇ ಕಾಲವು ಕಳೆದು ಹೋಗಹತ್ತಿದ್ದರಿಂದ ಉಳಿದ ಕೆಲವು ಪ್ರತಿಗಳನ್ನು ಇದ್ದಂತೆಯೇ ಪಾಠಮಾಡಬೇಕಾಯಿತು. ಕೈಬರಹದ ಹಾಗೂ ಮುದ್ರಣದ ಎಲ್ಲ ಪ್ರತಿಗಳನ್ನು ಎದುರಿಟ್ಟು ಕೆಲಸಮಾಡಿದರೆ ಎಂಟೆಂಟು ದಿವಸಗಳಾದರೂ ಕೆಲವು ಪದ್ಯಗಳ ಮೂಲವು ಗೊತ್ತಾಗುತ್ತಿರಲಿಲ್ಲ. ಅನೇಕ ಪದ್ಯಗಳ ಸರಿಯಾದ ಅರ್ಥವು ಎರಡು ಮೂರು ತಿಂಗಳ ತರುವಾಯದಲ್ಲಿ ಹೊಳೆದದ್ದೂ ಉಂಟು. ಹೀಗಿದ್ದರೂ ಕೆಲವು ಪದ್ಯಗಳ ಸರಿಯಾದ ಪಾಠವೂ ಅರ್ಥವೂ ಇದುವರೆಗೂ

ತಿಳಿದಿರುವದಿಲ್ಲ. ಇನ್ನು ವಿಷಯ ವಿಭಜನೆಯಲ್ಲಿ ನನಗಾದ ಶ್ರಮವು ಅಷ್ಟಿಷ್ಟಲ್ಲ. ಮಂದಮತಿಯಾದ ನನಗೆ ಸುಲಭೋಪಾಯ ತೋರದೆ ಹಲವು ಹಂಚಿಕೆಹಾಕಿ ಹತ್ತುಸಾರೆ ಬರೆದು ಹತ್ತುಸಾರೆ ಹರಿದೊಗೆದ ಎತ್ತರವಾದ ಕರಡದ ರಾಶಿಯೇ ಇದಕ್ಕೆ ಉತ್ತಮ ಸಾಕ್ಷಿಯಾಗಿದೆ. ಯಾವದೊಂದು ವಿಷಯಕ್ಕೆ ಸೇರುವ ಯಾವದೊಂದು ಪದ್ಯವು ದೊರೆಯಿತೆಂದರೆ ಅದೇ ಅರ್ಥವುಳ್ಳ ಇನ್ನೊಂದು ಪದ್ಯವು ದೊರೆಯುವವರೆಗೆ ಪ್ರತಿ ಒಂದು ಗ್ರಂಥವನ್ನು ಮೊದಲಿಂದ ಕಡೆಯವರೆಗೆ ಓದುತ್ತ ಹೋಗಬೇಕು. ದೊರೆತರೆ ಅದನ್ನು ಅದರ ಕೆಳಗೆ ಟಿಪ್ಪಣಿ ಮಾಡಿಕೊಳ್ಳಬೇಕು. ಹೀಗೆ ವಿಷಯಗಳನ್ನು ಕಂಡುಹಿಡಿದು ಪದ್ಯಗಳನ್ನು ವರ್ಗೀಕರಿಸುವದರಲ್ಲಿ ವಿಪರೀತ ಕೆಲಸವು ಮೈಮೇಲೆ ಬಿತ್ತು. ಒಂದೆರಡು ತಿಂಗಳೊಳಗಾಗಿ ತೀರುವದೆಂದು ತಿಳಿದ ಕೆಲಸವು ಎರಡು ವರ್ಷಗಳಾದರೂ ತೀರಲೊಲ್ಲದು! ಒಡತನದ ಚಿಂತೆ, ದೊಡ್ಡ ಕುಟುಂಬದ ಭಾರ, ಸ್ವಂತ ಸಮಾಜದ ಕಲ್ಯಾಣಕ್ಕೋಸ್ಕರ ಪೇಚಾಟ, ಇವೆಲ್ಲವುಗಳ ಮಧ್ಯದಲ್ಲಿ ದಿನದ ಕರ್ತವ್ಯವನ್ನು ತೀರಿಸಿ ಹಗಲಿನಲ್ಲಿ ಸಮಯವು ದೊರೆಯದ್ದರಿಂದಲೂ ರಾತ್ರಿಯಲ್ಲಿ ಮಕ್ಕಳು ಮರಿಗಳ ಗದ್ದಲವಿಲ್ಲದೆ ಶಾಂತತೆ ಇರುವದರಿಂದಲೂ ಸುಮಾರು ಮೂರುನಾಲ್ಕು ಗಂಟೆಗೆ ಎದ್ದು ಕೆಲಸಮಾಡಹತ್ತಿದೆನು. ಹೀಗೆ ಒಂದೇಸವನೆ ಎರಡು ವರ್ಷ ದುಡಿಯುವದರೊಳಗಾಗಿ ಮೊದಲೇ ಅಲ್ಪಶಕ್ತಿಯುಳ್ಳ ನನ್ನ ಜ್ಞಾನತಂತುಗಳು ತೀರ ಬಲಹೀನಾವಸ್ಥೆಗೆ ಬಂದವು. ಇದೇ ಸಮಯಕ್ಕೆ ಮನೆತನವನ್ನು ಹೊತ್ತು ನಡಿಸುತ್ತಿದ್ದ ಪರಮಪೂಜ್ಯರಾದ ನನ್ನ ತಂದೆಯವರು, ಹೃತ್ಕ್ರಿಯೆಯು ನಿಂತು ಹೋಗಿ ಫಕ್ಕನೆ ತೀರಿಕೊಂಡರು. ಇದು ಸಿಡಿಲು ಬಡಿದಂತಾಗಿ ಮೊದಲೇ ನಿಷ್ಪ್ರಾಣವಾಗಿದ್ದ ನನ್ನ ಜ್ಞಾನತಂತುಗಳು ತೀರ ನಿರ್ಜೀವಾವಸ್ಥೆಗೆ ಮುಟ್ಟಿದ್ದರಿಂದ ಮುಂದೆ ಎಂಟು ದಿವಸಗಳಲ್ಲಿಯೇ ಕಠಿಣ ಅಸ್ವಸ್ಥಕ್ಕೊಳಗಾದೆನು. ರೋಗವು ದಿನದಿನಕ್ಕೆ ಹೆಚ್ಚಿ ನಾನು ಮರಣಕ್ಕೆ ತುತ್ತಾಗುವದು ನಿಶ್ಚಯವೆಂದು ತಿಳಿದಾಗ ನನ್ನೊಳಗೆ ಎಷ್ಟು ಕಸವಿಸಿ ಇದ್ದಿರಬಹುದೆಂದು ವಾಚಕರೇ ಊಹಿಸಲಿ! "ಜಾತಸ್ಯ ಮರಣಂ ಧ್ರುವಂ" ಎಂಬ ಶ್ರುತಿವಚನದಂತೆ ನಾನು ಇಹಲೋಕವನ್ನು ಬಿಟ್ಟು ಹೋಗಬೇಕಾಗಿದ್ದರೂ ಹಾಸಿಗೆಯ ಮೇಲೆ ಹೊರಳುವಾಗ್ಗೆಲ್ಲ ಸಾಯಬೇಕಲ್ಲ ಎಂಬದು ನನ್ನನ್ನು ಎಷ್ಟುಮಾತ್ರವೂ ಕಾಡದೆ ಕೈಕೊಂಡ ಕೆಲಸವು ವ್ಯರ್ಥವಾಯಿತಲ್ಲ ಎಂಬ ಚಿಂತೆಯೊಂದೇ ನನ್ನನ್ನು ಕೊರೆಯುತ್ತಿತ್ತು.

ಪ್ರಾಣಾಂತಿಕವೆಂದು ತೋರಿದ ಆ ಸಮಯದಲ್ಲಿ ನಾನು ಈಶ್ವರನನ್ನು ಕುರಿತು ಪ್ರಾರ್ಥಿಸಿದ್ದೇನೆಂದರೆ—ಸರ್ವಜ್ಞನೇ! ಸರ್ವರ ಹೃದಂತರಂಗವನ್ನು ಅರಿತವನೇ! ನಾನು ಈ ಕೆಲಸವನ್ನು ಸ್ವಲಾಭಮಾನಕ್ಕೋಸ್ಕರ ಕೈಕೊಂಡದ್ದೇ ಆದರೆ ಅದನ್ನು ಇಲ್ಲಿಗೆ ನಿಲ್ಲಿಸಿ ಬಿಡು. ಸಮಾಜಸೇವೆಯೇ ನಿನ್ನ ಉಪಾಸನೆ ಎಂದು ಕೈಕೊಂಡ ಈ ಕಾರ್ಯವು ನಿನ್ನದಾಗಿದ್ದರೆ ಹಾಗೂ ಅಲ್ಪನಾದ ನನ್ನಿಂದ ಈ ಸೇವೆಯನ್ನು ಮಾಡಿಸಿಕೊಳ್ಳಲು ನೀನು ಇಷ್ಟಪಟ್ಟರೆ ನನ್ನನ್ನು ಇನ್ನೂ ಕೆಲವು ದಿವಸ ಉಳಿಸೆಂದು ಬೇಡಿಕೊಂಡೆನು. ಹೀಗಾಗಿ ಒಂದೆರಡು ತಿಂಗಳಮೇಲೆ ಗುಣಾಂಶವು ತೋರಹತ್ತಿತು. ಮುಂದೆ ತಕ್ಕಷ್ಟು ಕ್ಷೇಮ ಬರಲಿಕ್ಕೆ ನಾಲ್ಕೈದು ತಿಂಗಳು ಬೇಕಾದರೂ ಈಶ್ವರಾನುಗ್ರಹದಿಂದ ಇಂಥ ಅಶಕ್ತಾವಸ್ಥೆಯಲ್ಲಿ ಮುಂಚಿಗಿಂತ ಇಮ್ಮಡಿ ಕೆಲಸವನ್ನು ತೀರಿಸಲು ಶಕ್ತನಾದೆನು. ಆದರೆ ಗುಣವಾಗುತ್ತ ಬಂದ ಹಾಗೆ ರಾತ್ರಿಯಲ್ಲಿ ಬರೆಯುವ ಕೆಲಸವನ್ನು ಮಾತ್ರ ಪೂರ್ಣವಾಗಿ ನಿಲ್ಲಿಸಿಬಿಟ್ಟೆನು. ಹೀಗಾಗಿ ವಾಚಕರ ಮುಂದಿರುವ ಈ ಕಾರ್ಯವು ರೂಪುಗೊಳ್ಳಲಿಕ್ಕೆ ನಾಲ್ಕೈದು ವರ್ಷ ಬೇಕಾಯಿತು. ತರುವಾಯ ಅದನ್ನು ಹಿಂದೆ ಹೇಳಿದ ಮ॥ ರಾ॥ ರಾ॥ ಮೂರ್ತಾಚಾರ್ಯರಿಗೂ ಅದೇ ಕಾಲೇಜದಲ್ಲಿ ಕೆಲಸಮಾಡುತ್ತಿರುವ ಮ॥ ರಾ॥ ರಾ॥ ಪೂಜಾರವರಿಗೂ ಭಾಗ ಭಾಗವಾಗಿ ಓದಲಿಕ್ಕೆ ಕೊಡಲು ಅವರು ಸಂತೋಷದಿಂದ ತಮ್ಮ ಸೂಚನೆಗಳನ್ನು ಕೊಟ್ಟರು. ಇದಕ್ಕೆ ಬೇಕಾದ ಟಿಪ್ಪಣಿ ಮುಂತಾದ ವಿಷಯಗಳನ್ನು ತಯಾರಿಸುವಲ್ಲಿ ಮ॥ ರಾ॥ ರಾ॥ ಸಿದ್ಧರಾಮಪ್ಪ ಪಾವಟೆ, ಬಿ. ಎ., ಎಲ್ ಎಲ್. ಬಿ., ಇವರು, ಹಾಗೂ ಮ॥ ರಾ॥ ರಾ॥ ದತ್ತಾತ್ರಯ ಬೇಂದ್ರೆ, ಬಿ. ಎ., ಇವರು ವಿಶೇಷ ಸಹಾಯಮಾಡಿರುವರು. ಇದರ ಮಧ್ಯದಲ್ಲಿ ಬಾದಾಮಿಯ ಶಿವಯೋಗ ಮಂದಿರ ಸ್ಥಾಪಕರಾದ ಶ್ರೀಮನ್ನಿರಂಜನ ಹಾನಗಲ್ಲು ಸ್ವಾಮಿಗಳವರು ಹಾಗೂ ಇನ್ನೂ ಅನೇಕರು ಕೆಲವು ಕೈಬರಹದ ಗ್ರಂಥಗಳನ್ನು ಕಳುಹಿಸುತ್ತೇವೆಂದು ಹೇಳಿದ್ದರೂ ಇದುವರೆಗೆ ಕಳುಹಿಸಲನುಕೂಲವಾಗಲಿಲ್ಲ. ಹೀಗಾಗಿ ಕೈಕೊಂಡ ಕೆಲಸವು ಪರಿಪೂರ್ಣತೆಗೆ ಮುಟ್ಟುವ ವರೆಗೆ ಕೆಲಸಮಾಡುತ್ತಹೋದರೆ ಅದು ಹೊರಬೀಳುವ ಸಮಯವೇ ಬರಲಿಕ್ಕಿಲ್ಲವೆಂದು ತಿಳಿದು ಅದನ್ನು ಸಿಕ್ಕಷ್ಟು ಸಹಾಯದ ಮೇಲಿಂದ ಇದ್ದಂತೆ ಅಚ್ಚುಹಾಕಿಸಲೆತ್ನಿಸಿದೆನು. ಇದಕ್ಕೆ ಬೇಕಾದ ಹಣವನ್ನು ಕೊಡುವದಕ್ಕೆ ಬಾಯಿಂದ ಅನೇಕರು ಸಹಾನುಭೂತಿಯನ್ನು

ತೋರಿಸಿದವರೂ ಕೈಯಿಂದ ಸಹಾಯ ಮಾಡಿದವರು ಒಬ್ಬರೂ ಇಲ್ಲ. ಇಂಥ ಸಮಯದಲ್ಲಿ ಮ॥ ರಾ॥ ರಾ॥ ಯಶವಂತರಾವ ಜಠಾರ, ಬಿ. ಎ., ಎಲ್‌ಎಲ್. ಬಿ., ಇವರು ದಯವಿಟ್ಟು ಈ ಕೃತಿಯನ್ನು ಪ್ರಸಿದ್ಧಪಡಿಸಲಿಕ್ಕೆ ಧೈರ್ಯಮಾಡಿದ್ದರಿಂದ ಸಕಲ ಕನ್ನಡಿಗರ ಹೆಸರಿನಲ್ಲಿ ಅವರಿಗೆ ನನ್ನಿಯ ನೆನಪನ್ನರ್ಪಿಸುತ್ತೇನೆ. ಮೂಲದೋಷಗಳಿಂದಲೂ ಮುದ್ರಣ ದೋಷಗಳಿಂದಲೂ ಮುಕ್ಕಾಲುಪಾಲು ಕೆಟ್ಟುಹೋಗಿದ್ದ ಸರ್ವಜ್ಞ ವಚನಗಳನ್ನು ಈ ಆವೃತ್ತಿಯಲ್ಲಿ ಸಾಧ್ಯವಿದ್ದಷ್ಟು ಮಟ್ಟಿಗೆ ಸರಿಪಡಿಸುವದಕ್ಕೆ ದೀರ್ಘಪ್ರಯತ್ನಪಟ್ಟದೆ. ಎಷ್ಟು ಶ್ರಮಿಸಿದರೂ ಇದರಲ್ಲಿ ದೋಷಗಳುಳಿದಿರುವದು ನಿಶ್ಚಯ. ಬಲ್ಲವರು ಒಪ್ಪನ್ನು ಸ್ವೀಕರಿಸಿ ತಿಳಿಯದೆ ಉಳಿದಿರುವ ತಪ್ಪುಗಳನ್ನು ದಯವಿಟ್ಟು ತಪ್ಪದೇ ಬರೆದು ತಿಳಿಸಿ ಮುಂದಿನ ಆವೃತ್ತಿಯನ್ನು ಮತ್ತಷ್ಟು ಶುದ್ಧವಾಗಿಯೂ ಉತ್ತಮವಾಗಿಯೂ ಹೊರಡುವಂತೆ ಸಹಾಯಮಾಡಬೇಕೆಂದು ನನ್ನ ಬಿನ್ನಹವದೆ. ಯಥಾರ್ಥವಾಗಿ ಹೇಳಿದರೆ ಈ ಕೆಲಸವು ಆಳವಾದ ಒಂದು ತಗ್ಗನ್ನು ಎರಡು ಸಾವಿರ ರೂಪಾಯಿ ವೆಚ್ಚಮಾಡಿ ಮುಚ್ಚಿ ಅದರ ಮೇಲೆ ಇಪ್ಪತ್ತು ರೂಪಾಯಿಯದೊಂದು ಸಣ್ಣ ಗುಡಿಸಲವನ್ನು ಹಾಕಿದಂತಿದೆ. ತಗ್ಗನ್ನು ಎಂದೂ ನೋಡದವನೊಬ್ಬನು ಬಂದು ಬರಿ ಗುಡಿಸಲವನ್ನು ನೋಡಿ ಅದನ್ನು ಹಾಕಲಿಕ್ಕೆ ಎರಡುಸಾವಿರ ಇಪ್ಪತ್ತು ರೂಪಾಯಿ ಹಿಡಿಯಿತೆಂದು ಕೇಳಿದರೆ ಆಶ್ಚರ್ಯದಿಂದ ನಗುವನಷ್ಟೇ. ಇದರಿಂದ ಸರ್ವಜ್ಞನ ಸಂಬಂಧವಾದ ಕೆಲಸವು ಈಗ ತಾನೇ ಪ್ರಾರಂಭವಾಗಿರುವದೆಂದೂ ಅದನ್ನು ಸಂಪೂರ್ಣತೆಗೆ ಮುಟ್ಟಿಸುವ ಕಾರ್ಯಭಾಗವು ಸಕಲ ಕನ್ನಡಿಗರನ್ನು ಕೂಡಿರುವದೆಂದೂ ನನ್ನ ತಾತ್ಪರ್ಯ. ಅದುಕಾರಣ ಇದರಲ್ಲಿಲ್ಲದ ವಚನಗಳು ಯಾರಿಗಾದರೂ ತಿಳಿದುಬಂದರೆ ಇಲ್ಲವೆ ಹೊಸ ಕೈಬರಹದ ಪ್ರತಿಗಳು ದೊರೆತರೆ ಯಾವ ಸಂಕೋಚವಿಲ್ಲದೆ ಅವುಗಳನ್ನು ಕಳುಹಿಸಿಕೊಟ್ಟು ಎಲ್ಲರೂ ಈ ಕಾರ್ಯದಲ್ಲಿ ಕೈಕೊಡಬೇಕೆಂದು ಸಕಲ ಕನ್ನಡಿಗರನ್ನು ಶಿರಬಾಗಿ ಬೇಡಿಕೊಳ್ಳುತ್ತೇನೆ. ಯಾವದೊಂದು ಹೊಸ ಪದ್ಯವು ದೊರೆತರೆ, ಅದು ಮುದ್ರಣ ಗ್ರಂಥದಲ್ಲಿ ಬಂದಿರುವದೋ ಇಲ್ಲವೋ ಎಂದು ತಿಳಿದುಕೊಳ್ಳಲಿಕ್ಕೆ ವರ್ಣಾನುಕ್ರಮಣಿಕೆಯನ್ನು ಸೇರಿಸಿದ್ದೇನೆ. ಸರ್ವಜ್ಞನು ಸರ್ವರಿಗೆ ತಿಳಿಯುವಂತೆ ಸುಲಭ ಭಾಷೆಯಲ್ಲಿ ಕನ್ನಡ ಪದ್ಯಗಳನ್ನು ರಚಿಸಿದ್ದರೂ ಅವುಗಳಿಗೂ ಟಿಪ್ಪಣಿಯನ್ನು ಬರೆಯಲವಶ್ಯವಾದುದು ಈಗಿನ ಕನ್ನಡಿಗರ ದುರ್ದೈವವೇ ಸರಿ. ಕಡೆಗೆ ಈ

ಕಾರ್ಯದಲ್ಲಿ ಉಚಿತ ಯೋಚನೆಯನ್ನು ಕೊಟ್ಟು ಸಹಾಯಮಾಡಿದ ಪಂಡಿತ ಮೂರ್ತಾಚಾರ್ಯರನ್ನೂ ಟಿಪ್ಪಣಿ ಮುಂತಾದವುಗಳನ್ನು ತಯಾರಿಸುವದರಲ್ಲಿ ನೆರವಾದ ಪಾವಟೆ, ಬೇಂದ್ರೆ ಮುಂತಾದ ಕನ್ನಡ ಭಾಷಾಸೇವಕರನ್ನೂ ಅಲ್ಪವಾದರೂ ಬಹುಮಾನರೂಪವಾಗಿ ಕೈಯಾರೆ ಸಹಾಯಮಾಡಿ ಸಹಾನುಭೂತಿಯನ್ನು ತೋರಿಸಿದ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದವರನ್ನೂ, ಬೆಂಗಳೂರು ಸಾಹಿತ್ಯಪರಿಷತ್ತಿನವರನ್ನೂ ಇಂಡಿಯಾ ಸರಕಾರದ ಲೆಜಿಸ್ಲೇಟಿವ್ ಅಸೆಂಬ್ಲಿಯ ಸಭಾಸದರಾದ ಶ್ರೀಮಾನ್ ಬೆಳವಿಯವರನ್ನೂ ಹುಬ್ಬಳ್ಳಿಯ ರಾವಸಾಹೇಬ ಶ್ರೀ ಚನಬಸಪ್ಪಾ ಶಿರಟ್ಟಿಯವರನ್ನೂ ಈ ಸಂಬಂಧವಾಗಿ ಯಾವದೊಂದು ರೀತಿಯಿಂದ ಸಹಾಯಮಾಡಿದ ಸಕಲರನ್ನೂ ಇನ್ನೊಮ್ಮೆ ಕೃತಜ್ಞತೆಯಿಂದ ಕೊಂಡಾಡಿ ನನ್ನನ್ನು ಸಕಲ ವಿಘ್ನಗಳಲ್ಲಿ ಪಾರುಗಾಣಿಸಿ ತನ್ನ ಸೇವೆಗೋಸ್ಕರವೇ ಇದುವರೆಗೆ ಕಾದುಳಿಸಿದ ಪರಮೇಶ್ವರನಿಗೆ ಸರ್ವಜ್ಞನವಚನವೊಂದರಿಂದಲೇ ಮಂಗಳ ನುಡಿದು ಈ ಮುನ್ನುಡಿಯನ್ನು ಮುಗಿಸುವೆನು.

**ಎನ್ನ ಮನಸ್ಸಿಗೆ ನೆನಹ ಉನ್ನತದವ ಕೊಟ್ಟ ।**<br>
**ಬಿನ್ನಣದಿಂದ ಸ್ತುತಿಗೈದು ಪೊಗಳುವೆ ।**<br>
**ಚನ್ನಮೂರತಿಯ ಸರ್ವಜ್ಞ ॥**

**ಧಾರವಾಡ**<br>
ತಾ॥ ೧೭-೫-೧೯೩೩.

**ಚನ್ನಪ್ಪ ಉತ್ತಂಗಿ**



# ವಚನಕಾರರ ಹೃದಯದರ್ಪಣ

"ವಚನಕಾರರು ಹಿಂದೂ ಧರ್ಮದಲ್ಲಿಯ ಒಂದು ಬಗೆಯ ವಿಚಾರವಾದಿ (Rati onalists) ಗಳೆಂದು ಹೇಳಬಹುದು.

ಇವರಲ್ಲಿ ದ್ವೈತಾದ್ವೈತ ಮೊದಲಾದ ಯಾವ ತರದ ಕಲಹಗಳು ಕಂಡುಬರುವದಿಲ್ಲ. ಇಂಥ ಹೋರಾಟಗಳಿಗೆ ಇವರು ಮನಸ್ಸು ಹಾಕಿಲ್ಲ. ಆದರೆ ಇವರು ಮನುಷ್ಯನ ಧಾರ್ಮಿಕ ಮತ್ತು ಮಾನಸಿಕ ಉನ್ನತಿಗೆ ಹೆಚ್ಚಾಗಿ ಲಕ್ಷ್ಯಕೊಟ್ಟಿರುವರು.

ವಚನಕಾರರು ತಮ್ಮ ವಿಚಾರಗಳನ್ನು ಬಹು ವಿಲಕ್ಷಣವಾದ ಶೈಲಿಯಲ್ಲಿ ಬರೆದಿರುವರು. ಇದರಿಂದ ಅವರ ವಿಚಾರಗಳು ಬಹು ಸ್ಪಷ್ಟವಾಗಿ ಮನಸ್ಸಿನಲ್ಲಿ ಮೂಡುತ್ತವೆ. ಇದರಂಥ ವಾಙ್ಮಯವು ಬೇರೆ ಯಾವ ಭಾಷೆಯಲ್ಲಿಯೂ ಸಿಗಲಾರದು. ಇವರು ವ್ಯಾಕರಣದ ಕಟ್ಟುಗಳಿಗೆ ಮೀರಿದವರು. ನೀತಿ, ಸದ್ವರ್ತನೆ, ಇವುಗಳಿಗೆ ಇವರು ಬಹಳ ಮಹತ್ವಕೊಟ್ಟಿದ್ದು, ಈ ವಿಷಯಗಳನ್ನು ಪದೇ ಪದೇ ವಿವರಿಸಲಿಕ್ಕೆ ಎಂದೂ ಬೇಸರಿಯದೆ ಅವನ್ನು ನಾನಾರೀತಿಯಿಂದ ವಿವರಿಸುವರು.

ವಚನಕಾರರು ಉದ್ಯೋಗ ಅಂದರೆ ಕಾಯಕಗಳಿಗೆ ಬಹಳ ಮಹತ್ವ ಕೊಟ್ಟಿರುವರು. ಅಂದರೆ ಮನುಷ್ಯನು ಸ್ವತಃ ದುಡಿದು ಸ್ವತಂತ್ರತೆಯಿಂದಿದ್ದು ಲಿಂಗಾರ್ಪಣ ಭಾವದಿಂದ ವರ್ತಿಸಬೇಕೆಂದು ಇವರ ಅಭಿಪ್ರಾಯ.

ವಚನಕಾರರ ವಿಶ್ವಬಂಧುತ್ವದ ವಿಚಾರಗಳು ಬಹು ಶ್ರೇಷ್ಠವಾದವುಗಳು. ಅವರು ಚರಾಚರ ಪ್ರಾಣಿಗಳೆಲ್ಲವನ್ನೂ ದಯಾರ್ದ್ರದೃಷ್ಟಿಯಿಂದ ನೋಡುವವರಾಗಿರುತ್ತಾರೆ. ಇವರ ಶಾಸ್ತ್ರಕ್ಕೆ ಮುಚ್ಚು ಮರೆಗಳಿಲ್ಲ. ಅದು ಎಲ್ಲ ಜಿಜ್ಞಾಸುಗಳಿಗೂ ತೆರೆದಿರುತ್ತದೆ.

ಇವರು ವೇದೋಪನಿಷತ್ತುಗಳಲ್ಲಿಯ ಶುದ್ಧ ಅಭಿಪ್ರಾಯಗಳನ್ನು ಸ್ವೀಕರಿಸಿದ್ದರೂ ಒಂದು ವಿಶಿಷ್ಟ ತರದ ಅಭಿಪ್ರಾಯವುಳ್ಳವರು. ಇವರಲ್ಲಿ ಮೂರ್ತಿಪೂಜೆಯ ಅತಿರೇಕಗಳು ಬಹಳಕಡಿಮೆ.

ಜಾತಿವಿಶಿಷ್ಟ ತಾರತಮ್ಯ ಭಾವಗಳು ವಚನಕಾರರಲ್ಲಿಲ್ಲ. ಅದರಂತೆ ಸ್ತ್ರೀ ಪುರುಷ ಭೇದ ಭಾವಗಳೂ ಅವರಲ್ಲಿಲ್ಲ. ಎಲ್ಲರೂ ಸಮಾನರೆಂದು ಭಾವಿಸಿ ಎಲ್ಲಿ ನಡೆನುಡಿಗಳು ಚನ್ನಾಗಿವೆಯೋ ಅದಕ್ಕೆ ಅವರು ಮಹತ್ವ ಕೊಟ್ಟಿರುವರು. ಅವರು ಯಾವಾಗಲು ಸದಾಚಾರ ಸದ್ವರ್ತನೆಗೆ ಮಹತ್ವ ಕೊಟ್ಟಿದ್ದು ಇವು ಯಾರಲ್ಲಿ ಇವೆಯೋ ಅವರೇ ಕುಲಜರೆಂದು ಭಾವಿಸುತ್ತಾರೆ. ಆದರಿಂದ ಲಿಂಗಾಯತ ಮತವು ಈಗಿನಂತೆ ಒಂದು ಜಾತಿಯ ಸ್ವರೂಪವನ್ನು ಹೊಂದದ್ದರಿಂದ ಬ್ರಾಹ್ಮಣ ಮೊದಲ್ಗೊಂಡು ಅಂತ್ಯಜರವರೆಗೂ ಅಸಂಖ್ಯ ಜನರು ಇವರ ಮತಾವಲಂಬಿಗಳಾದರು."

**ಫ. ಗು. ಹಳಕಟ್ಟಿ,**

ವಚನಶಾಸ್ತ್ರಸಾರ ಪ್ರಸ್ತಾವನೆ.

# ಪ್ರಸ್ತಾವನೆ.

ಕನ್ನಡಿಗರು ಪುರಾತನಕಾಲದಿಂದ ಕಾವ್ಯವಿದ್ಯೆಯಲ್ಲಿ ಒಳಿತಾಗಿ ನುರಿತಿದ್ದರೂ ಇವರಲ್ಲಿ ಒಬ್ಬನಾದರೂ ಕವಿಕುಲ ಸಾರ್ವಭೌಮರೆನ್ನಿಸಿಕೊಳ್ಳುವ **ಕಾಳಿದಾಸ, ಸೆಕ್ಸಪೀಯರ, ಗೋಥೆ** ಮುಂತಾದವರಂತೆ ದಿಗಂತ ಕೀರ್ತಿಯನ್ನು ಪಡೆಯದೆ ಹೋದದ್ದು ಬಹು ಸೋಜಿಗವಾಗಿ ತೋರುತ್ತದೆ. ಹೀಗಿದ್ದರೂ ಕನ್ನಡ ನಾಡಿನ ಮಟ್ಟಿಗೆ ಕೀರ್ತಿಯನ್ನು ಸಂಪಾದಿಸಿದ ಕವಿಕುಲೋತ್ತಮರು ಅನೇಕರಿರುವರು. ಇವರಲ್ಲಿ **ಪಂಪ, ಪೊನ್ನ, ರನ್ನಾ**ದಿಗಳೇ ಮುಖ್ಯರೆಂದು ಕನ್ನಡ ವಾಙ್ಮಯ ನಿಷ್ಣಾತರ ಅಭಿಪ್ರಾಯವಿರುವದು. ಇವರಿಗೆ ಕನ್ನಡ ಕವಿರತ್ನಗಳೆಂತಲೂ ಹೆಸರು. ಆದರೆ ಇವರ ಪ್ರಶಂಸೆಯು ಪಂಡಿತರಲ್ಲಿ ಮಾತ್ರ ಕೇಳಬರುತ್ತಿರುವದಲ್ಲದೆ ಸಾಧಾರಣ ಜನರಲ್ಲಿ ಇವರ ಅಸ್ತಿತ್ವದ ಕಲ್ಪನೆಯು ಸಹ ಇರುವದಿಲ್ಲ. ಹೀಗಿರಲು ಕೇವಲ ಜನಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಕರ್ನಾಟಕದಲ್ಲಿ ಆಗಿಹೋದ ಕವಿಗಳಲ್ಲಿ **ಸರ್ವಜ್ಞ ಕವಿ**ಯೇ ಮೂರ್ಧನ್ಯನೆಂದು ಹೇಳಬೇಕು. ಇವನಷ್ಟು ಜನಪ್ರಿಯನಾದ ಇನ್ನೊಬ್ಬ ಕವಿಯು ಕನ್ನಡಿಗರಲ್ಲಿ ದೊರೆಯಲಾರನು. ಮಹಾರಾಷ್ಟ್ರಕ್ಕೆ **ತುಕಾರಾಮ**ನೂ ತೆಲಗುನಾಡಿಗೆ **ವೇಮನ**ನೂ, ತಮಿಳಿನಲ್ಲಿ **ಅವ್ವಾಯಿ, ಅರುಣಗಿರಿನಾಥ**ರೂ ಇರುವಂತೆ ಸರ್ವಜ್ಞನು ಕರ್ನಾಟಕಕ್ಕಿರುವನು.[1] ಪಂಪಾದಿಗಳು ಪ್ರೌಢಗನ್ನಡ ಕವಿಶಿಖಾಮಣಿಗಳೆನ್ನಿಸಿಕೊಂಡರೆ ಸರ್ವಜ್ಞನು ರೂಢಗನ್ನಡ ಕವಿಶಿಖಾಮಣಿಯೆನ್ನಿಸಿಕೊಳ್ಳಲಿಕ್ಕೆ ಯೋಗ್ಯನಿರುವನು. ಇವನ ಹೆಸರನ್ನು ಕೇಳದ ಕನ್ನಡಿಗನನ್ನು ಕಾಣುವದೇ ಕ್ವಚಿತ. ಪ್ರಾಯಶಃ ಪ್ರತಿಯೊಬ್ಬರಿಗೆ ಒಂದಿಲ್ಲೊಂದು ಪದ್ಯವು ಗೊತ್ತಿರುವದು. ಸರ್ವರೂ ಇವನ ಅನುಭವೋಕ್ತಿಗಳನ್ನು ಕೇಳುವದಕ್ಕೆ ಸಂತೋಷಪಡುವರು.

---

(1) ಇ. ಪಿ. ರೈಸರವರು ಈ ಮೂವರು ಆಯಾ ವಾಙ್ಮಯಗಳಲ್ಲಿ ಹೆಚ್ಚು ಕಡಿಮೆ ಒಂದೇ ಸ್ಥಳವನ್ನು ಆಕ್ರಮಿಸಿಕೊಂಡಿರುವರೆಂದು ಹೇಳಿದಾಗ್ಯೂ (E. P. Rice's Kan, Lit. page 69.) ವೇಮನನಿಗೆ ತೆಲುಗಿನಲ್ಲಿಯೂ ತುಕಾರಾಮನಿಗೆ ಮರಾಠಿಯಲ್ಲಿಯೂ ಇರುವ ಗೌರವವು ಕನ್ನಡದಲ್ಲಿ ಸರ್ವಜ್ಞನಿಗೆ ಇನ್ನೂ ಇರುವದಿಲ್ಲವೆಂದು ಹೇಳಬಹುದು. ಅವನ ಪದ್ಯಗಳು ಸಂಪೂರ್ಣವಾಗಿ ದೊರೆಯದಿರುವದೂ ಅಶುದ್ಧ ಮುದ್ರಣಗಳೂ ವಿಪರೀತ ಭಾಷಾಂತರಗಳೂ ಇದಕ್ಕೆ ಮುಖ್ಯ ಕಾರಣವೆಂದು ತಿಳಿದು ಬರುತ್ತದೆ.

ದಿನ ನಿತ್ಯದ ಮಾತು ಕಥೆಗಳಲ್ಲಿ ಜನರು ಇವನ ವಚನಗಳನ್ನು ಗಾದೆಗಳಂತೆ ಪ್ರಯೋಗಿಸುವರು. ಸರ್ವಜ್ಞಗಳಿಂದ ಗಾದೆಗಳುಂಟಾದವೋ ಗಾದೆಗಳಿಂದ ಸರ್ವಜ್ಞಗಳುಂಟಾದವೋ ಎಂದು ವಿವೇಕಿಸಿ ತಿಳಿಯಕೂಡದಷ್ಟು ಇವನ ಪದ್ಯಗಳು ಜನರಲ್ಲಿ ಸಮರಸವಾಗಿವೆ. ವೇಶಗಾರರೆಂಬ ಜಾತಿಯವರಲ್ಲಿ ಕೆಲವರು ಸರ್ವಜ್ಞನ ಪಂಥದವರೋ ಎಂಬಂತೆ ಇವನ ಪದ್ಯಗಳನ್ನು ಕೀರ್ತನರೂಪವಾಗಿ ಮನೆಮನೆಗೆ ಹಾಡುತ್ತ ಜನರನ್ನು ಸಂಬೋಧಿಸಿ ಕರ್ನಾಟಕದಲ್ಲೆಲ್ಲ ಸಂಚರಿಸುತ್ತಿರುವರು. ಸುಲಭ ಭಾಷೆಯಲ್ಲಿಯೂ ಸುಲಭ ಛಂದಸ್ಸಿನಲ್ಲಿಯೂ ರಚಿಸಲ್ಪಟ್ಟ ಇವನ ಮಧುರ ವಚನಗಳು ಪಂಡಿತರನ್ನೂ ಪಾಮರರನ್ನೂ ಲೌಕಿಕರನ್ನೂ ಪಾರಮಾರ್ಥಿಕರನ್ನೂ ದ್ವೈತಿಗಳನ್ನೂ ಅದ್ವೈತಿಗಳನ್ನೂ ಏಕಪ್ರಕಾರವಾಗಿ ಆಕರ್ಷಿಸುತ್ತಿರುವದರಿಂದ ಸರ್ವ ಮತಗಳವರೂ ಬೋಧಪರವಾದ ಇವನ ಸುಭಾಷಿತಗಳನ್ನು ವರ್ಣಾಶ್ರಮ ಭೇದವಿಲ್ಲದೆ ಅತ್ಯಾದರದಿಂದ ಓದುತ್ತಿರುವರು. ಇಂಥ ಜನಪ್ರಿಯ ಕವಿಯ ಪೂರ್ವೋತ್ತರವು ಸರ್ವರಿಗೆ ಸಾಂಗವಾಗಿ ತಿಳಿಯುವಂತೆ ಪ್ರಸ್ತಾವನೆಯನ್ನು (೧) ಮೂಲ ಪ್ರತಿಗಳ ವಿಚಾರ (೨) ಮುದ್ರಣ ಪ್ರತಿಗಳ ವಿಚಾರ, (೩) ಜನ್ಮವಿಚಾರ, (೪) ದೇಶವಿಚಾರ, (೫) ಕಾಲವಿಚಾರ, (೬) ಪದ್ಯಸಂಗ್ರಹ ವಿಚಾರ, (೭) ಭಾಷಾ ವಿಚಾರ, (೮) ಸರ್ವಜ್ಞಮೂರ್ತಿ ವಿಚಾರ, (೯) ವಚನಸಾರ, (೧೦) ಉಪಸಂಹಾರವೆಂದು ದಶವಿಷಯಗಳಾಗಿ ವಿಭಾಗಿಸಿರುವೆವು.

## ೧ ಮೂಲಪ್ರತಿಗಳ ವಿಚಾರ.

ಸರ್ವಜ್ಞನು ಜೀವಂತನಿರುವಾಗ ಬರೆಯಲ್ಪಟ್ಟ ಓಲೆಯ ಪ್ರತಿಗಳಂತೂ ದೊರೆಯುವಂತಿಲ್ಲ. ಇವನ ಮೂಲಪ್ರತಿಗಳ ವಿಚಾರಕ್ಕೆ ಮೊದಲುಮಾಡಿದ ರೆವರೆಂಡ ಎಫ್. ಕಿಟೆಲ್ ಪಂಡಿತರಿಗೆ ಎರಡು ಕೈಬರಹದ ಪ್ರತಿಗಳು ದೊರೆತಿದ್ದಂತೆ ಅವರು ನಾಗವರ್ಮ ಛಂದಸ್ಸಿಗೆ ಬರೆದ ವಾಙ್ಮಯ ನಿಬಂಧದಿಂದ ತಿಳಿದು ಬರುತ್ತದೆ.[1] ನಮಗೆ ದೊರೆತ ಹಸ್ತಲಿಖಿತಗಳಲ್ಲಿ ಮುಖ್ಯವಾದವುಗಳನ್ನು ಅಂಗ್ಲಮೂಲಾಕ್ಷರಗಳಿಂದ ಅಂಕಿತಪಡಿಸಿ ಮುಂದೆ ಗ್ರಂಥ ಶುದ್ಧೀಕರಣಾಧಾರ ಪಟ್ಟಿಯಲ್ಲಿ ಕೊಟ್ಟಿದ್ದೇವೆ. ಈ ವಿಷಯವನ್ನು ಇತ್ತಿತ್ತ ವಿಚಾರಿಸಿದ ಶ್ರೀಮಾನ್

1 Kittel's Essay on Kan Lit Nagavarma s Prosody page 73.

ಆರ್. ನರಸಿಂಹಾಚಾರ್ಯರು ನೂರಕ್ಕಿಂತ ಹೆಚ್ಚು ಓಲೆಯ ಪ್ರತಿಗಳನ್ನು ಶೋಧಿಸಿದ್ದಂತೆಯೂ ಶುದ್ಧವಾಗಿರುವದೊಂದು ಪ್ರತಿಯು ಮೈಸೂರು ರಾಚಕೂಟ ಶಾಸ್ತ್ರಿಗಳ ಬಳಿಯಲ್ಲಿರುವಂತೆಯೂ ನಮಗೆ ಬರೆದ ಒಂದು ಪತ್ರದಿಂದ ತಿಳಿಯುತ್ತದೆ. ಸನ್ ೧೮೭೦ ರಿಂದೀಚೆಗೆ ದೊರೆಯುವ ಕೆಲವು ಕೈಬರಹದ ಪ್ರತಿಗಳು ಅಷ್ಟರಲ್ಲಿ ಅಚ್ಚಾದ ಮುದ್ರಣಗ್ರಂಥಗಳ ಯಥಾ ಪ್ರತಿಗಳಿರುವವು. ಇದನ್ನರಿಯದೆ ಕೆಲವರು ಇವುಗಳನ್ನೂ ಮೂಲ ಪ್ರತಿಗಳೆಂದು ಭಾವಿಸಿದ್ದುಂಟು. ಸರ್ವಜ್ಞನ ವಚನಗಳು ಸಂಗ್ರಹವಾದ 'ತ್ರಿಪದಿ' ಗ್ರಂಥವ ಹೊರ್ತು ಇವನ "ಕಾಲಜ್ಞಾನ ತ್ರಿಪದಿ" ಎಂಬದೊಂದು ಬೇರೆ ಕೈಬರಹದ ಗ್ರಂಥವಿರುವದು. ಇದು ಇನ್ನೂ ಅಚ್ಚಾದಂತೆ ಕಾಣಲಿಲ್ಲ. ಇದರಲ್ಲಿ ೪೫೬ ಪದ್ಯಗಳಿರುವವು. ನಮಗೆ ದೊರೆತ 'ಕಾಲಜ್ಞಾನ ಗ್ರಂಥ' ದಲ್ಲಿ ೬೭೨ ಪದ್ಯಗಳಿವೆ. ಇವು ತ್ರಿಪದಿರೂಪವಾಗಿ ತೋರಿದರೂ ಛಂದೋಬದ್ಧವಾಗಿರದೆ ಸಿಥಿಲ ಪ್ರಾಸದಲ್ಲಿ ಹೇಳಿದ ಗದ್ಯವಚನಗಳಾಗಿವೆ. ಮೇಲೆ ಹೇಳಿದ ಉಭಯ ಕಾಲಜ್ಞಾನ ಗ್ರಂಥಗಳ ಆರಂಭದಲ್ಲಿ, ಕ್ರಮವಾಗಿ "ಬಸವ ನೀವು ನಿರೂಪಿಸಿದ ಕಾಲಜ್ಞಾನವ ಭಪಿತವಿಟ್ಟ ನಾ ನಿಮ್ಮ ಶಿಶುವೆಂದು ಪೇಳ್ವೆ" ಎಂಬುದಾಗಿಯೂ "ಬಸವಾದಿ ಪ್ರಮುಥರು ಕಲ್ಯಾಣದ ಅನುಭವ ಮಂಟಪದಲ್ಲಿ ಸರ್ವಜ್ಞ ಗಣೇಶ್ವರನಿಗೆ ನಿರೂಪಿಸಿದ ಕಾಲಜ್ಞಾನವು" ಎಂಬುದಾಗಿಯೂ ಹೇಳಿರುವದರಿಂದ ಈತನು ಬಸವನ ಕಾಲಜ್ಞಾನವನ್ನೇ ಅನುಸರಿಸಿದಂತೆ ತಿಳಿಯುತ್ತದೆ.

ಸರ್ವಜ್ಞನ 'ತ್ರಿಪದಿ'ಗಳನ್ನು ಬರೆದುಳಿಸುವದಕ್ಕೆ ಪ್ರಯತ್ನಪಟ್ಟವರಲ್ಲಿ ಹೆಚ್ಚಿನವರು ಜೈನರೂ ಲಿಂಗಾಯತರೂ ಇರುವರು. ಜೈನರು ಬರೆದ ಪ್ರತಿಗಳಲ್ಲಿ ನೈತಿಕ ಪದ್ಯಗಳ ಕಡೆಗೂ ಲಿಂಗಾಯತರು ಬರೆದ ಪ್ರತಿಗಳಲ್ಲಿ ಷಟ್ಸ್ಥಲಗಳ ಕಡೆಗೂ ವಿಶೇಷ ಒಲವಿದ್ದಂತೆ ತೋರುತ್ತದೆ. ಅವರವರು ಕ್ರಮವಾಗಿ 'ಶ್ರೀ ವೀತರಾಗಾಯನಮಃ' 'ಶ್ರೀಗುರುಬಸವಲಿಂಗಾಯನಮಃ' ಎಂದು ಗ್ರಂಥಾರಂಭಮಾಡಿರುವರು. ಇದುವರೆಗೆ ಲಿಖಿತವಾದ ಸರ್ವಜ್ಞನ ಕೈಬರಹದ ಪ್ರತಿಗಳನ್ನು ಮೂಲ ಸಂಗ್ರಹಗಳೆಂತಲೂ ನೂತನ ಸಂಗ್ರಹಗಳೆಂತಲೂ ಎರಡು ಭಾಗಗಳಾಗಿ ವಿಭಾಗಿಸಬಹುದು. ಮೊದಲನೆಯ ತರದ ಪ್ರತಿಗಳು ಅಲ್ಲಲ್ಲಿ ವ್ಯತ್ಯಾಸವುಳ್ಳವುಗಳಾಗಿದ್ದರೂ ಬಹುಶಃ ಎಲ್ಲ ಪದ್ಯಗಳು ಒಂದೇ ಕ್ರಮವನ್ನನು

ಸರಿಸಿ ಬರೆಯಲ್ಪಟ್ಟಿರುವದರಿಂದ ಒಂದನ್ನೊಂದು ಹೋಲುತ್ತಿರುವವು. ಆದರೆ ಎರಡನೆಯ ತರದ ಪ್ರತಿಗಳು ಹಾಗಲ್ಲ. ಇವು ಸ್ವತಂತ್ರಕ್ರಮದಿಂದ ಬರೆಯಲ್ಪಟ್ಟಿದ್ದು ಪ್ರತಿ ಒಂದರಲ್ಲಿಯೂ ಹೊಸಪದ್ಯಗಳು ದೊರೆಯುತ್ತ ಹೋಗುವವು. ಇದರಿಂದ ಸರ್ವಜ್ಞನು ಕಾಲವಾದ ಕೆಲವು ವರ್ಷಗಳಲ್ಲಿ ಆಗ್ಗೆ ರೂಢಿಯಲ್ಲಿದ್ದ ಪದ್ಯಗಳ ಹೊರತು ಅನೇಕ ಹೊಸಪದ್ಯಗಳುಂಟಾದವೆಂದೂ ಇವುಗಳನ್ನು ಸಂಗ್ರಹಿಸುವ ಅವಶ್ಯಕತೆಯು ಬಿದ್ದು ಆರಂಭದಿಂದಲೇ ಸರ್ವಜ್ಞನ ಪದ್ಯಸಂಗ್ರಹದಲ್ಲಿ ಎರಡು ತರದ ಆವೃತ್ತಿಗಳು ಉದ್ಭವವಾದವೆಂದೂ ತಿಳಿದುಬರುತ್ತದೆ. ನಮಗೆ ದೊರೆತ ಮೈಸೂರು, ಮದ್ರಾಸ, ಪ್ರಾಚ್ಯಕೋಶಾಲಯಗಳ ಪ್ರತಿಗಳಲ್ಲಿಯೂ ಇದೇ ತರದ ಭೇದವು ಒಡೆದುಕಾಣುತ್ತದೆ. ಬಹುಶಃ ಈಗ ಅಚ್ಚಾಗಿರುವ ಗ್ರಂಥಗಳೆಲ್ಲ ಈ ಎರಡು ತರದ ಕೈಬರಹದ ಪ್ರತಿಗಳ ಮಿಶ್ರಮುದ್ರಣಗಳಿರುವವಷ್ಟೆ.

ಇವನ ಹಸ್ತಲಿಖಿತಗಳಲ್ಲಿ ಹಳೆಗನ್ನಡದ 'ಱ' ಎಂಬ ಅಕ್ಷರವು ಆಗಾಗ್ಗೆ ದೊರೆಯುವದರಿಂದ ಅವನ ಕಾಲವನ್ನು ತಿಳಿಯುವದಕ್ಕೆ ಸಹಾಯವಾಗುವದು. ಕನ್ನಡದ ಹಳೆಯ ಬರಹಪದ್ಧತಿಯಂತೆ ಇವನ ಪ್ರತಿಗಳಲ್ಲಿ ಸೊನ್ನೆಯ ಬದಲಾಗಿ ಆಯಾವರ್ಗದ ಅನುನಾಸಿಕಗಳು ಬರುವದಲ್ಲದೆ ಅ, ಆ, ಎಂಬ ಸ್ವರಗಳನ್ನು ಬಿಟ್ಟು ಉಳಿದ ಎಲ್ಲ ಸ್ವರಗಳು ವ್ಯಂಜನಗಳಿಂದಲೇ ಬರೆಯಲ್ಪಟ್ಟಿವೆ. ಇದರಿಂದ ಈಗಿನ ಬರಹಪದ್ಧತಿಗೂ ಹಿಂದಿನ ಬರಹಪದ್ಧತಿಗೂ ಇರುವ ವ್ಯತ್ಯಾಸವು ತಿಳಿದು ಬರುತ್ತದೆ.

## ೨ ಮುದ್ರಣ ಪ್ರತಿಗಳ ವಿಚಾರ.

ಸರ್ವಜ್ಞನ ಪದ್ಯಗಳನ್ನು ಮೊದಲನೆಯ ಸಾರಿ ಮುದ್ರಿಸಿದವರು ಈಗ ಧಾರವಾಡದಲ್ಲಿ ವಕೀಲಿ ಕೆಲಸಮಾಡುತ್ತಿರುವ ಶ್ರೀ ಗದಿಗಯ್ಯಾ ಹೊನ್ನಾಪುರಮಠ ಇವರ ತಂದೆ ಹುಚ್ಚಯ್ಯ ಹೊನ್ನಾಪುರಮಠ ಎಂಬವರು. ಇವರು ತಮ್ಮ ಮುದ್ರಣಾಲಯದಲ್ಲಿ ಇದನ್ನು ಸನ್ ೧೮೬೭ರಲ್ಲಿ ಮುದ್ರಿಸಿರುವರು. ಇದು ಶಿಲಾಮುದ್ರಣವು. ಇದರಲ್ಲಿರುವ ಪದ್ಯಗಳು ೨೨೫. ಇವರು ತಮಗೆ ಗೊತ್ತಿದ್ದ ಪದ್ಯಗಳನ್ನಷ್ಟೇ ಮುದ್ರಿಸಿದಂತೆ ತೋರುತ್ತದೆ. ಮುಂದೆ ೧೮೬೮ರಲ್ಲಿ ಬೆಂಗಳೂರಿನ ವೆಸ್ಲಿಯನ್ ಮಿಶನ್ನಿನವರದೊಂದು ಮುದ್ರಣವಾಗಿರವದು. ಇದರಲ್ಲಿ ೧೧೫ ಪದ್ಯಗಳು ಮಾತ್ರ ಇವೆ. ಇವುಗಳನ್ನು ಗಂಗಾಧರ ಮಡಿ

ವಾಳೇಶ್ವರ ಎಂಬವರು ಸನ್ ೧೮೬೯ರಲ್ಲಿ ಛಾಪೆಯಾದ ಕನ್ನಡ ನಾಲ್ಕನೆಯ ಪುಸ್ತಕದಲ್ಲಿಯೂ ೧೮೭೦ರಲ್ಲಿ ಛಾಪೆಯಾದ ಕನ್ನಡ ಆರನೆಯ ಪುಸ್ತಕದ ಕೊನೆಯ ಭಾಗದಲ್ಲಿಯೂ ಸೇರಿಸಿರುವರು. ಇದೇ ಸುಮಾರಕ್ಕೆ ಅಂದರೆ ೧೮೬೮ರಲ್ಲಿ ಬಾಸೆಲ್‌ಮಿಶನ್ನಿನ ಮಿಶನರಿಗಳಲ್ಲೊಬ್ಬರಾದ ರೆವರೆಂಡ್. ಜಿ. ವಿರ್ತರೆಂಬವರು ಪ್ರಾಕ್ಕಾವ್ಯಮಾಲಿಕೆ ಎಂಬದೊಂದು ಕನ್ನಡ ಕಾವ್ಯಸಂಗ್ರಹವನ್ನು ಪ್ರಸಿದ್ಧಿಸಿರುವರು. ಇದರಲ್ಲಿ ೩೪೧ ಸರ್ವಜ್ಞ ಪದ್ಯಗಳಿವೆ. ಇವರು ಮಿಶನರಿಯ ಉದ್ದೇಶವನ್ನು ಮುಂತಿಟ್ಟುಕೊಂಡು ತಮಗೆ ಸರಿಕಂಡ ಪದ್ಯಗಳನ್ನು ಮಾತ್ರ ಎತ್ತಿ ಬರೆದಿರುವರು. ಹಿಂದೆ ಹೇಳಿದ ಪ್ರಾಕ್ಕಾವ್ಯಮಾಲಿಕೆ ಎಂಬ ಗ್ರಂಥವನ್ನೂ ಕೈಬರಹದ ಎರಡು ಪ್ರತಿಗಳನ್ನೂ ಆಧಾರ ಮಾಡಿಕೊಂಡು ಅದೇ ಮಿಶನ್ನಿನ ಪಂಡಿತ ಎಫ್. ಕಿಟಲ್ ಎಂಬ ಇನ್ನೊಬ್ಬ ಮಿಶನರಿಯವರು ತಾವು ರಚಿಸಿದ ಕರ್ನಾಟಕದ ಕಾವ್ಯಮಾಲೆ ಎಂಬ ಗ್ರಂಥದಲ್ಲಿಯೂ (೧೮೭೪) ಕನ್ನಡ ಇಂಗ್ಲಿಷು ನಿಘಂಟಿನಲ್ಲಿಯೂ (೧೮೯೪) ಉದಾಹರಣೆಗಾಗಿ ಕೆಲವು ಪದ್ಯಗಳನ್ನು ಕೊಟ್ಟಿರುವರು. ಈ ಪದ್ಯಗಳ ಸಂಖ್ಯೆಯು ಸುಮಾರು ೨೩೦ ಆಗುವದು. ಇವುಗಳಲ್ಲಿ ಇವರು ಹಳೆಗನ್ನಡ ಱ ಎಂಬ ಅಕ್ಷರಗಳನ್ನು ಲಕ್ಷಿಸಿ ಬರೆದಿರುವದಲ್ಲದೆ ಅಲ್ಲಲ್ಲಿಗೆ ಆವರಣದಲ್ಲಿ ಕೆಲವು ಅರ್ಥಸೂಚಕ ಶಬ್ದಗಳನ್ನು ಸೇರಿಸಿರುವರು. ಸನ್ ೧೮೮೧ರಲ್ಲಿ ಮದ್ರಾಸದ ಅಂಬಾಶಂಕರ ಮುದ್ರಾಕ್ಷರ ಶಾಲೆಯಲ್ಲಿ ಉಂತುಕಲ್ಲು ಗಿರಿಮಲ್ಲಯ್ಯನವರಿಂದ ಒಂದು ಗ್ರಂಥವು ಮುದ್ರಣವಾಗಿರುವದು. ಮುಂದೆ ೧೮೯೩ರಲ್ಲಿಯೂ ಒಂದು ಗ್ರಂಥವು ಪ್ರಸಿದ್ಧವಾಗಿದೆ. ಆದರೆ ಇದು ೧೮೮೧ರಲ್ಲಿ ಛಾಪೆಯಾದ ಗ್ರಂಥದ ಪುನರ್ಮುದ್ರಣವಿದ್ದು ಇದರಲ್ಲಿರುವ ಪದ್ಯ ಸಂಖ್ಯೆಯು ಸರಿಯಾಗಿಲ್ಲ. ನೂರಾರು ಪದ್ಯಗಳು ಕಡಿಮೆಯಾಗಿವೆ. ಮುಂದೆ ೧೯೦೩ರಲ್ಲಿ ಬಳ್ಳಾರಿ ಶಿವಲಿಂಗಶೆಟ್ಟರಿಂದ ಕರ್ನಾಟಕ ಬುಕ್‌ಡಿಪೋದ ಮುದ್ರಾಕ್ಷರ ಶಾಲೆಯಲ್ಲಿ ಒಂದು ಗ್ರಂಥವು ಪ್ರಕಟವಾಗಿದೆ. ಇದು ಸಹ ೧೮೯೩ರಲ್ಲಿ ಅಚ್ಚಾದ ಗ್ರಂಥದ ಪುನರ್ಮುದ್ರಣವಿರುವದು. ಇದರ ಹೊರಗಡೆಯಲ್ಲಿ ೧೫೦೦ ಪದ್ಯಗಳಿದ್ದಂತೆ ಬರೆದಿದ್ದರೂ ಇದು ಲೆಕ್ಕಿಸದೆ ಸುಮ್ಮನೆ ಛಾಪಿಸಿದ ಒಂದು ಅಂಕಿಯಾಗಿದೆ. ಸನ್ ೧೯೧೦ರಲ್ಲಿ ಬೆಂಗಳೂರು ನಾರಾಯಣ ಶಾಸ್ತ್ರಿಗಳಿಂದ ಮೂಲ ಗ್ರಂಥಕ್ಕೆ ಟೀಕಾ ತಾತ್ಪರ್ಯ ಸಹಿತವಾಗಿ ಬರೆದ ೨೨೦ ಪುಟಗಳದೊಂದು ಗ್ರಂಥವಿರುವದು. ಇದರಲ್ಲಿ ೧೧೫೬ ಪದ್ಯಗಳಿದ್ದಂತೆ ಅವರು ಹೇಳಿರುವರು.

ಇದು ಅದೇ ಕರ್ನಾಟಕ ಬುಕ್‌ಡಿಪೋದಲ್ಲಿ ಮುದ್ರಣವಾದದ್ದು. ಪದ್ಯಗಳು ಕೆಟ್ಟು ಹೋಗಿ ಅರ್ಥಮಾಡುವದಕ್ಕೆ ಕಷ್ಟವಾದಲ್ಲಿ ಶಾಸ್ತ್ರಿಗಳು ಹೇಗಾದರು ಒಂದು ಅರ್ಥವನ್ನು ಜೋಡಿಸಿರುವರಲ್ಲವೆ ಅನೇಕ ಪದ್ಯಗಳಿಗೆ ಅಪದ್ಧ ಅರ್ಥಗಳನ್ನೂ ಬರೆದಿರುವರು.* ಅರ್ಥಮಾಡುವದಕ್ಕೆ ಅನೇಕ ಸ್ಥಳಗಳಲ್ಲಿ ಕಷ್ಟವಿರುವದೆಂದು ತಿಳಿದ ಇವರು ತಮ್ಮ ಪ್ರಸ್ತಾವನೆಯಲ್ಲಿ "ಒಂದು ಪಟ್ಟಣಕ್ಕೆ ಹೋಗಬೇಕಾದರೆ ದಾರಿಯೇ ಇಲ್ಲವಾದರೆ ತುಂಬಾ ತೊಂದರೆಗಳುಂಟಾಗುವದು ಸಹಜ. ಹೇಗಾದರೂ ಒಂದು ದಾರಿಯು ದೊರೆತರೆ ಬುದ್ಧಿವಂತರು ಮುಂದೆ ಕಾಮಗಿರಿ ಮಾಡಿ ಸರಿಪಡಿಸಿಕೊಳ್ಳಬಹುದೆಂಬ ಭಾವನೆಯಿಂದ ತಾತ್ಪರ್ಯವನ್ನು ರಚಿಸಿರುವೆ"ನೆಂದು ಮೊದಲೇ ಹೇಳಿ ಬಿಟ್ಟಿರುವರು.† ಸರ್ವಜ್ಞನ ಗ್ರಂಥವು ಸನ್ ೧೮೮೧ರಿಂದ ಪ್ರತಿ ೫-೬ ವರ್ಷಕ್ಕೊಮ್ಮೆ ಪುನಃ ಪುನಃ ಹೊಸದಾಗಿ ಅಚ್ಚಾಗಿದ್ದರೂ ತಪ್ಪಿಲ್ಲದಂತೆ ಮುದ್ರಿಸುವ ಯತ್ನವು ೧೯೨೦ರ ವರೆಗೆ ನಡೆದಂತೆ ಕಾಣಲಿಲ್ಲ. ೧೯೦೬ರಲ್ಲಿ ವಾಜಪೇಯ ಕೃಷ್ಣಯ್ಯನವರು ೮೨ ಪುಟಗಳಲ್ಲಿ ೬ ಪುಟಗಳನ್ನು ಮಾತ್ರವೇ ಮುದ್ರಣ ದೋಷಗಳಿಲ್ಲದಂತೆ ಛಾಪಿಸುವದಕ್ಕೆ ಪ್ರಯತ್ನಿಸಿರುವರು. ೧೯೧೬ರಲ್ಲಿ ವೇಮಣ್ಣ-ಸರ್ವಜ್ಞ ಸಂವಾದವೆಂಬ ಗ್ರಂಥವು ಬೆಂಗಳೂರು ಸಿಟಿ ಪ್ರೆಸ್ಸಿನವರಿಂದ ಪ್ರಸಿದ್ಧಿಸಲ್ಪಟ್ಟಿರುವದು. ಇದರಲ್ಲಿ ತೆಲಗು ಪದ್ಯಗಳನ್ನು ಬಿಟ್ಟು ಕೇವಲ ಕನ್ನಡ ಪದ್ಯಗಳು ಸುಮಾರು ೨೫೦ ಇರುವವು. ಇದುವರೆಗೆ ಮುದ್ರಣವಾದ ಸರ್ವಜ್ಞ ಗ್ರಂಥಗಳಲ್ಲಿ ಬೆಂಗಳೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪನಿಯವರಿಂದ ಪ್ರಸಿದ್ಧಿಸಲ್ಪಟ್ಟ ಗ್ರಂಥವೇ ಕಡೆಯದೆಂದು ಹೇಳತಕ್ಕದ್ದು. ಇದು ೧೯೨೦ರಲ್ಲಿ ಮುದ್ರಣವಾಗಿರುವದು. ಇದಕ್ಕೆ 'ನೀತಿಸಾರ'ವೆಂದು ಹೆಸರು. ಇದು ಕರ್ನಾಟಕ ಗ್ರಂಥಾವಳಿಯ ತೃತೀಯ ಭಾಗವು. ಗ್ರಂಥ ಪ್ರಕಾಶಕರು ನೀತಿ ಸಂಬಂಧವಾದ ಪದ್ಯಗಳನ್ನಷ್ಟೇ ಆರಿಸಿ ಮುದ್ರಿಸಿರುವದರಿಂದ ಇದು ಸಂಪೂರ್ಣ ಗ್ರಂಥವಲ್ಲೆಂದು ಅಲ್ಲಲ್ಲಿ ಲೋಪಿಸಿರುವ ಅಂಕಿಗಳಿಂದ ವಿಶದವಾಗುತ್ತದೆ. ಇವರು ಹಿಂದೆ ಅಚ್ಚಾದ ಮದ್ರಾಸು, ಬಳ್ಳಾರಿಯ ಪ್ರತಿಗಳನ್ನು ಆಧಾರ ಮಾಡಿಕೊಂಡು ಸ್ವಲ್ಪ ಸುಧಾರಿಸಿ ಮುದ್ರಿಸಿರುವರು. ಇದರ ಮುದ್ರಣವು ಬಹು ಅಂದವಾಗಿದೆ. ಮುದ್ರಣ ದೋಷಗಳು ಪ್ರಾಯಶಃ ಇರುವದೇ ಇಲ್ಲ. ಹೀಗಾಗಿ ಒಂದು ರೀತಿ

* ಸಟೀಕ ತಾತ್ಪರ್ಯ ೧೬೪.

† ಸಟೀಕ ತಾತ್ಪರ್ಯ ಪ್ರಸ್ತಾವನೆ ಪುಟ ೨.

ಯಿಂದ ಈ ಗ್ರಂಥವು ಇತರ ಗ್ರಂಥಗಳಿಗಿಂತ ಉತ್ತಮವೆಂದು ಹೇಳತಕ್ಕದ್ದು. ಆದರೆ ಗ್ರಂಥಕರ್ತರು ಪೂರ್ವದ ದೋಷಗಳನ್ನು ಪರಿಹರಿಸಲಿಕ್ಕೆ ಹೋಗಿ ಕೆಲವೆಡೆಯಲ್ಲಿ ವಿಪರೀತವಾಗಿ ಪದ್ಯಗಳನ್ನು ಬದಲಾಯಿಸುವದರಿಂದ ಅವುಗಳ ಸೌಂದರ್ಯವೇ ಕೆಟ್ಟು ಹೋಗಿದೆ. ನೀತಿಸಾರದ ಸಂಪಾದಕರು ಮೂಲವನ್ನು ನೋಡದೆ ಇಂಥ ದೋಷಗಳನ್ನು ಪರಿಹರಿಸುವದಕ್ಕೆ ಮಾಡಿದ ಪ್ರಯತ್ನದಿಂದ ಪದ್ಯಗಳಿಗೆ ಸುಲಭವಾಗಿ ಒಂದು ಅರ್ಥವಾಗುತ್ತಿದ್ದರೂ, ಕೆಲವೆಡೆಯಲ್ಲಿ ಕವಿಯ ಅಭಿಪ್ರಾಯಕ್ಕೆ ತೀರವಿರುದ್ಧವಾದ ಅಭಿಪ್ರಾಯವು ಬಂದು ಹೋಗಿದೆ. ಒಟ್ಟಾರೆ ಇದುವರೆಗೆ ಬಳ್ಳಾರಿ, ಬೆಂಗಳೂರು, ಮದ್ರಾಸು ಮುಂತಾದ ಮುದ್ರಾಕ್ಷರ ಶಾಲೆಗಳಲ್ಲಿ ಛಾಪೆಯಾದ ಗ್ರಂಥಗಳೆಲ್ಲ ಹೆಚ್ಚು ಕಡಿಮೆ ಒಂದೇ ತರದವುಗಳಾಗಿದ್ದು ಮುದ್ರಣದೋಷಗಳಲ್ಲಿ ಮಾತ್ರ ಒಂದಕ್ಕಿಂತ ಒಂದು ಹಿರಿದಿನವುಗಳಾಗಿವೆ. ಮುದ್ರಣವಾದ ಸರ್ತಿಗೊಮ್ಮೆ ನೂರಾರು ಹೆಚ್ಚಿಗೆ ದೋಷಗಳು ಒಳಸೇರಿದಂತೆ ಕಾಣುತ್ತದೆ. ರಠ, ದಥ, ನಸ, ತಕ ಮುಂತಾದ ಅಕ್ಷರಗಳ ವ್ಯತ್ಯಾಸವಿಲ್ಲದೆ ಮುದ್ರಿಸಿದ ದೋಷಗಳಿಗಂತೂ ಲೆಕ್ಕವಿಲ್ಲ. ಮೂಲವನ್ನು ನೋಡದೆ ಮನಬಂದಂತೆ ಪ್ರಾಸವನ್ನು ಹೊಂದಿಸ ಹೋಗಿ ಮಾಡಿದ ತಪ್ಪುಗಳೂ ಅನೇಕ. ಪದ್ಯಗಳು ಹೊಸಹೊಸದಾಗಿ ಅಚ್ಚಾದಂತೆ ಹೆಚ್ಚೆಚ್ಚು ಕೆಡುತ್ತ ಕೆಲವೆಡೆಯಲ್ಲಿ ತೀರ ಕೈಗೆಬಾರದಂತಾಗಿವೆ. ಸದ್ಯಕ್ಕೆ ಸರ್ವಜ್ಞನ ಗ್ರಂಥವು, ಗೋಡೆಬಿದ್ದು ಹೆಂಟೆಗಳು ಚೂರುಚೂರಾಗಿ ಒಡೆದು ಹೋಗಿರುವ ಒಂದು ಹಾಳು ಮನೆಗೆ ಸರಿಯಾಗಿದೆ ಎಂದು ಹೇಳಬೇಕು. ಇಂಥ ಸ್ಥಿತಿಯನ್ನು ಕಣ್ಣಾರೆ ಕಂಡು ಸುಮ್ಮನಿರಲಾರದ ಕೆಲವು ಕನ್ನಡಿಗರು ಇದರ ಸಿಡಿದ ಕಲ್ಲು, ಒಡೆದಹೆಂಟೆ, ಬಿದ್ದ ತುಣುಕುಗಳನ್ನು ಇದ್ದಕ್ಕಿದ್ದಂತೆ ಜೋಡಿಸುವದಕ್ಕೆ ಪ್ರಯತ್ನಪಟ್ಟು ಗೊತ್ತಿಗೆ ಮುಟ್ಟದೆ ಕಡೆಗೆ ಬೇಸತ್ತು ಹೊಸ ಹೆಂಟೆಗಳನ್ನು ಮಾಡಿ ಅವುಗಳನ್ನು ಸಿಕ್ಕಸಿಕ್ಕಲ್ಲಿ ಸೇರಿಸಿಗಿಲಾಯಿಮಾಡಿ ಮೇಲೆ ಸುಣ್ಣದ ಸಾರಣೆ ಮಾಡಿದ್ದಾರೆ. ಇಂಥ ಸ್ಥಿತಿಯಲ್ಲಿ ವಚನಗಳ ಮೂಲವನ್ನು ಗೊತ್ತುಹಚ್ಚಿ ಅವುಗಳನ್ನು ಮುಂಚಿನ ಸ್ಥಿತಿಗೆ ತರುವಂಥಾದ್ದು ಎಷ್ಟು ಕಷ್ಟಕರವಾಗಿರುವದೆಂದೂ ಎಷ್ಟು ಶ್ರಮಿಸಿದರೂ ಈ ಕೆಲಸವು ಒಮ್ಮೆಲೇ ತೃಪ್ತಿಕರವಾದದ್ದಾಗಲಾರದೆಂದೂ ಮೇಲೆಯೇ ತಿಳಿಯುವದು.

ಕೈ ಬರಹದ ಪ್ರತಿಗಳನ್ನು ಚನ್ನಾಗಿ ಶೋಧಿಸದೆ ಹೋದರೆ ಬರಹದೋಷದಿಂದ ತಪ್ಪುಗಳು ಹೇಗೆ ಒಳನುಗ್ಗುವವೆಂದೂ ಕೇವಲ ಕಲ್ಪನೆಯಿಂದ

ತಿದ್ದಲೆತ್ನಿಸಿದರೆ ಪದ್ಯಗಳು ಹೇಗೆ ಕೆಡುವವೆಂದೂ ತೋರಿಸುವದಕ್ಕೆ, ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡುವೆವು.

ಬಳ್ಳಾರಿಯ ಗ್ರಂಥ.

ಅಂದಿನಾಪುಷ್ಪದತ್ತ ಒಂದೇವರುಷಿಯಾಗಿ ।
ಮುಂದೇವ ಸಾಲೆ ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥

ಬೆಂಗಳೂರು ನೀತಿಸಾರ.

ಅಂದಿನ ಪುಷ್ಪದತ್ತ ಮುಂದೇವರುಷಿಯಾಗಿ ।
ಸಂದೇಹಮುಳಿದು ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥

ಇಲ್ಲಿ ಟೀಕಾಕಾರರು 'ಒಂದೇವರುಷಿಯಾಗಿ' ಎಂಬದಕ್ಕೆ ಒಮ್ಮೆ ದೇವ ಸಭೆಯಲ್ಲಿ ಋಷಿಯಾಗಿದ್ದವನೆಂದು ಅರ್ಥಮಾಡಿದರೂ 'ಸಾಲೆ ಸರ್ವಜ್ಞ'ನೆಂಬದಕ್ಕೆ ಯಾವ ಅರ್ಥಮಾಡಬೇಕೆಂದು ತಿಳಿಯದೇ ಹೋದುದರಿಂದ ನೀತಿಸಾರ ಕರ್ತರು ಸಂದೇಹಮುಳಿದು ಎಂಬದಾಗಿ ತಿದ್ದಿರುವರು. ಸಾಲೆ ಸರ್ವಜ್ಞನೆಂಬದಕ್ಕೆ ಕಿಟಲ್ ಪಂಡಿತರು ಸಾಲೆಯಲ್ಲಿ ಕಲಿತವನೆಂದು ಅರ್ಥಮಾಡಿರುವರು.[1] ಆದರೆ ಮೂಲಪ್ರತಿ (ಪದ್ಯ ೮) ನೋಡಿದರೆ ಕುಂಬಾರ ಸಾಲೆಯಲ್ಲಿ ಸರ್ವಜ್ಞನು ಬಾಲ್ಯವನ್ನು ಕಳೆದದ್ದರಿಂದ ಬಂದ ಹೆಸರೆಂದು ಸ್ಪಷ್ಟವಾಗುತ್ತದೆ. ಈ ಪದ್ಯದ ಮೂಲರೂಪವು ಹೀಗಿರುವದು.—

ಅಂದಿನ ಪುಷ್ಪದತ್ತ ಬಂದ ವರರುಚಿಯಾಗಿ ।
ಮುಂದವಸಾಲೆ ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥

ಈ ಪದ್ಯವು ಮುದ್ರಣ ಗ್ರಂಥಗಳಲ್ಲಿ ಹೀಗಿರುವದು—

ಬಳ್ಳಾರಿ ಸಟೀಕ.

ಕ್ಷೀರದೊಳು ಘೃತವಿರಲು ನೀರಿನಲಿ ಸಿಲ್ಕಿಹುದು ।
ಆರಿಗೆ ತೋರದಿರುವಂತೆ ಯನ್ನೊಳಗೆ ।
ಸಾರಿಹನು ಶಿವನು ಸರ್ವಜ್ಞ ॥

ಬೆಂಗಳೂರ ನೀತಿಸಾರ.

ಕ್ಷೀರದೊಳಿಹಘೃತ ನೀರಿನ ಕಲ್ಮಷವು ।
ಆರಿಗೂ ತೋರದದರಂತೆ ಯೆನ್ನೊಳಗೆ ।
ಸಾರಿಹನು ಶಿವನು ಸರ್ವಜ್ಞ ॥

ಆದರೆ ಮೂಲದಲ್ಲಿ ಕೆಳಗೆ ಕೊಟ್ಟಂತಿರುವದು.

---

1 Kavyamala Preface page 5.

ಕ್ಷೀರದಿ ಘೃತ, ವಿಮಲ ನೀರಿನೊಳು ಶಿಖಿಯಿರ್ದು ।
ಆರಿಗು ತೋರದದರಂತೆ ಎನ್ನೊಳಗೆ ।
ಸಾರಿಹನು ಶಿವನು ಸರ್ವಜ್ಞ ॥

ಅರ್ಥ—ಹಾಲಿನಲ್ಲಿ ತುಪ್ಪವೂ ನೀರಿನಲ್ಲಿ ಬೆಂಕಿಯೂ (ಬಡಬಾಗ್ನಿ) ಅಡಗಿರುವ ಪ್ರಕಾರ ಶಿವನು ನನ್ನೊಳಗೆ ಇರುವನು ಇತ್ಯಾದಿ. ಇಲ್ಲಿ ಮೂಲದಲ್ಲಿ 'ವಿಮಲ' ವೆಂದು ಇದ್ದದ್ದು ಬಳ್ಳಾರಿ ಪ್ರತಿಯಲ್ಲಿ 'ವಿರಲು' ಎಂತಾಗಿದೆ. 'ಶಿಖಿ' ಎಂಬವು 'ಶಿಲ್ಕಿ' ಎಂತಾಗಿದೆ. ಈ ದೋಷವನ್ನು ಪರಿಹರಿಸುವದಕ್ಕೆ ಹೋಗಿ 'ನೀತಿಸಾರ' ಕರ್ತರು ಕಲ್ಮಷವೆಂದು ಕಲ್ಪನೆಯಿಂದ ತಿದ್ದಿರುವರು. ಇದರಿಂದ ಅರ್ಥವು ಮತ್ತಷ್ಟು ಕಲ್ಮಷವಾಗಿರುವದು. ಇಲ್ಲಿ ಶಿಖಿ, ಶಬ್ದದ 'ಖಿ' ಎಂಬ ಅಕ್ಷರವನ್ನು ಸ್ವಲ್ಪ ಅಗಲವಾಗಿಯೂ ಸೊಟ್ಟಾಗಿಯೂ ಬರೆದರೆ ಅದರ ಮೇಲ್ಭಾಗವನ್ನು 'ಲಿ' ಎಂತಲೂ ಕೆಳಗಿನ ಗಂಟನ್ನು ಕಿ ಎಂಬ ಒತ್ತಕ್ಷರವಾಗಿಯೂ ತಿಳಿಯುವ ಸಂಭವವಿದೆ. ಹೀಗೆ 'ಶಿಖಿ' ಎಂಬದು 'ಶಿಲ್ಕಿ' ಎಂತಾವ ಮೇಲೆ ಶಿಲ್ಕಿಯಿರ್ದು ಎಂಬದಕ್ಕಿಂತ ಸಿಲ್ಕಿರ್ದು ಎಂಬದು ಉತ್ತಮ ಪಾಠವಾಗಿ ತೋರುವದರಿಂದ 'ಶಿಲಿಹುದು' ಎಂಬದು ಮುದ್ರಣ ಗ್ರಂಥಗಳಲ್ಲಿ ರೂಢಿಯಾಗಿ ಸರಿಯಾದ ಪಾಠವೆಂದು ತಿಳಿಯಲ್ಪಟ್ಟಿರುವದು.

| ಮುದ್ರಣ ಗ್ರಂಥ | ಮೂಲಪ್ರತಿ |
|---|---|
| ಬೆಂದುದನ್ನೂ ಬಿತ್ತಿ ತಂದವರ ನಾಕಾಣೆ । | ಬೇದುದನು ಬಿತ್ತಿ ಬೆಳೆ ವಂದಿರನು ನಾಕಾಣೆ |
| ಬೆಂದುದನು ಬಿತ್ತಿ ಬೆಳೆದುಂಬುದಾ ನೋಡಿ । | ಬೆಂದುದನು ಬಿತ್ತಿ ಬೆಳೆದುಂಬ ದಾಸೋಹ- |
| ಇಂದುಧರತಾನೆ ಸರ್ವಜ್ಞ ॥ | ನಿಂದುಧರನಕ್ಕು ಸರ್ವಜ್ಞ ॥ |

ಇಲ್ಲಿ 'ದಾಸೋಹಿ' ಇಲ್ಲವೆ 'ದಾಸೋಹ' ಎಂಬದು "**ದಾನೋಡಿ**" ಎಂತಾಗಿದೆ. ಬರಹದೋಷದಿಂದ ಸಕಾರವು ನಕಾರವಾಗಿಯೂ ಹಕಾರವು ಸೊಟ್ಟಾಗಿ ಬರೆಯಲ್ಪಟ್ಟು ಡಕಾರವಾಗಿಯೂ ತಿಳಿಯಲ್ಪಟ್ಟಿದೆ.

ಸೂಕ್ಷ್ಮವಾಗಿ ಲೆಕ್ಕಿಸಿದರೆ ಇಂಥ ದೋಷಗಳು ೫೦೦ಕ್ಕೆ ಅಧಿಕವಾಗಬಹುದು. ಈ ವಿಷಯದಲ್ಲಿ ಹೆಚ್ಚು ತಿಳಿಯಲಪೇಕ್ಷಿಸುವವರು ಕರ್ನಾಟಕ ವಿದ್ಯಾವರ್ಧಕ ಸಂಘದಿಂದ ಪ್ರಕಟವಾಗುವ ವಾಗ್ಭೂಷಣವೆಂಬ ಮಾಸಪತ್ರಿಕೆಯಲ್ಲಿ

ನಾವು ಕೊಟ್ಟ “ಸರ್ವಜ್ಞಕವಿಯೂ ಅವನ ಪ್ರಕಾಶಕರೂ” ಎಂಬ ಲೇಖವನ್ನು ನೋಡಿಕೊಳ್ಳಬಹುದು. *

ಇನ್ನು ಕಲ್ಪನೆಯಿಂದ ತಿದ್ದಿದರೆ ಪದ್ಯಗಳು ಹೇಗೆ ಕೆಟ್ಟು ಹೋಗುವವೆಂಬದಕ್ಕೆ ಕೆಲವು ಉದಾಹರಣೆಗಳನ್ನು ಕೊಟ್ಟು ಈ ವಿಚಾರವನ್ನು ಮುಗಿಸುವೆವು.

| ಮುದ್ರಣ ಗ್ರಂಥ | ಮೂಲ ಪ್ರತಿ |
| --- | --- |
| ಆನೆಮುಕುರದೊಳಡಗೆ ಭಾನುವೊಳು ಶಶಿಯಡಗ । | ಆನೆಮುಕುರದೊಳಡಗಿ ಭಾನುಸರಸಿಯೊಳಡಗಿ । |
| ಲೇನು ಮೊಣೆಸುವು ಜಗದೊಳಗೆ ಶಿವಯೋಗಿ | ಆನೆನ್ನ ಗುರುವಿನೊಳಗಡಗಿ ಸಂಸಾರ । |
| ಮೌನದಿಂದಿರುವ ಸರ್ವಜ್ಞ ॥ | ತಾನದೆತ್ತಣದು ಸರ್ವಜ್ಞ ॥ |

| ಮುದ್ರಣಗ್ರಂಥ<br>ಅರ್ಥ | ಮೂಲ ಪ್ರತಿ<br>ಅರ್ಥ |
| --- | --- |
| ಆನೆಯು ಕನ್ನಡಿಯೊಳಗೆ, ಬೆಳಕಿನಲ್ಲಿ ಚಂದ್ರನು ಅಡಗಲಾಗಿ ಜಗದೊಳಗೆ ಏನು ನ್ಯೂನತೆಯುಂಟಾಗುವದು? | ಆನೆಯು ಕನ್ನಡಿಯಲ್ಲಿಯೂ ಸೂರ್ಯನು ಸರೋವರದಲ್ಲಿಯೂ ಅಡಗಿರುವಂತೆ ನಾನು ನನ್ನ ಗುರುವಾದ ಪರಮಾತ್ಮನಲ್ಲಿ ಕೂಡಿಕೊಂಡಿರಲು ಸಂಸಾರವು ಹೇಗೆ ಅಂಟಿಕೊಳ್ಳುವದು? |

| | |
| --- | --- |
| ಸೋಕಿದಾ ಸುಖಗಳನು ಏಕದಿಂ ಶಿವಗೀಯೆ । | ಸೋಕಿದಾ ಸುಖಂಗಳ । ನೇಕವಾ ಶಿವಗಿತ್ತು । |
| ತಾಕುಯಿಲ್ಲದೆ ಕೈಕೊಂಡ ಲಾಂಛನವ । | ತಾಕಿಂಕರತೆಯ ಕೈಕೊಂಡ ಮನುಜನೆ । |
| ಲೋಕೇಶನೀವ ಸರ್ವಜ್ಞ ॥ | ಲೋಕಕ್ಕೆ ಶರಣ ಸರ್ವಜ್ಞ ॥ |
| ಧ್ಯಾನಹೊಸಬತ್ತಿಯನು ಮೌನತಿಳಿದೊಪ್ಪಿಸು । | ಧ್ಯಾನದಾ ಹೊಸಬತ್ತಿ ಮೌನದಾ ತಿಳಿದುಪ್ಪ । |
| ಹೀನಭಾವಗಳನರಿದು ಬೆಳಗುನೀ । | ಸ್ವಾನುಭವವರಿದ ಬೆಳಗಿನ ಜ್ಯೋತಿಯು-- । |
| ಜ್ಞಾನದ ಪ್ರಭೆಯು ಸರ್ವಜ್ಞ । | ಜ್ಞಾನದಿಂ ಕೆಡುಗು ಸರ್ವಜ್ಞ ॥ |
| ಒಲೆಯುಮೇಲಣಹಾಲು ಚಲಮುಲನೆ ಕಾದಂತೆ । | ಒಲೆಯುಮೇಲಣ ಹಾಲು ಛಲದಂಕದತಿಪಂಥ । |
| ಲಲನೆಯರೊಲುಮೆ, ಹೊಳಹು ನಸೆ ಇವು ಮೂರ। | ಲಲನೆಯರೊಲುಮೆ, ಹಳುದಾರಿ, ಇವುನಾಲ್ಕು । |
| ಕೊಲಿಯುದವರಿಲ್ಲ ಸರ್ವಜ್ಞ ॥ | ತೊಲಗಿದರೆ ಇಲ್ಲ ಸರ್ವಜ್ಞ ॥ |
| ಆಜ್ಞೆಗೈಯಲುಬೇಡ ಯೋಗಿನಿಂದಿಸಬೇಡ । | ಜೋಗಯ್ಯನೆನಬೇಡ ಯೋಗಿನಿಂದಿಸಬೇಡ । |
| ನಾಗಭೂಷಣನು ಅರಿದಾ ದಕ್ಷನ ಶಿರವ । | ನಾಗಭೂಷಣನ ಹಳಿದ ದಕ್ಷನ ತಲೆ । |
| ಹೋಗಿ ತಿಳಿಯುದನು ಸರ್ವಜ್ಞ ॥ | ಹೋಗಿಹುದನೋಡ ಸರ್ವಜ್ಞ ॥ |

* ವಾಗ್ಭೂಷಣ ಸಂಪುಟ ೨೫ ಸಂಚಿಕೆ ೩–೪ ಜೂನ್–ಜುಲೈ ೧೯೨೧.

## ೩ ಜನ್ಮವಿಚಾರ.

ಸರ್ವಜ್ಞನ ಜನ್ಮವೃತ್ತಾಂತವನ್ನು ವಿಚಾರಿಸುವ ಪೂರ್ವದಲ್ಲಿ ಅವನ ಸಂಬಂಧವಾದ ಯಾವದೊಂದು ಸಂಗತಿಯನ್ನು ನಿಶ್ಚಯಿಸುವದಕ್ಕೆ ಅವಶ್ಯವಾಗಿರುವ ಬಹಿರಾಧಾರಗಳನ್ನು ಕುರಿತು ಇಲ್ಲಿ ಎರಡು ಮಾತು ಹೇಳತಕ್ಕದ್ದು. ಗ್ರಂಥಾರಂಭದಲ್ಲಿ ಇಷ್ಟದೇವತೆಗಳನ್ನು ನಮಸ್ಕರಿಸಿ ಪೂರ್ವದ ಕವಿಗಳನ್ನು ಹೊಗಳುವದು ಕನ್ನಡ ಕವಿಗಳ ಪರಿಪಾಠವೆಂದು ಇ. ಪಿ. ರೈಸರವರು ಹೇಳಿರುನರು.[1] ಆದರೆ ಈ ಸೂತ್ರಕ್ಕೆ ಸರ್ವಜ್ಞಕವಿಯು ಒಂದು ಅಪವಾದವೆಂದು ಹೇಳಬೇಕು. ಇವನ ಗ್ರಂಥಸಲ್ಲಿ ಯಾವ ಕವಿಯು ಹೆಸರೂ ಬರುವದಿಲ್ಲ. ಯಾವ ಕವಿಗಳೂ ತಮ್ಮ ಕೃತಿಗಳಲ್ಲಿ ಇವನ ಹೆಸರನ್ನು ಹೇಳಿರುವದಿಲ್ಲ. ಇತ್ತಿತ್ತ ಮುದ್ರಣವಾದ ಗ್ರಂಥಗಳಲ್ಲಿ ಮಾತ್ರ ಇವನ ಯಥೋಕ್ತಗಳು ಧಾರಾಳವಾಗಿ ದೊರೆಯುತ್ತವೆ. ಇವನು ಕಂಡದ್ದನ್ನು ಕಂಡಂತೆ ಹೇಳುವ ಖಂಡಿತವಾದಿಯಾಗಿದ್ದದರಿಂದ ಯಾರ ಆಶ್ರಯುವೂ ಇವನಿಗೆ ದೊರೆತಂತೆ ತೋರಲಿಲ್ಲ. ಹೀಗಿರಲು ಇವನನ್ನು ಕುರಿತು ಶಿಲಾಲೇಖಾದಿ ಬಾಹ್ಯಾಧಾರಗಳು ದೊರೆಯದೆ ಹೋಗುವದು ಆಶ್ಚರ್ಯವಲ್ಲ. ಹೀಗಿದ್ದರೂ ನಾವು ಅವನ ಗ್ರಂಥದಲ್ಲಿಯೇ ದೊರೆಯುವ ಅಂತರಾಧಾರಗಳ ಮೇಲಿಂದ ಕೆಲವು ಊಹೆಗಳನ್ನು ಮಾತ್ರ ಮಾಡಬಹುದಾಗಿದೆ. ಸರ್ವಜ್ಞನು ಯಾರು? ಅವನ ಹೆತ್ತವರು ಎಲ್ಲಿಯುವರು? ಎಂಬದರ ಬಗ್ಗೆ ಅವನ ಗ್ರಂಥದಲ್ಲಿಯೇ ದೊರೆಯುವ ಪದ್ಯಗಳಿಂದ ಕೆಲವು ಸೂಚನೆಗಳು ಸಿಗುತ್ತವೆ. ಇವುಗಳೂ ಇಲ್ಲದೆ ಹೋಗಿದ್ದರೆ ಸರ್ವಜ್ಞನವಿಷಯದಲ್ಲಿ ನಮಗೆ ಯಾವ ಸಮಾಚಾರವೂ ಇರುತ್ತಿದ್ದಿಲ್ಲ. ಅವನ ಗ್ರಂಥಪಲ್ಲಿ ದೊರೆಯುವ ಪದ್ಯಗಳ ಹಾಗೂ ಜನರೂಢವಾಗಿರುವ ಕಥೆಯು ಸಾರಾಂಶವು ಕೆಳಗೆ ಕೊಟ್ಟಂತಿರುವದು—

ಧಾರವಾಡ ಜಿಲ್ಹೆಗೆ ಸೇರಿದ ಮಾಸೂರು ಎಂಬ ಗ್ರಾಮದಲ್ಲಿ ಬಸವರಸನೆಂಬ ಒಬ್ಬ ಆರಾಧ್ಯ ಬ್ರಾಹ್ಮಣನಿದ್ದನು. ಇವನಿಗೆ ಮಲ್ಲರಸನೆಂತಲೂ ಹೆಸರಿದ್ದಂತೆ ಒಂದು ಪದ್ಯದಿಂದ ತಿಳಿಯುತ್ತದೆ. ಇವನ ಹೆಂಡತಿಯು ಹೆಸರು ಮಲ್ಲವ್ವ. ಈಕೆಯನ್ನು ನೆರೆಹೊರೆಯ ಸ್ತ್ರೀಯರು ಪ್ರೀತಿಯಿಂದ ಮಲ್ಲವ್ವಕ್ಕನೆಂತಲೂ ಕರೆಯುವರು. ಬಹುದಿನ ಬಂಜೆತನವನ್ನು ತೆಗೆದ ಈಕೆಯು ಒಂದು ದಿನ ತನ್ನ

---

1 E. P. Rice's Kan. Lit. Preface page 1.

ಮನದಳಲನ್ನು ಗಂಡನಾದ ಬಸವರಸನಿಗೆ ಅರಿಕೆಮಾಡಲು ಅವನು ಯಾತ್ರಾರ್ಥ ವಾಗಿ ಕಾಶಿಗೆ ಹೋಗಿ ವಿಶ್ವನಾಥನಲ್ಲಿ ಒಬ್ಬ ಗಂಡುಮಗನನ್ನು ಬೇಡಿಕೊಂಡನು. ಆಗ ಶಿವನು ಇವನ ಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ ಒಂದು ಅನ್ನದ ಉಂಡೆ ಯನ್ನು ತಂದು ಈ ಪಿಂಡಪ್ರಸಾದವನ್ನು ನುಂಗು, ನೀನು ಮೊದಲು ಎಲ್ಲಿ ಗರ್ಭಾಧಾನ ಮಾಡುವಿಯೋ ಅಲ್ಲಿ ನಿನಗೊಬ್ಬ ವಿಶೇಷ ಪುತ್ರನು ಹುಟ್ಟುವನೆಂದು ಹೇಳಿದನು. ಈ ಪ್ರಕಾರ ವರವನ್ನು ಪಡೆದ ಬಸವರಸನು ತೀರ್ಥಯಾತ್ರೆ ಯನ್ನು ತೀರಿಸಿ ಮಾಸೂರಿನಲ್ಲಿದ್ದ ತನ್ನ ಮನೆಗೆ ಹಿಂದಿರುಗಿ ಬರುತ್ತಿರುವಾಗ ದಾರಿಯಲ್ಲಿ ಅಂಬಲೂರು ಎಂಬ ಗ್ರಾಮದಲ್ಲಿ ಉಳುಕೊಂಡನು. ಮಾರ್ಗಾ ಯಾಸದಿಂದ ಹಸಿದಿದ್ದ ಇವನು ಹೊಸ ನಡಿಗೆಮಡಿಕೆಗಳನ್ನು ಕೊಂಡುಕೊಳ್ಳು ವದರ ಉದ್ದೇಶ ಅಲ್ಲಿ ಮಾಳಿ ಎಂಬ ಕುಂಬಾರ ಸ್ತ್ರೀಯು ಮನೆಗೆ ಹೋಗಿ ಬೇಕಾದ ಪಾತ್ರೆಗಳನ್ನು ತೆಗೆದುಕೊಂಡು, ಒಂದು ಭಾವಿಯು ಸಮೀಪದಲ್ಲಿ ಅಡಿ ಗೆಗೆ ಮೊದಲು ಮಾಡಲು ಮುಗಿಲೆಲ್ಲ ಮೋಡದಿಂದ ಮುಸುಕಿ ಭಯಂಕರವಾದ ಮಳೆಬರಹತ್ತಿತು. ಹಸಿದು ಕಂಗಾಲಾಗಿದ್ದ ಬಸವರಸನು ಮಳೆಯಲ್ಲಿ ತೋಯಿ ಸಿಕೊಂಡು ಆಶ್ರಯವನ್ನು ಹುಡುಕುತ್ತ ಆಗಲೇ ಪರಿಚಿತಳಾಗಿದ್ದ ಮಾಳಿ ಎಂಬ ಆ ಕುಂಬಾರ ವಿಧವೆಯ ಬಳಿಗೆ ಹೋಗಲು, ಅವಳು ಇವನನ್ನು ಮನೆಯೊಳಗೆ ಸೇರಿಸಿಕೊಂಡು ಶೈತ್ಯೋಪಚಾರ ಮಾಡಿದಳು. ಆಕೆಯು ಪುಷ್ಟಳೂ ಸುಂದ ರಿಯೂ ಆಗಿದ್ದದರಿಂದ ಇಬ್ಬರಲ್ಲಿ ಸಹಜವಾಗಿ ಪರಸ್ಪರ ಮೋಹವುಂಟಾಗಿ ಮಳೆಯು ಭೋರ್ಗರೆಯುತ್ತಿರಲು ಯಾರೂ ಬಾರದಂತಾಗಿ ಯಾವ ಅಭ್ಯಂತರ ವಿಲ್ಲದೆ ಅವರ ಭೋಗೇಚ್ಛೆಗೆ ಅನುಕೂಲವಾಯಿತು. ಹೀಗೆ ಗರ್ಭವತಿಯಾದ ಆಕೆಯು ಹತ್ತುತಿಂಗಳ ಹೊತ್ತು ಕಾಳಿ ಎಂಬ ಸೂಲಗಿತ್ತಿ ಇಲ್ಲವೆ ನೆರೆಹೆಂಗಸಿನ ಸಹಾಯದಿಂದ ಒಬ್ಬ ಗಂಡು ಮಗನನ್ನು ಹಡೆದಳು. ಅವನು ಬೆಳೆದು ಇನ್ನೂ ಚಿಕ್ಕವನಿರುವಾಗಲೇ ತಾನು ಶಿವಪ್ರಸಾದದಿಂದ ಹುಟ್ಟಿದಕಾರಣ ಶಿವನೂ ಪಾರ್ವತಿಯೂ ತನ್ನ ನಿಜ ತಂದೆತಾಯಿಗಳೆಂದೂ ಪುಷ್ಪದತ್ತನೆಂಬ ನಾಮದಿಂದ ಕೈಲಾಸದಲ್ಲಿ ಗಣೇಶ್ವರನಾಗಿ ಮೆರೆಯುತ್ತಿದ್ದ ತನ್ನನ್ನು ಈಶ್ವರನು ವಿಶೇಷ ಕಾರಣದಿಂದ ಈ ಜಗತ್ತಿಗೆ ಬರಮಾಡಿದ್ದರಿಂದ ನಿಮಿತ್ತಕಾರಣರಾದ ಬಸವರಸನೂ ಮಾಳಿಯೂ ತನ್ನ ಹೆತ್ತವರಲ್ಲವೆಂದೂ ಅವರಿಗೆ ತಂದೆತಾಯಿ ಗಳೆಂದು ತಾನು ಎಂದಿಗೂ ಅನ್ನಲಿಕ್ಕಿಲ್ಲವೆಂದೂ ವಾದಿಸಿ ಅವರನ್ನೂ ಅವರ

ನಡತೆಯನ್ನೂ ಕುರಿತು ಜರಿದು ಮಾತಾಡಹತ್ತಿದನು. ಇದರಿಂದ ಅವರು ಕೋಪಾವೇಶರಾಗಿ ಅವನನ್ನು ಮನೆಬಿಟ್ಟು ಹೊರಗೆ ಹಾಕಿದರು. ಅಂದಿನಿಂದ ಇವನು ವಿರಕ್ತನಾಗಿದ್ದು ಅನುಭವಪೂರ್ವಕವಾದ ತನ್ನ ಸ್ವತಂತ್ರ ವಿಚಾರಗಳನ್ನು ಲೋಕಹಿತಾರ್ಥವಾಗಿ 'ತ್ರಿಪದಿ' ರೂಪದಲ್ಲಿ ರಚಿಸಿ ಅವುಗಳನ್ನು ಕನ್ನಡನಾಡಿನಲ್ಲೆಲ್ಲ ಕಂಠೋಕ್ತವಾಗಿ ಸಾರುತ್ತ ಏಕಾಂಗಿಯಾಗಿ ಸಂಚರಿಸಿದನು.

ಸರ್ವಜ್ಞನ ಜೀವನ ಚರಿತ್ರೆಯನ್ನು ಕುರಿತ ಈ ಸಂಗತಿಯು ಅಚ್ಚಾದ ಎಲ್ಲ ಗ್ರಂಥಗಳಲ್ಲಿ ಏಕಪ್ರಕಾರವಾಗಿ ದೊರೆಯುವದು. ಆದರೆ ಕೈ ಬರಹದ ಪ್ರತಿಗಳಲ್ಲಿ ಮಾತ್ರ ಇದು ಕಾಲಜ್ಞಾನದ ಪದ್ಯಗಳೊಂದಿಗೆ ಜೋಡಣೆಯಾಗಿದ್ದು ಕೆಲವು ಪ್ರತಿಗಳ ಆರಂಭದಲ್ಲಿಯೂ ಕೆಲವು ಪ್ರತಿಗಳ ಅಂತ್ಯದಲ್ಲಿಯೂ ದೊರೆಯುವದು. ಕೆಲವು ಪ್ರತಿಗಳಲ್ಲಂತೂ ಈ ಪದ್ಯಗಳ ಹಾಗೂ ಕಾಲಜ್ಞಾನ ಪದ್ಯಗಳ ವಾಸನೆಯೇ ಇರುವದಿಲ್ಲ. ಇದರಿಂದ ಅಂಬಲೂರಿನಲ್ಲಿ ಹುಟ್ಟಿದ ಸರ್ವಜ್ಞನೇ ಕಾಲಜ್ಞಾನವನ್ನು ಬರೆದಿರಬೇಕೆಂದೂ 'ತ್ರಿಪದಿ' ಗಳನ್ನು ಬರೆದ ಸರ್ವಜ್ಞನು ಬೇರೆ ಇದ್ದು ಅವನು ಯಾರೆಂದು ತಿಳಿಯದೆ ತರುವಾಯದ ಕಾಲದಲ್ಲಿ ಯಾವನೋ ಒಬ್ಬನು ಈ ಜನ್ಮವೃತ್ತಾಂತವನ್ನು, ತ್ರಿಪದಿಯನ್ನು ಬರೆದ ಸರ್ವಜ್ಞನಿಗೆ ಜೋಡಿಸಿರಬೇಕೆಂದೂ ಅದರಿಂದ ಮೂಲ ಸರ್ವಜ್ಞಗಳನ್ನು ಬರೆದವನು ಅಂಬಲೂರಿನವನೇ ಇರಬೇಕೆಂಬ ನಂಬಿಕೆಯು ತರುವಾಯ ಜನರಲ್ಲಿ ಪ್ರಬಲವಾಗಿರಬೇಕೆಂದೂ ಸಂದೇಹ ಉಂಟಾಗುತ್ತದೆ. ಈ ವ್ಯತ್ಯಾಸಗಳನ್ನು ವಿಶೇಷಿಸಿ ಕೆಲವರು ಈ ಕಥಾನಕವು ಸರ್ವಜ್ಞನೊಬ್ಬನ ವಿಷಯಕ್ಕೆ ಮಾತ್ರವಲ್ಲ; ಇಂಥ ಅನೇಕರ ಸಂಬಂಧವಾಗಿಯೂ ಹೇಳಲ್ಪಡುವದರಿಂದ ಇದು, ಕೀಳು ಜನ್ಮವನ್ನು ಪಡೆದು ಮೇಲೆನಿಸಿಕೊಂಡ ಜನರ ಮೂಲವನ್ನು ಹೇಳುವದಕ್ಕೆ ನೇಮಕವಾದ ಸಾಮಾನ್ಯ ಕಥೆಯೆಂದೂ ಪುಷ್ಪದತ್ತನೆಂಬ ಕಲ್ಪಿತ ಹೆಸರಿನಿಂದ ಇದು ಮತ್ತಷ್ಟು ಸ್ಪಷ್ಟವಾಗುವದೆಂದೂ ಹೇಳುವರು. ಬೇರೆ ಕೆಲವರು, ಹಾಗಲ್ಲ; ಸರ್ವಜ್ಞನೆಂಬವನು ಆರಾಧ್ಯ ಬ್ರಾಹ್ಮಣನಾದ ಬಸವರಸನ ಧರ್ಮಪುತ್ರನು; ಇವನು ಲಿಂಗಾಯತ ಮತವನ್ನು ಸ್ವೀಕರಿಸಿದ ಬಳಿಕ ಜಾತಿ, ಕುಲ, ಮೂರ್ತಿ ಪೂಜೆ ಆಚಾರ ಮೊದಲಾದವುಗಳನ್ನು ವಿಪರೀತವಾಗಿ ಖಂಡಿಸುತ್ತ ನಡೆದದ್ದರಿಂದ ಜನರಲ್ಲಿ ದ್ವೇಷವು ಹೆಚ್ಚಲು ಜಾತ್ಯಾಭಿಮಾನಿಯಾದ ಬ್ರಾಹ್ಮಣನೊಬ್ಬನು ಧರ್ಮಾಂತರ ಮಾಡಿದ ಸರ್ವಜ್ಞನ ಬಗ್ಗೆ ಜನರಲ್ಲಿ ತಿರಸ್ಕಾರ ಉಂಟಾಗಲೆಂದು

ಇಂಥ ಅಬದ್ಧ ಕಥೆಯನ್ನು ಹುಟ್ಟಿಸಿರಬೇಕೆಂದೂ ಅಭಿಪ್ರಾಯಪಡುವರು. ಇವರ ಹೇಳಿಕೆಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ತೋರಿದರೂ ಸರ್ವಜ್ಞನ ಸಂಬಂಧವಾಗಿ ಈಗ ಪ್ರಚಾರದಲ್ಲಿರುವ ಕಥೆಯು ಕೇವಲ ಕಲ್ಪಿತವೆಂಬದೇ ಉಭಯ ಮತಗಳವರ ತಾತ್ಪರ್ಯವು. ಒಂದು ಪಕ್ಷ ಹೀಗೆ ಊಹಿಸುವದಕ್ಕೆ ಕೆಲವು ಕಾರಣಗಳಿದ್ದರೂ ಈ ವೃತ್ತಾಂತವು ಕೇವಲ ನಿರಾಧಾರವಾದದ್ದೆಂದೂ ಇದರಲ್ಲಿ ಎಳ್ಳಷ್ಟು ತಥ್ಯವಿರುವದಿಲ್ಲವೆಂದೂ ಹೇಳುವದು ನಮಗೆ ಅಷ್ಟು ಸಮಂಜಸವಾಗಿ ತೋರುವದಿಲ್ಲ. ಯಾಕಂದರೆ ಕೈಬರಹದ ಪ್ರತಿಗಳಲ್ಲಿ ಸರ್ವಜ್ಞನ ಜನ್ಮವನ್ನು ಕುರಿತು ಹೇಳುವ ಪದ್ಯಗಳು ಮುಗಿಯುತ್ತಲೇ ಅದರ ಬೆನ್ನಿನ ಹಿಂದೆ ಜಾತಿಯನ್ನೂ ಕುಲವನ್ನೂ ಖಂಡಿಸುವ ಕೆಲವು ಪದ್ಯಗಳು ಬರುವವು.[1] ವಿಷಯ ಸಂಬಂಧವಿಲ್ಲದೆ ಈ ತರದ ಪದ್ಯಗಳನ್ನು ಅವನ ಜನ್ಮ ವೃತ್ತಾಂತಕ್ಕೆ ಹೊಂದಿಸಿ ಬರೆಯುವ ಅಗತ್ಯವು ಬೇರೊಬ್ಬ ಕವಿಗೆ ಬೀಳುವ ಕಾರಣವಿಲ್ಲ. ಸರ್ವಜ್ಞನ ಜನ್ಮದ ವಿಷಯವಾಗಿ ಒಂದು ಅಬದ್ಧ ಸಂಗತಿಯು ಆಗಿ ಹೋದ್ದರಿಂದಲೇ ಅವನು ಕುಲಜಾತಿಗಳನ್ನು ಖಂಡಿಸುವದಕ್ಕೂ ಸ್ವತಂತ್ರ ವಿಚಾರದ ಕಡೆಗೆ ಮನಸ್ಸು ಹಾಕುವದಕ್ಕೂ ಕಾರಣವಾಗಿರಬಹುದೆಂದು ಈ ಪದ್ಯಗಳ ಅಪೂರ್ವ ಯೋಜನೆಯಿಂದ ಒಂದು ಸೂಚನೆಯು ದೊರೆಯುತ್ತದೆ. ಎರಡನೆಯದಾಗಿ ತ್ರಿಪದಿಗಳನ್ನು ರಚಿಸಿದ ಸರ್ವಜ್ಞನು ಯಾವನೇ ಆಗಿರಲಿ ಅವನು ಖಂಡಿತವಾದಿಯಾಗಿದ್ದನೆಂಬ ಸಂಗತಿಯು ಮಾತ್ರ ಅವನ ಗ್ರಂಥದ ಪ್ರತಿಒಂದು ಪುಟದಿಂದಲೂ ಸ್ಪಷ್ಟವಾಗುತ್ತದೆ. ನಮಗಿರುವ ಈ ಜನ್ಮ ವೃತ್ತಾಂತದಲ್ಲಿ ನಿರ್ದಿಷ್ಟನಾದ ಬಾಲಕನಾದರು ಅದೇ ಸ್ವಭಾವವುಳ್ಳವನಾಗಿರುವದರಿಂದ ಈ ಕಥಾನಕವು ಕೇವಲ ಕಲ್ಪಿತವೆಂದು ಹೇಳಲಾಗದು. ಇದಲ್ಲದೆ ಸರ್ವಜ್ಞನು ಪ್ರಸಿದ್ಧಿಗೆ ಬಂದು ಪೂರ್ವದ ಕುಲಾಚಾರಗಳನ್ನು ಖಂಡಿಸಿದಂತೆ, ಜನರು ಇವನ ಮೂಲವನ್ನು ಕುರಿತು ಕೆಣಕಲು ಅವನು ಹೇಗಾದರೂ ತನ್ನ ವೃತ್ತಾಂತವನ್ನು ಹೇಳಬೇಕಾಯಿತೆಂಬದು "ಹೇಳಲರಿಯೆನು ನಾನು ಹೇಳೆನಲು ಹೇಳಿದೆನು[2]" ಎಂಬ ಪದ್ಯದಿಂದ ವಿಶದವಾಗುತ್ತದೆ. ಇಲ್ಲವಾದರೆ ಸರ್ವಜ್ಞನು ಕಾಲವಾದ ಕೂಡಲೆ ಅವನ ಜನ್ಮವೃತ್ತಾಂತವನ್ನು ಚನ್ನಾಗಿ ಅರಿತವನೊಬ್ಬನು ಅದನ್ನು ಪದ್ಯರೂಪವಾಗಿ ರಚಿಸಿ ಅವನ ಬಾಯಲ್ಲಿಟ್ಟು ಹೇಳಿರಬೇಕು. ಹೀಗಿದ್ದರೆ ಸರ್ವಜ್ಞನ

1 ಸರಿ ನೋಡು ಪದ್ಯ ೧೮-೨೧. 2 ಪದ್ಯ ೨೩.

ಸಂಬಂಧವಾದ ಈ ಪದ್ಯಗಳು ಕೈಬರಹದ ಎಲ್ಲ ಪ್ರತಿಗಳಲ್ಲಿ ಯಾಕೆ ದೊರೆಯುವದಿಲ್ಲ? ಕೆಲವು ಪ್ರತಿಗಳಲ್ಲಿ ದೊರೆತರೂ ಅವು ಸಿಥಿಲವಾಗಿ ಜೋಡಣೆಯಾಗಿರುವವಕ್ಕೆ ಕಾರಣವೇನು? ಎಂಬೀ ಪ್ರಶ್ನೆಗಳು ಹುಟ್ಟುತ್ತವೆ. ಉಭಯಪಕ್ಷದಲ್ಲಿಯೂ ಈ ಪದ್ಯಗಳು ತಡವಾಗಿ ಬರೆಯಲ್ಪಟ್ಟದ್ದೇ ಕಾರಣವೆಂಬದು ಇದಕ್ಕೆ ಉತ್ತರ.

ಸರ್ವಜ್ಞನ ಚರಮ ಕಾಲವನ್ನು ಕುರಿತು ಜನರೊಳಗೆ ವಾಡಿಕೆಯಾಗಿರುವ ಕಥೆಯನ್ನು ಕೇಳಿದರೆ ಅವನಿಗೊಬ್ಬ ಅಕ್ಕನಿರಬೇಕೆಂದು ತಿಳಿದುಬರುತ್ತದೆ. ಇವಳು ಮಾಳಿಯಲ್ಲಾಗಲಿ ಧರ್ಮಪತ್ನಿಯಲ್ಲಾಗಲಿ ಸರ್ವಜ್ಞನಿಗೆ ಪೂರ್ವದಲ್ಲಿ ಹುಟ್ಟಿರಬೇಕಾಗಿ ಈ ವೃತ್ತಾಂತಕ್ಕೆ ಪರಸ್ಪರ ವಿರುದ್ಧವಾಗಿರುವದರಿಂದ ಇದು ಒಂದು ದಂತಕಥೆಯಾಗಿರಬಹುದು. ಇಲ್ಲವೆ ಆಕೆಯು ಮಾಳಿಯಲ್ಲಿ ಮುಂಚಿನ ಗಂಡನಿಂದ ಹುಟ್ಟಿದವಳಾಗಿರಬೇಕು. ಬೇರೊಂದು ಮಾರ್ಗವಿರುವದಿಲ್ಲ. ಹೀಗಿರಲಿ ಹಾಗಿರಲಿ ಇದು ವರೆಗೆ ಹೇಳಿದ ಕಾರಣಗಳಿಂದಲೂ ಇನ್ನು ಮುಂದೆ ಬರುವ ಕಾರಣಗಳಿಂದಲೂ ಸರ್ವಜ್ಞನ ಜನ್ಮ ಸಂಬಂಧವಾದ ಈ ವೃತ್ತಾಂತವು ಮಾತ್ರ ಬಹುಮಟ್ಟಿಗೆ ಭೂತಾರ್ಥವಾದದ್ದಾಗಿರಬೇಕೆಂದು ತಿಳಿದುಬರುತ್ತದೆ.

## ೪ ದೇಶವಿಚಾರ.

ಸರ್ವಜ್ಞನು ಹುಟ್ಟಿದ ಸ್ಥಳವು ಅಂಬಲೂರೆಂದು ಹಿಂದೆ ಹೇಳಿದ್ದಾಯಿತು. ಈ ಗ್ರಾಮವು ಈಗಿನ ಅಬಲೂರು ಆಗಿದ್ದ ಪಕ್ಷದಲ್ಲಿ ಅದು ಧಾರವಾಡ ಜಿಲ್ಹೆಗೆ ಸೇರಿದ ಹಿರೆಕೆರೂರಿನ ಆಗ್ನೆಯಕ್ಕೆ ೭ ಮೈಲಿನ ಮೇಲೆ ಇರುವದು. ಇದಕ್ಕೂ ಮಾಸೂರಿಗೂ ಸುಮಾರು ೨೦ ಮೈಲು ಅಂತರ. ಮಾಸೂರು, ಧಾರವಾಡ ಜಿಲ್ಹೆಗೂ ಮೈಸೂರು ಪ್ರಾಂತಕ್ಕೂ ನಡುವೆ ಇರುವ ಗಡಿನಾಡಿಗೆ ಸೇರುವದೊಂದು ದೊಡ್ಡ ಗ್ರಾಮವಾಗಿದೆ. ಇದರ ಸಮೀಪದಲ್ಲಿರುವ ಅಬಲೂರು ಹಿಂದಿನ ಕಾಲದಲ್ಲಿ ಜೈನರ ಪ್ರಸಿದ್ಧ ಕ್ಷೇತ್ರವು. ಇದು ಬಸವೇಶ್ವರನ ಸಹಕಾಲದವನಾದ ಏಕಾಂತ ರಾಮಯ್ಯನೆಂಬ ಲಿಂಗಾಯತ ಧರ್ಮ ಪುರಸ್ಕರ್ತನಿಗೆ, ಜೈನರಿಗೂ ವೀರಶೈವರಿಗೂ ಉಂಟಾದ ಧರ್ಮ ಯುದ್ಧದಲ್ಲಿ ಮುಖ್ಯರಂಗ ಸ್ಥಳವು.[1] ಇದರಿಂದ ಸರ್ವಜ್ಞನು ಹುಟ್ಟಿದ ಈ ಊರು ಪೂರ್ವಕಾಲದಿಂದಲೇ ಅನೇಕ ಧರ್ಮಜಾಗ್ರತಿಗಳಿಗೆ ಅನುಕೂಲ ಸ್ಥಳವಾಗಿತ್ತೆಂದು ವಿಶದವಾಗುತ್ತದೆ.

---

1 Fleet's Kanarese Dynesties Vol. I page 482.

ಸರ್ವಜ್ಞನಾದಗೂ ಆಗಿನಕಾಲದ ವಾತಾವರಣದಂತೆ ಜೈನರನ್ನೂ ಬ್ರಾಹ್ಮಣ ರನ್ನೂ ಖಂಡಿಸಿರುವದು ಅವನ ಗ್ರಂಥದಲ್ಲಿ ಬರುವ ಆಯಾ ಹೆಸರಿನ ಪದ್ಧತಿಗ ಳಿಂದ ಸ್ಪಷ್ಟವಾಗುತ್ತದೆ. ಸರ್ವಜ್ಞನು ರಚಿಸಿದ ಪದ್ಯಗಳಲ್ಲಿ 'ಒದರು'[2] ಹಲ್ಲುಸುಲಿ[3] ಒರಸೆ[4] ಅಗಿ[5] ಬಿಮ್ಮಗೆ[6] ಗೊದ್ದ[7] ದಾಯ[8] ಶಾನೆ[9] ದುಸ್ತು[10] ದೇವಾಂಗ[11] ಒಗಡು[12] ಕಮ್ಮ[13] ಬೆರಣಿ[14] ಬಾಟೆ[15] ಮುಂತಾದ ಅನೇಕ ಮೈಸೂರು ಪ್ರಯೋಗಗಳು ಕಾಣುವದಲ್ಲದೆ 'ನಾವುಗಳು' ಎಂಬಂತೆ 'ಶ್ರೇಷ್ಟರು' ಗಳು[16] 'ಗುಣಹೀನರು'ಗಳು[17] ಸ್ಥಿತಿವಂತರುಗಳು[18] ಗರುವರುಗಳು[19] ಎಂಬ ದಾಗಿ ಮೈಸೂರಿನ ಅತಿ ಬಹುವಚನವು ಪ್ರಯೋಗವಾಗಿರುವದರಿಂದ ಇವನು ಧಾರವಾಡ ಜಿಲ್ಹೆಗೂ ಮೈಸೂರಿಗೂ ಮಧ್ಯದಲ್ಲಿರುವ ಮಾಸೂರಿನ (ಪದ್ಯ ೫) ನೆರೆಪ್ರದೇಶದವನಾಗಿರಬೇಕೆಂಬ ಸಂಗತಿಯು ಸತ್ಯವಾಗಿದ್ದಂತೆ ತೋರುತ್ತದೆ. ಇವನ ವಚನಗಳಲ್ಲಿ "ಒಂದು ಆವಿಗೆ ಭಾಂಡ ಒಂದೊಂದು ಭೋಗವನು। ಅಂದದಿ ಸಂದು, ಒಡೆದು ಹಂಚಾದಂತೆ। ಬಿಂದುವಿನದೇಹ[1] ॥. ಬೆಂದಾವಿ ಗಿಯ ಕುಂಭದಂತಿಹನು[2] ಎಂಬ ಪದ್ಯಗಳಂತೆ ಅನೇಕ ಕಡೆಗಳಲ್ಲಿ ಕುಂಬಾರ, ಆವಿಗೆ,[4] ಭಾಂಡ,[5] ತಿಗರಿ,[6] ಗಡಿಗೆಮುಡಿಕೆ,[7] ಓಡು,[8] ಒಡಕ ಹಂಚು,[9] ಮುಂ ತಾದ ದೃಷ್ಟಾಂತಗಳು ಬರುವದರಿಂದ ಇವನು ಕುಂಬಾರ ಸಾಲೆಯುಲ್ಲಿ ಬಾಲ್ಯ ವನ್ನು ಕಳೆದ ಸಂಗತಿಯು ನಿಜವಾಗಿರಬಹುದೇನೋ ಎಂಬ ಸಂದೇಹ ಉಂಟಾ ಗುತ್ತದೆ. ಇವನು, ದೇಶ ಪದ್ಧತಿಯಲ್ಲಿ ಹೇಳಿರುವ ಪೂರ್ವ, ಪಶ್ಚಿಮ, ದಕ್ಷಿಣ ಉತ್ತರ ನಾಡುಗಳು ಯಾವವೆಂದು ನಿಶ್ಚಯಿಸಿ ಹೇಳಲಿಕ್ಕಾಗದಿದ್ದರೂ ಇವನ ಜನ್ಮದೇಶವಾದ ಮಲೆನಾಡೇ ಇವುಗಳ ಕೇಂದ್ರಸ್ಥಾನವಾಗಿರಬೇಕೆಂದು ತಿಳಿಯು ತ್ತದೆ. 'ಶೀತ ಧಾತುಗಳುಂಟು ಬಾತಿಹವು ಕುಕ್ಷಿಗಳು'[10] 'ಕಾಡೆಲ್ಲ ಕಸು ಗಾಯಿ ನಾಡೆಲ್ಲ ಹೆಗ್ಗಿಡವು'[11] ಮಲೆನಾಡ ಕಾಡು ಸಾಕೆಂದ; ಎಂಬ ಉದ್ಗಾರ ಗಳಿಂದ ಇವನು ಮಲೆನಾಡನ್ನು ಹಳಿದು, ಬೆಳವಲ ಅಣಕ ನೋಡೆಂದ, ಮೇಳ

---

(2) ೧೨೯೦ (3) ೧೬೫೧ (4) ಪುಟ ೧೪ (5) ೩೫೬ (6) ೩೬೮ (7) ೩೮೫ ಶುದ್ಧಿಪತ್ರ ನೋಡಿ (8) ೩೪೪ (9) ೧೪೫೪ (10,11) ೧೨೧೫ (12) ೧೭೦೨ (13) ೯೧೪ (14) ೧೫೬೫ (15) ೧೫೮೬ (16) ೩೫೫ (17) ೭೫೫ (18) ೧೧೬೧ (19) ೧೧೬೩.

(1) ೨೯೧ (2) ೧೨೬೦ (3) ೧೦೯೨ (4) ೨೯೧ (5) ೧೩೦೪ (6) ೬೩೯ (7) ೧೪೭೬ (8) ೩೨೨ (9) ೧೬೦೭, ೨೮೯, ೨೯೦ (10) ೧೪೮೪ (11) ೧೪೮೩

ನೋಡೆಂದ,[12] ಊಟದ ಹವಣನೋಡೆಂದ,[13] ಸುಡಬೇಕು (ಬೆಳವಲ) ನಾಡೆಂ ದವನ ಬಾಯೊಳಗೆ ಪುಡಿಗಡಬು ಬೀಳ್ಗು[14] ಮುಂತಾದ ವಚನಗಳಿಂದ ಬೆಳವಲ ವನ್ನು ಹೊಗಳಿರುವಲ್ಲಿ ಆರೋಗ್ಯಕ್ಕೂ ಊಟದ ಸೌಖ್ಯರ್ಯಕ್ಕೂ ಮಲೆನಾಡಿ ಗಿಂತ ಬೆಳವಲವೇ ಉತ್ತಮವಾದದ್ದೆಂದು ಒಪ್ಪಿಕೊಂಡರೂ, ಅಲ್ಲವರಿಷಣ ವುಂಟು । ಬೆಲ್ಲ ಬಿಳೆ ಎಲೆಯುಂಟು । ಒಳ್ಳೆ, ಹಲಸುಂಟು ಮೆಲ್ಲಲ್ಕೆ ಮಲೆನಾಡ ನಲ್ಲೆನ್ನಬಹುದೆ[15] ಎಂಬದರಿಂದ ಆ ದೇಶವನ್ನು ಅಷ್ಟು ಕನಿಷ್ಟವಾಗಿ ತಿಳಿಯತಕ್ಕ ದ್ದಲ್ಲವೆಂದು ಹೇಳುವಲ್ಲಿ ಇವನಿಗೆ ಜನ್ಮಭೂಮಿಯಾದ ಮಲೆನಾಡಿನ ಅಭಿಮಾ ನವೇ ವಿಶೇಷವಿದ್ದಂತೆ ತೋರುತ್ತದೆ ಇವನು ಮಲೆನಾಡಿನಲ್ಲಿ ಬೆಳೆಯುವ ಫಲಮೂಲಾದಿಗಳಲ್ಲಿ ಪ್ರತಿ ಒಂದು ಪದಾರ್ಥವನ್ನು ತನ್ನ ಪದ್ಯಗಳಲ್ಲಿ ದೃಷ್ಟಾಂ ತವಾಗಿ ಪ್ರಯೋಗಿಸಿರುವದರಿಂದಲೂ ಬೇರಿಂದ ತುದಿತನಕ ಹಲಸುಕಾತಂತೆ[16] ಎಂಬದರಿಂದ ನೆಲದೊಳಗೆ ಹಲಸಿನಕಾಯಿಗಳು ಬಿಡುವದನ್ನು ವಿಶೇಷಿಸಿರುವದ ಲ್ಲದೆ ಹಿಡಿಯುವದು ಹೆಬ್ಬಾವು । ಪಡೆಯುವದು ಪಡಿಭತ್ತ[17] ಮುಂತಾದ ಮಲೆ ನಾಡಿನ ವಿಲಕ್ಷಣಗಳನ್ನು ಹೇಳಿರುವದರಿಂದಲೂ ಇವನು ಕೆಲವು ಕಾಲವಾದರೂ ಮಲೆನಾಡಿನಲ್ಲಿ ನೆಲಸಿದ್ದಂತೆ ತೋರುತ್ತದೆ. ಇದಲ್ಲದೆ ಹೊಳೆಯಲ್ಲಿ ಹೋಗುವ ತೆಪ್ಪ[1], ಮೀನಿನಬಲೆ[2], ಲಂಗರಹಾಕಿದ ಡೋಣಿ[3], ಅಂಬಿಗ[4], ಹರಗೋಲು[5], ಮುಂತಾದವುಗಳನ್ನು ವರ್ಣಿಸಿ ಆಳವಾದ ನೀರಿನಲ್ಲಿ ಚಲಿಸುವ ಮೀನು[6] ನುಂ ಗುವದಕ್ಕೆ ಬಾಯ್ತೆರದ ಮೊಸಳೆ[7], ಮೊದಲಾದ ಉಪಮೆಗಳನ್ನು ಪ್ರಯೋಗಿಸಿ ರುವದರಿಂದ ಇವನು ತುಂಗಭದ್ರೆ ಹಾಗೂ ಮಾಸೂರ ಸರೋವರದ ನೆರೆ ಪ್ರದೇ ಶದಲ್ಲಿ ತಿರುಗಾಡಿದವನಂತೆ ತಿಳಿಯುತ್ತದೆ. ಇದಲ್ಲದೆ ಆಲ, ಕಬ್ಬು, ತೆಂಗು, ಅಡಿಕೆ, ಮಾವು, ಬೇವು, ಜಾಲಿ, ಬೂರಲ, ಮೊದಲಾದ ಗಿಡಮರಗಳನ್ನೂ ಚುರಚಿ, ನಸಗುನ್ನಿ ಕಾಡಕವಡಿ, ಹೆಗ್ಗುಳಲ, ಎಕ್ಕೆ, ಹತ್ತಿ, ದವನ, ದಾ ಸಾಳ, ಬೆಳ್ಳುಳ್ಳಿ, ಕಳ್ಳಿ, ಎಳ್ಳು, ಈಚಲ, ಇಂಗುಳ ಹಣಜೆ, ಬಿದರು, ಉತ್ತ ರಣೆ, ಕೋಲಾಣೆ, ಆಳಿಂಬೆ, ಕಾರಿ, ಈರೆ, ನೆಗ್ಗಿಲು, ಸೀಗೆ, ತಂಬಾಕ,

(12) ೧೪೮೧,೧೪೭೯ (13) ೧೪೮೦ (14) ೧೪೮೩ (15) ೧೪೮೫ (16) ೧೨೩ (17) ೧೪೭೯.

(1 ೨೩೨ (2) ೧೭೫೦ (3) ೧೩೨೧ (4) ೧೩೧೯ (5) ೧೨೩೫ (6) ೧೨೧೨ (7) ೧೨೪೯

ಭಂಗಿ, ಜೇಕು, ಕರಿಕೆ, ಮುಂತಾದ ವನಸ್ಪತಿಗಳ ಹೆಸರುಗಳನ್ನೂ ಜಾಜಿ, ಮಲ್ಲಿಗೆ, ಸಂಪಿಗೆ, ಕಮಲ, ಹಲಸು, ಬಾಳೆ, ಅತ್ತಿ, ಕಿತ್ತಳೆ, ಕುಂಬಳ, ಸೌತೆ, ನೆಲ್ಲಿ, ಗೇರು, ಬೇಲ, ಬಿಲ್ವ, ಕೀರೆ, ಕಬ್ಬು, ಬಿಳಿಎಲೆ, ಅಲ್ಲ, ಅರಿಷಣ. ಮುಂತಾದ ಪತ್ರಪುಷ್ಪಫಲಮೂಲಾದಿಗಳ ಹೆಸರುಗಳನ್ನೂ ಜೋಳ, ನವಣೆ, ಅಕ್ಕಿ, ಕಡಲೆ, ಗೋಧಿ, ತೊಗರೆ, ಎಳ್ಳು, ಮಡಿಕೆ, ಉದ್ದು, ರಾಗಿ, ಭತ್ತ, ಅವರೆ, ಮುಂತಾದ ದವಸ ಧಾನ್ಯಗಳ ಹೆಸರುಗಳನ್ನೂ ಇವುಗಳನ್ನು ಸಂಬಂಧಿಸಿ ವಿವಿಧ .ದೃಷ್ಟಾಂತಗಳನ್ನೂ ಹುಲಿ, ಕರಡಿ, ಆನೆ, ಕಾಡುಮಿಕ, ಮುಂತಾದ ಮೃಗಗಳ ಹೆಸರುಗನ್ನೂ ಕುದುರೆ, ಎತ್ತು, ಎಮ್ಮೆ, ಕೋಣ, ಕತ್ತೆ, ಆಡು, ಹೋತು, ನರಿ, ನಾಯಿ, ಇಲಿ, ಬೆಕ್ಕು, ಮೊಲ, ಹಂದಿ ಕುರಿ, ಕೋತಿ, ಮೊಸಳೆ ಮೊದಲಾದ ಪಶುಗಳನ್ನು ಕುರಿತ ದೃಷ್ಟಾಂತಗಳನ್ನೂ ಹಾಗು ಕೋಳಿ, ಕಾಗೆ, ಹದ್ದು, ಗೂಗೆ, ಹಂಗ, ಬೆಳ್ಳಕ್ಕಿ ಮೊದಲಾದ ಪಕ್ಷಿಗಳ ಹೆಸರುಗಳನ್ನೂ ಹಾವು, ಚೇಳು, ಓತಿಕಾಟ, ಮುಂಗಲಿ, ಆವೆ, ಏಡಿ, ಕೀಡೆ ಮೊದಲಾದ ಜಂತುಗಳ ಹೆಸರುಗಳನ್ನೂ ತಗಣೆ, ಚಿಕ್ಕಾಡು, ಉಣ್ಣೆ, ಹೇನು, ಕೂರಿ, ತೊನಸಿ, ನೊಣ ಮುಂತಾದ ಕೀಟಗಳ ಉಪಮೆಗಳನ್ನೂ, ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಾರವಾಗಿದ್ದ ನಾಣ್ಯದ ಹೆಸರುಗಳನ್ನೂ ಗಿಂಡಿ, ಸುಂಡಿಲುಗಿಂಡಿ, ಗಂಗಾಳ, ಕಹಳೆ, ಸಿಂಗಾರಿ, ಚಾಮರ, ಅಂದಣ ಸತ್ತಿಗೆ, ಸಾಣೇಕಲ್ಲ, ವೀಣೆ, ಬಿಲ್ಲು, ಭೇರಿ, ಭಂಡಿ, ಗರಗಸ, ಕತ್ತಿ ಮುಂತಾದ ಕೈಗಾರಿಕೆಯ ಸಾಮಾನುಗಳ ಹೆಸರುಗಳನ್ನೂ ಹರಕುಹೋಳಿಗೆ, ಮುರುಕು ಹಪ್ಪಳ, ತಿಳಿದುಪ್ಪ, ರೊಟ್ಟಿ, ಅಂಬಲಿ, ನುಚ್ಚು, ಮಜ್ಜಿಗೆ, ಮೊಸರು, ಪಳಿದೆ, ಆಂಬ್ರ, ಉದ್ದಿನಬಡೆ, ಕಣಕ, ಸುಟ್ಟಬೆಳಸಿ, ಮೊದಲಾದ ಆಹಾರದ ಹಾಗೂ ಮೇಲೋಗರಗಳ ಹೆಸರನ್ನೂ ಸಂಭಾವಿತ ಹಾಗೂ ಕಾಮುಕ ಸ್ತ್ರೀ ಪುರುಷರ ವಸ್ತ್ರಾಭರಣ, ಉಡಿಗೆ ತೊಡಿಗೆ, ಇವರ ಸೋಗುಸನ್ನೆ ಮುರುಕ ಮಣಿತಗಳನ್ನೂ 'ಹಿರಿದೊಂದು ನಾಡುಂಟು' 'ಶಂಕರನಪೂಜೆ ಮನೆ ಮನೆಗೆ' ಎಂದು ನುಡಿದಿರುವ ಮಾತುಗಳನ್ನೂ ನೋಡಿದರೆ ಇವನು ಕೇವಲ ಕರ್ನಾಟಕಸ್ಥನಾಗಿದ್ದು ಅದರ ವಿಸ್ತಾರವನ್ನೂ, ಸೃಷ್ಟಿ ಸಂಬಂಧವಾದ ವಿಲಕ್ಷಣಗಳನ್ನೂ ಅದರಲ್ಲಿ ಪ್ರಚಲಿತವಾಗಿರುವ ಧರ್ಮಗಳನ್ನೂ ಅರಿತವನಾಗಿದ್ದನೆಂದು ತಿಳಿದು ಬರುತ್ತದೆ. ಇವನ ಗ್ರಂಥದಲ್ಲಿ ರಸವಾದ, ತರತರದ ಲೋಹ, ಅಂತೂ

ಹಿಂದೆ ಹೇಳಿದ ಎಲ್ಲ ವಸ್ತು, ಪ್ರಾಣಿಗಳ ವರ್ಣನೆ, ಅವುಗಳನ್ನು ದೃಷ್ಟಾಂತ ಕ್ಕಾಗಿ ಅಲ್ಲಲ್ಲಿ ಯೋಜಿಸಿಕೊಂಡಿರುವರೀತಿ, ಹಾಗೂ ಗೋದಾವರಿ, ತುಂಗ ಭದ್ರೆ, ಕೃಷ್ಣಾ ಇತ್ಯಾದಿ ಹೊಳೆಗಳ ಹೆಸರು ಮುಂತಾದವುಗಳನ್ನು ನೋಡಿದರೆ ಇವನು ಮೈಸೂರು, ಬಳ್ಳಾರಿ, ಧಾರವಾಡ, ವಿಜಾಪುರ, ಬೆಳಗಾವಿ, ಕಾರವಾರ ಮೊದಲಾದ ಪ್ರಾಂತಗಳನ್ನೊಳಗೊಂಡ ಪ್ರದೇಶನ ಅಂದರೆ ಕರ್ನಾಟಕದ ಮಲೆ ನಾಡು ಬೈಲುಸೀಮೆಗಳೆರಡನ್ನೂ ಸಂಚರಿಸಿದವನಾಗಿರಬೇಕೆಂದು ಕಾಣುತ್ತದೆ.

ಈ ಕಾರಣಗಳಿಂದಲೂ ಹಿಂದೆ ಹೇಳಿದ ಕಾರಣಗಳಿಂದಲೂ ಸರ್ವಜ್ಞನು ಕರ್ನಾಟಕಸ್ಥನೂ ಮಾಸೂರಿನ ಎಡಬಲದ ನಿವಾಸಿಯೂ ಆಗಿದ್ದು ಇವನ ಜನನ ಸಂಬಂಧವಾಗಿ ಹಿಂದೆ ಚರ್ಚಿಸಿದ ಸಂಗತಿಯು ತಕ್ಕಮಟ್ಟಿಗಾದರೂ ಐತಿಹಾ ಸಿಕವಾಗಿರಬೇಕೆಂದು ತಿಳಿದುಬರುತ್ತದೆ.

## ೫. ಕಾಲವಿಚಾರ.

ಸರ್ವಜ್ಞನ ಜನ್ಮಚರಿತ್ರೆಯ ಸಂಬಂಧ ನಮಗೆ ಸ್ಪಷ್ಟವಾದ ಬಹಿರಾಧಾರ ಗಳು ದೊರೆಯದಿದ್ದರೂ ಅವನ ಗ್ರಂಥದಲ್ಲಿಯೇ ದೊರೆಯುವ ಕೆಲವು ವಚನಗಳ ಮೇಲಿಂದ ಒಂದು ತರದ ಊಹೆಯನ್ನು ಮಾತ್ರ ಮಾಡಬಹುದಾಗಿದೆ. ಆದರೆ ಇವನ ಕಾಲವನ್ನು ತಿಳಿಯುವದಕ್ಕೆ ಈ ತರದ ಸೂಚನೆಗಳಾವುವೂ ಇರುವದಿಲ್ಲ. ಹೀಗಿದ್ದರೂ ಇವನ ಕಾಲಜ್ಞಾನಪದ್ಧತಿಯಲ್ಲಿರುವ ಕೆಲವು ಪದ್ಯಗಳಿಂದ ಸಹಾ ಯದ ಒಂದು ಕಿರಣವು ಮಿನುಗುತ್ತಿರುವದು. ಹಿಂದೆ ಹೇಳಿದ 'ಕಾಲಜ್ಞಾನ' ಗ್ರಂಥದಲ್ಲಿ ಬರುವ ಕೆಲವು ಪದ್ಯಗಳು ಇವನ 'ತ್ರಿಪದಿ' ಗ್ರಂಥದಲ್ಲಿಯೂ ದೊರೆ ಯುವದರಿಂದ ಉಭಯ ಗ್ರಂಥಗಳಿಗೆ ಸ್ವಲ್ಪ ಸಂಬಂಧವಿದ್ದಂತೆ ತೋರುತ್ತದೆ. ಹೇಗೆಯೇ ಇರಲಿ ಅಚ್ಚಾದ ಪ್ರತಿಗಳಲ್ಲಿರುವ 'ಕಾಲಜ್ಞಾನಪದ್ಯ'ಗಳನ್ನು ಬರೆದ ಸರ್ವಜ್ಞನೂ 'ಕಾಲಜ್ಞಾನಗ್ರಂಥ'ವನ್ನು ಬರೆದ ಸರ್ವಜ್ಞನೂ ಒಬ್ಬನೇ ಎಂದು ತಿಳಿದ ಪಕ್ಷದಲ್ಲಿ ಇವನ ಕಾಲವನ್ನು ನಿರ್ಣಯಿಸುವದಕ್ಕೆ ಕೆಲವು ಐತಿಹಾಸಿಕ ಸೂಚನೆಗಳು ದೊರೆಯುತ್ತವೆ. ಅಚ್ಚಾದ ಗ್ರಂಥಗಳಲ್ಲಿರುವ 'ಕಾಲಜ್ಞಾನ ಪದ್ಧತಿ' ಯಲ್ಲಿ ವಿಜಯನಗರವು ಮಹಮ್ಮದೀಯರಿಂದ ನಾಶವಾದುದು; ಇಕ್ಕೇರಿ ಸಂಸ್ಥಾ ನವು ಹಾಳಾದುದು; ಶ್ರೀರಂಗಪಟ್ಟಣವು ಆಂಗ್ಲೇಯರ ವಶವಾದುದು; ಮುಂತಾ ದ ವಿಷಯಗಳು ಹೇಳಲ್ಪಟ್ಟಿರುವದರಿಂದ ರೆವರೆಂಡ್. ಎಫ್. ಕಿಟೆಲ್ ಪಂಡಿ

ತರು, ಇವನ ಕಾಲವು ಕ್ರಿ. ಶ. ಸುಮಾರು ೧೮೦೦ ಆಗಿರಬಹುದೆಂದೂ[1] ರೆವರೆಂಡ್ ಇ. ಪಿ. ರೈಸರೆಂಬವರು ಸುಮಾರು ೧೭೦೦ ಆಗಿರಬಹುದೆಂದೂ[2] ಬರೆದಿರುವರು. ಆದರೆ ಇವರ ಊಹೆಯು ಅಷ್ಟು ಸಮಂಜಸವಲ್ಲವೆಂದು ಮುಂದೆ ಬರುವ ಆಧಾರಗಳಿಂದ ವಿಶದವಾಗುವದು. ಈ ವಿಷಯುವನ್ನು ಇತ್ತಿತ್ತ ಹೊಸದಾಗಿ ಶೋಧಿಸಿದ ಶ್ರೀಮಾನ್ ಆರ್. ನರಸಿಂಹಾಚಾರ್ಯರು "೧೮೦೦ಕ್ಕೆ ಹಿಂದೆ ಬರೆದ ಈತನ ಗ್ರಂಥದ ಓಲೆಯ ಪ್ರತಿಗಳು ದೊರೆಯುವದರಿಂದಲೂ ಅವುಗಳಲ್ಲಿ ಹಳೆಗನ್ನಡ ಱ ಎಂಬ ಅಕ್ಷರವಿರುವದರಿಂದಲೂ ಈತನ ಕಾಲವು ಸುಮಾರು ೧೭೦೦ರಕ್ಕೆ ಈಚೆಗೆ ಇರಲಾರದೆಂದು ನಾವು ಊಹಿಸುತ್ತೇವೆ"[3] ಎಂಬದಾಗಿ ಹೇಳಿರುವರು. ಇದರಿಂದ ಸರ್ವಜ್ಞನ ಕಾಲವು ಕಿಟಲ್ ಪಂಡಿತರು ಹೇಳಿದ್ದಕ್ಕಿಂತ ಸರಿಯಾಗಿ ೧೦೦ ವರ್ಷ ಹಿಂದೆ ಬಂದಂತಾಯಿತು. ಇದಲ್ಲದೆ ಅವರಿಗೆ ದೊರೆತ ಒಂದು ಓಲೆಯ ಪುಸ್ತಕದಲ್ಲಿ "ಸಂಪಾದನೆಯ ಸಿದ್ಧ ವೀರಣಾಚಾರ್ಯರು ಸೇರಿಸಿದ ಸರ್ವಜ್ಞ ಮೂರ್ತಿ ನಿರೂಪಿಸಿದ 'ತ್ರಿವಿಧಿ' ಎಂದು ಇರುವದಲ್ಲದೆ ಅವನ ಕೆಲವು ಯಥೋಕ್ತಗಳೂ ಬರುವದರಿಂದ ಈ ಸರ್ವಜ್ಞ ಮೂರ್ತಿಯು ಅಂಬಲೂರಿನಲ್ಲಿ ಹುಟ್ಟಿದ ಸರ್ವಜ್ಞನೇ ಆಗಿದ್ದ ಪಕ್ಷದಲ್ಲಿ ಸಿದ್ಧವಿರಣಾಚಾರ್ಯನ ಕಾಲಕ್ಕೆ ಅಂದರೆ ೧೬೦೦ರಕ್ಕೆ ಹಿಂದೆ ಇದ್ದಿರಬೇಕೆಂದೂ ತರ್ಕಿಸಿರುವರು[4]. ಇದರಿಂದ ಅವನ ಕಾಲವು ಸರಿಯಾಗಿ ಮತ್ತೊಂದು ೧೦೦ ವರ್ಷ ಹಿಂದೆ ಬಂದಂತಾಯಿತು. ಈ ಸಂಬಂಧವಾಗಿ ನಮಗೆ ದೊರೆತ ಅವನ ಕಾಲಜ್ಞಾನ ಗ್ರಂಥದ ಕೈಬರಹದ ಪ್ರತಿಯನ್ನು ಪರಿಶೋಧನೆಗಾಗಿ ಮೇಲೆ ಹೇಳಿದ ಮಹನೀಯರ ಸನ್ನಿಧಿಗೆ ಕಳುಹಿಸಲು ಅವರು ಬರೆದ ಪತ್ರದಿಂದ ಸಂಶಯಯುಕ್ತವಾದ ಮೂರು ಕಾಲಗಳು ಸೂಚಿತವಾಗಿರುವವು. ಇಲ್ಲಿ ಅವರ ಲೇಖವನ್ನು ಇದ್ದಂತೆ ಕೊಟ್ಟು ಕಾಲವಿಚಾರದಲ್ಲಿ ನಮಗೆ ಸರಿತೋರಿದ ಕೆಲವು ಅಭಿಪ್ರಾಯಗಳನ್ನು ತಿಳಿಸುವೆವು.

ಶ್ರೀಮನ್. ಆರ್. ನರಸಿಂಹಾಚಾರ್ಯರ ಲೇಖವು ಹೀಗಿದೆ— "ನೀವು ಕಳುಹಿಸಿದ ಪುಸ್ತಕದಲ್ಲಿ ೬೭೨ ಪದ್ಯಗಳಿವೆ. ಮುಂದಕ್ಕೆ ಇನ್ನೆಷ್ಟಿವೆಯೋ ಗೊತ್ತಿಲ್ಲ. ಇದರ ಆರಂಭದಲ್ಲಿ 'ಸರ್ವಜ್ಞಗಣೇಶ್ವರ'ನೆಂದು ಹೇಳಿ, ಇವನು ಬಸವ-

---

1 Kittle's Kan. Lit. Nagavarma Prosody page 73-74.

2 Rice's Kan, Lit. page 68.

3 ಕವಿಚರಿತೆ ದ್ವಿ. ಸ. ಪುಟ. ೫೩೨.

4. ಕವಿಚರಿತೆ, ದ್ವಿ. ಸ. ಪುಟ ೩೨೫

ಮಡಿವಾಳಯ್ಯ, ಸೊಡ್ಡಳಬಾಚರಸ, ಇವರ ಸಮಕಾಲದವನೆಂದು ಹೇಳಿದೆ. ಇಲ್ಲಿ ಹೇಳಿರುವ 'ಸರ್ವಜ್ಞಗಣೇಶ್ವರ'ನು ಈಗ ಪ್ರಚಾರದಲ್ಲಿರುವ ತ್ರಿಪದಿಗಳನ್ನು ಬರೆದಿರುವವನೋ ತದ್ಭಿನ್ನನೋ ಎಂಬ ಸಂದೇಹವು ಹುಟ್ಟುತ್ತದೆ. ಆದರೆ ಪ್ರಾಚೀನತೆಯನ್ನು ತೋರಿಸಲು ಹೀಗೆ ಬರೆದಿದ್ದರೂ ಬರೆದಿರಬಹುದು. ನೀವು ಕಳುಹಿಸಿದ ಭಾಗದಲ್ಲಿ ವಿಜಯನಗರದ ರಾಮರಾಯನು ಸತ್ತ ಸಂಗತಿಯೂ ವಿಜಯನಗರವು ತುರುಕರಿಂದ ನಾಶವಾದ ಸಂಗತಿಯೂ ಹೊರಪಡುವದರಿಂದ ಕವಿಗೆ ೧೫೬೫ರಲ್ಲಿ ನಡೆದ ಸಂಗತಿಯು ತಿಳಿದಿತ್ತೆಂದು ವ್ಯಕ್ತವಾಗುತ್ತದೆ. ಅಚ್ಚಾಗಿರುವ ಗ್ರಂಥದಲ್ಲಿ ಶ್ರೀರಂಗಪಟ್ಟಣವು ಹೋದುದು, ಉಗಿಬಂಡಿ, ರೈಲು, ತಂತಿ ಮುಂತಾದ ಸಂಗತಿಗಳು ಕಂಡುಬರುವದರಿಂದ ಕವಿಯು ೧೭೯೯ಕ್ಕೆ ಈಚೆಯವನೆಂಬ ಸಂದೇಹವು ಹುಟ್ಟುತ್ತದೆ. ಈ ಪದ್ಯಗಳು ಹೊಸದಾಗಿ ಸೇರಿಸಿದುವೋ ಅಥವಾ ಕವಿಕೃತವೋ ನಿರ್ಧರಿಸುವದು ಕಷ್ಟವಾಗಿದೆ. ನೀವು ಕಳುಹಿಸಿದ ಪ್ರತಿಯಲ್ಲಿ ಇಂತಹ ವಿಷಯಗಳಾವವೂ ಬಂದಿರುವದಿಲ್ಲ. ಮುಂದೆ ಏನಾದರು ಬರುವವೋ ತಿಳಿಯದು. ೩೮೧ ನೆಯ ಪದ್ಯದಲ್ಲಿ ಕೆಂಚನ ಗಿರಿಯು ಮೂಡಣ ದಿಕ್ಕಿನಲ್ಲಿ 'ಕೆಂಚನೃಪರಹರು' ಎಂದಿರುವದು. ಇಲ್ಲಿ 'ಕೆಂಚ' ಎಂಬದಕ್ಕೆ ಇಂಗ್ಲಿಷರು ಎಂದು ಅರ್ಥಮಾಡಿದ ಪಕ್ಷದಲ್ಲಿ ಕವಿಯ ಕಾಲವು ಈಚೆಗೆ ಬರಬೇಕಾಗುತ್ತದೆ. ಇಲ್ಲದಿದ್ದರೆ ಆ ಶಬ್ದಕ್ಕೆ ಬೇರೆ ಅರ್ಥಮಾಡಬೇಕಾಗುವದು. ೫೯೫ನೆಯ ಪದ್ಯದಲ್ಲಿ 'ಕೆಂಚಸೋಮಯ್ಯ'ನ ಹೆಸರಿದೆ. ಈತನು ವಿಜಯನಗರದ ಕೃಷ್ಣರಾಯನ ಕಾಲದಲ್ಲಿದ್ದಂತೆ ಶಾಸನಗಳಿಂದ ತಿಳಿಯುತ್ತದೆ. ಚನ್ನಬಸವ ಪುರಾಣದಲ್ಲಿಯೂ ಇವನ ಹೆಸರು ಹೇಳಿದೆ. ಹೀಗಿರಲು ಬಸವನಕಾಲದಲ್ಲಿ 'ಸರ್ವಜ್ಞ'ನೆಂಬವನೊಬ್ಬನು ಇದ್ದಂತೆ ಖಂಡಿತವಾಗಿ ತಿಳಿದ ಪಕ್ಷದಲ್ಲಿ ಅವನು ಬೇರೆ, ಪ್ರಕೃತ ಕವಿಯು ಬೇರೆ, ಎಂದು ಹೇಳಬಹುದು. ಶ್ರೀರಂಗ ಪಟ್ಟಣ, ಇಂಗ್ಲಿಷರು, ತಂತಿ ಮುಂತಾದ ವಿಷಯಗಳನ್ನು ಬಿಟ್ಟರೆ ಪ್ರಕೃತಕವಿಯು ಸಂಪಾದನೆಯ ಸಿದ್ಧವೀರಣಾಚಾರ್ಯನ ಹಿಂದೆ ಇದ್ದವನೆಂದು ಹೇಳಲೂ ಬಹುದು. ಆದರೆ ಈ ವಿಷಯದಲ್ಲಿ ಇದು ಹೀಗೆಯೇ ಎಂದು ಖಂಡಿತವಾಗಿ ಹೇಳುವದು ಕಷ್ಟವಾಗಿದೆ."

ಇವರ ಲೇಖದಿಂದ ಬಸವನಕಾಲ ೧೧೬೦. ವಿಜಯನಗರದ ವಿನಾಶ ೧೫೬೫. ಶ್ರೀರಂಗಪಟ್ಟಣವು ಆಂಗ್ಲೇಯರ ವಶವಾದುದು ೧೭೯೯. ಹೀಗೆ ಮೂರು ಬೇರೆ ಬೇರೆ ಕಾಲಗಳು ದೊರೆತಂತಾದವು. ಇವುಗಳಲ್ಲಿ ಮೊದಲನೆ

ಯುದಕ್ಕೆ ೪೦೫ ವರ್ಷಗಳು ಎರಡನೆಯುದಕ್ಕೆ ೩೩೪ ವರ್ಷಗಳು ಅಂತರಬೀಳುತ್ತದೆ. ಹೀಗಿರಲು ಈ ಮೂರು ಐತಿಹಾಸಿಕ ವೃತ್ತಾಂತಗಳನ್ನು ಒಬ್ಬನೇ ಕಂಡು ಬರೆದಿರುವದು ಅಸಾಧ್ಯವೆಂದು ಮೇಲೆಯೇ ಕಾಣುತ್ತದೆ. ನಾವು ಹೀಗಾಗಿ ಮೂರು ಬೇರೆ ಬೇರೆ ಸರ್ವಜ್ಞರನ್ನು ಸ್ವೀಕರಿಸಬೇಕು ಇಲ್ಲವೆ ಯಾವದೊಂದು ಕಾಲವನ್ನು ನಿಶ್ಚಯಿಸಿ ಉಳಿದ ಎರಡು ಕಾಲಗಳನ್ನು ಬಿಡಬೇಕು. ಬೇರೆ ಉಪಾಯ ತೋರುವದಿಲ್ಲ. ನಮಗೆ ದೊರೆತ ಇವನ 'ಕಾಲಜ್ಞಾನ' ಗ್ರಂಥದಲ್ಲಿ ಇಂಗ್ಲಿಷರು, ರೈಲು, ತಂತಿ ಮುಂತಾದ ವಿಷಯಗಳು ಬಂದಿರುವದಿಲ್ಲವಾದುದರಿಂದಲೂ ಬಸವನಿಂದೀಚೆಗಿರುವ ವಿಷಯಗಳಲ್ಲಿ ವಿಜಯನಗರದ ನಾಶವನ್ನೂ ಇದರ ಸುಮಾರಿಗೆ ಆಳುತ್ತಿದ್ದ ಅರಸರನ್ನೂ ಕುರಿತು ಆಗಲೇ ಕಂಡು ಇಲ್ಲವೆ ಕೇಳಿದವನಂತೆ ವಿವರಿಸಿರುವದರಿಂದಲೂ ಇವನು ೧೬ನೆಯ ಶತಮಾನದಲ್ಲಿ ಬದುಕಿದವನಾಗಿರಬೇಕೆಂದು ಭಾಸವಾಗುತ್ತದೆ. ಇದು ನಿಜವಿದ್ದರೆ, ಕವಿಯು, ತಾನು ಬಸವನ ಕಾಲದಲ್ಲಿದ್ದಂತೆ ಏಕೆ ಬರೆದನು? ಅವನ ಓಲೆಯ ಗ್ರಂಥಗಳು ಹೆಚ್ಚು ಕಡಿಮೆ ನೂರುವರ್ಷ ತಡವಾಗಿ ದೊರೆಯುವದಕ್ಕೆ ಕಾರಣವೇನು? ಎಂಬೀ ಪ್ರಶ್ನೆಗಳು ಹುಟ್ಟುತ್ತವೆ. ಇವಕ್ಕೆ ಸರ್ವಜ್ಞನೆಂದರೆ ಭೂತಭವಿಷ್ಯಗಳನ್ನು ಬಲ್ಲವನೆಂದು ಅರ್ಥವಾಗುವದರಿಂದ ವಚನಶಾಸ್ತ್ರಕ್ಕೆ ವಿಶೇಷ ರೀತಿಯಿಂದ ಮೊದಲುಮಾಡಿದ ಬಸವನ ಕಾಲದಿಂದ ಅವನು ತನ್ನ ಕಾಲಜ್ಞಾನವನ್ನು ಪ್ರಾರಂಭಮಾಡಬೇಕಾಯಿತೆಂದೂ ಪಾಠಕ್ಕೆ ಸುಲಭವಾಗಿದ್ದ ಅವನ 'ತ್ರಿಪದಿ'ಗಳು ಬಹುದಿವಸದವರೆಗೆ ಕಂಠಸ್ಥವಾಗಿ ಉಳಿದದ್ದೇ ಅವನ ಓಲೆಯ ಪ್ರತಿಗಳು ತಡವಾಗಿ ದೊರೆಯುವದಕ್ಕೆ ಕಾರಣವೆಂದೂ ಹೇಳಬಹುದು.

ಹೇಗೆಯೇ ಇರಲಿ. ಇದುವರೆಗೆ ಹೇಳಿದಕಾರಣಗಳಿಂದಲೂ ಮುಂದೆ ಬರುವ ಆಧಾರಗಳಿಂದಲೂ ಸರ್ವಜ್ಞಕವಿಯು ೧೬ನೆಯ ಶತಮಾನದವನೆಂದು ಸ್ವೀಕರಿಸಲ್ಪಟ್ಟಿರುವದು.

ಈ ಆಧಾರಗಳು ಕೆಳಗೆ ಕೊಟ್ಟಿಂತಿವೆ—

(೧) ಸಂಪಾದನೆಯ ಸಿದ್ಧವೀರಣಾಚಾರ್ಯನು ಸರ್ವಜ್ಞನ ಕೆಲವು ಯಥೋಕ್ತಗಳನ್ನು ಉಲ್ಲೇಖಿಸಿದ್ದು. ಇವನು ಸುಮಾರು ೧೬೦೦ ರಲ್ಲಿದ್ದನೆಂದು ಆರ್. ನರಸಿಂಹಾಚಾರ್ಯರು ಹೇಳಿರುವರು.[1] ಇದು ಸತ್ಯವಿದ್ದರೆ ಸರ್ವಜ್ಞನು ಸಿದ್ಧವೀರಣಾಚಾರ್ಯನ ಹಿಂದೆ ಅಂದರೆ ೧೬೦೦ಕ್ಕೆ ಮುಂಚೆ ಬದುಕಿದವನಾಗಿರಬೇಕೆಂದು ತಿಳಿದುಬರುತ್ತದೆ.

---

1 ಕವಿಚರಿತೆ ದ್ವಿ. ಸ ಪುಟ ೩೨೫

(೨) ವೇಮಣ್ಣ–ಸರ್ವಜ್ಞ ಸಂವಾದವೆಂಬದೊಂದು ಗ್ರಂಥವಿದ್ದಂತೆ ಮುಂದೆ ಗ್ರಂಥಾಧಾರ ಪಟ್ಟಿಯಲ್ಲಿ ಕೊಟ್ಟಿರುವೆವು. ಇದರಲ್ಲಿ ಇಬ್ಬರ ಪದ್ಯಗಳು ಹೆಚ್ಚುಕಡಿಮೆ ಒಂದೇ ಅರ್ಥವುಳ್ಳವುಗಳಾಗಿದ್ದು ಮೊದಲು ತೆಲುಗಿನಲ್ಲಿಯೂ ಕೆಳಗೆ ಕನ್ನಡದಲ್ಲಿಯೂ ಬರೆಯೋಣವಾಗಿವೆ. ಜ್ಞಾನ, ಜಾತಿ, ಆಚಾರಭಕ್ತಿ, ವೈರಾಗ್ಯ, ಸ್ತ್ರೀಸ್ತುತಿನಿಂದೆ ಮುಂತಾದ ವಿಷಯಗಳಲ್ಲಿ ಉಭಯತರು ಒಂದೇ ದೃಷ್ಟಿಯುಳ್ಳವರಾಗಿರುವದರಿಂದ ಇವರು ಅದೇ ವಾತಾವರಣದಲ್ಲಿದ್ದವರಂತೆ ಭಾಸವಾಗುತ್ತದೆ.[2] ಅನೇಕ ಕಡೆಗಳಲ್ಲಿ ಉಭಯತರ ವಿಚಾರಗಳು ಹೋಲುತ್ತಿರುವದರಿಂದ ಇವನು ವೇಮಣ್ಣನ ಸಮಕಾಲದವನಿದ್ದರೂ ಇರಬಹುದು. ತೆಲಗುಕವಿಯಾದ ಈ ವೇಮಣ್ಣನು ೧೬ನೆಯ ಶತಮಾನದಲ್ಲಿದ್ದಂತೆ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[3]

(೩) ಕಿಟಲ್ ಪಂಡಿತನು ಶಬ್ದಪ್ರಯೋಗ, ವಿಚಾರ ಸರಣಿ, ವ್ಯಾವಹಾರಿಕ ದೃಷ್ಟಾಂತ ಮೊದಲಾದ ವಿಷಯಗಳಲ್ಲಿ ಸರ್ವಜ್ಞನ ವಚನಗಳಿಗೂ ದಾಸರ ಪದಗಳಿಗೂ ವಿಶೇಷ ಸಂಬಂಧವಿರುವದೆಂದು ಸೂಚಿಸಿರುವದರಿಂದಲೂ[4] "ತುರುಕರಿಲ್ಲದ ಊರು ನರಕ ಭಾಜನವಕ್ಕು" ಎಂಬ ಪದ್ಯವು ಪುರಂದರದಾಸರ ಪದಗಳಲ್ಲಿಯೂ ಸರ್ವಜ್ಞನಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆ ಏಕ ಪ್ರಕಾರವಾಗಿ ಬರುವದರಿಂದಲೂ ಉಭಯತರು ಒಂದೇ ಕಾಲದವರಾಗಿರಬಹುದೇನೋ ಎಂಬ ಸಂದೇಹವುಂಟಾಗುತ್ತದೆ ಸರ್ವಜ್ಞ, ವೇಮಣ್ಣ ಪುರಂದರದಾಸ ಈ ಮೂವರಲ್ಲಿ ಇಬ್ಬರು ಶಿವಭಕ್ತರೂ ಒಬ್ಬನು ವಿಷ್ಣುಭಕ್ತನೂ ಇದ್ದು ಇವರ ತತ್ವವಿಚಾರಗಳು ಪರಸ್ಪರ ವಿರುದ್ಧವಾಗಿದ್ದರೂ ಭಕ್ತಿರಹಿತವಾದ ಆಚಾರವನ್ನು ಖಂಡಿಸುವದರಲ್ಲಿ ಎಲ್ಲರಿಗೆ ಒಂದೇ ದೃಷ್ಟಿ ಇರುವದು. ನಿರ್ಜೀವವಾದ ಆಚಾರಗಳನ್ನು ಹಳಿಯುವಲ್ಲಿ ಒಬ್ಬರಿಗಿಂತ ಒಬ್ಬರು ಹಿರಿದಿನ ಉಪಮೆಗಳನ್ನು ಪ್ರಯೋಗಿಸಿರುವದರಿಂದ ಇವರೆಲ್ಲರು, ಅಂತರಂಗವು ಬರಿದಾಗಿ ಬಹಿರಂಗವು ಬಾಡಿದ ಕಾಲದಲ್ಲಿ ಬದುಕಿರಬೇಕೆಂದು ಭಾಸವಾಗುತ್ತದೆ. ಉತ್ತರ

---

2 ಈ ವಿಷಯವು ಬಿ. ಭೀಮರಾಜು ಎಂಬವರು ಕನ್ನಡಿಸಿರುವ ವೇಮಣ್ಣನ ಜ್ಞಾನಮಾರ್ಗ ಪದ್ಯಗಳು, (೧೯೨೨) ಎಂಬ ಗ್ರಂಥವನ್ನು ಓದಿಕೊಂಡರೆ ಮತ್ತಷ್ಟು ಸ್ಪಷ್ಟವಾಗುವದು.

3 The most important writer was, however, Vemana (Sixteenth Century) and directed his satires against cast distinction and fair sex. Imperial Gazetteer vol II page 437.

4 Kittle's Poetical Anthology (ಕಾವ್ಯಮಾಲೆ) preface page 8.

ದಲ್ಲಿ ಪ್ರಾರಂಭವಾದ ಭಕ್ತಿಚಲನೆಯು ಚೈತನ್ಯಾದಿಗಳಿಂದ ಬಲಗೊಂಡು ದಕ್ಷಿಣದಲ್ಲಿ ಪುರಂದರದಾಸ ತುಕಾರಾಮ[1] ಮೊದಲಾದವರಿಂದ ಮುಂದರಿಸಲ್ಪಟ್ಟು ಅವರು ಕೀರ್ತನೆಗಳ ಮೂಲಕ ವೇದಾಂತ ಪರವಾದ ವಿಷ್ಣು ಭಕ್ತಿಯನ್ನು ಕನ್ನಡ ನಾಡಿನಲ್ಲೆಲ್ಲ ಹಬ್ಬಿಸುತ್ತ ನಡೆದಿರಲು ಅತ್ತಕಡೆ ಶಿವಭಕ್ತಿ ಯನ್ನು ಪ್ರಜ್ವಲಿಸುವ ಅವಶ್ಯತೆ ಬಿದ್ದು ಸರ್ವಜ್ಞನು ರೂಢಗನ್ನಡದಲ್ಲಿ ತನ್ನ ವಚನಗಳನ್ನು ರಚಿಸಿದನೆಂದು ತೋರುತ್ತದೆ ಪುರಂದರದಾಸನು ವಿಜಯನಗರದಲ್ಲಿದ್ದಂತೆಯೂ ೧೫೬೪ ರಲ್ಲಿ ವೈಕುಂಠ ವಾಸಿಯಾದಂತೆಯೂ ಕಿಟೆಲ್ ಪಂಡಿತರು ನಿಶ್ಚಯಿಸಿದ್ದಾರೆ.[2] ಸರ್ವಜ್ಞನು ಇವನ ಸಮಕಾಲದವ ನಿದ್ದರೆ ೧೬ನೆಯ ಶತಮಾನದ ಕವಿಯೆಂದು ಹೇಳಲಿಕ್ಕೆ ಅಡ್ಡಿ ಇರುವದಿಲ್ಲ.

(೪) ಸರ್ವಜ್ಞನ 'ತ್ರಿಪದಿ'ಗಳನ್ನು ಭಾಷಾದೃಷ್ಟಿಯಿಂದ ನೋಡಿದರೆ ಅವು ಹಳೆಗನ್ನಡ ಪ್ರಯೋಗಗಳು ಕಡಿಮೆಯಾಗಿ ಹೊಸಗನ್ನಡ ಪ್ರಯೋಗಗಳು ಹೆಚ್ಚುತ್ತಿದ್ದ ಮಧ್ಯಕಾಲದಲ್ಲಿ ರಚಿಸಲ್ಪಟ್ಟಂತೆ ತೋರುತ್ತದೆ.ಇ ವನ ವಚನಪ್ರಾಸದಲ್ಲಿ ಹಳೆಗನ್ನಡ ಹೊಸಗನ್ನಡ 'ರ' ಕಾರಗಳು ಮಿಶ್ರವಾಗಿ ಪ್ರಯೋಗವಾಗಿರುವದರಿಂದಲೂ ಹಿಂದುಸ್ತಾನಿ, ಮರಾಠಿ ಮುಂತಾದ ಪರಭಾಷೆಯ ಶಬ್ದಗಳು ಇವನ ಪದ್ಯಗಳಲ್ಲಿ ಬಂದಿರುವದಿಲ್ಲವಾದ್ದರಿಂದಲೂ ಇವನು ಸುಮಾರು ೩೦೦—೪೦೦ ವರ್ಷಗಳ ಪೂರ್ವದ ಕವಿಯೆಂದು ಜನಜನಿತವಿರುವದರಿಂದಲೂ ೧೬ನೆಯ ಶತಮಾನದ ಕವಿಯೆಂದು ಹೇಳಲಿಕ್ಕೆ ವಿಶೇಷ ಆಕ್ಷೇಪ ತೋರುವದಿಲ್ಲ. ರ, 'ಱ' ಕಾರಗಳ ಮಿಶ್ರಪ್ರಾಸವನ್ನು ತೋರಿಸುವದಕ್ಕೆ ಅವನ ಗ್ರಂಥದಿಂದ ಒಂದೆರಡು ಉದಾಹರಣೆಗಳನ್ನು ಮಾತ್ರವೇ ಇಲ್ಲಿ ಕೊಟ್ಟದ್ದೇವೆ.'

ಅರಿವನರಿಯದ ಗುರುವು ಪರವನರಿಯದ ಶಿಷ್ಯ ।
ನೆರೆಯ ಱಿಯದೋದು ಇವು ಮೂರು ಅಂಧಕನು ॥
ತಿರುಗಾಡಿದನ್ತೆ ಸರ್ವಜ್ಞ ॥

ಗುರುರಾಯನುಪದೇಶ ದೊರಕೊಂಡ್ಡೆತಾದಡೇ ।
ಪಱಿವುದು ಪಾಪವೆನ್ತೆನಲು? ವಜ್ರದಿಂ ।
ಗಿಱಿಯು ಹೊಯಿದನ್ತೆ! ಸರ್ವಜ್ಞ ॥

---

1 R. G. Bhandarker's Vishnavism Shavism page 90—98.

2 Kittle's Nagavarma Prosody Introduction page 62.

ಹಿರಿಯಬೊಮ್ಮನು ಕೆಟ್ಟ ಕಿರಿಯಹರಿತಾಕರಿಗ !
ಪುರಹರನು ಶುದ್ಧದವಳಕನಿವರುಗಳು ।
ಸರಿಯೆ ದೈವಕ್ಕೆ? ಸರ್ವಜ್ಞ*॥

(೪) ಇವನ ಗ್ರಂಥದಲ್ಲಿ, 'ರಾಜನೀತಿ ಪದ್ಧತಿ' ಎಂಬದೊಂದು ಅಧ್ಯಾಯವಿರುವದು. ಇದರಲ್ಲಿ ಹೇಳಿರುವ ಅರಸು, ಮಂತ್ರಿಗಳ ಲಕ್ಷಣಗಳು ವಿಜಯನಗರಾದಿ ಅರಸರು ಆಳುತ್ತಿದ್ದ ಕಾಲವನ್ನು ಜ್ಞಾಪಕಕ್ಕೆ ತರುತ್ತವೆ. ಈ ಕವಿಯು ಕಿಟಲ್, ರೈಸ್, ಮುಂತಾದವರು ಹೇಳುವಂತೆ ವಿಜಾಯತಿಯವರ ಚಕ್ರಾಧಿಪತ್ಯವು ನಡೆಯುತ್ತಿದ್ದ ೧೪ನೆಯ ೧೫ನೆಯ ಶತಮಾನದಲ್ಲಿ ಬದುಕಿದ್ದೇ ನಿಜವಾಗಿದ್ದರೆ ಸ್ವಯಂ ಪ್ರಭುತ್ವವುಳ್ಳ ರಾಜರ ಲಕ್ಷಣಗಳನ್ನು ವ್ಯಕ್ತಗೊಳಿಸುವ ಪದ್ಯಗಳು ಇವನ ಗ್ರಂಥದಲ್ಲಿ ದೊರಕುತ್ತಿದ್ದವೇನೋ ಹೇಳುವದು ಕಷ್ಟವಾಗಿದೆ.

(೬) ಇದಲ್ಲದೆ ಇವನು ಬರೆದ ದಾನಪದ್ಧತಿಯಲ್ಲಿ—

ಬಿದಿರೆ ಅಂದಣವಕ್ಕು ಬಿದಿರೆ ಸತ್ತಿಗೆಯಕ್ಕು ।
ಬಿದಿರಿಂದ ಸಕಲ ಪದವಕ್ಕು ಲೋಕದೊಳು ।
ಬಿದಿಗದವಕೆಟ್ಟ ಸರ್ವಜ್ಞ* ॥

* From about the 16th century Medieaval Kannada gradually got the character of the language of the present day or of Modern Kannada, which transition as seen especially in the poetry of the Vishnavas that dates and previals from that time. Several ancient verbs and nouns fell into disuse, the letter '*r*' began to be discarded at least so far as regards its proper position in alliteration, words borrowed from Marathi and Hindustani came into use, more frequent omission of suffixes took place, etc. Kittle's Can. Eng. Dic. preface page 4.

* ಸರ್ವಜ್ಞನ ಪದ್ಯಗಳಲ್ಲಿ ಹಳೆಗನ್ನಡದ ಱ, ಳಕಾರಗಳು ಅನೇಕ ಕಡೆಗಳಲ್ಲಿ ಪ್ರಯೋಗವಾಗಿದ್ದು ಇದಕ್ಕೆ ಬೇಕಾದ ಮೊಳೆಗಳು ತಕ್ಕ ಸಮಯದಲ್ಲಿ ದೊರೆಯದೆ ಹೋದ್ದರಿಂದಲೂ ಸಾಧಾರಣ ಜನರಿಗೆ ತಿಳಿಯದೆ ಇದ್ದು ಇವುಗಳನ್ನು ಓದಿಕೊಳ್ಳುವದಕ್ಕೆ ಎಡಚಾಗುವದರಿಂದಲೂ ಅವುಗಳನ್ನು ಈ ಆವೃತ್ತಿಯಲ್ಲಿ ಬಿಟ್ಟು ಹೊಸಗನ್ನಡ 'ರ' 'ಳ' ಕಾರಗಳನ್ನೇ ಪ್ರಯೋಗಿಸಿದ್ದೇವೆ. ಇದರ ವ್ಯತ್ಯಾಸವನ್ನು ತಿಳಿಯಲಪೇಕ್ಷಿಸುವವರು ಕಿಟಲ್‌ಕೃತ ಕನ್ನಡ–ಇಂಗ್ಲಿಷು ನಿಘಂಟಿನಲ್ಲಿ ಕೊಟ್ಟ ಸರ್ವಜ್ಞನ ಪದ್ಯಗಳನ್ನು ನೋಡಿಕೊಳ್ಳಬಹುದು.

* ಪದ್ಯ ೫೯೦

ಎಂಬದೊಂದು ಶ್ಲೇಷಾಲಂಕಾರದ ಪದ್ಯವಿರುವದು. ಇದು ಕೈಬರಹದ ಹಾಗೂ ಎಲ್ಲ ಮುದ್ರಿತ ಪ್ರತಿಗಳಲ್ಲಿ ಏಕಪ್ರಕಾರವಾಗಿ ದೊರೆಯುವದರಿಂದ ತತ್ಕೃತವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ಪದ್ಯದಿಂದ ಕವಿಯು ಬಿದರಿನಿಂದ ಮಾಡಿದ ಕೊಡೆಗಳನ್ನು ಸೂಚಿಸುತ್ತಾನೆ. ಇದ ರಿಂದ ಆತನು ಪರದೇಶಸ್ಥರಾದ ವಿಲಾಯತಿಯವರ ಕೈಗಾರಿಕೆಯ ಸಾಮಾನುಗಳು ವಿಶೇಷ ಪ್ರಚಾರಕ್ಕೆ ಬರುವ ಪೂರ್ವದಲ್ಲಿದ್ದವನಾಗಿರಬೇಕೆಂದು ಅನುಮಾನಿಸುವದಕ್ಕೆ ಅವಕಾಶ ದೊರೆಯುತ್ತದೆ.

(೭) ಇದಲ್ಲದೆ ಅವನ ಗ್ರಂಥದಲ್ಲಿ ಅಡ್ಡ, ತಾರ, ಕಾಸು, ರಗ, ಹಣ, ಇಪ್ಪಣ, ಬೇಳೆ ಮುಂತಾದ ಪೂರ್ವದ ನಾಣ್ಯಗಳ ಹೆಸರು ಬಂದಿದ್ದು ಪೈ, ದುಡ್ಡು, ಆಣೆ, ಚವಲಿ, ಪಾವಲಿ, ರೂಪಾಯಿ ಮುಂತಾದವುಗಳಲ್ಲಿ ಯಾವ ಹೆಸರೂ ಕಾಣುವದಿಲ್ಲವಾದ್ದರಿಂದ ಇವನು ಇಂಗ್ಲಿಷ ಇಲ್ಲವೆ ಕಂಪನಿ ಸರಕಾರದ ನಾಣ್ಯಗಳು ವಿಶೇಷಪ್ರಚಾರದಲ್ಲಿ ಬರುವಪೂರ್ವದಲ್ಲಿದ್ದವನಾಗಿರಬೇಕೆಂದು ಭಾಸ ವಾಗುತ್ತದೆ.

ಇವೇ ಮುಂತಾದ ಕಾರಣಗಳಿಂದ ಹಿಂದೆಹೇಳಿದ ಸಂಶಯಾಸ್ಪದವಾದ ಮೂರುಕಾಲಗಳಲ್ಲಿ ೧೬ನೆಯ ಶತಮಾನವೇ ಕವಿಯ ಕಾಲವೆಂದು ತಿಳಿಯುವದು ಉತ್ತಮ ಪಕ್ಷವಾಗಿ ತೋರುತ್ತದೆ.

## ೬. ಪದ್ಯಸಂಗ್ರಹವಿಚಾರ.

ಸರ್ವಜ್ಞನ ಪದ್ಯಗಳನ್ನೊಳಗೊಂಡ ವಚನಸಂಗ್ರಹವೇ ಸರ್ವಜ್ಞಗ್ರಂಥ ವೆನಿಸುವದು. ಕನ್ನಡಿಗರಲ್ಲಿ ಹೆಸರುಗೊಂಡಿರುವ ಈ ವಚನ ಸಂಗ್ರಹಕ್ಕೆ "ಸರ್ವಜ್ಞನ ತ್ರಿಪದಿ" ಎಂತಲೂ ಸರ್ವಜ್ಞಮೂರ್ತಿ ವಚನ"ಗಳೆಂತಲೂ ಹೆಸರು. ಇದಕ್ಕೆ "ಸರ್ವಜ್ಞನ ಪದ್ಯ"ಗಳೆಂತಲೂ 'ಸರ್ವಜ್ಞನ ನೀತಿ ವಚನ'ಗ ಳೆಂತಲೂ ಕೆಲವರು ಅನ್ನುವರು. ಸರ್ವಜ್ಞನ ಐತಿಹ್ಯದ ಬಗ್ಗೆ ನಮಗೆ ಅನೇಕ ಸಂದೇಹಗಳಿದ್ದಾಗ್ಯೂ ಇಂಥ ಹೆಸರಿನ ಕವಿಯೊಬ್ಬನು ಒಮ್ಮೆ ಕರ್ನಾಟಕದಲ್ಲಿ ಆಗಿಹೋದನೆಂಬೀವಿಷಯದಲ್ಲಿ ಮಾತ್ರ ತಿಲಾಂಶವೂ ಸಂಶಯವಿರುವಂತಿಲ್ಲ. ಪ್ರತಿಪದ್ಯದ ಕೊನೆಯಲ್ಲಿಯೂ ಬರುವ ಅವನ ಮುದ್ರಿಕೆಯೇ ಇದಕ್ಕೆ ಉತ್ತಮ ಪ್ರಮಾಣವಾಗಿದೆ. ಹಿಂದೆ ಹೇಳಿದಂತೆ ಕನ್ನಡ ಕವಿಗಳು ಸಾಧಾರಣವಾಗಿ ಇಷ್ಟ ದೇವತೆಗಳಿಗೆ ತಮ್ಮ ಕಾವ್ಯಗಳನ್ನು ಅರ್ಪಣೆ ಮಾಡಿರಲು ಸರ್ವಜ್ಞನು ಮಾತ್ರ ತನ್ನ ಹೆಸರಿನಲ್ಲಿ ಪದ್ಯಗಳನ್ನು ಪೂರ್ತಿಗೊಳಿಸಿರುವದಕ್ಕೆ ಕಾರಣವೇನು? ಎಂಬ ಪ್ರಶ್ನೆಯು ಇಲ್ಲಿ ಹುಟ್ಟುತ್ತದೆ. ತನು-ಮನಗಳಿಂದ ಹಗಲಿರುಳು ಕರ್ನಾಟಕವನ್ನು

ಸೇವಿಸಿದ ಸರ್ವಜ್ಞನ ಹೆಸರನ್ನು ಶಾಶ್ವತಗೊಳಿಸುವ ಕಾರ್ಯಭಾಗವು ಕನ್ನಡಿಗರನ್ನು ಕೂಡಿದ್ದಗೂ "ಖಂಡಪರಶುವಿನ ವರಪುತ್ರ"ನಾಗಿ ತಾನು ಮಾಡಿದ ಖಂಡನೆಯ ನಿಮಿತ್ತ ಅವರು ಬೇಸರಗೊಂಡು ಒಂದು ತುಂಡುಕಲ್ಲಿನ ಮೇಲಾದರೂ ತನ್ನ ಹೆಸರನ್ನು ಬರೆದುಳಿಸಲಿಕ್ಕಿಲ್ಲವೆಂದು ಮುಂತಿಳಿದು ತಾಗೆಲೆಗಳಂತೆ ತನ್ನ ವಚನಗಳನ್ನು ಸುರಿದು ಅವುಗಳಲ್ಲಿ ಯಾವದೊಂದು ಪದ್ಯವು ಕನ್ನಡಿಗರ ಕೈಗೆ ಬಿದ್ದರೂ ಅದರಿಂದ ತನ್ನ ಮೂರ್ತಿತ್ವವೂ ಅವರ ಕೃತಘ್ನತೆಯೂ ಏಕಕಾಲಕ್ಕೆ ಅವರ ಜ್ಞಾಪಕಕ್ಕೆ ಬರಲೆಂದು ಪ್ರತಿಪದ್ಯದ ಅಂತ್ಯದಲ್ಲಿಯೂ ತನ್ನ ಹೆಸರಿನದೊಂದು ಸ್ತಂಭವನ್ನು ನೆಟ್ಟಿದ್ದಾನೆಂದು ಹೇಳಬಹುದು. ಇದಕ್ಕೆ ಪ್ರತಿಯಾಗಿ ಕೆಲವರು, ಸರ್ವಜ್ಞನು ಕನ್ನಡ ಕವಿಗಳ ಸಾಮಾನ್ಯ ಸೂತ್ರಕ್ಕೆ ಎಂದಿಗೂ ಅಪವಾದವೆನಿಸನು. ಅವನು ಇತರ ದೇವತೆಗಳನ್ನು ಈಡಾಡಿದರೂ ತಾನು ರಚಿಸಿದ ವಚನಗಳನ್ನು ತನ್ನ ಇಷ್ಟದೇವತೆಯಾದ "ಒಬ್ಬನೇ ದೇವರ" ಹೆಸರಿಗೆ ಅಂದರೆ "ಸರ್ವಜ್ಞ"ನಿಗೆ ಸಮರ್ಪಣೆ ಮಾಡಿರುವನು. ಅದು ಕಾರಣ ತನ್ನ ಪದ್ಯಗಳನ್ನೋದುವ ಪ್ರತಿಯೊಬ್ಬನು ಪ್ರತಿಸಾರೆ ಕವಿಯಾದ ಸರ್ವಜ್ಞನನ್ನಲ್ಲ ಸರ್ವೇಶ್ವರನಾದ 'ಸರ್ವಜ್ಞನ' ನಾಮಸ್ಮರಣೆಯನ್ನು ಮಾಡಲೆಂದು ಈ ಮುದ್ರಿಕೆಯನ್ನಿಟ್ಟಿರುವನೆಂದು ಹೇಳುವರು. ಬೇರೆ ಕೆಲವರು, ಸರ್ವಜ್ಞನು ಇತರರಿಗೆ ಬುದ್ಧಿ ಹೇಳಿ ತನಗೆ ಹೇಳಿಕೊಳ್ಳದೆ ಹೋಗುವದು ಕಾಪಟ್ಯವೆಂದು ತಿಳಿದು ಪ್ರತಿಪದ್ಯದ ಅಂತ್ಯದಲ್ಲಿ ತನ್ನ ಹೆಸರನ್ನು ಹೇಳಿಕೊಂಡಿರುವನೆಂದು ಅಭಿಪ್ರಾಯಪಡುವರು. ಇವರು ಹೇಳುವ ಇಂಥ ಉದಾತ್ತ ಉದ್ದೇಶಗಳು ಕವಿಯ ಗುಣಸ್ವಭಾವಕ್ಕೆ ಒಪ್ಪುತ್ತಿದ್ದರೂ ಸರ್ವಜ್ಞನ ಮನಸ್ಸಿನಲ್ಲಿ ಈ ಯೋಚನೆಗಳಿದ್ದವೇನೋ ಹೇಳುವದು ಕಷ್ಟವಾಗಿದೆ. ಹೇಗೆಯೇ ಇರಲಿ ನಮಗೆ ದೊರೆತ ಒಂದು ಪ್ರತಿಯಲ್ಲಿ ಪ್ರತಿಪದ್ಯವೂ ಸರ್ವಜ್ಞನೆಂಬದರ ಬದಲಿಗೆ "ಪರಮಾರ್ಥವೆಂದು" ಮುಗಿಯುವದಲ್ಲದೆ ಗ್ರಂಥಕ್ಕೂ "ಪರಮಾರ್ಥಿಕೆ" ಎಂದು ಹೆಸರಿರುವದು. ಸರ್ವಜ್ಞನ ಮುಕ್ಕಾಲು ವಚನಗಳು ಜ್ಞಾನ, ಭಕ್ತಿ, ವೈರಾಗ್ಯ, ನೀತಿ ಮುಂತಾ ಪಾರಮಾರ್ಥಿಕ ವಿಷಯಗಳನ್ನು ಕುರಿತು ರಚಿತವಾಗಿರುವದರಿಂದ ಈ ಹೊಸ ಹೆಸರು ಬಂದಿರುವದಲ್ಲದೆ ಇದು ಕವಿಯ ಬೇರೊಂದು ಮುದ್ರಿಕೆಯನ್ನು ಇಲ್ಲವೆ ಬೇರೊಬ್ಬ ಕವಿಯ ಹೆಸರನ್ನು ಸೂಚಿಸುವದಕ್ಕೆ ಇಟ್ಟ ಹೆಸರಲ್ಲ. ಇದುವರೆಗೆ ಸರ್ವಜ್ಞನ ಅಂಕಿತದಿಂದ ಪ್ರಚಾರದಲ್ಲಿರುವ ಪದ್ಯಗಳು ಸುಮಾರು ೧೦೦೦

ವೆಂದು ಹೇಳಬಹುದು. ಇವು ಕೆಲವು ಪ್ರತಿಗಳಲ್ಲಿ ಸಾವಿರಕ್ಕೆ ಅಧಿಕವಾಗಿಯೂ ಕೆಲವು ಪ್ರತಿಗಳಲ್ಲಿ ಸಾವಿರಕ್ಕೆ ಕಡಿಮೆಯಾಗಿಯೂ ಇರುವವು. ನಾವು ಕೊಟ್ಟ ಗ್ರಂಥ ಶುದ್ಧೀಕರಣ ಪಟ್ಟಿಯಲ್ಲಿ ಸಂಗ್ರಹಸಂಖ್ಯೆಯು ೨೨೫ರಿಂದ ೧೩೦೦ರ ವರೆಗೆ ಹೋಗುತ್ತದೆ. ಇದರಿಂದ ಮೂಲ ಪದ್ಯಗಳು ೨೨೫ ಇದ್ದು ಉಳಿದವುಗಳೆಲ್ಲ ಪ್ರಕ್ಷಿಪ್ತಗಳೆಂದು ಯಾರೂ ತಿಳಿಯಲಾಗದು. ಆಯಾ ಜನರು ತಮ ತಮಗೆ ಸಿಕ್ಕಿ ದಷ್ಟು ಪದ್ಯಗಳನ್ನು ಸಂಗ್ರಹಿಸಿರುವದರಿಂದ ಹೀಗಾಗಿರುವದಲ್ಲದೆ ಬೇರೊಂದು ಕಾರಣವಿಲ್ಲ. ಅತ್ತಕಡೆ ಲಕ್ಕಿಸದೆ ಸುಮ್ಮನೆ ಹೇಳಿದ ೧೩೦೦ ಪದ್ಯಗಳಲ್ಲಿ ಎಲ್ಲವೂ ಸರ್ವಜ್ಞಕೃತವೆಂದು ಹೇಳಲಾಗದು. ಇದು ಛಂದೋನಿಯಮ. ಭಾಷಾ ಪ್ರಯೋಗ, ಕವಿವಿಚಾರ ಮುಂತಾದವುಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಕವಿಕೃತ ಪದ್ಯಗಳನ್ನು ತಿಳಿಯುವದಕ್ಕೆ ಮುಂದೆ ಸೂಚನಾ ಚಿನ್ಹಗಳಿಂದ ಕೊಟ್ಟ ಸೂತ್ರಗಳು ಈ ವಿಷಯದಲ್ಲಿ ತಕ್ಕಮಟ್ಟಿಗೆ ಸಹಾಯಕರವಾಗಿದ್ದರೂ ಇವು ಅಪವಾದವಿಲ್ಲದ ಸ್ಥಿರವಾದ ನಿಯಮಗಳೆಂದು ಯಾರೂ ತಿಳಿಯಲಾಗದು. ಸರ್ವಜ್ಞನ ವಚನ, ಭಾಷೆ, ಉದ್ದೇಶ ಮುಂತಾದವುಗಳನ್ನು ಲಕ್ಷಿಸಿದರೆ ಇವನ 'ಗುರುಪದ್ಧತಿ' 'ದಾನ ಪದ್ಧತಿ' 'ಜಾತಿಪದ್ಧತಿ' ಮುಂತಾದ ಕೆಲವು ಪದ್ಧತಿಗಳಲ್ಲಿ ಬರುವ ವಚನಗಳು ಏತತ್ಕೃತವೆಂದು ನಿಸ್ಸಂದೇಹವಾಗಿ ಹೇಳಬಹುದು ವಿಶೇಷವಾಗಿ 'ಜ್ಯೋತಿಷ ಪದ್ಧತಿ'ಯಲ್ಲಿರುವ ಹೆಚ್ಚಾದ ವಚನಗಳು ಕಟ್ಟು ಒಡೆಯದೆ ಹಾಗೆಯೇ ಉಳಿದಿರುವದರಿಂದ ಸರ್ವಜ್ಞನ ಭಾಷಾಶೈಲಿಯನ್ನು ಗೊತ್ತು ಹಚ್ಚುವದಕ್ಕೆ ಇದೊಂದು ಬೀಗದಕೈಯೆಂದು ಹೇಳಲಿಕ್ಕೆ ಅಭ್ಯಂತರ ವಿಲ್ಲ. ಸುಲಭಕಾವ್ಯದಲ್ಲಿ ರಚಿಸಲ್ಪಟ್ಟು ಪಾಮರ ರಂಜಕವಾಗಿರುವ ಎಲ್ಲ ಕಾವ್ಯ ಗ್ರಂಥಗಳಿಗೂ ಈ ಗಂಡಾಂತರವು ತಪ್ಪಿರುವದಿಲ್ಲ. ತುಕಾರಾಮನ ಅಭಂಗ ಗಳೂ[1] ವೇಮನನ ಗೀತಗಳೂ ಇದೇ ರೀತಿಯಿಂದ ಅಭಿವೃದ್ಧಿಯಾಗಿವೆ ಹೀಗಿ ದ್ದರೂ ಈ ಮಿಶ್ರವಚನಗಳಿಂದ ಕವಿಯ ಮುಖ್ಯ ಸ್ವರೂಪದಲ್ಲಿ ಮಾತ್ರ ಏನೂ ಬದಲಾವಣೆಯಾಗಿರುವದಿಲ್ಲವೆಂದು ಹೇಳಬೇಕು. ಸರ್ವಜ್ಞನ ವಚನಗಳಲ್ಲಿ ನೂರಾರು ಪ್ರಕ್ಷಿಪ್ತಗಳಿದ್ದರೂ ಜಾತಿಯನ್ನು ಸ್ಥಿರಪಡಿಸುವ, ಇಲ್ಲವೆ ಮೂರ್ತಿ ಪೂಜೆಯನ್ನು ಪ್ರೋತ್ಸಾಹಪಡಿಸುವ ಇಲ್ಲವೆ ಖಂಡಿತವನ್ನಗಲಿ ಹೊತ್ತುಬಂದಂತೆ ಕೊಡೆ ಹಿಡಿಯುವ ಸ್ವಭಾವವನ್ನು ಹೊಗಳುವ ಒಂದು ಪದ್ಯವನ್ನಾದರೂ ಸೇರಿ

---

1. R. G. Bhandarker's Vishnavism Shaivism page 94.

ಸುವದಕ್ಕೆ ಇದು ವರೆಗೆ ಯಾವನೂ ಧೈರ್ಯಪಟ್ಟಿರುವದಿಲ್ಲ. ಇದರಿಂದ ಸರ್ವ ಜ್ಞನ ಶರೀರದಲ್ಲಿ ವೃದ್ಧಿಕ್ಷಯಗಳುಂಟಾಗಿದ್ದರೂ ಅವನ ಅಂತರಾತ್ಮವು ಮಾತ್ರ ಇದ್ದಂತೆ ಉಳಿದಿರುವದೆಂದು ಹೇಳಬೇಕು. ಕೆಲವು ಹಸ್ತಲಿಖಿತಗಳಲ್ಲಿ ದೊರೆ ಯುವ ಹೊಸ ಪದ್ಯಗಳನ್ನು ಬಿಟ್ಟು ಕೇವಲ ಹಳೆ ವಚನಗಳ ಸಂಖ್ಯೆಯು ಸುಮಾರು ಆರೆಂಟು ನೂರು ಆಗಬಹುದಷ್ಟೆ. ಇದು ಮುಂದೆ ಮುದ್ರಣ ಗ್ರಂಥ ಗಳನ ೧೦೦೦ ರಕ್ಕೆ ಮುಟ್ಟಿರುವದರಿಂದ ಸಂಗ್ರಹ ಮಾಡಿದ ಸರ್ತಿಗೊಮ್ಮೆ ನಾಲ್ಕಾರು ನೂರು ಹೊಸ ಪದ್ಯಗಳು ಕೂಡತ್ತ ಹೋಗಿರುವವೆಂದು ತಿಳಿದು ಬರುತ್ತದೆ. ಸರ್ವಜ್ಞನ ಎಲ್ಲ ತರದ ಯೋಚನೆಗಳನ್ನು ೪-೫ ನೂರು ವಚನ ಗಳಲ್ಲಿ ಸಂಪೂರ್ಣವಾಗಿ ಹೇಳಬಹುದಾಗಿದ್ದರೂ ಅವನ ಗ್ರಂಥವು ಈ ಪರಿ ಯಾಗಿ ಬೆಳೆದಿರುವದು ಆಶ್ಚರ್ಯವಲ್ಲವೆ? ಸರ್ವಜ್ಞನೆಂದರೆ ಎಲ್ಲವನ್ನು ಬಲ್ಲವ ನೆಂದು ಅರ್ಥವಾಗುವದರಿಂದ ಯಾವ ವಿಷಯವನ್ನು ಸೇರಿಸಿದರೂ ಒಳಕೊ ಳ್ಳುವದೆಂದೂ ಇಂಥ ಸಂದರ್ಭವನ್ನು ಕಳೆಯುಕೊಂಡರೆ ಕೇವಲ ಮೂರ್ಖತನ ವೆಂದೂ ಕನ್ನಡಿಗರು ಕಾಲಕಾಲಕ್ಕೆ ಹೊಸ ಹೊಸ ಪದ್ಯಗಳನ್ನು ಸೇರಿಸುತ್ತ ಸರ್ವಜ್ಞನ ಉದ್ದೇಶವನ್ನು ಕೊನೆಗಾಣಿಸಲೆತ್ನಿಸಿದಂತೆ ತೋರುತ್ತದೆ. ಅದರಿಂದ ಮೊನ್ನೆ ಮೊನ್ನೆ ನಡೆದ ಮಹಾ ಯುದ್ಧವನ್ನೂ ಗಾಂಧಿ, ತಿಲಕಾದಿ ಮಹಾಪುರು ಷರ ತತ್ವಗಳನ್ನೂ ಕುರಿತು ಹೇಳುವ ಹತ್ತಿಪ್ಪತ್ತು ಪದ್ಯಗಳು ಈಗಲೇ ಸಿದ್ಧವಾ ಗಿವೆ. ಇದಲ್ಲದೆ ಬೆಳಗಾವಿ ತಾಲೂಕಿಗೆ ಸೇರುವ ಸವದತ್ತಿಯ ಸಮೀಪದ ಗ್ರಾಮ ದಲ್ಲಿರುವವನೊಬ್ಬನು ಜಾರ ಸ್ತ್ರೀಯರ ಒಯ್ಯಾರವನ್ನು ವರ್ಣಿಸುವ ನೂರು ಪದ್ಯಗಳನ್ನು ಮಾಡಿರುವನು. ಇವು ಮುಂದೆ 'ಸ್ತ್ರೀಯರ ಪದ್ಧತಿ'ಯಲ್ಲಿಯೂ ಯುದ್ಧವನ್ನು ಕುರಿತಾದ ಪದ್ಯಗಳು 'ಕಾಲಜ್ಞಾನ ಪದ್ಧತಿ' ಯಲ್ಲಿಯೂ ಸೇರತ ಕ್ಕವುಗಳೆಂದು ತಿಳಿಯತಕ್ಕದ್ದು.

ನಮಗೆ ದೊರೆತ ಎಲ್ಲ ಪ್ರತಿಗಳನ್ನು ಹುಡುಕಿ ಸಾಧ್ಯವಿದ್ದಮಟ್ಟಿಗೆ ನಾವು ಮಾಡಿದ ಸಂಗ್ರಹ ಸಂಖ್ಯೆಯು ಸುಮಾರು ೨೦೦೦ಕ್ಕೆ ಮುಟ್ಟುವದಷ್ಟೆ. ಹೀಗಿ ದ್ದರೂ ಸರ್ವಜ್ಞನು ಒಂದು ಕೋಟಿ ಪದ್ಯಗಳನ್ನು ರಚಿಸಿದಂತೆಯೂ ಕೆಲವರಲ್ಲಿ, ೭ ಕೋಟಿ ಪದ್ಯಗಳನ್ನು ರಚಿಸಿದಂತೆಯೂ ಹೇಳಿಕೆಯುಂಟು. ಹುಡುಕಿದ ಹಾಗೆಲ್ಲ ಹೊಸ ಹೊಸ ಸರ್ವಜ್ಞಗಳು ದೊರೆಯುತ್ತಹೋಗುವದರಿಂದ ಇವನ ಗ್ರಂಥಕ್ಕೆ ಅಂತ್ಯವಿಲ್ಲವೆಂಬುದೇ ಈ ಹೇಳಿಕೆಯ ತಾತ್ಪರ್ಯವಾಗಿರಬಹುದು. ಆದರೆ

" ಜ್ಯೋತಿರ್ಮಯ ಶಾಂಭವೀಜ್ಞಾನಧೀಕ್ಷಾಬೋಧೆ " ಯೆಂಬ ವೀರಶೈವ ಗ್ರಂಥದಲ್ಲಿ ಉಲ್ಲೇಖವಿರುವಂತೆ* ' ಎರಡೆಂಭತ್ತು ಕೋಟಿ ವಚನಗಳು ' ಇರುವದು ಸತ್ಯವಾದರೆ ಇದರಲ್ಲಿ ಸರ್ವಜ್ಞನ ವಚನಗಳು ೧ ಕೋಟಿ ಇರುವದೇನಾಶ್ಚರ್ಯ? ಇವನ ವಚನಗಳ ಸರಿಯಾದ ಅಂಕಿಯನ್ನು ಹೇಳುವ ರೂಢಿಯ ವಚನವು ಹೀಗಿರುವದು !

> ಏಳು ಕೋಟಿಯೆ ಕೋಟಿ ಏಳು ಲಕ್ಷವೆ ಲಕ್ಷ ।
> ಏಳುಸಾವಿರದ ಎಪ್ಪತ್ತು ವಚನಗಳ ।
> ಹೇಳಿದನು ಕೇಳೊ ಸರ್ವಜ್ಞ ॥

ಸರ್ವಜ್ಞನು ಸ್ವತಃ ತನ್ನ ವಚನಗಳನ್ನು ಗ್ರಂಥರೂಪವಾಗಿ ಬರೆದಿಟ್ಟನೇನೋ ಹೇಳುವದು ಪ್ರಯಾಸ ಆತನೇ ಅಂದಾಗ ಕೇಳಿದವರು, ಅವರಿಂದ ಕೇಳಿದವರು, ಎಷ್ಟರ ಮಟ್ಟಿಗೆ ನೆನಪಿಟ್ಟುಕೊಳ್ಳಬಹುದಾದರೋ ಅಷ್ಟು. ಪದ್ಯಗಳಲ್ಲಿ ಕೂಡ ಕೆಲವು ಮಾತ್ರವೇ ಸಿಕ್ಕಿವೆ. ಇವುಗಳಾದರೂ ಒಬ್ಬೊಬ್ಬರ ಬಾಯಲ್ಲಿ ಒಂದೊಂದು ತರವಾಗಿ ಪರಿಣಮಿಸಿಯವೆ. " ನಮಗೆ ಸಿಕ್ಕಿರುವ ಈ ೨೦೦೦ ಸರ್ವಜ್ಞಗಳು ಬಹು ಸ್ವಲ್ಪವಿದ್ದು ಇನ್ನೂ ಕಷ್ಟಪಟ್ಟರೆ ಕೆಲವು ನೂರು ಇಲ್ಲವೆ ಸಾವಿರ ವಚನಗಳು ದೊರೆಯಲೂ ಬಹುದು. ಹೀಗಿದ್ದರೂ ಕನ್ನಡ ದೇಶವನ್ನೆಲ್ಲ ಸುಟ್ಟು ಹುಡುಕಿದರೆ ಪದ್ಯಸಂಖ್ಯೆಯು ೭೭೭೭೭೭೭೦ಕ್ಕೆ ಮುಟ್ಟುವದೇನೋ ಹೇಳುವದು ಅಸಾಧ್ಯ. ಹೀಗಿರುವದೇ ನಿಶ್ಚಯವಾದರೆ ಸರ್ವಜ್ಞನ ಕೆಲಸವು ಲಕ್ಷದಲ್ಲಿ ಒಂದು ಪಾಲಾದರೂ ಆಗಿಲ್ಲವೆಂದು ಹೇಳಬೇಕು. ಸರ್ವಜ್ಞನ ಗ್ರಂಥವು ಬೆಳೆಯಲಿಕ್ಕೆ ಅವನ ವಚನಗಳು ಇಂತಿಷ್ಟೇ ಎಂದು ಕಟ್ಟುನಿಟ್ಟಿಲ್ಲದಿರುವದೇ ಒಂದು ಮುಖ್ಯಕಾರಣವಾಗಿದೆ. ಈ ವಿಷಯದಲ್ಲಿ ಒಮ್ಮೆ ನಿರ್ಣಯವಾದರೆ ತರುವಾಯದಲ್ಲಿ ದೊರೆಯುವ ನವೀನ ಪದ್ಯಗಳನ್ನು ಸೇರಿಸುವ ಅವಶ್ಯತೆಯು ಬೀಳಲಿಕ್ಕಿಲ್ಲ. ಅಧಿಕಾರಸ್ಥರು ಇಲ್ಲವೆ ಯಾವದೊಂದು ಸಂಸ್ಥೆಯವರು ಕೈ ಹಚ್ಚಿದ ಹೊರ್ತು ಇಂಥ ಕಾರ್ಯಗಳು ಸದ್ಯಕ್ಕೆ ಸಿದ್ಧಿಸಲಸಾಧ್ಯವಾಗಿದ್ದರೂ ' ಹನಿಗೆ ಹನಿಕೂಡಿ ಹಳ್ಳ ' ವೆಂಬ ಗಾದೆಯಂತೆ ಕೆಲವು ಕನ್ನಡಿಗರಾದರೂ ಇದಕ್ಕೆ ನಡುಕಟ್ಟನಿಂತರೆ, ಅವರ ಪರಿಶ್ರಮದ ಫಲವಾಗಿ ಇಂಥ ನಿರ್ಣಯವಾಗುವದರಲ್ಲಿ ಸಂದೇಹವಿಲ್ಲ.

---

* ಕವಿಚರಿತೆ ೩೦ಪುಟ ೧ ಪುಟ ೧೫೦.

ಹೊಸ ಸರ್ವಜ್ಞಗಳು ಹುಟ್ಟುವ ಟಂಕಸಾಲೆಗಳು ಅನೇಕವಾಗಿದ್ದರೂ ಅವೆಲ್ಲವುಗಳನ್ನು ಮೂರು ತರವಾಗಿ ವರ್ಗೀಕರಿಸಬಹುದು. ಹೇಗೆಂದರೆ—

(೧) ವಚನಾದಿಶಾಸ್ತ್ರ ಗ್ರಂಥಗಳು (೨) ಅನುಭವ, ಹೊಸವಿಚಾರಗಳು.

(೩) ಅನುಕೂಲ, ಅನುಕರಣ ಇತ್ಯಾದಿ.

(೧) ವಚನಶಾಸ್ತ್ರದಲ್ಲಿ ಬರುವ ಕೆಲವು ವಚನಗಳ ಮೊದಲಿನ ಎರಡು ಗೆರೆಗಳಲ್ಲಿ ಪ್ರಾಸವು ಯಾವಾಗಲು ಸಿದ್ಧವಿದ್ದು ಅರ್ಥವು ಹೋದುವಂತೆ ಮೂರನೆಯ ಗೆರೆಯಲ್ಲಿ ಒಂದು ಪ್ರಾಸವನ್ನು ಕೂಡಿಸಿ ಸರ್ವಜ್ಞನ ಮುದ್ರಿಕೆಯನ್ನಿಟ್ಟರೆ ಸಾಕು. ಅನೇಕ, 'ತ್ರಿಪದಿ' ಗಳಾಗುವ ಸಂಭವವಿದೆ. ಇಂಥ ವಚನಗಳು ಮೌನಪ್ಪಾದಿ ವಚನಕಾರರಲ್ಲಿ ಹೇರಳವಾಗಿ ದೊರೆಯುತ್ತವೆ. ಇದಲ್ಲದೆ ಕಟ್ಟು ಪ್ರಾಸವಿಲ್ಲದೆ ಬರೆಯಲ್ಪಟ್ಟ ವಚನ ರೂಪವಾಗಿರುವ ಅನೇಕ ತ್ರಿಪದಿ, ಚೌಪದಿಗಳು ಇದೇ ಮುದ್ರಿಕೆಯಿಂದ ಮುಗಿಯುವದರಿಂದ ಇವುಗಳೂ ಸರ್ವಜ್ಞಗಳೆಂದು ಎಣಿಕೆಯಾಗಿರುವವು.

ಉದಾ— ಬೇಡುವ ಬದುಕೆಲ್ಲ ಮೊದಲೆ ಮಾಡಿದ್ದಾನೆ ।
ಮಾಡಿ ವುಣ್ಣುವದಕ್ಕೆ ಮತಿಯ ಕೊಟ್ಟಿದ್ದಾನೆ ।
ಮಾಡದೆ ಬೇಡಿದರೆ ಕೊಡುವವರು ಯಾರು ಸರ್ವಜ್ಞ ॥

ಇದು ತ್ರಿಪದಿಯಲ್ಲದಿದ್ದರೂ ಸರ್ವಜ್ಞವೆಂದೇ ತಿಳಿಯಲ್ಪಟ್ಟಿದೆ. ಇಂಥ ಸರ್ವಜ್ಞಗಳು ಅನೇಕ.

(೨) ಆಯಾಕಾಲದ ಅನುಭವ, ಹೊಸವಿಚಾರ, ಗಾದೆ, ಮೊದಲಾದವುಗಳನ್ನು ಹೇಳುವಲ್ಲಿ ಹೊಸ ತರದ ಪದ್ಯಗಳುಂಟಾಗುವದಕ್ಕೆ ಮಾರ್ಗವಿದೆ. ನೋಡಿಪದ್ಯ—೧೩೩. ೧೩೪೪. ೧೪೦೨. ೧೪೦೭. ೧೦೪೦. ಇತ್ಯಾದಿ.

(೩) ಅನುಕೂಲ ಅನುಕರಣ—ಸರ್ವಜ್ಞನ ಸ್ವಭಾವಗುಣ ಮತಗಳಿಗೆ ವಿರೋಧವಾಗಿದ್ದರೂ ತಾವು ಮಾಡುವ ಕಾರ್ಯವು ಪ್ರಾಮಾಣ್ಯವೆಂದು ತೋರಿಸುವದಕ್ಕೆ ಸರ್ವಜ್ಞನ ಮುದ್ರಿಕೆಯನ್ನು ಅಪಹರಿಸಿರುವ ಪದ್ಯಗಳು ಅನೇಕ ಉಂಟು. ಆದರೆ ಇವು ಇನ್ನೂ ಗ್ರಂಥಸ್ಥವಾಗದೆ ಸರ್ವಜ್ಞನ ಗುಣ ಸ್ವಭಾವಕ್ಕೆ ವಿರುದ್ಧವಾಗಿರುವದರಿಂದ ಹೊರಗೆ ಉಳಿದವೆ. ಉದಾ—

ಹಿರಿಯುಗಿಡದಾ ಹೆಂಡ ಕರಿಯುಟಗರಿನಕಂಡ ॥
ಕರಿಗೋಳಿಯುಂಡವುಂಡವನರುಂಡವು ।
ಧರೆಯೊಳಗಧಿಕ ಸರ್ವಜ್ಞ ॥

ಅನುಕರಣಕ್ಕೆ ಉದಾ:— ಪದ್ಯ. ೭೮೧=೭೭೮, ೭೭೯— ಇತ್ಯಾದಿ

ಸರ್ವಜ್ಞನಂತೆ ಕಂಡದ್ದನ್ನಾಡಿ ಗುಣಾವಗುಣಗಳನ್ನು ಕುರಿತು ಟೀಕಿಸದೆ ಕೇವಲ ಮತದ್ವೇಷವನ್ನು ಹೊರಪಡಿಸುವ ಹೊಸಪದ್ಯಗಳನ್ನು ಅನುಕೂಲದೊಳಗೆ ಸೇರಿಸಬಹುದು.

ಉದಾ:- ಬ್ರಾಹ್ಮಣ ದ್ವೇಷಿಯಾದ ಲಿಂಗಾಯತನೊಬ್ಬನು-

ಎತ್ತು ಎಮ್ಮೆಗೆಬಾಲ ಕತ್ತೆ ಕುದುರೆಗೆ ಬಾಲ ।
ನೆತ್ತಿಯಲೊಂದು ಕಿರಿಬಾಲ ಈಶಾನ-।
ನೈತ್ತಣದು ಹೇಳಿ ಸರ್ವಜ್ಞ ॥

ಲಿಂಗಾಯಿತ ದ್ವೇಷಿಯಾದ ಬ್ರಾಹ್ಮಣನೊಬ್ಬನು-

ಎತ್ತು ಎಮ್ಮೆಗೆ ಗುದ್ದಿ ಮತ್ತೆ ಕೋಣಗೆ ಗುದ್ದಿ ।
ಉತ್ತಮದ ಗುದ್ದಿ ಎದೆಯಲ್ಲಿ ಈ ಕೋಣ ।
ನೆತ್ತಣದು ಹೇಳಿ ಸರ್ವಜ್ಞ ॥

ಸರ್ವಜ್ಞ ಗ್ರಂಥವು ಪದ್ಧತಿಗಳಾಗಿ ವಿಭಾಗಿಸಲ್ಪಟ್ಟಿದೆ. ಕೆಲವು ಗ್ರಂಥಗಳಲ್ಲಿ ೨೭ ಪದ್ಧತಿಗಳೂ ಕೆಲವುಗಳಲ್ಲಿ ೨೯ ಪದ್ಧತಿಗಳೂ ಮತ್ತೆ ಕೆಲವು ಪ್ರತಿಗಳಲ್ಲಿ ೩೩ ಪದ್ಧತಿಗಳೂ ಇವೆ. ಪದ್ಯಗಳನ್ನು ಸಂಗ್ರಹಿಸಿದವರು ತಮತಮಗೆ ಸರಿತೋರಿದಂತೆ ಅಧ್ಯಾಯಗಳನ್ನು ಮಾಡಿರುವದರಿಂದ ಪದ್ಧತಿಗಳ ಸಂಖ್ಯೆಯಲ್ಲಿ ಹೆಚ್ಚುಕಡಿಮೆಯಾಗಿದೆ ಈ ಆವೃತ್ತಿಯಲ್ಲಿ ಪದ್ಯಗಳು ಪಾರಮಾರ್ಥಿಕ, ನೈತಿಕ, ಲೌಕಿಕವೆಂಬ ಮೂರು ಮುಖ್ಯ ಭಾಗಗಳಾಗಿ ವಿಭಾಗಿಸಲ್ಪಟ್ಟು ಪ್ರತಿ ಒಂದು ಭಾಗಕ್ಕೆ ಕ್ರಮವಾಗಿ ೧೦, ೧೧, ೧೨, ಈ ಪ್ರಕಾರ ಪದ್ಧತಿಗಳು ಸೇರಿ, ಒಟ್ಟು ೩೩ ಪದ್ಧತಿಗಳಾಗಿವೆ. ಇವಕ್ಕೆ ಪೂರ್ವದಲ್ಲಿ ಅಚ್ಚಾದ ಗ್ರಂಥಗಳಲ್ಲಿ ಒಮ್ಮೆ ಬಂದ ಪದ್ಯಗಳು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಆಯಾ ಕಡೆಗಳಲ್ಲಿ ಮತ್ತೂ ಮತ್ತೂ ಬರುವವು. ಪದ್ಧತಿಗಳ ವಿಭಾಗವಾದರು ಯಾವದೊಂದು ಕ್ರಮವನ್ನನುಸರಿಸಿ ಮಾಡಲ್ಪಟ್ಟಿರುವದಿಲ್ಲ. ಸಿಕ್ಕ ಸಿಕ್ಕ ಪದ್ಯಗಳು ಸಿಕ್ಕ ಸಿಕ್ಕ ಪದ್ಧತಿಗಳಲ್ಲಿ ಸಮಾವೇಶವಾಗಿವೆ. 'ಸಾಕು ಸಾಕು' ಎಂಬ ಪದ್ಧತಿಯಲ್ಲಿ ಬರುವ ೩೭ ಪದ್ಯಗಳು ಆ ವಿಷಯಕ್ಕೆ ಹೇಗೆ ಒಪ್ಪುತ್ತವೆಂದು ಹೇಳುವದು ಕಷ್ಟ. ಕೈಬರಹದ ಪ್ರತಿಯಲ್ಲಿ "ಸಖಾಸಖ" "ವಿಧಿವಶ" ಪದ್ಧತಿ ಎಂಬದಾಗಿ ಇದ್ದದ್ದು "ಸಾಕುಸಾಕು" "ವಿಧಿವಾಸನೆ" ಪದ್ಧತಿಯೆಂತಾಗಿದೆ. ಇದಲ್ಲದೆ 'ಮೂರ್ಖರ' ಪದ್ಧತಿಯಲ್ಲಿ ಸಾಲಗಾರ, ಅಕ್ಕಸಾಲಿಗ ರಸವಾದ, ದಾನ ಮುಂತಾದ ವಿಷಯಗಳು ಹೇಳಲ್ಪಟ್ಟಿರುವದು ಆಶ್ಚರ್ಯವಾಗಿ ತೋರುತ್ತದೆ. ಪ್ರತಿ ಒಂದು ಪದ್ಧತಿಯಲ್ಲಿ ಬೇರೊಂದು ಪದ್ಧತಿಗೆ ಸೇರತಕ್ಕ ಪದ್ಯಗಳು ಕನಿಷ್ಟಪಕ್ಷಕ್ಕೆ ೧೦-೨೦ ಸಿಕ್ಕೇಸಿಗುವವು. 'ನೀತಿಪದ ತಿಯಲ್ಲಿ' ಸುಮಾರು ೩೦೦ ಪದ್ಯಗಳು ಸೇರುವಂತಿದ್ದರೂ ಮುದ್ರಣ ಗ್ರಂಥಗಳಲ್ಲಿ ೨೫ ಪದ್ಯಗಳು ಮಾತ್ರವೇ ಕಾಣುವವು. ಪದ್ಧತಿಯ ಮೇಲ್ಪರವು ಒಂದಿ

ದ್ದರೆ ಅದರೊಳಗಿರುವ ಪದ್ಯಗಳು ಮತ್ತೊಂದು ವಿಷಯವನ್ನು ಹೇಳುವವು. ಹೀಗಾಗಿ "ಜಾತಿವರ್ಗಪದ್ಧತಿ," "ಪ್ರಿಯುರಪದ್ಧತಿ," "ಶಿಖಾಮಣಿಪದ್ಧತಿ," ಮುಂತಾದ ಪದ್ಧತಿಗಳ ಹೆಸರುಗಳು ಈ ಆವೃತ್ತಿಯಲ್ಲಿ ಲೋಪವಾಗಿವೆ. ಒಂದೇ ವಿಷಯವನ್ನು ಹೇಳತಕ್ಕ ಪದ್ಯಗಳನ್ನೆಲ್ಲ ಒತ್ತಟ್ಟಿಗೆ ಕೂಡಿಸಿ ಅವುಗಳನ್ನು ಆಯಾ ಹೆಸರಿನ ಪದ್ಧತಿಗೆ ಸೇರಿಸಿ ವಿಷಯಾನುಸಾರವಾಗಿ ವಿಭಾಗಿಸಿದರೆ ಕವಿಯ ಅಭಿಪ್ರಾಯವು ಓದುವವರಲ್ಲಿ ಚನ್ನಾಗಿ ಮೂಡುವದೆಂದು ಈ ಆವೃತ್ತಿಯಲ್ಲಿ ವಿಷಯಕ್ರಮಸಂಧಾನವನ್ನು ಅನುಸರಿಸಿದ್ದೇವೆ. ಆದರೆ ಪದ್ಯಗಳು ಕೆಲವೆಡೆಯಲ್ಲಿ ಬಹುಮುಖವಾಗಿರುವದರಿಂದ ಇಂಥ ಪದ್ಯಗಳನ್ನು ಇಂಥ ಪದ್ಧತಿಯಲ್ಲಿಯೇ ಸೇರಿಸಬೇಕೆಂಬ ವಿಷಯದಲ್ಲಿ ಮತಾಂತರವಾಗಬಹುದು, ಇದು ಬಹು ಪರಿಶ್ರಮದ ಕೆಲಸವಿದ್ದರೂ ಕೆಲವೊಂದು ಸೂತ್ರವನ್ನನುಸರಿಸಿ ಇದನ್ನು ಮಾಡಿರುವೆವು. ಹೀಗಿದ್ದರೂ ದೃಷ್ಟಿದೋಷದಿಂದ ಒಂದೆರಡು ಪದ್ಯಗಳು ವಿಷಯಾಂತರವಾಗಿ ಬೇರೆ ಕಡೆಯಲ್ಲಿ ಸೇರಿ ಹೋಗಿವೆ.

ಕೈಬರಹದ ಕೆಲವು ಪ್ರತಿಗಳಲ್ಲಿ "ಪದ್ಧತಿ ಎಂಬದರ ಬದಲಾಗಿ 'ಗುಣವರ್ಗ'ವೆಂಬ ಶಬ್ದವು ಪ್ರಯೋಗವಾಗಿರುವದರಿಂದ ಪದ್ಧತಿ ವಿಭಾಗವು ಸ್ವತಃ ಸರ್ವಜ್ಞನದೋ ಬೇರೊಬ್ಬರದೋ ಎಂದು ಸಂದೇಹ ಉಂಟಾಗುತ್ತದೆ. ಇಲ್ಲಿ ಕೆಲವರು 'ಪದ್ಧತಿ'ಯೆಂಬ ಶಬ್ದದ ವ್ಯುತ್ಪತ್ತಿಯನ್ನು ವಿಶೇಷಿಸಿ ಇದು ಕೇವಲ ಸರ್ವಜ್ಞನದೆಂದು ಪ್ರತಿಪಾದಿಸುವರು. ಪದ್ಧತಿ ಎಂಬದು ಪಾದ, ಹತ, ಎಂಬ ಎರಡು ಶಬ್ದಗಳಿಂದ ಹುಟ್ಟಿದ್ದು ಕಾಲಿನಿಂದ ತುಳಿದು ಕೊಲ್ಲಲ್ಪಟ್ಟದ್ದೆಂದು ಅರ್ಥವಾಗುತ್ತದೆ. ಅಂದರೆ ಅಡವಿಯಲ್ಲಿ ಬೆಳೆದಿರುವ ಹುಲ್ಲು, ಕಾಲಿನಿಂದ ತುಳಿಯಲ್ಪಟ್ಟು ಉಂಟಾದ ದಾರಿಯಲ್ಲಿಯೇ ಎಲ್ಲರೂ ಹೋಗುವದರಿಂದ ಮುಂದೆ 'ರೂಢಿ' ಎಂಬ ಎರಡನೇ ಅರ್ಥವು ಬಂತು. ಇದನ್ನು ವಿಶೇಷಿಸಿ ಸರ್ವಜ್ಞನು ತನ್ನ ಕಾಲದಲ್ಲಿರುವ ಬ್ರಾಹ್ಮಣ ಜೈನಾದಿ ಮತಾಚಾರಗಳನ್ನು ಖಂಡಿಸಿ, ಧರ್ಮ, ನೀತಿ ಮುಂತಾದ ವಿಷಯಗಳಲ್ಲಿ ಜನರು ಅನುಸರಿಸತಕ್ಕ ರೀತಿಯು ಇಂಥಾದ್ದೇ ಎಂದು ತೋರಿಸುವದಕ್ಕೆ ಈ ಶಬ್ದವನ್ನು ಪ್ರಯೋಗ ಮಾಡಿರಬೇಕೆಂದು ಹೇಳುವರು. ಸರ್ವಜ್ಞನು ಯಾವದೊಂದು ವಿಷಯವನ್ನು ಹಿಡಿದು ಸಾಂಕ್ತವಾಗಿ ತನ್ನ ವಚನಗಳನ್ನು ಬರೆದಿರುವದಿಲ್ಲವಾದ್ದರಿಂದಲೂ 'ಪದ್ಧತಿ' ಎಂಬ ಶಬ್ದವು ಅವನ ವಚನಗಳಲ್ಲಿ ಒಂಧಾವರ್ತಿಯಾದರು ಕಂಡುಬರುವದಿಲ್ಲವಾದ್ದರಿಂದಲೂ 'ಬಟ್ಟೆ

ಬೇರೆಂದ' 'ದಾರಿಬೇರೆಂದ' 'ಕೀಲಬೇರೆಂದ' ಎಂಬ ಸರ್ವಜ್ಞನ ಪ್ರೀತಿಯ ಪದಗಳನ್ನು ನೋಡಿದವನೊಬ್ಬನು ಇದಕ್ಕೆ ಬದಲಾಗಿ 'ಪದ್ಧತಿ' ಎಂಬ ಸಂಸ್ಕೃತ ಶಬ್ದವನ್ನಿಟ್ಟು ಅಧ್ಯಾಯ ವಿಭಾಗವನ್ನು ಕೈಕೊಂಡಂತೆ ತೋರುತ್ತದೆ.

ಹೇಗೆಯೇ ಇರಲಿ, ಸರ್ವಜ್ಞನ ಸ್ವತಂತ್ರವಿಚಾರಗಳಿಗೆ ಪೂರ್ವದ ವಚನಶಾಸ್ತ್ರಗಳೇ ಮುಖ್ಯ ಆಧಾರಗಳೆಂದು ಕಾಣುವದು. ವಚನ ಸಾಹಿತ್ಯವನ್ನು ಕರ್ನಾಟಕದಲ್ಲಿ ಕಂಗೊಳಿಸುವದೊಂದು ತಿಳಿ ನೀರಿನ ಸರೋವರಕ್ಕೆ ಸಮಾನ ಮಾಡಿದರೆ ಸರ್ವಜ್ಞನ ವಿಚಾರಗಳು ಅದರೊಳಗೆ ಮದವೇರಿ ಬೆಳೆದ ಕಮಲದ ಬಳ್ಳಿಯೆಂದು ಹೇಳಬೇಕು. ಇದರಲ್ಲಿ ಅರಳಿ ವಿವಿಧ ವರ್ಣಗಳಿಂದ ಕಂಗೊಳಿಸುವ ಕಮಲಗಳೇ ಇವನ ವಚನಗಳು. ಕರ್ನಾಟಕದಲ್ಲಿ ಮಹತ್ವವಾದ ಧಾರ್ಮಿಕ ಹಾಗೂ ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿ ಈಗ ಕಗ್ಗತ್ತಲೆಯಲ್ಲಿ ಮುಚ್ಚಿ ಹೋಗಿರುವ ವಚನ ವಾಙ್ಮಯವು ಒಮ್ಮೆ ಸಂಪೂರ್ಣವಾಗಿ ಬೆಳಕಿಗೆ ಬರಲನುಕೂಲವಾಯಿತೆಂದರೆ ಲೋಕದಲ್ಲಿ ಒಂದು ವಿಲಕ್ಷಣವಾದ ವಾಙ್ಮಯವೇ ಹೊರಬಿದ್ದಂತಾಗುವದು.

## ೭ ಭಾಷಾವಿಚಾರ.

ಸರ್ವಜ್ಞನ ಭಾಷಾಸಂಬಂಧವಾದ ವಿಚಾರವನ್ನು ಕೈಕೊಳ್ಳುವ ಮುಂಚೆ ವಾಚಕರಿಗೆ ಅವನ ವಚನಗಳು ರಚಿಸಲ್ಪಟ್ಟ ಕಾವ್ಯರೂಪವನ್ನು ಕುರಿತು ಸ್ವಲ್ಪ ತಿಳಿದಿರಬೇಕಾದ್ದರಿಂದ ಮೊದಲು ಈ ಬಗ್ಗೆ ಒಂದೆರಡು ಮಾತು ಹೇಳಿ ತರುವಾಯ ಭಾಷಾವಿಚಾರವನ್ನು ಮುಂದರಿಸುವೆವು. ಕನ್ನಡದಲ್ಲಿ ಕಂದ, ವೃತ್ತ, ಚೌಪದಿ, ಷಟ್ಪದಿ, ಮುಂತಾದ ಕಾವ್ಯ ಪದ್ಧತಿಗಳು, ಕವಿಗಳು ತಮ್ಮ ಕಾವ್ಯ ಚಾತುರ್ಯವನ್ನು ತೋರಿಸುವದಕ್ಕೆ ಉತ್ತಮ ಸಾಧನಗಳಾಗಿಯೂ ಕೇಳುವದಕ್ಕೆ ಮನೋಹರವಾಗಿಯೂ ಇರುವದರಿಂದ ಪ್ರೌಢಕವಿಗಳಲ್ಲಿ ಹೆಚ್ಚಿನವರು ಇವುಗಳಲ್ಲಿಯೇ ತಮ್ಮ ಯೋಚನೆಗಳನ್ನು ರೂಪುಗೊಳಿಸಿದ್ದಾರೆ. ಅದರಿಂದ ಕನ್ನಡ ವಾಙ್ಮಯವೆಲ್ಲ ಇವುಗಳಿಂದಲೇ ತುಂಬಿಹೋಗಿದೆ. ಆದರೆ 'ತ್ರಿಪದಿ'ಯಲ್ಲಿ ಈ ತರದ ಸುಲಭ ಗತಿಯು ಇಲ್ಲ. ಅದರಿಂದ ಅದು ಕಾವ್ಯಗಳಲ್ಲಿ ಬರುವದು ಅಪರೂಪ.

'ತ್ರಿಪದಿ'ಯೆಂದರೆ ಮೂರುಚರಣಗಳುಳ್ಳದ್ದು. ಇವುಗಳಲ್ಲಿ ಮೊದಲನೆಯ ಚರಣಕ್ಕೆ ೨೦. ಎರಡನೆಯದಕ್ಕೆ ೧೭. ಮೂರನೆಯದಕ್ಕೆ ೧೩. ಮಾತ್ರೆಗಳು ಬರುವವು. ಮೊದಲನೆಯ ಚರಣವು ಎಲ್ಲ ವಿಷಯಗಳಲ್ಲಿ ವಾರ್ಧಿಕ ಷಟ್ಪದಿಯನ್ನು ಹೋಲುವದು. ಅಂದರೆ ಆರಂಭದ ನಾಲ್ಕು ಸ್ಥಾನಗಳಲ್ಲಿ

ಯಾವಾಗಲು ಐದೈದು ಮಾತ್ರೆಗಳು ಬರುವವು. ಕನ್ನಡ ಕಾವ್ಯದ ಸಾಮಾನ್ಯನಿಯಮದಂತೆ ಪ್ರತಿ ಬಾದು ಆರಂಭಚರಣದ ಎರಡನೆಯ ಅಕ್ಷರವು ಪ್ರಾಸವುಳ್ಳದ್ದಾಗಿರುವದಲ್ಲದೆ ಇದು ಮೊದಲನೆಯ ಚರಣದ ಎರಡನೆಯ ಅರ್ಧದಲ್ಲಿಯೂ ಪ್ರಾಸಾಕ್ಷರ ಬರುವದು. ಇದೇ ತ್ರಿಪದಿಗಿರುವ ಹೊಸಲಕ್ಷಣ. ನಾಗವರ್ಮಛಂದಸ್ಸಿನಲ್ಲಿ ತ್ರಿಪದಿಯ ಲಕ್ಷಣವನ್ನು ಹೇಳುವ ಶ್ಲೋಕವು ತ್ರಿಪದಿಯಲ್ಲಿಯೇ ರಚಿತವಾಗಿದ್ದು ಕೆಳಗೆ ಕೊಟ್ಟಂತಿರುವದು—

ಬಿಸುರುಹೋದ್ಭವಗಣಂ ರಸದಶ ಸ್ಥಾನದೊಳ್ ।
ಬಿಸುರುಹ ನೇತ್ರೇ ಗಣಮೆ ಬಕ್ಕುಳಿದವು ।
ಬಿಸುರುಹ ನೇತ್ರೇ ತ್ರಿಪದಿಗೆ* ॥

ಮೊದಲನೆಯ ಚರಣಕ್ಕೆ ಐದೈದು ಮಾತ್ರೆಯ ೪ ಗಣಗಳು ಯಾವಾಗಲೂ ಬರಬೇಕು. ಎರಡನೆಯ ಚರಣದ ಎರಡನೆಯ ಹಾಗೂ ಮೂರನೆಯ ಚರಣದ ಎರಡನೆಯ ಗಣಗಳಲ್ಲಿ ಅಂದರೆ ರಸದಶ, (೬—೧೦) ಸ್ಥಾನಗಳಲ್ಲಿ ಬಿಸುರುಹೋದ್ಭವ ಗಣವೆಂದರೆ ಬ್ರಹ್ಮಗಣವು ಬರತಕ್ಕದ್ದು ಬಿಸುರುಹೋದ್ಭವ ಗಣವು ೪ ಪ್ರಕಾರವಾಗಿದೆ. ಎಂತೆಂದರೆ— — | ⏑ ⏑ — | — ⏑ | ⏑ ⏑ ⏑ |. ಇವುಗಳಲ್ಲಿ ಮೂರು, ಮೂರು, ಇಲ್ಲವೆ ನಾಲ್ಕು, ನಾಲ್ಕು ಮಾತ್ರೆಗಳು ಮಾತ್ರವೇ ಮೇಲೆ ಹೇಳಿದ ಆ ೬ನೆಯ, ೧೦ನೆಯ ಸ್ಥಾನಗಳಲ್ಲಿ ಬರಬಹುದು. ಅಂದರೆ ಈ ಎರಡು ಸ್ಥಾನಗಳಲ್ಲಿ ೩-೪ ಕ್ಕಿಂತ ಹೆಚ್ಚು ಉಳಿದ ಸ್ಥಾನಗಳಲ್ಲಿ ೫ಕ್ಕಿಂತ ಹೆಚ್ಚು ಮಾತ್ರೆಗಳು ಬರಲಾರದು. ಹೇಗಿದ್ದರೂ ೨ನೆಯ ಚರಣದ ೧೭ ಮಾತ್ರೆಗೂ ೩ನೆಯ ಚರಣದ ೧೩ ಮಾತ್ರೆಗೂ ಏನೂ ಹೆಚ್ಚು ಕಡಿಮೆ ಆಗಬಾರದು. ಈ ಎರಡು ಚರಣಗಳಲ್ಲಿ ೫ ಮಾತ್ರೆಯ ಗಣಕ್ಕೆ ಸ್ಥಳವಿರದಲ್ಲಿ ⏑ ⏑ ⏑ ⏑ | — ⏑ ⏑ | ⏑ ⏑ — | — — | ಎಂಬವುಗಳಲ್ಲಿ ಬಾದು ಬೀಳಬಹುದು. ಇಲ್ಲಿ ಕೊಟ್ಟಿರುವ ತ್ರಿಪದಿಯ ರೂಪವು ಹೀಗಿದೆ

ೆ೧ ೨ ೩ ೪
⏑ ⏑ ⏑ — | ⏑ ⏑ ⏑ — | ⏑ ⏑ ⏑ — | — ⏑ — | ೪ ಗಣಗಳು ೨೦ ಮಾತ್ರೆ

೫ ೬ ೭ ೮
⏑ ⏑ ⏑ ⏑ | — — | ⏑ ⏑ ⏑ — | ⏑ ⏑ ⏑ ⏑ | ೪ ಗಣಗಳು ೧೭ ಮಾತ್ರೆ

೯ ೧೦ ೧೧
⏑ ⏑ ⏑ ⏑ | — — | ⏑ ⏑ ⏑ — || ೩ ಗಣಗಳು ೧೩ ಮಾತ್ರೆ

---

* ಕಿಟೆಲ ಕೃತ ನಾಗವರ್ಮ ಛಂದಸ್ಸು ಪುಟ ೯೮.

೪—೩೧೦೬

ಆದರೆ ಷಡಕ್ಷರಿಯು ರಾಜಶೇಖರವಿಲಾಸದಲ್ಲಿಯೂ ಸರ್ವಜ್ಞನ ತ್ರಿಪದಿಯಲ್ಲಿಯೂ ರಸ, ದಶ, ಸ್ಥಾನಗಳಲ್ಲಿ ಮೂರು ಮಾತ್ರೆಗಳು ಬರುವದೇ ವಿಶೇಷ-ತ್ರಿಪದಿಗೆ ಒಂದು ತರದ ವಿಲಕ್ಷಣ ಸ್ವಭಾವವಿದ್ದು ಇದರಲ್ಲಿ ಪದ್ಯಗಳನ್ನು ರಚಿಸುವದು ಅನೇಕಾವರ್ತಿ ತೋರುವಷ್ಟು ಸುಲಭವಾಗಿರುವದಿಲ್ಲವಾದ್ದರಿಂದಲೂ ಹಿಂದೆ ಸೂಚಿಸಿದಂತೆ ಇದರಲ್ಲಿ ೩೬ಕ್ಕಿಂತ ಹೆಚ್ಚು ಮಾತ್ರೆಗಳುಳ್ಳ ಪದ್ಯಗಳನ್ನು ಅಂದರೆ ಪಾಂಡಿತ್ಯವನ್ನು ವೇದ್ಯಪರಿಸುವ ದೀರ್ಘಸಮಾಸಗಳನ್ನು ಸೇರಿಸುವದಕ್ಕೆ ಅನುಕೂಲವಿಲ್ಲದ್ದರಿಂದಲೂ ಕವಿಗಳಲ್ಲಿ ಹೆಚ್ಚಿನವರು ಇದನ್ನು ಬಿರುಸು ಕಟ್ಟಿಗೆಯೆಂದು ಬಿಸಾಡಿಬಿಟ್ಟಿದ್ದಾರೆ. ಈ ಕಾವ್ಯರೂಪವು ಜೈನರ ಚಂಪೂಗ್ರಂಥಗಳಲ್ಲಿ ಅಪರೂಪವಾಗಿ ದೊರೆಯುತ್ತಿದ್ದರೂ ಬಸವನಿಂದೀಚೆಗೆ ವಚನಶಾಸ್ತ್ರವು ಪ್ರಾರಂಭವಾದಂದಿನಿಂದ ಅಂದರೆ ೧೨–೧೬ನೆಯ ಶತಮಾನದಲ್ಲಿದ್ದ ಶೈವ, ವೀರಶೈವ ಕವಿಗಳೇ ಇದನ್ನು ಪ್ರಯೋಗಿಸಿರುವದು ವಿಶೇಷ. ಸಿದ್ಧರಾಮನ ಮಿಶ್ರಸ್ತೋತ್ರ ತ್ರಿವಿಧಿ, ಬಸವಸ್ತೋತ್ರ ತ್ರಿವಿಧಿ, ಅಷ್ಟಾವರಣ ಸ್ತೋತ್ರ ತ್ರಿವಿಧಿ; (ಕ್ರಿ. ಶ. ೧೧೬೦). ನೀಲಮ್ಮನ ತ್ರಿವಿಧಿ (ಕ್ರಿ. ಶ. ೧೨೪೫). ಶೀಲವಂತಯ್ಯನ ಗುರಲಿಂಗ ತ್ರಿವಿಧಿ (ಕ್ರಿ. ಶ. ೧೧೬೦). ಮಲ್ಲಿಕಾರ್ಜುನನ ತ್ರಿಪದಿ (ಕ್ರಿ. ಶ. ೧೨೪೫). ಕರಸ್ಥಲನಾಗಿ ದೇವನ ತ್ರಿಪದಿ (ಕ್ರಿ. ಶ. ೧೪೩೦). ಪರಂಜ್ಯೋತಿಯ ಅನುಭವ ಮುಕುರ (ಸ್ಮಾರ್ತಕವಿ ಕ್ರಿ. ಶ. ೧೪೫೦) ವಿರತಮಃ ಲಿಂಗದೇವನ ಬೋಧಾಮೃತ (ಕ್ರಿ. ಶ. ೧೫೬೦). ಮುಂತಾದವುಗಳನ್ನು ನೋಡಿದರೆ ಕನ್ನಡದಲ್ಲಿ ತ್ರಿಪದಿಯಲ್ಲಿ ಕಾವ್ಯಗಳನ್ನು ರಚಿಸಿದ ಕವಿಗಳು ಬಹು ವಿರಳರೆಂದೂ ಇವರು ಹೆಚ್ಚಾಗಿ ವೀರಶೈವರಾಗಿದ್ದರೆಂದೂ ಇವರಿಂದ ರಚಿತವಾದ ತ್ರಿಪದಿಗಳ ಸಂಖ್ಯೆಯಾದರೂ ಇತರ ಕಾವ್ಯರೂಪಗಳ ಸಂಖ್ಯೆಗಿಂತ ಬಹು ಕಡಿಮೆಯಾಗಿರುವದೆಂದೂ ಮೇಲೆ ಹೇಳಿದ ಗ್ರಂಥಗಳಲ್ಲಿ ದೊರೆಯುವ ತ್ರಿಪದಿಗಳ ಸಂಖ್ಯೆಯಿಂದ ವ್ಯಕ್ತವಾಗುತ್ತದೆ. ಸರ್ವಜ್ಞನಿಗೆ ಪೂರ್ವದಲ್ಲಿ ಅನೇಕ ತ್ರಿಪದಿಗಳು ದೊರೆಯುತ್ತಿದ್ದರೂ ಇವನಷ್ಟು ತ್ರಿಪದಿಗಳನ್ನು ಇವನಷ್ಟು ಜಾಣ್ಮೆಯಿಂದ ರಚಿಸಿದ ಇನ್ನೊಬ್ಬ ಕವಿಯು ಕನ್ನಡ ವಾಙ್ಮಯದಲ್ಲಿಯೇ ದೊರೆಯಲಾರನು. ಬಲ್ಲಿದರು ಬೇಡವೆಂದು ಮೂಲೆಗೊಗೆದ "ಕೊರಡೇ" ಸರ್ವಜ್ಞನ ಕೈಯ್ಯಲ್ಲಿ "ಸುರತರು" ವಾಗಿ ಪರಿಣಮಿಸಿಯದೆ. ಕಾಡು ಮರಗೇಸದವನೆಂದು ತಿಳಿಯಲ್ಪಟ್ಟಿರುವ ಇವನು ತನ್ನ ತ್ರಿಪದಿಯೆಂಬದೊಂದೇ ಚೀರಣದಿಂದ ಬಿಡಿಸಿರುವ ಮನೋಹರವಾದ

ಚಿತ್ರಗಳನ್ನು ನೋಡಿದಷ್ಟು ಕನ್ನಡಿಗರಿಗೆ ಆನಂದವೆನಿಸುವದು. ಉಚ್ಚವಿಚಾರ ಗಳನ್ನು ಬಿಚ್ಚಿ, ಅಚ್ಚಗನ್ನಡದಲ್ಲಿ ಅಚ್ಚುಕಟ್ಟಾಗಿಟ್ಟು ತುಚ್ಛಜನರಿಗೆ ಸ್ವಚ್ಛ ವಾಗಿ ಬೋಧಿಸುವದಕ್ಕೆ ಈ ಕಾವ್ಯರೂಪವು ಸ್ವಾಭಾವಿಕವಾಗಿ ಸಹಾಯಕರ ವಾಗಿರುವದರಿಂದ ಸರ್ವಜ್ಞನು ಉದ್ದೇಶಪೂರ್ವಕವಾಗಿ ಈ ಅಚ್ಚುಪಡಿಯನ್ನು ನಿಚ್ಚವೂ ಪ್ರಯೋಗಿಸಿಕೊಂಡಂತೆ ತೋರುತ್ತದೆ. ಬೇರೊಂದು ಪ್ರಕಾರವಾಗಿ ಹೇಳಿದರೆ ತ್ರಿಪದಿಯು ಸರ್ವಜ್ಞನ ಕೈಯ್ಯೊಳಗಿನ ಕಣಿಕ. ಇದರಲ್ಲಿ ಕಾವ್ಯಗ ಳನ್ನು ರಚಿಸುವ ವಿದ್ಯೆಯು ಸರ್ವಜ್ಞನಿಗೆ ಸಾಧಿಸಿದಂತೆ ಬೇರೆ ಯಾವ ಕವಿಗೂ ಸಾಧಿಸಿರುವದಿಲ್ಲ. ಇವನ ಕಾವ್ಯಚತುರತೆಯನ್ನು ಪರ್ಯಾಲೋಚಿಸುವ ಕೆಲ ವರು ತ್ರಿಪದಿಯ ರೂಪವು ಸಹ ಸರ್ವಜ್ಞನಿಂದಲೇ ಉದ್ಭವವಾಗಿರಬೇಕೆಂದು ನೆನಸುವಷ್ಟು ಅದು ಅವನ ಸ್ವಾಧೀನವಾಗಿದೆ. ಒಂದು ಪ್ರಕಾರವಾಗಿ ಅವನು ಈ ಕಾವ್ಯರೂಪವನ್ನು ಗುತ್ತಿಗೆ ಹಿಡಿದಿದ್ದಾನೆಂದು ಹೇಳಿದರೆ ಅತ್ಯುಕ್ತಿಯಾಗದು. ಯಾವನೊಬ್ಬ ಆಧುನಿಕ ಕವಿಯು ಹೊಸದೊಂದು ತ್ರಿಪದಿಯನ್ನು ರಚಿಸಿ ಅದಕ್ಕೆ ಸರ್ವಜ್ಞನ ಹೆಸರನ್ನು ಬಿಟ್ಟು ತನ್ನ ಮುದ್ರಿಕೆಯನ್ನಿಟ್ಟರೆ, ಇಲ್ಲವೆ ಬೇರೊಂದು ಶಬ್ದದಿಂದ ಅದನ್ನು ಅಂತ್ಯಮಾಡಿದರೆ ಅದು ಎಷ್ಟೋ ಛಂದೋಬದ್ಧ ವಾಗ್ದಿರೂ ತ್ರಿಪದಿಯು ಹೌದೋ ಅಲ್ಲವೋ ಎಂದು ಸಂದೇಹ ಉಂಟಾಗು ವಷ್ಟು ಅದು ಅವನ ಸ್ವಾಸ್ಥ್ಯವಾಗಿದೆ. * ಅದರಿಂದಲೇ ಅವನ ಗ್ರಂಥಕ್ಕೆ "ಸರ್ವಜ್ಞನ ತ್ರಿಪದಿ"ಯೆಂಬ ಹೆಸರು ಬಂದಿರುವದು. ಕನ್ನಡ ವಾಙ್ಮಯದಲ್ಲಿ ಯಾವದೊಂದು ಕಾವ್ಯರೂಪವು ಯಾವನೊಬ್ಬ ಕವಿಯ ಹೆಸರಿನಿಂದ ಕರೆಯಲ್ಪ ಡುವದಕ್ಕೆ ಇದು ಮೊದಲನೆಯ ಉದಾಹರಣೆಯೆಂದು ಹೇಳಲಿಕ್ಕಾಗದಿದ್ದರೂ ಇಂಥ ನಾಮವಿಶೇಷವು ಸರ್ವಜ್ಞನ ಹೊರತು ಬೇರೊಬ್ಬ ಕವಿಗೆ ಒಪ್ಪುವದಿಲ್ಲ. ಇದೇ ಕಾರಣದಿಂದ ಹಿಂದೆ ಹೇಳಿದ ದತ್ತಾತ್ರಯ ಇಲ್ಲವೆ ಅಂಬಿಕಾದತ್ತ ಜೇಂಪ್ರೆ ಯೆಂಬವರಾದರು ತಾವು ರಚಿಸಿ ಗ್ರಂಥಾರಂಭದಲ್ಲಿ ಸೇರಿಸಿದ ಹೊಸ ತ್ರಿಪದಿ ಗಳನ್ನು ಸಹ ಸರ್ವಜ್ಞನೆಂದೇ ಮುಗಿಸಿರುವರು. ಇವನ ಕಾವ್ಯಗಳು ಸ್ವಚ್ಛ ವಾಗಿ ಪದ್ಯರೂಪದಲ್ಲಿ ರಚಿಸಲ್ಪಟ್ಟಿರುವದರಿಂದ ಅವುಗಳಿಗೆ ತ್ರಿಪದಿಗಳೆಂದೆನ್ನ ಬೇಕಲ್ಲದೆ ವಚನಗಳೆಂದೆನ್ನಲಾಗದೆಂದೂ ಅವನ ಗ್ರಂಥಕ್ಕೆ ಹೀಗೆ ಹೆಸರಿಟ್ಟದ್ದು

---

* ಬಿಂದುರೂಪವ ಪೀಠ ಮುಂದೆನಾದವೆ ವೃತ್ತ । ಸಂದ ಗೋಮುಖವ ತ್ರಿವಿಧಹೃದಯದೊಳು । ನಂದ ಚಿನ್ಮಯನೆ ಗುರುಲಿಂಗ ॥

ತಪ್ಪೆಂದೂ ಕೆಲವರು ಆಕ್ಷೇಪಿಸುವರು. ರೂಪ ಇಲ್ಲವೆ ವೇಷ ಮಾತ್ರದಿಂದ ಅವು ಗಳಿಗೆ ಪದ್ಯಗಳೆಂದು ಹೇಳಬೇಕಾಗಿದ್ದರೂ ಅವುಗಳ ಆತ್ಮಸ್ವರೂಪ, ಜೀವಸತ್ವ ಹಾಗೂ ಅವು ಹೀರಿಬೆಳೆದ ಭೂಮಿಯ ಸಾರನ್ನು ನೋಡಿದರೆ ವಚನಗಳೆಂತಲೇ ಹೇಳತಕ್ಕದ್ದು. ಇದು ಮುಂದಿನ ಭಾಗದಲ್ಲಿ ಬರುವ ವಿವರದಿಂದ ಮತ್ತಷ್ಟು ಸ್ಪಷ್ಟವಾಗುವದು. ಈ ಕಾರಣದಿಂದಲೂ ಈ ಮೊದಲು ಅವುಗಳಿಗೆ "ಸರ್ವಜ್ಞ ಮೂರ್ತಿವಚನ"ಗಳೆಂಬ ಹೆಸರು ರೂಢಿಯಲ್ಲಿರುವದರಿಂದಲೂ ಅವನ ಗ್ರಂಥಕ್ಕೆ ಈ ನಾಮವಿಶೇಷವನ್ನೇ ನಿಶ್ಚಯಿಸಿದ್ದೇವೆ.

ಹಿಂದೆ ಹೇಳಿದಂತೆ ಇದುವರೆಗೆ ಕಾಡುಕವಿಯೆಂದು ಭಾವಿಸಲ್ಪಟ್ಟಿರುವ ಸರ್ವಜ್ಞನು ತನ್ನ ತ್ರಿಪದಿಯಲ್ಲಿ ತೋರಿಸಿರುವ ಅಪ್ರತಿಮ ನಾಡು ನೈಪುಣ್ಯವನ್ನು ಸ್ಪಷ್ಟಗೊಳಿಸುವದಕ್ಕೆ ಈಗ ಕೆಲವು ಉದಾಹರಣೆಗಳನ್ನು ಕೊಡುವೆವು. ಇವುಗ ಳಲ್ಲಿ ಅವನು ಅನುಸರಿಸಿರುವ ವಿಶಿಷ್ಟ ಸೂತ್ರಗಳನ್ನು ನೋಡಿದರೆ ಎಂಥವರಿಗೂ ಆಶ್ಚರ್ಯವೆನಿಸುವದು.

## ೧. ಭಾಷಾವಿಚಾರ.

ಸರ್ವಜ್ಞನ ತ್ರಿಪದಿಗಳನ್ನೆಲ್ಲ ಪೃಥಕ್ಕರಿಸಿ ಇಟ್ಟರೆ, ಸುಮಾರು ಐದು ಗುಂಪುಗಳಾಗುವವು. ಇವುಗಳಿಗೆ ಸರ್ವಜ್ಞನ ಮೆಚ್ಚಿನ ಪಡಿಯಚ್ಚುಗಳೆಂದರೂ ಸಲ್ಲುವದು. ಇವುಗಳಲ್ಲಿ ಅವನ ಎಲ್ಲ ವಚನಗಳನ್ನು ಹೊಂದಿಸಬಹುದು ಇವು (೧) ಪ್ರಶ್ನಾ ಪದ್ಧತಿ. (೨) ಉದ್ಗಾರ ಪದ್ಧತಿ. (೩) ನ್ಯಾಯ ಪದ್ಧತಿ. (೪) ಗದ್ಯ ಪದ್ಧತಿ. (೫) ವಿವಿಧ ಪದ್ಧತಿ. ಎಂದು ಐದುವಿಧವು. ಈ ಪಂಚರಾಶಿಗಳಿಗೆ ಸೇರುವ ಪ್ರತಿಯೊಂದು ಪದ್ಯಕ್ಕೆ ತಿರುಗಿ ಪಂಚಲಕ್ಷಣಗಳಿರು ವವು. ಇವು (೧) ನಾನತ್ವ. (೨) ಲಘುತ್ವ. (೩) ತಿಳಿ. (೪) ಮಾಧುರ್ಯ. (೫) ಅವಲೋಕನ ಮುಂತಾದವುಗಳೇ. ಇವುಗಳನ್ನು ಸೂಚಿಸುವ ಉದಾ ಹರಣೆಯನ್ನು ಮುಂದೆ ಅಲಂಕಾರ ಭಾಗದಲ್ಲಿ ಕೊಡುವೆವು.

(೧) **ಪ್ರಶ್ನಾ ಪದ್ಧತಿ**:—ಇದು ಯಾವದೊಂದು ಸತ್ಯಾರ್ಥವನ್ನು ಸ್ಪಷ್ಟ ಮಾಡುವಲ್ಲಿ ಇಲ್ಲವೆ ಸಂದೇಹನಿರಸನಮಾಡುವಲ್ಲಿ ಇಲ್ಲವೆ ಅವರ ಮಾತನ್ನು ಅವರ ಕೊರಳಿಗೆ ಕಟ್ಟುವಲ್ಲಿ ಸಾಧಾರಣವಾಗಿ ಪ್ರಯೋಗವಾಗು ವದು. ಇದು ನಿದ್ರಿಸುವ ಮನಸ್ಸನ್ನು ಎಚ್ಚರಗೊಳಿಸಿ ನಿರೂಪಿಸಬೇಕಾದ ಬೋಧಾಂಶವನ್ನು ಹೃದಯದಲ್ಲಿ ನಾಟಿಸುವದು. ಮೊದಲನೆಯ ಪಂಕ್ತಿಯಲ್ಲಿ

ಪ್ರಶ್ನೆಯಿದ್ದರೆ ಎರಡನೆಯ ಪಂಕ್ತಿಯಲ್ಲಿ ಸತ್ಯಾರ್ಥವು ಉಪಮೆಯೊಳಗೆ ಅಡಕವಾಗಿದ್ದರೆ ಮೂರನೆಯ ಪಂಕ್ತಿಯಲ್ಲಿ ಪ್ರಶ್ನೆಗಳು ಬಂದು ಉತ್ತರವೇ ಅವಶ್ಯವಿಲ್ಲದಂತಾಗಿ ಕವಿಯ ಅಭಿಪ್ರಾಯಕ್ಕೆ ಅಸ್ತು ಪಡಬೇಕಾಗುವದು. ಒಟ್ಟಿಗೆ ಈ ಪ್ರಶ್ನಗಳು ಉತ್ತರ ತೆಗೆದುಕೊಳ್ಳುವವಕ್ಕಲ್ಲ ಉತ್ತರಕೊಡುವಕ್ಕೆನೇ ಹಾಕಿದವುಗಳಾದವುಗಳಾಗಿವೆ. ಉದಾ—

## ಏಕಪ್ರಶ್ನಾ ಭೇದ.

### ಆದಿ ಪ್ರಶ್ನೆ

ದೃಷ್ಟಾಂತ ರಹಿತ (ಸತ್ಯಾರ್ಥ ದರ್ಶನ)
ಒಬ್ಬನಲ್ಲದೆ ಜಗಕೆ ಇಬ್ಬರುಂಟೇ? ಮತ್ತೆ ।
ಒಬ್ಬ ಸರ್ವಜ್ಞ ಕರ್ತನು; ಜಗಕೆಲ್ಲ
ಒಬ್ಬನೇ ದೈವ ಸ॥ ಪ. ೨೯೪ ಇತ್ಯಾದಿ.

ದೃಷ್ಟಾಂತ ಸಹಿತ (ದೋಷದರ್ಶನ)
ಹುಸಿದು ಮಾಡುವ ಪೂಜೆ ಮಸಿವಣ್ಣ ಮೆಂತನಲು?॥
ಮುಸುಕಿರ್ದ ಮಲವನೊಳಗಿರಿಸಿ ಪೃಷ್ಠವ।
ಹಿಸುಕಿ ತೊಳೆದಂತೆ ಸ॥ ಪ-೧೬೨ ಇತ್ಯಾದಿ

### ಅಂತ್ಯ ಪ್ರಶ್ನೆ.

ಬಳ್ಳಿಗುರುಡರುಕೂಡಿ ಹಳ್ಳವನು ಬಿದ್ದಂತೆ ।
ಒಳ್ಳೆಯಗುರುವಿನುಪದೇಶ ವಿಲ್ಲದಿರೆ ।
ಎಲ್ಲಿಯದು ಮುಕ್ತಿ? ಸ॥ ಪ. ೮೮; ೩೧೩

ಬೊಮ್ಮ ನಿರ್ಮಿಪನೆಂಬ ದುರ್ಮತಿಯೆನೀಕೇಳು ।
ಬೊಮ್ಮನ ಸತಿಗೆ ಮೂಗಿಲ್ಲವಾಮೂಗ ।
ನಿರ್ಮಿಸನದೇಕೆ? ಸ॥ ಪ. ೪೦.೧೯.೮೪೭.

## ದ್ವಿಪ್ರಶ್ನಾ ಭೇದ.

ಮುತ್ತು ನೀರೊಳು ಪುಟ್ಟಿ ಮತ್ತೆ ನೀರಪ್ಪುದೇ?
ಸತ್ಯವನರಿದ ಜ್ಞಾನಿ ಸಂಸಾರವ ।
ಮತ್ತೆ ಹೊದ್ದುವನೇ? ಸ॥ ಪ. ೨೩೧.೩೧೪

ಬೆಂದಮನೆಬಾಗಲಿಗೆ ಮುಂದೆತೋರಣವೇಕೆ ?
ಸಂದಕೂದ್ರತಿಯು ಒಡನುಂಬಹಾರುವಗೆ ।
ಮಿಂದೂಟವೇಕೆ ? ಸ॥ ಪ. ೪೦.೫೬೯.

## ತ್ರೀಭೇದ ಚತುರ್ಭೇದ.

ಹಲವನೋದಿದಡೇನು? ಚಲುವನಾದಡದೇನು?
ಕುಲವೀರ ನೆನಿಸಿ ಫಲವೇನು? ಲಿಂಗದ ।
ಒಲುಮೆಯಿಲ್ಲದಲೆ? ಸ॥ ಪ. ೧೧೬೫.

ಎಲೆಯುಮೆಲುವನೆಲೋಭಿ? ಕೊಲ್ಲುವನೆಧರ್ಮಿಷ್ಟ
ಸಲಹುವನೆಮನೆಯ ತುರುಗಾಹಿ? ಸ್ತ್ರೀಯರಿ ।
ಗೊಲೆಯುವನೆ ಯೋಗಿ? ಸ॥ ಪ. ೨೨೩. ೪೫.

(೨) **ಉದ್ಗಾರ ಪದ್ಧತಿ—** ಇದು ಬಹು ಪ್ರಕಾರದಲ್ಲಿ ಪ್ರಶ್ನಾಪದ್ಧತಿಯನ್ನು ಹೋಲುತ್ತಿದ್ದು ಬುದ್ಧಿವಾದ, ಬಿನ್ನಹ, ಪ್ರೇರಣೆ, ಮುಂತಾದ ಭಾವ

ಸಂದರ್ಭಗಳಲ್ಲಿ ಪ್ರಯೋಗವಾಗುವದು. ಮೊದಲನೆಯ ಪದ್ಧತಿಯಂತೆ ಇದರಲ್ಲಿ ಅನೇಕ ತರಗಳು ದೊರೆಯುತ್ತಿದ್ದರೂ ವಿಸ್ತಾರಭಯಕ್ಕೋಸ್ಕರ ಇಲ್ಲಿ ಎರಡು ಉದಾಹರಣೆಗಳನ್ನು ಮಾತ್ರವೇ ಕೊಟ್ಟಿದ್ದೇವೆ—

ಓದಿಬೂದಿಯ ಪೂಸಿ ತೇದು ಕಾವಿಯ ಹೊದೆದು ।
ಹೋದಾತ ಯೋಗಿ ಯೆನಬೇಡ! ಇಂದ್ರಿಯವ ।
ಕಾದಾತ ಯೋಗಿ ಸರ್ವಜ್ಞ ॥

ಒಡಲ ನೀಡಾಡದಿರು! ನುಡಿಯ ಹೊರಗಾಡದಿರು! ।
ನಡೆಯೊಳೆಚ್ಚರವ ಬಿಡದಿರು! ಪರವಶದಿ ! ।
ದೃಢವನಗಲದಿರು! ಸರ್ವಜ್ಞ ॥

(೩) **ನ್ಯಾಯಪದ್ಧತಿ**—ಇದು ಯಾವದೊಂದು ಸತ್ಯಾರ್ಥವನ್ನು ದೃಷ್ಟಾಂತದಿಂದ ಸಿದ್ಧಾಂತಪಡಿಸುವದಕ್ಕೆ ಪ್ರಯೋಗವಾಗುವದು. ಹಿಂದೂನ್ಯಾಯದರ್ಶನದ ಪಂಚಾವಯವಗಳಲ್ಲಿ ಆಗುವ ಕೆಲಸವನ್ನು ಗ್ರೀಕ ಇಲ್ಲವೆ ವಿಲಾಯತಿಯ ತರ್ಕಶಾಸ್ತ್ರ ಪದ್ಧತಿಯಂತೆ ಮೂರೇ ಅವಯವಗಳಲ್ಲಿ ಅಂದರೆ ಇದಕ್ಕೆ ಅನುರೂಪವಾಗಿರುವ ತ್ರಿಪದಿಯ ಮೂರು ಚರಣಗಳಲ್ಲಿ ಸಾಧಿಸಲೆತ್ನಿಸಿದ್ದು ಸರ್ವಜ್ಞನ ಬುದ್ಧಿಚಾತುರ್ಯವನ್ನು ಪ್ರಕಟಿಸುತ್ತಿರುವದಷ್ಟೆ. ಸತ್ಯಾರ್ಥವನ್ನು ಸ್ವಲ್ಪ ಮಾತುಗಳಲ್ಲಿ ಹೇಳಬೇಕಾದ್ದರಿಂದ ಇಲ್ಲಿ ಸಿದ್ಧಾಂತವು ಯಾವಾಗಲು ಅಧ್ಯಾಹಾರವಾಗಿರುವದು. ಉದಾ—

ಒಂದಕ್ಕೆ ಒಂದೇ ದೃಷ್ಟಾಂತ.

ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವದು । (ಪ್ರಮೇಯ)
ಬಿಸಲಿಗೆಹಸುರೊಳೆಸೆದಿರ್ಪ ಹನಿಯಾರಿ । (ಪ್ರಮಾಣ)
ಹುಸಿದು ಹೋದಂತೆ ಸರ್ವಜ್ಞ ॥ (ಸಿದ್ಧಾಂತ ಅಡಕ)

ಅಲಸದಾ ಶಿವಪೂಜೆ ಹುಲಸುಂಟು ಕೇಳಯ್ಯ । (ಪ್ರಮೇಯ)
ಬಲುಕವಲೊಡೆದು ಬೇರಿಂದ ತುದಿತನಕ । (ದೃಷ್ಟಾಂತ)
ಹಲಸುಕಾತಂತೆ ಸರ್ವಜ್ಞ ॥ (ಸಿದ್ಧಾಂತ ಅಧ್ಯಾಹಾರ)

ಎರಡು ದೃಷ್ಟಾಂತ.

ಒಂದಕ್ಕೆ ಎರಡು ದೃಷ್ಟಾಂತ.

ತೀಂದಕೆಂಡವ ಮೆಟ್ಟಿ ಮರುಗುವಾ ತೆರನಂತೆ ।
ದುರುಳಕೂಟ ಬರಿಕೂಟ ತನ್ನತಾ- ।
ನಿರಿದುಕೊಂಡಂತೆ ಸರ್ವಜ್ಞ ॥ ನೊ. ಪ. ೧೫೪೯

ಎರಡಕ್ಕೆ ಎರಡು ದೃಷ್ಟಾಂತ.

ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ ।
ಅಲ್ಲದಹುದೆಂಬ ಅಜ್ಞಾನಿಯೊಡನಾದ ।
ಕಲ್ಲುಹಾದಂತೆ ಸರ್ವಜ್ಞ ॥ ನೊ. ಪ. ೧೧೦೫.

## ಅನೇಕ ದೃಷ್ಟಾಂತ.

| ಅನೇಕಕ್ಕೆ ಒಂದೇ ದೃಷ್ಟಾಂತ. | ಅನೇಕಕ್ಕೆ ಅನೇಕ ದೃಷ್ಟಾಂತ. |
|---|---|
| ದಂಡು ಇಲ್ಲದ ಅರಸು ಕೊಂಡವಿಲ್ಲದ ಹೋಮ। | ಅರಸ ರಕ್ಕಸನಂತೆ ವರಮಂತ್ರಿ ಹುಲಿಯಂತೆ । |
| ಬಂಡಿ ಇಲ್ಲದನ ಬೇಸಾಯ ತಲೆಹೋದ । | ಬರಿವಾತನಾಡು ನರಿಯಂತೆ ಪರಿವಾರ । |
| ಮುಂಡದಂತಕ್ಕು ಸರ್ವಜ್ಞ ॥ | ಗರಗಸದಂತೆ ಸರ್ವಜ್ಞ ॥ |

(೪) **ಗದ್ಯಪದ್ಧತಿ—**ಈ ವರ್ಗಕ್ಕೆ ಸೇರುವ ಪದ್ಯಗಳು, ಪ್ರಾಸ, ಯತಿ ಮುಂತಾದವುಗಳನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಗದ್ಯ ಭಾಷೆಯನ್ನೇ ಹೋಲುವವು. ಇವುಗಳಲ್ಲಿ ನ್ಯೂನರೂಪ, ಭಾವರೂಪಗಳಿಂದ ಜೋಡಣೆ ಯಾದ ವಾಕ್ಯಗಳೇ ಬಹಳ. ಉದಾ—

| | |
|---|---|
| ತಾಪದಲಿ ಸಂಸಾರ ಕೂಪದಲಿ ಬಿದ್ದವರು । | ಬಂಧು ಬಳಗವು ಕೂಡಿ ಹೊಂದಿ ಜೋಗುಳಪಾಡಿ। |
| ಆಪತ್ತನಳಿದು ಪೊರೆವುಡಲು ಗುರುಪಾದ । | ಹಿಂದೆ ಸತ್ತವನ ಹೆಸರಿಟ್ಟು ಗುಗ್ಗರಿಯ । |
| ಸೋಪಾನವಯ್ಯ ಸರ್ವಜ್ಞ ॥ | ತಿಂದು ತೂಗುವರು ಸರ್ವಜ್ಞ ॥ |

(೫) **ವಿವಿಧ ಪದ್ಧತಿ—** ಸಾಧಾರಣವಾಗಿ ಇತರ ಗುಂಪಿಗೆ ಸೇರದ ಪದ್ಯಗಳೆಲ್ಲ ಇವರೊಳಗೆ ಸಮಾವೇಶವಾಗುವವು. ಹೇಳತಕ್ಕ ಸತ್ಯಾರ್ಥವನ್ನು ಸುಲಭವಾಗಿ ಸ್ವೀಕರಿಸುವಂತೆ ಮನಸ್ಸನ್ನು ಪೂರ್ವಸಿದ್ಧತೆಗೊಳಿಸುವದೇ ಇತರ ಮುಖ್ಯ ಉದ್ದೇಶ. ಇದಕ್ಕಾಗಿ ಮೂರು ನಾಲ್ಕು ಅವಶ್ಯವಿದ್ದರೆ ಆರೇಳು ದೃಷ್ಟಾಂತಗಳು ಮೇಲಿಂದ ಮೇಲೆ ಹೇಳೋಣವಾಗುವವು. ಇದರಿಂದ ಬಿಂಬಿ ಸತಕ್ಕ ವಿಷಯವು ಹಸಿಗೋಡೆಯಲ್ಲಿ ಹರಳೊತ್ತಿದಂತಾಗುವದು. ಈ ರಾಶಿಗೆ ಲೇಸು, ಹೊಲ್ಲ, ಅಲ್ಲ, ಇಲ್ಲ, ಬಲ್ಲ, ಏಕೆ ? ಅಕ್ಕು, ಬಕ್ಕು, ಕಷ್ಟ, ಕೆಡುಗು, ಕೆಟ್ಟ, ರೂಪು, ಇಂಬು, ಚಂದ, ಮುಂತಾದ ಆವರ್ತಕ ಶಬ್ದಗಳಿಂದ ಅಂತ್ಯವಾಗುವ ವಚನಗಳೂ ಇವು ಮೂರು, ಇವು ಆರು, ಎಂಬದಾಗಿ ಮುಗಿ ಯುವ ಚತುರೋಕ್ತಿ, ಅನುಭವೋಕ್ತಿಗಳೂ ಸೇರುವವು. ಇವುಗಳಿಗೆ ವ್ಯತಿರಿ ಕ್ತವಾಗಿರುವ ಪದ್ಯಗಳಲ್ಲೆರಡನ್ನು ಮಾತ್ರ ಇಲ್ಲಿ ಉದಾಹರಿಸಿ ಉಳಿದವುಗಳನ್ನು ವಿಸ್ತಾರಭಯಕ್ಕೋಸ್ಕರ ಬರಿ ಅಂಕಿಗಳಿಂದ ಸೂಚಿಸಿದ್ದೇವೆ. ಇವುಗಳಲ್ಲಿ ಸರ್ವ ಜ್ಞನು ಪೃಥಃಕರಣ ಹಾಗೂ ಏಕೀಕರಣ ಪದ್ಧತಿಗಳೆರಡನ್ನೂ ಪ್ರಯೋಗಿಸಿ ಕೊಂಡಿರುವಂತೆ ತೋರುತ್ತದೆ. ಪೃಥಃಕ್ಕರಣವೆಂದರೆ ವಿಷಯವನ್ನು ವಿವಿಧ ವಾಗಿ ವಿಭಾಗಿಸಿ ಒಂದನ್ನೊಂದು ವಿಶೇಷವಾಗಿ ವಿಚಾರಿಸುವದು. ಏಕೀಕರಣ

ವೆಂದರೆ ಅನೇಕ ವಿಷಯುಗಳನ್ನು ಯಾವದೊಂದು ದೃಷ್ಟಿಯಿಂದ ಪೋಣಿಸಿ ತೋರಿಸುವದು. ಮೊದಲನೆಯ ಪದ್ಧತಿಯು ಪರರ ಅಭಿಪ್ರಾಯವನ್ನು ಖಂಡಿಸುವಲ್ಲಿಯೂ ಎರಡೂ ಪದ್ಧತಿಗಳು ಸ್ವಮತವನ್ನು ಸಮರ್ಥಿಸುವಲ್ಲಿಯೂ ಸಾಮಾನ್ಯವಾಗಿ ಪ್ರಯೋಗವಾಗುವದು. ಉದಾ—

| ಲೇಸು. | ಹೊಲ್ಲ. |
|---|---|
| ಉದ್ದಿನಾ ಒಡೆಲೇಸು ಬುದ್ಧಿಯಾನುಡಿ ಲೇಸು । | ಸಂತೆಯಾ ಮನೆಹೊಲ್ಲ ಚಿಂತೆಯಾತನು ಹೊಲ್ಲ । |
| ಒದ್ದೊಡವೆ ಕೈಗೆ ಬರಲೇಸು ಶಿಶುವಿಗೆ । | ಎಂತೊಲ್ಲದವಳ ರತಿಹೊಲ್ಲ ಬಾಳುವರಿ- । |
| ಮುದ್ದಾಟ ಲೇಸು ಸರ್ವಜ್ಞ ॥ | ಗಂತಕನೆ ಹೊಲ್ಲ ಸರ್ವಜ್ಞ ॥ |

| ಪೃಥಕ್ಕರಣ. | ಏಕೀಕರಣ. |
|---|---|
| ಮಂದ್ಯಪಾನವ ಮಾಡಿ ಇದ್ದುದೆಲ್ಲವ ನೀಡಿ । | ಗೊರವನೂ ಸೂಳೆಯೂ ಕರದೆಕ್ಕಸಾಲೆಯೂ । |
| ಬಿದ್ದು ಬರುವವನ ಸದ್ದಡಗಿ ಸಂತಾನ । | ತಿರಿವನು, ವೈದ್ಯ, ದ್ವಿಜ, ಗಣಿಕೆಯಿನ್ನೊಬ್ಬ- । |
| ವೆದ್ದು ಹೋಗುವದು ಸರ್ವಜ್ಞ ॥ | ರಿರವ ಸೈರಿಸರು ಸರ್ವಜ್ಞ ॥ |
| ೩೦೩ನೆಗೆ—೧೭೪.೯೭೯ | ಅನರ್ಥನಕ್ಕೆ—೪೪.೧೧೪ |

ಇದಲ್ಲದೆ ನೋಡಿ. ಪ. ೧೩೮೭, ೬೯೨, ೧೧೨, ೪೩, ೨೨೨. ೭೨೯೪, ೯೦೩, ೧೫೭೦, ೭೩೪, ೩೯೩, ೭೨೧, ೧೫೭೭, ೧೧೮೮, ೧೫೬೪. ೧೬೧೪, ೪೯೪, ೧೬೧೯, ೧೫೭೦, ೧೩೪೯, ೮೦೦, ಇತ್ಯಾದಿ.

ಈಗ ವಿಷಯುವನ್ನು ಪ್ರಾರಂಭಿಸಿ ಅವನ ಭಾಷಾವಿಚಾರವನ್ನು ವ್ಯಾಕರಣ, ಛಂದಸ್ಸು, ಅಲಂಕಾರ, ಪ್ರಯೋಗವೈವಿಧ್ಯ ಮುಂತಾದ ದೃಷ್ಟಿಯಿಂದ ಪ್ರಸ್ತಾಪಿಸುವೆವು.

(೧) **ವ್ಯಾಕರಣ**—ಸರ್ವಜ್ಞನ ಪದ್ಯಗಳು, ಕನ್ನಡಭಾಷೆಯು ಸ್ಥಿತ್ಯಂತರವನ್ನು ಹೊಂದುತ್ತಿದ್ದ ಮಧ್ಯಕಾಲದಲ್ಲಿ ರಚಿಸಲ್ಪಟ್ಟವೆಂದು ಹಿಂದೆ ಕಾಲವಿಚಾರದಲ್ಲಿ ಹೇಳಿದ್ದೇವೆ. ಇದರಲ್ಲಿ ಉಭಯ ಕನ್ನಡಗಳು ಮಿಶ್ರವಾಗಿದ್ದು ಹಳೆಗನ್ನಡಕ್ಕಿಂತ ಹೊಸಗನ್ನಡ ಪ್ರಯೋಗಗಳು ಹೆಚ್ಚಾಗಿದ್ದರೂ ಬಹಳ ಕಡೆಯಲ್ಲಿ ಕನ್ನಡ, ಸಂಸ್ಕೃತ ಶಬ್ದಗಳು ಶುದ್ಧರೂಪದಲ್ಲಿಯೇ ಪ್ರಯೋಗವಾಗಿರುವವು. ಅಲ್ಲಲ್ಲಿ ತದ್ಭವಗಳು ದೊರೆಯುತ್ತಿದ್ದರೂ ಅವು ರೂಢ ತದ್ಭವಗಳಲ್ಲದೆ ಪಾಂಡಿತ್ಯದ ಹವ್ಯಾಸಕ್ಕಾಗಿ ಪ್ರಯೋಗಿಸಿದ ವಿಲಕ್ಷಣ ತದ್ಭವಗಳಲ್ಲ. ಪ್ರಾಸಕ್ಕೋಸ್ಕರ ಕೆಲವೆಡೆಯಲ್ಲಿ 'ಹೊರಳು' ಯೆಂಬದರ ಬದಲಿಗೆ ಹೊಳ್ಳು; 'ಹರಳು'

ಯೆಂಬದಕ್ಕೆ ಹಳ್ಳಿ ಎಂಬ ಗ್ರಾಮ್ಯಪದಗಳು ಪ್ರಯೋಗವಾಗಿವೆ. ಕೃನ್ನಾಮ ಕೃದ್ವಾಚಿಗಳಲ್ಲಿ ವಕಾರವು ನಿತ್ಯವಾಗಿ ಲೋಪಿಸಲ್ಪಟ್ಟಿದೆ. ಪಾದಪೂರ್ತಿಗೆ ಸ್ವರಗಳು ಅನೇಕಾವರ್ತಿ ದೀರ್ಘವಾಗಿದ್ದರೂ ಕೆಲವೆಡೆಯಲ್ಲಿ ವಿಶೇಷಾರ್ಥವನ್ನು ಕೊಡುವವು. ಸ್ವರಗಳು ವಿಸಂಧಿಯಾಗಿ ಪ್ರಯೋಗವಾಗಿರುವದೇ ಹೆಚ್ಚು. ಮಾತ್ರೆಗಳು ಸರಿಯಾಗುವಂತೆ ಕೆಲವೆಡೆಯಲ್ಲಿ ಅನುಚಿತ ಸಂಧಿಯಾಗಿದ್ದು ದ್ವಂದ್ವಾರ್ಥವುಳ್ಳವುಗಳಾಗಿವೆ. ಇವನಲ್ಲಿ ಸಮಾಸಪದಗಳು ಬಹಳ ಕಡಿಮೆ. ಇದ್ದರೂ ಅವು ಹೆಚ್ಚಾಗಿ ಕನ್ನಡ ಸಮಾಸಗಳಲ್ಲದೆ ಸಂಸ್ಕೃತದವುಗಳಲ್ಲ. ಅಧಿಕಾರ್ಥವು ಕೆಲವೆಡೆಯಲ್ಲಿ ಹಳೆಗನ್ನಡ ಪದ್ಧತಿಯಂತೆ ತ್ರತೀಯ ಹಾಗೂ ಚತುರ್ಥಿ ವಿಭಕ್ತಿಗಳಿಂದ ಹೇಳೋಣವಾಗಿದೆ. 'ಹಂಗಿ ನರಮನೆಯಿಂದ ವಿಂಗಡದಗುಡಿ ಲೇಸು,' ಇತ್ಯಾದಿ. ಇಲ್ಲಲ್ಲಿ ಕೆಲವು ವ್ಯಾಕರಣ ದೋಷಗಳು ಕಂಡುಬಂದರೂ ಸರ್ವಜ್ಞನು ಪ್ರಯೋಗಿಸಿದ್ದೇ ಅವನ ವ್ಯಾಕರಣವೆಂದು ತಿಳಿಯತಕ್ಕದ್ದು.

( ೨ ) **ಛಂದಸ್ಸು** :— ತ್ರಿಪದಿಯೊಂದರಲ್ಲಿಯೇ ರಚಿಸಲ್ಪಟ್ಟಿರುವ ಇವನ ಪದ್ಯಗಳು ಬೇಸರಹುಟ್ಟಿಸುವವುಗಳೆಂದು ಅನೇಕಾವರ್ತಿ ಕಂಡರೂ ಸೂಕ್ಷ್ಮವಾಗಿ ನೋಡಿದರೆ ಸ್ವಾಭಾವಿಕ ಜಾಣ್ಮೆಯಿಂದ ಸುರಿಯುತ್ತಿರುವವು. ಇವುಗಳಲ್ಲಿ ಪ್ರಾಸಾಕ್ಷರವು ಪುನರುಕ್ತಿಯಾಗುತ್ತಿರುವ ಪ್ರತೀತಿಗಳೇ ಬಹಳ. ಇವನ ಛಂದೋಚತುರತೆಯಾಗಿ ಕೆಲವು ಪದ್ಯಗಳನ್ನು ಉದಾಹರಿಸುತ್ತೇನೆ.—

ವರ್ಣವ್ಯಾವೃತ್ತಿಗೆ.

ಕ್ರಮಶಃ ಗಕಾರ ಪುನರುಕ್ತಿ

ಗಂಡಗಂಬಲಿಯಿಕ್ಕಿ ಗಡುಗರಣಿಯನುಂಗಿ ।
ಗಂಡಬಂದಾಗ ನಗುವ ಹೆಣ್ಣನು ।
ಗುಂಡಿಗಿಕ್ಕೆಂದ ಸರ್ವಜ್ಞ ॥

ಕ್ರಮಶಃ ಕಕಾರ ಪುನರುಕ್ತಿ

ಕೊಟ್ಟು ಕುದಿಯಲಿಬೇಡ ಕೊಟ್ಟಾಡಿಕೊಳಬೇಡ।
ಕೊಟ್ಟು ನಾ ಕೆಟ್ಟೆನೆನಬೇಡ ಶಿವನಲ್ಲಿ ।
ಕಟ್ಟಿಹುದು ಬುತ್ತಿ ಸರ್ವಜ್ಞ ॥

ಆರಂಭವರ್ಣವ್ಯಾವೃತ್ತಿ.
ಮಕಾರ ಸಕಾರಕ್ಕೆ.

ಮಾಳಿಗೆಯು ಮನೆಯಾಗಿ ಮೇಳದ್ಹೆಂಡತಿಯಾಗಿ ।
ಸಾಗುವಾಕಾಲಕ್ಕೆ ಸಾಗರವು ಬಯಲಕ್ಕು ।
ಸಾಗದಾದಿನಕೆ ಸುರಿದಿರ್ದಶಿವನೊಲುಮೆ ಇತ್ಯಾದಿ

ಅಂತ್ಯವರ್ಣವ್ಯಾವೃತ್ತಿ.
ಅಕಾರಕ್ಕೆ

ನಲ್ಲ ಒಲ್ಲೀ ಒಲ್ಲ ನೆಲ್ಲಕ್ಕಿ ಬೋನೊಲ್ಲ ।
ಅಲ್ಲವನೊಲ್ಲ ಮೊಸರೊಲ್ಲ ಯಾಕೊಲ್ಲ ।
ಇಲ್ಲದಕೆ ಒಲ್ಲ ಸರ್ವಜ್ಞ ॥

## ಪದವ್ಯಾವೃತ್ತಿಗೆ.

ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು ।
ಎತ್ತು ಗಾಣವನು ಹೊತ್ತು ತಾ ನಿತ್ಯದಿ ।
ಸುತ್ತಿ ಬಂದಂತೆ ಸರ್ವಜ್ಞ ॥

ಮಿಂಡಿಯಾ ಗಂಡತಾ ದೊಡಿಗೆ ಹೋದರೆ ।
ಹಿಡಿಯ ಹೆಡಿಗೆಗೆ ಕೋಣನತೇದು ಕಣ– ।
ಗಂಡು ಹೊಡದಂತೆ ಸರ್ವಜ್ಞ ॥

## ಪ್ರಾಸಕ್ಕೆ.

ಅಧಿಕತ್ವ ಇಲ್ಲವೆ ಅವಧಾರಣೆಗಳಲ್ಲಿ ಪ್ರಯೋಗವಾಗುವವು.

ಎರಡಕ್ಕರ ಪ್ರಾಸ

ಮೆಚ್ಚಿಪ್ಪುದಾಸೆಯನು ಕಟ್ಟಿಪ್ಪುದಿಂದ್ರಿಯವ ।
ತೊಟ್ಟಿಪ್ಪುದುಳ್ಳ ಸಮತೆಯನು ಶಿವಪದವು ।
ಮುಟ್ಟಿಪ್ಪುದಯ್ಯ ಸರ್ವಜ್ಞ ॥

ದ್ವಿಸ್ವಪ್ರಾಸ.

ರಾತ್ರಿಯೊಳು ಶಿವರಾತ್ರಿ ಜಾತ್ರೆಯೊಳ ಶ್ರೀಶೈಲ ।
ಕ್ಷೇತ್ರದೊಳಧಿಕ ಶ್ರೀಕಾಶಿ ಶಿವತತ್ವ ।
ಸ್ತೋತ್ರದೊಳಧಿಕ ಸರ್ವಜ್ಞ ॥

ಅನುಪ್ರಾಸ

ಶಿವಭಕ್ತಿಯುಳ್ಳಾತ ಭವಮುಕ್ತನಾದಾತ ।
ಶಿವಭಕ್ತಿಯಿರದ ಭಕ್ತಂಗೆ ಎಂದೆಂದು ।
ಭವಮುಕ್ತಿಯಿಲ್ಲ ಸರ್ವಜ್ಞ ॥

ಅಂತ್ಯಪ್ರಾಸ

ಲಿಂಗದಾ ಗುಡಿಲೇಸು, ಗಂಗೆಯಾ ತಡಿಲೇಸು ।
ಲಿಂಗಿಸಂಗಿಗಳ ನುಡಿಲೇಸು ಭಕ್ತರ ।
ಸಂಗವೇಲೇಸು ಸರ್ವಜ್ಞ ॥

(೩) **ಅಲಂಕಾರ**— ಪ್ರೌಢಶೈಲಿಯ ರುಚಿಗೆ ಮರುಳಾದ ಕೆಲವು ಮೇಲ್ತರಗತಿಯ ಜನರು ರಸಹೀನವೆಂದು ಸರ್ವಜ್ಞನ ಪದ್ಯಗಳಿಗೆ ಮೂಗು ಮುರಿಯುವರು ಇದಕ್ಕಾಗಿ ಕೆಲವು ಉದಾಹರಣೆಗಳು—

ರೂಪಕಕ್ಕೆ—ಪದ್ಯ ೧೧೭೭, ೪೪೫, ೭೯೧, ೧೯೭, ೨೨೦. ಇತ್ಯಾದಿ.
ಯಮಕಕ್ಕೆ—ಪದ್ಯ ೨೦೦, ೧೧೧೫, ಇತ್ಯಾದಿ.
ಉತ್ಪ್ರೇಕ್ಷೆಗೆ—ಪದ್ಯ ೨೧೧, ೯೨೯, ಇತ್ಯಾದಿ.
ಉಪಮೆ—ಪದ್ಯ ೩೨೬, ೧೭೭೨. ೧೨೮, ೧೩೩, ಇತ್ಯಾದಿ.
ಶಬ್ದಶ್ಲೇಷ—ಪದ್ಯ ೫೯೦, ೧೫, ಇತ್ಯಾದಿ.
ಹಾಸ್ಯ—ಪದ್ಯ ೧೩೦೬, ೧೬೫, ೬೮, ೧೭೪, ೭೬, ಇತ್ಯಾದಿ.
ತಿಳಿ—ಪದ್ಯ ೧೭೬೯, ೬೯೨, ೧೨೬೩, ಇತ್ಯಾದಿ.
ಮಾಧುರ್ಯ—ಪದ್ಯ ೧೨೧೦, ೬೧೮, ಇತ್ಯಾದಿ.

ಅವಲೋಕನ—ಇಲ್ಲಿ ಸರ್ವಜ್ಞನ ಸ್ವೋಪಜ್ಞತೆಯು (Originality) ಕಂಡು ಬರುತ್ತದೆ. (ಪದ್ಯ ೪೫೭, ೧೭೧೧, ೧೧೧೭, ೧೮೩೯, ಇತ್ಯಾದಿ)

ಭಾವಸೌಮನಸ್ಯ—ಪದ್ಯ ೭೫, ೧೫೫, ಇತ್ಯಾದಿ.

ಅಸಂಭವಾಲಂಕಾರ—ಪದ್ಯ ೯೨೨, ೧೬೧೩, ೧೬೧೪, ಇತ್ಯಾದಿ.

ಅದ್ಭುತ—ಪದ್ಯ ೧೫೨, ೫೪, ಇತ್ಯಾದಿ.

ಹಿಂದೆ ಹೇಳಿದ ಪಂಚಲಕ್ಷಣಗಳಲ್ಲಿ ಕೆಲವುಗಳಿಗೆ ಉದಾಹರಣೆಗಳನ್ನು ಈ ಮೊದಲು ಕೊಟ್ಟಿದ್ದೇವೆ. ನಾನಾತ್ವಕ್ಕೆ ಪಂಚಪದ್ಧತಿಗಳೆಲ್ಲವೂ ಉದಾಹರಣೆಗಳೆಂದು ತಿಳಿಯತಕ್ಕದ್ದು. ಲಘುತ್ವಕ್ಕೆ ಬೇಕಾದ ಉದಾಹರಣೆಗಳನ್ನು ಮಾತ್ರ ಮುಂದೆ ಕಾವ್ಯಾಭ್ಯಾಸದಲ್ಲಿ ಕೊಡುವೆವು.

(೪) **ಪ್ರಯೋಗ ವೈವಿಧ್ಯ**—ಶಬ್ದಗಳನ್ನು ಹೆಕ್ಕಿಕೊಳ್ಳುವಲ್ಲಿ, ಹೆಕ್ಕಿದ ಶಬ್ದಗಳನ್ನು ಯೋಜಿಸುವಲ್ಲಿ ಯೋಜಿಸಿದ ಶಬ್ದಗಳನ್ನು ಮೇಣದಂತೆ ತಿರುಗಿಸುವಲ್ಲಿ ಸರ್ವಜ್ಞನಿಗಿರುವ ಸ್ವಾಭಾವಿಕ ಜಾಣ್ಮೆಯನ್ನು ತೋರಿಸುವದಕ್ಕೆ ಅವನ ಕೆಲವು ಅಪೂರ್ವ ಪ್ರಯೋಗಗಳನ್ನು ಉದಾಹರಿಸುವೆವು. ಕೆಳಗೆ ಬರೆದ ಶಬ್ದ ಶೈಲಿಗಳು ಸರ್ವಜ್ಞನ ಟಂಕಸಾಲೆಯಿಂದ ಹೊರಬಿದ್ದ ಹೊಸನಾಣ್ಯಗಳೆಂದು ತಿಳಿಯತಕ್ಕದ್ದು.

ಪದ ವೈಚಿತ್ರ್ಯಕ್ಕೆ—ಅಟ್ಟಿಕ್ಕುವಾಕೆ, ಅಪ್ಪುವಳು ಮನೆಯಾಕೆ, ಇಂಬರಿಯುವಾಕೆ, (ಹೆಂಡತಿ). ಆಕೆ, ಇಂಬರಿಯದಾಕೆ, ಒಪ್ಪುವಳು ಒತ್ತೆಗೊಂಬಳು ( ಸೂಳೆ ). ಹೊಂಬೇರು ( ಬಂಗಾರ ). ತಗ್ಗಿನ ಕುಣಿ, ಉಚ್ಚೆಯ ಬಚ್ಚಲು ಸಂದಿಯ ಗಾಯ, ಕಾಮನ ಕೆರೆ (ಯೋನಿ). ಗುದ್ದುಗಣ್ಣವ (ಮುದಕ). ಬಿದ್ದ ಮೊಲೆಯುವಳು (ಮುದಕಿ). ಕಾಡುನುಡಿ, ಕಿರಿಮಾತು (ಬೈಗಳು). ನೆರೆಮಾತು (ಪಟ್ಟಿಂಗ). ಕನ್ನದ ಸೂರೆ (ವ್ಯಭಿಚಾರ) ಕೆಟ್ಟ ಕಕುಲತೆ (ಲೋಭತ್ವ). ಒದಗುವವ (ವಿಟ). ತನುವಿನೊಳಗು (ಶರೀರಾರೋಗ್ಯ) ತುತ್ತಿನ ಚೀಲ (ಹೊಟ್ಟೆ). ಹುತ್ತಿನ ಹುಳ (ಹಾವು). ಹೆಡೆಹಾವು (ನಾಗಸರ್ಪ). ಗಂಡು (ಬಲಭಾಗ). ತುತ್ತೆಂಬ ಶಿವ (ಅನ್ನ). ಹಿಡಿಹಿಟ್ಟು (ಮುದ್ದೆ). ಹಾರುವಹುಳ (ಪತಂಗ). ಕಿರಿಗೂಸು (ಮೈನೆರೆಯದ ಹುಡುಗಿ). ಮುದ್ದುಮನುಜ (ಸುಗುಣಿ). (ಹುಳಿ ಇಟ್ಟಿರ್ದ) ತಿಳಿ (ಮಜ್ಜಿಗೆ). ಹೊರಗಿದ್ದುದು (ಪರದ್ರುವ್ಯ). ಇಂಗುತಿಂಬಾತ (ಬ್ರಾಹ್ಮಣ). ನಾರುಬೇರು (ಬಜೆ). ಗಿಡ (ಔಷಧ). ಕೊಲುವ ಧರ್ಮ; ಕೊಂದುನೋಡುವ ಭಕ್ತಿ

ವೈದಿಕ ಧರ್ಮ. ಕರ್ಮಮಾರ್ಗ ಕುಂದುಗುಲವವಳು (ಹೊಲತಿ). ಎರಡು ನುಡಿ (ಸುಳ್ಳು). ಎಲುವಿನ ಮನೆ (ದೇಹ). ಮೋಟ ವಿದ್ಯ (ಒಕ್ಕಲುತನ). ಅಂಬರದ ಕಲಹ (ಗುಡುಗು ಸಿಡಿಲು). ರೂಢಿಗೀಶ್ವರ (ಶಿವ). ರೂಢಿಪತಿ (ಅರಸು). ಮುನ್ನಿನುತ್ತಮದ ಫಲ (ಪೂರ್ವದ ಪುಣ್ಯ). ಅರವಿನಾ ಅರಿವು, ಸಂದರಿವು (ಬ್ರಹ್ಮಜ್ಞಾನ). ನಾಡನುಡಿ (ರಾಜಕೀಯ ಗೋಷ್ಠಿ). ಮುಂತಾದವುಗಳೇ. ಇವು ಅವನ ಶಬ್ದರಚನಾ ಸಾಮರ್ಥ್ಯವನ್ನು ವ್ಯಕ್ತಗೊಳಿಸುತ್ತವೆ.

ಪ್ರಯೋಗ ವೈಚಿತ್ರ್ಯಕ್ಕೆ—ಉರಿತಗ್ಗಿ ಉದಕ ಕಂಡಂತೆ (ಪ. ೭೫), ಬೆಳಗಿನಿಂದೊಳಗ ನರಿದಡೆ (ಪ. ೮೯). ಅಚ್ಚಳದು ನಿಜದಿನಿಂದಂತೆ (ಪ. ೧೧೫, ಲಿಂಗದ ಕ್ಷೇಮ ಘನವಾಗಿ (ಪ. ೧೪೧), ಮುದ್ರೆಯಿಂದಧಿಕ ಮಾತಿಲ್ಲ (ಪ. ೧೯೨, ಕಲ್ಲಲ್ಲಿ ಕಳೆಯ ನಿಲಿಸಿದ (ಪ. ೧೬೨), ಮಣಿಯಿಸುವ ದೈವ ಘನವಾಗಿ (ಪ. ೧೯೮), ಬಾಹ್ಯಗಳಳಿದು ಭಜಿಪಂಗೆ (ಪ. ೨೨೦), ಚಿತ್ರತ್ವತನ್ನನಿಜದೊಳಗೆ (ಪ. ೨೭೩), ನೋಟದಿ ನಿಜವನರಿವ ಸುಜ್ಞಾನಿಯ (ಪ. ೩೬೩), ಹಿರಿಯರ ಕ್ಷಮೆಗೆ ಮುನಿಸಾರೆ (ಪ. ೪೫೭), ಕೊಡುವಾತನೇ ಹರನು ಪಡೆವಾತನೇ ನರನು (ಪ. ೫೪೨), ಬೆಂಬುದನು ಬಿತ್ತಿ ಬೆಳೆಬುಂಬ ದಾಸೋಹ (ಪ. ೫೩೪), ಧರ್ಮ ಹೊನ್ನಾಗದೆ ಬಿಡದು (ಪ. ೫೪೫ ಅರಿತು ಕರ್ಮನ ಬಿಟ್ಟು ಮರೆತು ಧರ್ಮವ ಮಾಡು (ಪ. ೫೭೮), ಹೊತ್ತನೆ ಕೊಂದು ಹುಸಿವನಿಗಿಂದಲು (ಪ. ೫೮೪), ಕೊಟ್ಟು ಬಹ ಕಾಲದಲಿ (ಪ. ೬೦೫), ಒಕ್ಕಲನು ಕೊಂಡಾಡಬೇಕು (ಪ. ೬೪೫), ಎದ್ದೆದ್ದು ನಿಲ್ಲದಿರು (ಪ. ೬೬೧), ಹೃದಯಶೂನ್ಯರುಗಳೊಲವಿಂದ (ಪ. ೭೧೬), ಹಗೆಗಳ ಕೊಂಡಾಟ ಹೊಲ್ಲ (ಪ. ೭೪೧). ದುರುಳರ ಹರುಷವೇಸಂಜು (ಪ. ೭೩೨), ಮುಟ್ಟು ಗಂಡವಳನ್ನು ಮುಟ್ಟಲೊಲ್ಲರು ನೋಡ (ಪ. ೮೬೯), ನರಕದಲಿ ಹೊಕ್ಕಾಡ ಕಲಿತ (ಪ. ೯೦೮), ಕಪ್ಪಗೊರಳನಕರುಣದಿ (ಪ, ೯೪೬), ಬಸವನ ಮುದ್ರೆ ಮರೆದಾವು (ಪ. ೯೬೦). ಹೊನ್ನಿನ ಪುಣ್ಯವದು ಬೇರೆ (ಪ. ೧೦೫೯), ಅರಿವಿಗೆ ಹಿರಿದು ಕಿರಿದಿಲ್ಲ (ಪ. ೧೦೬೦), ವರೆಗಲ್ಲಿನಂತೆ ವಿಧಿಯಿರಲು (ಪ. ೧೦೬೨), ನೊಂದು ತಾ ನೊಯಿಸದವ ದೈವ (ಪ. ೧೦೭೦), ಇಷ್ಟುದ್ದ ಹುಸಿದನೆಂದರಿಗು (ಪ. ೧೦೭೭) ನಾಯಿಗಳಾರು ಇರುವನಕ (ಪ. ೧೦೮೩), ವದನೆಯ್ದರ ಕಡೆಗಣ್ಣ ನೋಟದಿ ನಿಂದಿಹನು ಸ್ಮರನು (ಪ. ೧೦೮೮), ಕೊಂಡಾಡುತಿಚ್ಛೆ ನುಡಿದರೆ (ಪ. ೧೧೩೭), ಹೊನ್ನೆಂಬ

ಶ್ರುತಿಯು ಕೇಳಿದರೆ (ಪ. ೧೧೬೪), ಕಣ್ಣಿನಿಂದಿಹವು ಪರವಕ್ಕು (ಪ. ೧೧೬೯), ದೊರೆಯಲ್ಲಿ ತೇಜಪಡೆದಂಗೆ (ಪ. ೧೧೮೧), ಹೋದಲ್ಲಿ ಮಾತಮರೆದರೆ (ಪ. ೧೨೨೪), ಮೇದ ಕಬ್ಬಿನ ಸಿಪ್ಪೆ(ಪ. ೧೨೧೧), ಬಡತನವೆಂಬ ಹುಲಿಗೂಡಿ ಬರುವಾಗ (ಪ. ೧೨೪೯), ಗರಸದೊಡನೆ ಮರಹೋರೆ (ಪ. ೧೨೯೭), ಮುರಿದ ಕಾರ್ಯವನು ಬೆಸೆವಡೆ (ಪ. ೧೩೨೬), ಸುಣ್ಣದ ಕಲ್ಲನೊಳಗಡಗಿ ಸುಡುಗಿಚ್ಚು ತಣ್ಣಗಿದ್ದಂತೆ(ಪ. ೧೬೧೭), ಹುಡಿಕಿನೋಡುವದು ಪರಬೊಮ್ಮ ಜೋಯಿಸಗೆ ಕೊಡುವದೊಂದಡಿಕೆ (ಪ. ೧೪೬೮) ಇತ್ಯಾದಿ.

ಸರ್ವಜ್ಞನ ಕೆಲವು ಕಟ್ಟಾಣೆಗಳು—ಪರಿಮಾಣವಕ್ಕು ಪದವಕ್ಕು, ಕೈಲಾಸ ನೆರೆಮನೆಯುಕ್ಕು. ಹಾಳೂರ ಶುನಕ. ಬಟ್ಟೆಬೇಡೆಂದ, ದಾರಿಬೇಡೆಂದ. ಗಾಳಿ ಬೇಡೆಂದ. ಕೀಲಬೇರೆಂದ. ಗೊತ್ತು ತಿಳಿಯೆಂದ. ಮಣ್ಣುಮುಸಿಯಾದ. ಮಸಿವಣ್ಣವೆಂದ. ಹುಡಿಯು ಮಣ್ಣೆಂದ. ಸಾವಿಂಗೆ. ಸನುತಿಂಗೆ ಆವುದಂತರವಯ್ಯ ? ಈವಂಗೆ ದೇವಂಗೆ ಆವುದಂತರವಯ್ಯ? ಹಂದಿಯೂ ಗಜವುಸರಿಯೆಂಬ. ಕೊಂಡೆಯನು ಕಲಿಯು ಒಂದೆಂಬ. ಮೂರಿಟ್ಟರಾದಕ್ಕು ಈಚಲೊಂದೆಡೆಗೆ ಉಪಕಾರಿ. ಇದ್ದಿಲೊಂದೆಡೆಗೆ ಉಪಕಾರಿ. ಕಳ್ಳನೊಂದೆಡೆಗೆ ಉಪಕಾರಿ. ಮೂರ್ಖನೊಡಹೋರಬೇಡೆಂದ. [ಧನಕನಕ] ಹೋದ ಮರುದಿನ ಮಾತನಾಡುವ ನೆಗ್ಗ[ಹೆಡ್ಡ] ಹೆಣ್ಣಿನ ಬಗೆಯು ನಂಬುವದು. ಸೊಲ್ಲನಂಬುವದು. ಮಾತನಂಬುವದು ಇತ್ಯಾದಿ.

ಒಮ್ಮೆ ಕೇಳಿದರೆ ಮತ್ತೂ ಮತ್ತೂ ಅನ್ನುವದಕ್ಕೆ ಪ್ರೇರಣೆಯಾಗುವ ಕೆಲವು ಪದ್ಯಗಳು—

ಬೆಟ್ಟ ಕರ್ಪುರವುರಿದು ಬೊಟ್ಟಿಡಲು ಬೂದಿಲ್ಲ ।
ಮುತ್ತು ನೀರೊಳು ಪುಟ್ಟಿ । ಮತ್ತೆ ನೀರಪ್ಪುದೇ? ।
ಶಿಪ್ಪವನು ನಂಬಿವಡೆ । ತಪ್ಪದೇ ತಡಿಗಹುದು. ।
ಉಣ್ಣೆ ಕೆಚ್ಚಲೊಳಿರ್ದು । ಉಣ್ಣದದು ನೊರೆವಾಲ ।
ಸೋರುವಾ ಮನೆಯಿಂದ । ದಾರಿಯಾ ಮರಲೇಸು ।
ತೋಟದಾ ಬೇಲಿಯುನು । ದಾಟದವರಾರಣ್ಣ ।
ಸತ್ತು ಹೋದರೆ ನಿನಗ । ದೆತ್ತಣದು ಮೋಕ್ಷವೈ ।
ಆದ್ವಯಿತ ತಾನಾಗಿ । ಯುದ್ಧವಿನ್ನಾರೊಡನೆ ।
ಕೊಲುವಕೈಯೊಳು ಪೂಜೆ । ಮೆಲುವ ಬಾಯೊಳು ಮಂತ್ರ ।
ಅಲ್ಲ ಸಿಹಿಯಾದಂದು । ನೆಲ್ಲಿ ಹಣ್ಣಾದಂದು । ಇತ್ಯಾದಿ.

ಇದರಿಂದ ಸರ್ವಜ್ಞನು ಒಬ್ಬ ಪ್ರಾಸಾದಿಕ ಕವಿಯಾಗಿದ್ದು ಲಕ್ಷ್ಮನು ಹೇಳುವಂತೆ 'ಬರೆದಮೇಲ್ ತೊಡೆವ' ಕವಿಯಲ್ಲವೆಂದೂ 'ಪದಗಳನಿಟ್ಟು ಮರಳಿ ಯೋಚಿಪ' ಕವಿಯಲ್ಲವೆಂದೂ ತಿಳಿದು ಬರುತ್ತದೆ. 'ಕನ್ನಡ ಜಾಣ'ನಾದ ಇವನ ವಚನಗಳು ಲಕ್ಷಣಯುಕ್ತವಾಗಿದ್ದು ಇವನ ಪ್ರಾತಿಸ್ವಿಕ ವಾಗ್ಧೋರಣೆ, ಕಾವ್ಯಕುಶಲತೆ, ಸುಂದರಸರಣಿ ಮುಂತಾದವುಗಳು ಹುಟ್ಟಿನಿಂದಲ್ಲದೆ ಸಾಧನ ದಿಂದ ಯಾರಿಗೂ ಬರಲರಿಯುವೆಂದು ವಿಶದವಾಗುತ್ತದೆ. ಇದು ಅವನ ಗ್ರಂಥ ವನ್ನು ಸೂಕ್ಷ್ಮನಾಗಿ ಅಭ್ಯಾಸಿಸಿದಂತೆ ಹೆಚ್ಚುಚ್ಚು ಅನುಭವಕ್ಕೆ ಬರುವದು.

**ವೀರತನ ವಿತರಣವು ಸಾರಗನ ಚಪಲತೆಯು ।**
**ಚಾರುತರರೂಪು ಚದುರತನವೆಲ್ಲರಿಗೆ।**
**ಹೋರಿದರೆ ಬಹುದೆ? ಸರ್ವಜ್ಞ * ॥**

## ೨. ಕಾವ್ಯಾಭ್ಯಾಸ.

ಇದುವರೆಗೆ ಸರ್ವಜ್ಞನ ಭಾಷಾಸಂಬಂಧವಾಗಿ ವಿಚಾರಿಸಿದ್ದಾಯಿತು. ಈಗ ಅವನ ಕವಿತೆಯನ್ನು ಕುರಿತು ಸಾಧಾರಣವಾಗಿ ಬರುವ ಆಕ್ಷೇಪಗಳನ್ನು ದೃಷ್ಟಿಸಿ ಅವನ ಕಾವ್ಯಾಭ್ಯಾಸದಲ್ಲಿ ಮುಖ್ಯವಾಗಿ ನೆನಪಿನಲ್ಲಿಡತಕ್ಕ ಸಂಗತಿಗಳನ್ನು ಮಾತ್ರವೇ ಇಲ್ಲಿ ಹೇಳುವೆವು. ಭರತಖಂಡದ ಶೇಕ್ಸಪೀಯರನೆಂದೆನ್ನಿಸಿಕೊಳ್ಳುವ ಕಾಳಿದಾಸನ ಶಾಕುಂತಲ, ಋತುಸಂಹಾರಾದಿ, ಉಚ್ಚತಮ ಗ್ರಂಥಗಳನ್ನೋದಿ ದವನು ಸರ್ವಜ್ಞನ ವಚನಗಳನ್ನು ನೋಡಿ ಇದೊಂದು ಕಾವ್ಯಗ್ರಂಥವೇ? ಎಂದು ಅದನ್ನು ಬಿಸಾಡಿಬಿಡಬಹುದು. ಭರ್ತೃಹರಿಯ ವೈರಾಗ್ಯಶತಕ, ನೀತಿಶತಕ, ಶೃಂಗಾ ರಶತಕಗಳನ್ನೋದಿದವನು ಸರ್ವಜ್ಞನ ಪಾರಮಾರ್ಥಿಕ, ನೈತಿಕ, ಲೌಕಿಕಪದ್ಯಗ ಳನ್ನು ನೋಡಿ ಇವು ಅಂದಂತೆ ಅನ್ನುವ ಎಂಜಲು ಕವಿಯ ಗುಂಜಾಟಗಳೆಂದು ಹಿಯ್ಯಾಳಿಸಬಹುದು. ವೀರರಸಭರಿತವಾದ ರನ್ನನ ಗದಾಯುದ್ಧ, ವರ್ಣನಾತ್ಮ ಕವಾದ ಷಡಕ್ಷರಿಯ ರಾಜಶೇಖರವಿಲಾಸ, ಲಕ್ಷಣಯುಕ್ತವಾಗಿದ್ದು ಮಧುರ ಹಾಗೂ ಚಮತ್ಕಾರ ಶೈಲಿಗಳಿಂದ ಒಪ್ಪುತ್ತಿರುವ ಲಕ್ಷ್ಮೀಶನ ಜೈಮಿನಿಯ ಭಾರತ ಮುಂತಾದ ಉದ್ಗ್ರಂಥಗಳನ್ನೋದಿದವನು ಸರ್ವಜ್ಞನ ಕವಿತೆಯು ರಸನುಂಗಿ ಉಗಿದೊಗೆದ ಒಣಸಿಪ್ಪೆಯೆಂದು ಹೆಸರಿಡಬಹುದು. ವಿದರ್ಭಶೈಲಿ. ಪ್ರೌಢವಾ ಕ್ಸರಣಿಯ ರುಚಿಯೊಂದನ್ನರಿತು ಸಂಗಡಲೇ ಪಾಂಡಿತ್ಯಕ್ಕೆ ಮರುಳಾಗುವ ಉಚ್ಚ

---

* ೧೩೭೧.

ವಾಙ್ಮಯ ಪ್ರಿಯರಾದ ಕೆಲವು ಕನ್ನಡಿಗರಿಗೆ ಹೀಗನಿಸಬಹುದಷ್ಟೆ. ಆದರೆ ತಮ್ಮ ಸ್ಥಾನವನ್ನು ಬಿಟ್ಟು ಸರ್ವಜ್ಞನ ಸ್ಥಾನದಲ್ಲಿ ನಿಂತು ಕನ್ನಡದ ಜೀವಾಳವನ್ನರಿತ ಪ್ರಾಂಜಲಬುದ್ಧಿಯ ಯಾವ ಕನ್ನಡಿಗನಿಗೂ ಹೀಗೆ ತೋರದು. ಇಲ್ಲಿ ಎಚ್. ನಾರಾಯಣರಾವ ಎಂಬವರು ಈ ಬಗ್ಗೆ ಆಂಗ್ಲದಲ್ಲಿ ಬರೆದ ಮಧ್ಯಾಭಿಪ್ರಾಯದ ನಿಬಂಧದಿಂದ ಕೆಲವು ಮಾತುಗಳನ್ನು ಎತ್ತಿ ಪುಟದಡಿಯಲ್ಲಿ ಕೊಟ್ಟಿದ್ದೇವೆ.* ಇದರಲ್ಲಿ ಸರ್ವಜ್ಞನ ವಿಷಯವಾಗಿ ಹೇಳಿರುವ ಕೆಲವು ಸಂಗತಿಗಳು. ಸ್ವಲ್ಪಮಟ್ಟಿಗೆ ಸತ್ಯವಾಗಿದ್ದರೂ ಹಿಂದೆ ಹೇಳಿದಂತೆ ಸರ್ವಜ್ಞನ ಪರಿಸ್ಥಿತಿಯಲ್ಲಿ ನಿಂತು, ಅವನ ತರಗತಿಯೆಂಥದ್ದೆಂಬುವದನ್ನು ತಿಳಿದುಕೊಂಡರೆ ಮಾತ್ರ ಇವನ ವಿಷಯದಲ್ಲಿ ಬೇರೆ ಅಭಿಪ್ರಾಯವಾಗುವದು.

ಸರ್ವಜ್ಞನ ಅಸಾಧಾರಣ ಸ್ಮರಣಶಕ್ತಿ, ಅವಲೋಕನಶಕ್ತಿ, ಸಂಗ್ರಹಶಕ್ತಿ ನಿರ್ಣಯಶಕ್ತಿ ಮೊದಲಾದವುಗಳನ್ನು ಪರ್ಯಾಲೋಚಿಸಿದರೆ ಮೇಲ್ಪಂಡ ಕವಿಗಳು ತೋರಿಸಿದ ಕಾವ್ಯ ಪರಾಕ್ರಮವನ್ನು ಇವನು ಪ್ರಯತ್ನಿಸಿದ್ದರೆ ಮಾಡಬಹುದಿತ್ತೆಂದೂ ಇವನು ಮಾಡಿದ್ದನ್ನು ಮಾತ್ರ ಯಾರೂ ಮಾಡಲಾಗದೆಂದೂ ತಿಳಿದು ಬರುತ್ತದೆ. ಇದೇ ಸರ್ವಜ್ಞ ಕವಿಯ ಅನನ್ಯತ್ವ. ಸುಣ್ಣವೂ ಅರುಷಣವೂ ಕೂಡಿ ಎರಡರಲ್ಲಿಲ್ಲದ ತೀರ ಹೊಸದೊಂದು ಬಣ್ಣವಾಗುವಂತೆ ಆರಾಧ್ಯ ಬ್ರಾಹ್ಮಣನಾದ ಬಸವರಸನಿಂದ ಪ್ರಾಪ್ತವಾದ ಆರ್ಯರ ತಲೆಯೂ ಅನಾರ್ಯರಾದ ಕುಂಬಾರ

---

*With one more remark I shall conclude this article. I have all along called Sarvajna a poet. But his poetry is by no means of a high order. Saraswati seems to have touched his vocal organ with better effect than his heart. So that jingling numbers escape his lips pretty profusely but it is not often that we discover sparks of the poetic fire in the heap of rhymes which we have inherited from him. What is written on technical subjects like Astronomy, Alchemy, &c. must necessarilly be more or less prosaic. No doubt poems have been written in other climes on 'The Sugar-cane,' 'The cheese' and such like subjects. But, not to speak of the inferior merits of these poems, only those aspects of the themes which are susceptible of poetical treatment are dealt within them.

ಮೂಳಿಯಿಂದ ದೊರೆತ ದ್ರವಿಡ ನಾಲಿಗೆಯೂ ಚೈತನ್ಯದಲ್ಲಿ ಅತ್ಯಂತ ಪ್ರಮಾಣ ದಿಂದ ಸಮ್ಮಿಶ್ರವಾಗಿ ಕವಿಲೋಕದಲ್ಲಿ ಹೊಸ ಮೂರ್ತಿಯನ್ನೇ ಸೃಷ್ಟಿಸಿಯುವೆ. ಕನ್ನಡಿಗರಲ್ಲಿ ಯಾರಾದರೂ ತತ್ಪೂರ್ವದಲ್ಲಿ ಈ ಹೊಸ ಮಾದರಿಯ ಕವಿಯು ಇಲ್ಲದಿರುವವರೆಗೆ ಕರ್ನಾಟಕ ಕಾವ್ಯಪ್ರದರ್ಶನ ಶಾಲೆಯು ಅಪೂರ್ಣವಾದದ್ದೇ ಎಂದು ಚಿಂತಿಸುತ್ತಿದ್ದರೆ ಅವನು ಸರ್ವಜ್ಞನಲ್ಲದೆ ಬೇರೊಬ್ಬ ಕವಿಯಿಲ್ಲ. ಕರ್ನಾಟಕದಲ್ಲಿ ಇಂಥ ಕವಿಯು ಅರುಣೋದಯವಾದದ್ದು ಕನ್ನಡಿಗರ ಅಭ್ಯುದಯವೇ ಸರಿ. ಇವನ ಕಾವ್ಯಾಭ್ಯಾಸವು ಹೊಸತರದ್ದಿದ್ದು ಕನ್ನಡಿಗರಲ್ಲಿ ಈ ಬಗ್ಗೆ ನೂತನಾಭಿರುಚಿಯುಂಟಾಗಬೇಕಾದ್ದರಿಂದ ಈ ಭಾಗವನ್ನು ಸರ್ವಜ್ಞನ ವಚನಗಳಿಗೆ ಕಾವ್ಯಗಳೆಂದೆನ್ನಬಹುದೇ? ಹೀಗಿದ್ದರೆ ಅವು ಯಾವ ವರ್ಗಕ್ಕೆ ಸೇರುವವು? ಅವನ ಕವಿತೆಯ ಮುಖ್ಯ ಲಕ್ಷಣಗಳಾವುವು? ಅವನ್ನು ಅಭ್ಯಾಸಿಸುವ ರೀತಿಗಳಾವುವು? ಇವೇ ಮುಂತಾದ ನಾಲ್ಕು ಪ್ರಶ್ನಾತ್ಮಕ ವಿಷಯಗಳಾಗಿ ವಿಚಾರಿಸುವೆವು.

**ಸರ್ವಜ್ಞನ ವಚನಗಳು ಕಾವ್ಯವೇ?** ಸರ್ವಜ್ಞನ ವಚನಗಳಿಗೆ ಕಾವ್ಯಗಳೆಂದೆನ್ನಬಹುವೋ ಇಲ್ಲವೋ ಎಂಬವನ್ನು ನಿರ್ಣಯಿಸುವ ಪೂರ್ವದಲ್ಲಿ ಕಾವ್ಯವೆಂದರೇನು? ಎಂದು ತಿಳಿದಿರಬೇಕಾತ್ತದೆ. ಆದ್ದರಿಂದ ಈ ಬಗ್ಗೆ ಎರಡು ಮಾತು

---

Sarvajna's stanzas on similar subjects, on the other hand, seem to have been written solely and simply for the purpose of conveying information. We are indeed struck with the images presented to our mind with a freedom and daring which Sarvajna alone can show; although, it mnst be confessed that in many places this boldness of imagination is maintained ta the sacrifice of elegance of taste. In my openion, however. Sarvajna has not done very much in the way of 'Enriching the blood of the world' by his thoughts. as poets, 'those rare souls,' should according to Tennyson, do; but he has doon good service to us by moulding in to neat, terse and easily remembered forms, the wisdom of the many and the wit of the philosophers. (*Madras Christian College Magazine Oct. 1885, Vol. III Page 271-72.*)

ಗಳನ್ನು ಇಲ್ಲಿ ಹೇಳಿ ವಿಷಯವನ್ನು ಮುಂದರಿಸುವೆವು. ಛಂದಸ್ಸಿನ ಪ್ರಕಾರ ಮಾತುಗಳನ್ನು ಜೋಡಿಸುವದೇ ಕಾವ್ಯವೆಂದು ಕೆಲವರು ಹೇಳುವರು. ಆದರೆ ಇದು ಕಾವ್ಯವಲ್ಲ. 'ಕಾವ್ಯವು ಇಂದ್ರಿಯಶಕ್ತಿ ಮತ್ತು ಭಾವನಾಶಕ್ತಿ ಇವುಗಳ ಭಾಷೆಯಾಗಿದೆ.' ಕವಿತೆಯ ವ್ಯಾಖ್ಯೆಯನ್ನು ಹೇಳುವದು ಕಷ್ಟವಿದ್ದಾಗ್ಯೂ ಯಾವ ದೊಂದು ವಿಚಾರವನ್ನು ಹೇಳುವಾಗ ಉಂಟಾಗುವ ಕಂಪವೇ ಕವಿತೆಯೆಂದೆನ್ನ ಬಹುದು. ಚಿತ್ತವೃತ್ತಿಗಳುಂಟಾಗದ ಕವಿತೆಯು ಕವಿತೆಯೇ ಅಲ್ಲ. ಕಂಡದ್ದನ್ನು ಕಂಡಂತೆ ಚಿತ್ರಿಸುವ ಶಕ್ತಿಗೆ ಇಂದ್ರಿಯ ಶಕ್ತಿಯೆಂದೂ ವಿಷಯಗಳನ್ನು ಮನಸ್ಸಿನಲ್ಲಿ ಪ್ರತ್ಯಕ್ಷ ಅವತಾರವೆತ್ತುವಂತೆ ಮಾಡುವಂಥ ಸಾಮರ್ಥ್ಯಕ್ಕೆ ಭಾವನಾಶಕ್ತಿಯೆಂದೂ ಹೆಸರು. ಇವೆರಡೂ ಶಕ್ತಿಗಳಿಂದುಂಟಾದ ಜೀವನ ಕೃತಿಯೇ ಕವಿತೆ. ವ್ಯಾಕರಣ, ಛಂದೋಲಕ್ಷಣಗಳಿಂದ ಕೂಡಿದ್ದರೂ ಭಾವನಾಶಕ್ತಿ ರಹಿತವಾಗಿರುವ ಕವಿತೆಯು ಜೀವವಿಲ್ಲದ ದೇಹದಂತಿರುವದು. ಭಾವನಾಶಕ್ತಿಗೆ ಅಲಂಕಾರ, ಶೃಂಗಾರ ವೀರಕರುಣಾದಿ ನವರಸಗಳು ಸೇರುವುವು. ಇಂದ್ರಿಯ ಶಕ್ತಿಯು ವ್ಯಾಕರಣನಿಯಮ ಛಂದೋನಿಯಮಗಳಿಗೆ ಅಧೀನವಾಗಿರುವದು. ಭಾವನಾಶಕ್ತಿಯಾದರೋ ಬಹು ಸ್ವಾತಂತ್ರ್ಯವುಳ್ಳದ್ದಾಗಿದ್ದು ಯಾವ ನಿಯಮಗಳನ್ನೂ ಲೆಕ್ಕಿಸದು. ಸರ್ವಜ್ಞನ ಕವಿತೆಯು ಹಿಂದೆ ಉದಾಹರಣೆಗಳಿಂದ ತೋರಿಸಿದಂತೆ ಉಭಯ ಲಕ್ಷಣಗಳುಳ್ಳದ್ದಾಗಿದ್ದು ಹೆಚ್ಚಾಗಿ ಎರಡನೆಯ ತರಗತಿಗೆ ಸೇರುವದೆಂದು ಹೇಳಬಹುದು.

**ಇವು ಯಾವ ವರ್ಗದವು ?** "ಸರ್ವಜ್ಞನ ತ್ರಿಪದಿಗಳನ್ನೋದಿದೊಡನೆ ಇದೆಂಥ ಕಾವ್ಯ ? ಇದು ನೀತಿಯ ರಗಳೆಯಷ್ಟೆ ಎಂದು ಕೆಲವರು ಹೇಳಬಹುದು. ಕಾವ್ಯರೂಪವಿಲ್ಲದ ಬಿಡಿಬುದ್ಧಿಮಾತುಗಳಿಗೆ ಹೀಗೆನ್ನಬೇಕೆಂದೆನಿಸುವದೇನೋ ನಿಜ. ಅರ್ಥಾಂತರನ್ಯಾಸವು ಮನೋಹರವಾಗುವ ಕಾರಣವೆಂದರೆ ಅಲ್ಲಿ ಬುದ್ಧಿಮಾತಿಗೆ ಕಾವ್ಯರೂಪವಿರುವದೆಂದೇ. ಮುಕ್ತಕಗಳ ಕೊರತೆಯಾವರು ಇದೇ ಇದ್ದು ಅವುಗಳಿಗೆ ಕಾವ್ಯಗುಣದ್ರವ್ಯ ಪೋಷಣೆಯಿಲ್ಲದಿರುವದೇ ಕಾರಣವಾಗಿದೆ. ಕಾಗದದ ಹುವ್ವು, ಹರಿದಿಟ್ಟ ಬಿಡಿ ಹುವ್ವು, ಬಳ್ಳಿಯ ಕುಡಿಗಂಟಿರುವ ಹುವ್ವು ಇವುಗಳಿಂದ ಮನಸ್ಸಿನ ಮೇಲಾಗುವ ಪರಿಣಾಮದ ವ್ಯತ್ಯಾಸವನ್ನು ಸಹೃದಯರು ಬಲ್ಲರು. ಕಾಗದದ ಹೂವಿನಲ್ಲಿ ಆ ಹುವ್ವಿನ ಕಾವ್ಯರೂಪವೂ ಇಲ್ಲ, ಗುಣವೂ ಇಲ್ಲ. ಬಿಡಿ ಹೂವಿನಲ್ಲಿ ಕಾವ್ಯರೂಪವಿದೆ ಆದರೆ ಗುಣವಿಲ್ಲ. ಬಳ್ಳಿಯ

ಕುಡಿಯಲ್ಲಿರುವ ಹೂವಿನಲ್ಲಿ ಕಾವ್ಯರೂಪವೂ ಗುಣವೂ ಜೀವದೊಡನೆ ತುಂಬಿಕೊಂಡಿದೆ. ಸರ್ವಜ್ಞನ ಪದ್ಯಗಳಲ್ಲಿ ಜೀವನವನ್ನೂ ಭಾವನಿರ್ಭರತೆಯನ್ನೂ ವಕ್ರೋಕ್ತಿಪ್ರಕಾರವನ್ನೂ ಕಂಡವರು ಇವುಗಳಿಗೆ ಕಾವ್ಯರೂಪವಿದೆಯೆಂದೇ ಭಾವಿಸುವರಲ್ಲದೆ ನೀತಿಯ ರಗಳೆಯೆಂದು ಎಂದಿಗೂ ತಿಳಿಯರು. ಆದರೆ "ಜಾಣಂಗೆ ಮುನಿಸಿಲ್ಲ ಕೋಣಂಗೆ ಮತಿಯಿಲ್ಲ । ಕಾಣದಂಧಕಗೆ ಹಗಲಿಲ್ಲ ಸಿಂಹಕೆ । ಕೇಣವೇ ಇಲ್ಲ ।" ಮುಂತಾದ ರೂಪಗುಣವಿಲ್ಲದ ನೀತಿರಹಿತ ಪದ್ಯಗಳ ಜಾತಿಯೇ ಬೇರೆ. 'ಒಂಟಿಯಲಿ ಹೆಂಡತಿಯ ಬಿಡುವಾತನೆ ಮೂರ್ಖ' 'ಕೊಡಬೇಕುತ್ತ ಮನಾದವಂಗೆ ಮಗಳಂ' ಮುಂತಾದ ಶತಕಕಾರ, ದಾಸರ ಪದ್ಯಗಳಲ್ಲಿ ನೀತಿಯ ರಗಳೆಯಿದೆ ಎಂದು ಹೇಳಿದರೂ ಸಲ್ಲೀತು. ಯಾಕಂದರೆ ಈ ಮಾತುಗಳು ವಿವೇಕ ಜೀವಿಗಳೇ ಹೊರತು ಭಾವ ಜೀವಿಗಳಲ್ಲ. ಇವುಗಳಲ್ಲಿ ವಕ್ರೋಕ್ತಿಪ್ರಕಾರವಿಲ್ಲ. ಆದರೆ ಸರ್ವಜ್ಞನ ವಚನಗಳು ಬಲುಮಟ್ಟಿಗೆ 'ವಿರೂಪಾಕ್ಷ ನೀತಿ' 'ಸಿದ್ಧನೀತಿ'ಗಳೆಂದು ಹೇಳಿಕೇಳಿ ಹಣೆಪಟ್ಟಿಗಟ್ಟಿಕೊಂಡು ನಿಂತ ಪದ್ಯಗಳಿಗಿಂತಲೂ ಭಿನ್ನ ವರ್ಗಕ್ಕೆ ಸೇರಿದವುಗಳಾಗಿವೆ. ನೀತಿಯುಮಾತುಗಳ ಮನನದಿಂದುಂಟಾದ ಭಾವದಿಂದಲೂ ಸಂತತವಾದ ಸಮಾಜ ನಿರೀಕ್ಷಣಾನುಭವದಿಂದ ಸಿದ್ಧವಾದ ದೃಷ್ಟಾಂತಗಳಿಂದಲೂ ನಿಸ್ಸಂಗವಾಗಿದ್ದರಿಂದ ನಿರ್ಭಯವಾದ ಪೌರುಷದಿಂದಲೂ ಒಡಗೂಡಿ ನೀತಿಯೇ ಆತ್ಮವಾದ, ವಕ್ರೋಕ್ತಿಯೇ ಸ್ವಭಾವವಾದ, ಕಿರಿದುತನದ ಅಚ್ಚುಕಟ್ಟುಳ್ಳ, ಪ್ರಸಾದಗುಣದ ಕಳೆಯುಳ್ಳ, ತಾಲಲಯದ ಕಟ್ಟರಿವುಳ್ಳ ಸರ್ವಜ್ಞನ ಈ ವಚನಗಳು ನಿಸ್ಸಂಶಯವಾಗಿ ಭಿನ್ನ ಬಗೆಯುವಿದ್ದರೂ ಕಾವ್ಯವರ್ಗಕ್ಕೆ ಸೇರುವವು. ತೋರಿಕೆಗೆ ಕಡಿಮೆಯ ತರಗತಿಯವೆಂದು ಕಂಡರೂ ಕಾವ್ಯವರ್ಗಕ್ಕೆನೇ ಸೇರುವವು." *

**ಕಾವ್ಯಲಕ್ಷಣ.** "ಇಲ್ಲಿ ಸರ್ವಜ್ಞನ ಬಗ್ಗೆ ಹೇಳಬೇಕಾದ ಮೊದಲನೆಯ ಮಾತೆಂದರೆ ಅವನು ಸಂಸ್ಕೃತರ ಸಂಸ್ಕೃತ ಕವಿಯಲ್ಲ; ಪ್ರಾಕೃತರ ಪ್ರಾಕೃತ ಕವಿ.† ಸಂಸ್ಕೃತರ ಹೊರಬಳಕೆಯಲ್ಲಿದ್ದ ಮಾತುಗಳನ್ನು ಪ್ರಾಕೃತರ ಒಳ

* ಈ ಭಾಗದಲ್ಲಿ ಅವತರಣ ಚಿನ್ಹೆಯೊಳಗೆ ಸೇರಿದ್ದೆಲ್ಲ ಹಿಂದೆ ಹೇಳಿದ ದತ್ತಾತ್ರೇಯ ಜೇಂದ್ರೆ ಇವರಿಂದ ಬರೆದುಬಂದದ್ದು.

† This is Sarvajna Murti the composer of Sarvajna Padagalu. very popular verses in tripadi metre. embodying much

ಬಳಕೆಯಲ್ಲಿ ತರುವದೇ ಇವನ ಮುಖ್ಯ ಉದ್ದೇಶ. ಸರ್ವಜ್ಞನು ತನ್ನ ಪಾರಮಾರ್ಥಿಕ ಪದ್ಯಗಳಲ್ಲಿ ವಚನಕಾರರಗಿಂತ ಹೆಚ್ಚೇನು ಹೇಳಿರುವನು? ಹಿಂದೆ ತೋರಿಸಿದಂತೆ ನಾಣ್ಣುಡಿಗಳಲ್ಲಿಯೂ ನ್ಯಾಯಗಳಲ್ಲಿಯೂ ರೂಢಸುಭಾಷಿತಗಳಲ್ಲಿಯೂ ಇದ್ದದ್ದನ್ನೇ ತನ್ನ ನೀತಿ ಪದ್ಯಗಳಲ್ಲಿಯೂ ಲೌಕಿಕ ಪದ್ಯಗಳಲ್ಲಿಯೂ ಹೇಳಿರುವನಲ್ಲವೆ? ಹೀಗಿದ್ದ ಮಾತ್ರಕ್ಕೆ ಅವನ ವಚನಗಳನ್ನಭ್ಯಾಸಿಸುವ ಅವಶ್ಯತೆಯಿಲ್ಲವೆಂತಲ್ಲ. ಈ ವಚನಕಾರರ ಮಾನಸ ಪುತ್ರನ, ಈ ಕಂದಕಾರರ ಮೋಹನ ಕಂದನ, ತ್ರಿಪದಿ ಗಾಯತ್ರಿಯ ಛಂದಸ್ಸಿನ ಪ್ರತಿ ಜನಕನ, ಕಿರಿದರಲ್ಲಿ ಪಿರಿದರ್ಥವನೊಳಗೊಂಡ ಪ್ರಮೇಯ, ದೃಷ್ಟಾಂತ, ಸಿದ್ಧಾಂತಗಳ ಮೂರು ಲೋಕಗಳನ್ನು ತ್ರಿವಿಕ್ರಮನಂತೆ ತ್ರಿಪಾದಿಗಳಿಂದ ಆಕ್ರಮಿಸುತ್ತ ಕಾವ್ಯಕೌಶಲ್ಯದ ಕಳಸದಿಂದ ಶೋಭಿಸುವ ಸರ್ವಜ್ಞನ ಈ ಅದ್ವಿತೀಯ ತ್ರಿಪದಿಗಳನ್ನು ಕನ್ನಡಿಗರು ಓದದಿರುವರೆ? (What oft was said but ne'er so well expressed) ‡ಅಂದು ಕಂದಿದ ಮಾತುಗಳನ್ನು ಕುಂದದ ಚಂದದಿಂದ ಹೇಳುವ ಕವಿಯು ಕನ್ನಡದಲ್ಲಿ ಬೇರೊಬ್ಬನಿರುವನೆ! ಅನ್ಯ ವಾಙ್ಮಯಗಳಲ್ಲಿಯೂ ಇಂಥ ಕವಿಯು ಸಿಗುವದು ದುರ್ಲಭ. ಬಾಯ ಬಳಕೆಯ ಮಾತುಗಳು ಕೂಡ ಅವನ ಉಸುರುತಾಗಿ ಹೊಸವಾಗಿ ಮಸೆದ ಕೈದುಗಳಂತೆ ಝಳಪಿಸುತ್ತ ಕೊಡದೊಳಗಿನ ನೀರು ಸುರಿದಂತೆ ಹೊರಗೆ ಬರುವವು.

ವಚನಕಾರರು ಬರೆಯುವ ಪದ್ಧತಿಯು ತೀರ ಹೊಸದಾಗಿರುವಂತೆ ಸರ್ವಜ್ಞನ ತ್ರಿಪದಿಗಳಾದರು ನೂತನ ಜಾತಿಗೆ ಸೇರಿದವುಗಳಾಗಿವೆ. ಈ

---

shrewd wisdom, and frequently quoated by the common people. Sarvajna is one of those poets whose artless casual verses so express the better thoughts. which the common people feel but cannot express, that they have become the property and favourites of all, and are loved and quoated alike by ryot and tradesman and wandering mendicant. *E. P. Rice's Kan. lit. Page 72.*

‡ ಮೊದಲನೆಯ ಭಾಗದ ಆರಂಭದ ಪುಟದ ಬೆನ್ನಿನ ಮೇಲಿರುವ ಆಂಗ್ಲವಾಕ್ಯವು ಮೂರನೆಯ ಭಾಗಕ್ಕೂ ಮೂರನೆಯ ಭಾಗದ ಆರಂಭದಲ್ಲಿರುವ ಆಂಗ್ಲ ವಾಕ್ಯವು ಮೊದಲನೆಯದರ ಬೆನ್ನ ಹಿಂದೆಯೂ ಸೇರತಕ್ಕದ್ದು.

ಪದ್ಧತಿಯು ಬೇರೆ ಯಾವ ಭಾಷೆಯಲ್ಲಿಯೂ ಕಂಡು ಬರುವದಿಲ್ಲ. ಯಾವ ದೊಂದು ವಿಚಾರವನ್ನು ಕಂಡು ಹಿಡಿದು ಅದು ಜನರ ಮನಿನಲ್ಲಿ ನಡುನಂತೆ ಹೇಳುವದೇ ಅವನ ವಿಶೇಷ ರೀತಿ. ಇದಕ್ಕೋಸ್ಕರ ಅವನು ವಾಡಿಕೆಯು ಹಾಗೂ ವ್ಯವಹಾರದೊಳಗಿನ ಕ್ಷುಲ್ಲಕ ಉದಾಹರಣೆ ( Homely images ) ಗಳನ್ನು ಅತಿಸೂಕ್ಷ್ಮವಾಗಿಯೂ ಹೃದಯಂಗಮವಾಗಿಯೂ ಪ್ರಯೋಗಿಸು ವನು. ಎಷ್ಟು ಗಹನ ವಿಚಾರವಿದ್ದರೂ ಅದನ್ನು ಸ್ಫುಟವಾಗಿಯೂ ಅಂದ ವಾಗಿಯೂ ಹೇಳುವನು. ಅಚ್ಚಗನ್ನಡ ಶಬ್ದಗಳನ್ನು ಪ್ರಯೋಗಿಸುವದರ ಕಡೆಗೆ ಇವನ ಒಲವು ಹೆಚ್ಚು. 'ಒಂದು ವಿಚಾರವನ್ನು ಎರಡು ಮೂರು ಸಾರೆ ಬೇರೆ ಬೇರೆ ರೀತಿಯಿಂದ ಹೇಳುವನು. ಆದ್ದರಿಂದ ಕೆಲವು ಪದ್ಯಗಳಿಗೆ ರೂಪ ಬೇರೆಯಾದರೂ ಅರ್ಥ ಒಂದೇ. ಕೆಲವಕ್ಕೆ ರೂಪಭೇದವೂ ಅಷ್ಟಿಲ್ಲ. ಇವನ ಪದ್ಯಗಳಿಗೆ ಪರಸ್ಪರ ಸಂಬಂಧವಿಲ್ಲದಿದ್ದರೂ ಮೂರೋ ನಾಲ್ಕೋ ಸೇರಿ ಒಂದೇ ಆಶಯವನ್ನು ಹೊರಗೆಡಹುತ್ತ ಒಂದೇ ಬಾರಿಗೆ ಹೇಳಲ್ಪಟ್ಟವೆಂದು ಊಹಿಸ ಲವಕಾಶಕೊಡುತ್ತಿವೆ.' 'ಹೇಳಿದ್ದನ್ನೇ ಹೇಳು' ವದರಿಂದ ಬೇಸರವುಂಟಾ ಗುತ್ತಿದ್ದರೂ ಹೇಳುವ ರೀತಿ ಬೇರೆಯಾಗಿದ್ದು ಇದು ಅವಿದ್ಯಾವಂತರನ್ನು ಬೋಧಿ ಸುವಲ್ಲಿ ಅನುಸರಿಸತಕ್ಕ ಉತ್ತಮ ಪದ್ಧತಿಯಾಗಿದೆ. ಇಲ್ಲಿ ಸರ್ವ ಧರ್ಮೋಪ ದೇಶಕರು ಕೈಕೊಂಡ ಮಾರ್ಗವನ್ನೇ ಸರ್ವಜ್ಞನೂ ಅನುಸರಿಸಿರುವನು,

ಹಿಂದೆ ಹೇಳಿದಂತೆ ಸ್ವಲ್ಪ ಶಬ್ದಗಳಲ್ಲಿ ಬಹಳ ವಿಷಯಗಳನ್ನು ನಿರೂಪಿಸು ವದು ಇವನ ಕವಿತೆಗಿರುವ ಮೂರನೆಯ ಲಕ್ಷಣ. ಅನೇಕ ಪಂಡಿತರು ಸ್ವಲ್ಪದ ರಲ್ಲಿ ವಿಷಯ ವಿವರಣೆ ಮಾಡಲಿಕ್ಕೆ ಹೋಗಿ ಅರ್ಥವನ್ನು ಸಂಶಯಾಸ್ಪದವಾಗಿ ಮಾಡುವದುಂಟು. ಆದರೆ ಈ ಸ್ಥಿತಿಯು ಸರ್ವಜ್ಞನಲ್ಲಿಲ್ಲ. ದ್ವಂದ್ವಾರ್ಥವು ಪಾಮರರನ್ನು ಕಷ್ಟದಲ್ಲಿ ಕೆಡವುವದರಿಂದ ಇವನ ಪದ್ಯಗಳ ಪ್ರತಿ ಒಂದು ಗೆರೆಯು ಗಾದೆಯ ಮಾತಿನಂತೆ ಸೂತ್ರಪ್ರಾಯವಾಗಿದ್ದರೂ ರಸಭರಿತವಾಗಿಯೂ ಖಂಡಿತ ಅರ್ಥವುಳ್ಳದ್ದಾಗಿಯೂ ಇದೆ. ತ್ರಿಪದಿಯಲ್ಲಿ ಬರುವ ಶಬ್ದಗಳು ಸಾಧಾರಣ ವಾಗಿ ೧೧. ಇದರಲ್ಲಿ ಸರ್ವಜ್ಞನೆಂಬ ಪದವೊಂದನ್ನು ಕಳೆದರೆ ೧೦ ಶಬ್ದಗಳಿಗೆ ಮಾತ್ರ ಸ್ಥಳ ಉಳಿಯುವದು. ಯಾವ ವಿದ್ವಾಂಸನಿಗೂ ಇಷ್ಟು ನಿಯಮಿತ ಶಬ್ದಗಳಲ್ಲಿ ತನ್ನ ಎಲ್ಲ ಯೋಜನೆಗಳನ್ನು ಸ್ಪಷ್ಟವಾಗಿ ಹೇಳುವದು ಸುಲಭ ಸಾಧ್ಯವಲ್ಲ! ಹೀಗಾಗಿ ಇವನ ಶಬ್ದಯೋಜನೆಯು ಗಡಿಯಾರದ ಚಕ್ರದ

ಹಲ್ಲುಗಳಂತೆ ಒಂದಕ್ಕೊಂದು ಬಿಗಿಯಾಗಿ ಹೊಂದಿಕೆಯಾಗಿದ್ದು ಅದರಲ್ಲಿ ಒಂದು ಪದವನ್ನು ಇತ್ತತ್ತ ಸರಿಸಿದರೆ ಸಾಕು ಪದ್ಯ ಸೌಂದರ್ಯವು ಕೆಟ್ಟು ಅನರ್ಥವಾಗುವದು. ಇದರ ಸತ್ಯಾರ್ಥವನ್ನು ಪರೀಕ್ಷಿಸುವದಕ್ಕೆ ಅವನ ಮೇಲ್ತರದ ತ್ರಿಪದಿಯೊಂದನ್ನು ಬಿಚ್ಚಿ ಅದೇ ಅರ್ಥ ಬರುವಂತೆ ಅದನ್ನು ಬೇರೆ ರೀತಿಯಿಂದ ಹೊಂದಿಸಲಾಗುವದೇನೋ ಪಂಡಿತರು ಪ್ರಯತ್ನಿಸಿ ನೋಡತಕ್ಕದ್ದು. ಇದನ್ನು ಖಚಿತಪಡಿಸುವದಕ್ಕೆ ಇಲ್ಲಿ ಒಂದೆರಡು ಉದಾಹರಣೆಗಳನ್ನು ಕೊಡುವೆವು.—

ಬ್ರಹ್ಮಸೂತ್ರ, ಉಪನಿಷತ್ತುಗಳಲ್ಲಿ ಗುಣಲಕ್ಷಣಗಳನ್ನು ಹೇಳುವದಕ್ಕೆ ಪರಮಾತ್ಮನನ್ನು "ದಿಕ್ಕಾಲಾದ್ಯನವಚ್ಛಿನ್ನಾನಂದಾನಂತಾದ್ವಯಿತ ನಿತ್ಯ ಮುಕ್ತ ವಿಭುವೆಂದು ಹೊಗಳಿರುವದು. ಆರ್ಯರ ಇಂಥ ಗಹನ ವಿಚಾರವನ್ನು ಸಂಸ್ಕೃತ ಶಬ್ದಗಳಿಲ್ಲದೆ ಯಾವದೊಂದು ಅನಾರ್ಯ ಭಾಷೆಯಲ್ಲಿ ಹೇಳುವದು ದುಸ್ಸಾಧ್ಯವೆಂದು ಪಂಡಿತರೆಲ್ಲರು ಏಕಮುಖವಾಗಿ ಒಪ್ಪಿಕೊಳ್ಳುವರು. ಬಹಳ ಪ್ರಯತ್ನಿಸಿದರೆ ಕೆಲವರು ಕಾಲಾತೀತ, ಅನಾದ್ಯನಂತ, ಅಯೋನಿಜನೆಂದು ಹೇಳಬಹುವಲ್ಲದೆ ಇದಕ್ಕಿಂತ ಸುಲಭಭಾಗಿ ಯಾರಿಂದಲೂ ಹೇಳಲಾಗದೆಂದೂ ಇದನ್ನು ಶುದ್ಧ ಕನ್ನಡದಲ್ಲಿ ಹೇಳಿದವರಿಗೆ ಇಂತಿಷ್ಟು ಸಂಭಾವನೆ ಕೊಡುವೆವೆಂದೂ ಬೇಕಾದರೆ ಪಂಥಕ್ಕೆ ನಿಲ್ಲುವರು. ಇಂಥ ಉನ್ನತ ವಿಚಾರವನ್ನು ಸನ್ನುತ ಸರ್ವಜ್ಞನು ಮನ್ನಣೆಯ ಕನ್ನಡದಲ್ಲಿ ಚನ್ನಾಗಿ ಹೇಳಿರುವದನ್ನು ನೋಡಿದರೆ ದಿಗ್ಬಂಧನವಾಗುತ್ತದೆ. ಉದಾಹರಣೆ—

ಆಗಿಲ್ಲ ಹೋಗಿಲ್ಲ ಮೇಗಿಲ್ಲ ಕೆಳಗಿಲ್ಲ ।
ತಾಗಿಲ್ಲ ತಪ್ಪು ತಡೆಯಿಲ್ಲ, ಲಿಂಗಕ್ಕೆ ।
ದೇಗುಲವೆ ಇಲ್ಲ ಸರ್ವಜ್ಞ ॥

ಆಗು=ಆದಿ. ಹೋಗು=ಅಂತ್ಯ. ಆಗಿಲ್ಲ ಹೋಗಿಲ್ಲ=ಕಾಲಾತೀತ. ಮೇಗಿಲ್ಲ ಕೆಳಗಿಲ್ಲ=ಸ್ಥಳಾತೀತ=ದಿಕ್ಕಾಲಾದಿ + ಅನವಚ್ಛಿನ್ನ + ಅನಂತ. ತಾಗಿಲ್ಲ=ಆನಂದಾದ್ವಯಿತ. ತಪ್ಪುತಡೆಯಿಲ್ಲ= ನಿತ್ಯಮುಕ್ತ. ಲಿಂಗಕ್ಕೆ ದೇಗುಲವೆ ಇಲ್ಲ=ವಿಭು ಇಲ್ಲಿ ೧೧. ಅಲ್ಲ. ೭ ಕೇ ಶಬ್ದಗಳಲ್ಲಿ ವಾಕ್ಯವನ್ನು ಮುಗಿಸಿದ್ದಾನೆ. ಬಡವನ ಹೆಂಡತಿಯು ವಿಷಯವಾಗಿ ಕಡುಚಲುವೆ ಎಂಬದರ ಹೊ

ಲಘುತ್ವಕ್ಕೆ ಎರಡು ಪದ್ಯಗಳು—

ಬಡವನಾ ಹೆಂಡತಿಯು ಕಡು ಚಲುವೆಯಾದರೇ ।
ನಡು ಬೀದಿಯೊಳಗೆ ದವನವನು ಬಿತ್ತಲು ।
ಮುಡಿಯುದವರಾರು ಸರ್ವಜ್ಞ ॥

ಚಿತ್ತ ವೃತ್ತಿಯನರಿದು ಹತ್ತಿ ವಿಡಿದೋಲಯ್ಯು ।
ಚಿತ್ತವ ಪಡೆದು ಮುದವಾಗೆ ಮೊಲನಾಯಿ ।
ಹತ್ತಿದಂತಕ್ಕು ಸರ್ವಜ್ಞ ॥

ತರ್ಕ ಒಂದು ಅಕ್ಷರವನ್ನಾದರೂ ಹೆಚ್ಚ
ಳದೆ ಆ ಅಪೂರ್ಣ ವಾಕ್ಯಕ್ಕೆ ಮುಂದೆ
ಶಬ್ದಗಳ ಒಂದು ದೃಷ್ಟಾಂತವನ್ನು
ಆಲೋಚನೆಯನ್ನು ಪೂರ್ತಿಗೊಳಿಸಿದ್ದಾನೆ
ಕೆಳಗಿನ ಪದ್ಯವೂ ಹೀಗೆಯೇ ಇದೆ.
ಸಂಕ್ಷೇಪವಾಗಿ ಯಾರಾದರು ಇವುಗಳನ್ನು
ಹುದೇನೋ ಪಂಡಿತರು ಯೋಚಿಸಲಿ !

ಸರ್ವಜ್ಞನ ಶೈಲಿಯ ಸೊಗಸನ್ನು ಹೊಗಳುವ ವಿಲಾಯತಿಯ ಪ
ರೊಬ್ಬರು ಇವನ ತ್ರಿಪದಿಗಳನ್ನು ಇವನಷ್ಟು ಸಂಕ್ಷೇಪವಾಗಿ ಯಾವ
ಯಲ್ಲಿಯೂ ತರಜುಮೆ ಮಾಡಲಾಗದೆಂದು ಕಂಠೋಕ್ತವಾಗಿ ಹೇಳಿದ್ದಾರೆ.*

ಬಿರಸು ಸರ್ವಜ್ಞನ ಕಾವ್ಯಕ್ಕಿರುವ ಇನ್ನೊಂದು ಲಕ್ಷಣ. ಈ ದ
ಯಿಂದ ನೋಡಿದರೆ ಇವನ ಕವಿತೆಯು ನವಮಾರ್ಗಕ್ಕೆ ಸೇರಿದುದೆಂದೆನ್ನಬಹು
ಹರೀಶ್ವರನು ತನ್ನ ಪೂರ್ವದ ಕವಿಗಳ ಕಾವ್ಯವಿಷಯವನ್ನು ನಿರ್ಭತ್ಸಿಸಿ ಹ
ಹಾದಿಯನ್ನು ಹಾಕಿಕೊಟ್ಟನು. ಆದರೂ ಹೆಂಗರುಳನ್ನು ಕಳೆದುಕೊಳ್ಳ
ಆಂಡಯ್ಯನು ಸಂಸ್ಕೃತ ಪ್ರಚುರವಾದ ತನ್ನ ಪೂರ್ವಿಕರ ಕಾವ್ಯಗಳೊಳಗಿನ
ಭಾಷೆಗಳ ಮೇಲೆ ದಾಳಿಯನ್ನಿಟ್ಟನು. ಆದರೂ ಹೆಂಗರುಳನ್ನು ಕಳೆದುಕೊಳ್ಳ
ಲಿಲ್ಲ. ಸರ್ವಜ್ಞನು ಮಾತ್ರ ತನ್ನಕಾಲದ ಜನರ ಸ್ಥಿತಿಗತಿಯನ್ನರಿತು ಅವರ ಮನ
ಸ್ಸನ್ನು ಉಪಹಾಸದ ಮೂಲಕ ತಿದ್ದುವ ಭರದಲ್ಲಿ ಕಾವ್ಯ ಕಾಮಿನಿಗೆ ಗಂಡು
ಗಾಡಿಯನ್ನುಂಟು ಮಾಡಿದರು. 'ಗುರಿಯ ತಾಗದ ಬಾಣ ನೂರಾರನೆಸದೇನು'
ಎಂಬ ಪದ್ಯವನ್ನು ರಚಿಸಿದ ಸರ್ವಜ್ಞನು ಕುಶಾಲಿಗಾಗಿ ಚುಚ್ಚುವ ಮಾತು
ಗಳನ್ನಾಡುತ್ತಿದ್ದನೆಂದು ತಿಳಿಯುವದು ತಪ್ಪು. ಮೊನೆಯುಳಿದು ಮೊಂಡವಾದ
ಮನಗಳು ಖಂಡಿಸುವದರಿಂದಲೂ ಹದನಗೊಳ್ಳುವವು. 'ಮಂಡೆಬೋಳಾದವರ
ಕಂಡು ನಂಬಲಿಬೇಡ.' 'ಖಂಡಿತಮಪ್ಪ ಪರತತ್ವ ವಿಷಯವನು ಕಂಡು ನಂಬು
ವದು' ಮುಂತಾದ ಮಾತುಗಳಲ್ಲಿ ಒಂದು ವಿಧದ ಉಪದೇಶದ ಸೌಂದರ್ಯ
ವಿರುವದಲ್ಲದೆ ಮನ ನೋಯಿಸುವ ಉದ್ದೇಶವಿಲ್ಲ."

* The terseness of Sarvajna's verses can scarcely be reproduced in a Western language except at the cost of clearness *E. P. Rice's Kan. Literature Page 73.*

ಚಿತ್ತಾಕರ್ಷಣವು ಇವನ ಕಾವ್ಯಕ್ಕಿರುವ ಮತ್ತೊಂದು ಮುಖ್ಯ ಲಕ್ಷಣ. ವರ್ಣವ್ಯಾವೃತ್ತಿ, ಪದವ್ಯಾವೃತ್ತಿ (musical language) ಗಳಿಂದ ಕೂಡಿದ ಇವನ ತ್ರಿಪದಿಗಳಲ್ಲಿ ಪ್ರಾಸಾಕ್ಷರವು ಮೇಲಿಂದ ಮೇಲೆ ಬರುವದು. ಇಂಥ (Verbal melody) ಸ್ವರಮಾಧುರ್ಯದಿಂದ ಪಾಮರ ಜನರ ಲಕ್ಷ್ಯವು ತನ್ನ ಪಕ್ಕಕ್ಕೆ ಎಳೆಯಲ್ಪಡುವದು. ಇವನ ವಕ್ರೋಕ್ತಿಗಳು ಮಲಗಿದವರನ್ನು ಬಡಿದೆಬ್ಬಿಸುವವು. ದುರ್ಮಾರ್ಗದಲ್ಲಿ ಓಡುವವರನ್ನು ಜಗ್ಗಿ ನಿಲ್ಲಿಸುವವು. 'ನಂಬಿದಂತಿರಬೇಕು' 'ನಂಬದಲೆ ಇರಬೇಕು' 'ಮುಟ್ಟಿದಂತಿರಬೇಕು ಮುಟ್ಟದಲೆ ಇರಬೇಕು' 'ಮುಟ್ಟಿ ನೋಡಲು ಬೇಕು' 'ಮುಟ್ಟಿಯೂ ಮುಟ್ಟದಿರಬೇಕು' 'ಕೊಡಬೇಡ ಕೊಡದೆ ಇರಬೇಡ' ಮುಂತಾದ ಪರಸ್ಪರ ವಿರೋಧವಾಗಿ ತೋರುವ ಶ್ಲೇಷೋಕ್ತಿಗಳು ನಿಶ್ಚಿಂತವಾದ ಮನಸ್ಸನ್ನು ವಿಚಾರದಲ್ಲಿ ತೊಡಗಿಸುವವು. ಹೇಳತಕ್ಕ ವಿಷಯಗಳನ್ನು ಆ ಹೊತ್ತಿಗೆ ಅದ್ವಿತೀಯವಾಗಿ ಇಡುವದೇ ಚಿತ್ತಾಕರ್ಷದಲ್ಲಿ ಇವನು ತೋರಿಸುವ ಜಾಣ್ಮೆ, ಮನಸ್ಸು ತಲ್ಲೀನವಾಗುವಂತೆ ಒಮ್ಮೊಮ್ಮೆ ಅದನ್ನು ದೇವರಿಗೆ ಸರಿಸಮಾನ ಮಾಡುವನು. ಬಹಳವಾಗಿ ಅದು ತನ್ನ ಮನಸ್ಸಿಗೆ ಬಂದರೆ ದೇವರಿಗಿಂತಲೂ ಶ್ರೇಷ್ಠವೆಂದು ಹೇಳುವದಕ್ಕೆ ಇವನು ಸ್ವಲ್ಪವೂ ಹಿಂದೆ ಮುಂದೆ ನೋಡುವವನಲ್ಲ. ಎತ್ತಿದ ಮಾತನ್ನು ಮುಗಿಲಮೇಲಿರಿಸಿ ಹೇಳುವದು ಇವನ ಶಿಕ್ಷಣ ಶಾಸ್ತ್ರದ ಒಂದು ಮುಖ್ಯಸೂತ್ರ. ಇದನ್ನು ಸ್ಫುಟಗೊಳಿಸುವದಕ್ಕೆ ಕೆಲವು ಉದಾಹರಣೆಗಳನ್ನು ಕೊಡುವೆವು—

ತತ್ವದಾ ಜ್ಞಾನತಾ ನುತ್ತಮವೆನಬೇಕು ।
ಮತ್ತೆ ಶಿವಧ್ಯಾನ ಬೆರದರೆ ಶಿವನಿ- ।
ದತ್ತಲೆನಬೇಕು ಸರ್ವಜ್ಞ † ॥

ಅರಿಯದೀಯುವದಾನ ತೆರದುನೋಡದ ಕಣ್ಣು ।
ತಿರಿಗಿಬಯಸದನ ಶಿವಪೂಜೆ ಶಿವನಿದ ।
ಹಿರಿದುದು ಅರಿಗು ಸರ್ವಜ್ಞ ‡ ॥

'ಅನ್ನದೇವರ ಮುಂದೆ ಇನ್ನುದೇವರು ಉಂಟೇ ?'
'ಶಿವನೊಬ ತಿರುಕ ತಾ ದೈವ !'

'ಜಗದೊಳು ಜ್ಞಾನನೇ ಅಧಿಕ !'
'ಈವಂಗೆ ದೇವಾಗ ಆವದಂತರವಯ್ಯ ?'

ಮುಂತಾದ ಪದ್ಯಗಳು ಬಹಳ ಇವೆ.

ಹಿಡಿನುಡಿ (idioms) ಗಳನ್ನು ಪ್ರಯೋಗಿಸುವದು ಇವನ ಕವಿತೆಗಿರುವ ಇನ್ನೊಂದು ಮುಖ್ಯ ಲಕ್ಷಣ. ಶುದ್ಧ ಕನ್ನಡದಲ್ಲಿ ಕಾವ್ಯಗಳನ್ನು ಬರೆಯಲೆತ್ನಿ

† ಪದ್ಯ ೨೬೮.

‡ ಪದ್ಯ ೫೨೬.

ಸಿದ ಕವಿಗಳು ಅನೇಕರಿರುವರು. ಆದರೆ ಅಚ್ಚಗನ್ನಡದ ರೂಢ ಪ್ರಯೋಗಗಳನ್ನು ಕವಿತೆಯಾಗಿ ಹೆಣೆದ ಕವಿಯು ಸರ್ವಜ್ಞನಲ್ಲದೆ ಬೇರೊಬ್ಬನಲ್ಲ. 'ತಡೆಬಿಡು' 'ಬಾಯ್ಬಿಡು' 'ಕೊಟ್ಟಾಡು' 'ಬಿಟ್ಟಾಡು' 'ಹಲ್ಲುಬಾಯ್ಬಿರೆ' ಮುಂತಾದ ಹಿಡಿನುಡಿಗಳು ಪದ್ಯಪದ್ಯಗಳಲ್ಲಿ ಹೇರಳವಾಗಿ ದೊರೆಯುವವು. ಭಾಷಾಸುಧಾರಣೆಯನ್ನು ಮಾಡಿಕೊಳ್ಳಲಿಚ್ಛಿಸುವವರು ಇವನ ಗ್ರಂಥವನ್ನು ಅವಶ್ಯವಾಗಿ ಅಭ್ಯಾಸಿಸಬೇಕು. ಹೀಗೆ ಅಭ್ಯಾಸಿಸುವವರು ಇವನ ವಚನಗಳಲ್ಲಿಯ ಪ್ರತಿಯೊಂದು ಶಬ್ದಯೋಜನೆ, ಹಿಡಿನುಡಿ ಪ್ರಯೋಗ, ವಾಕ್ಯರಚನೆ, ಇವುಗಳ ಕಡೆಗೆ ಹೆಚ್ಚು ಲಕ್ಷಗೊಟ್ಟು ಓದಿದಂತೆ ಕನ್ನಡದ 'ಬಳಗು' ಗೊತ್ತಾಗುವದು. ನಾನಾರ್ಥದಲ್ಲಿ ಪ್ರಯೋಗವಾಗಿರುವ ಇಂಥ ಹಿಡಿನುಡಿಗಳ ವೈಚಿತ್ರ್ಯವನ್ನು ತೋರಿಸುವದಿದೊಂದು ಉದಾಹರಣೆ.— ಏನಾದಡೇನಯ್ಯ ತಾನಾಗದಿರುವನಕ । ತಾನಾಗಿ ತನ್ನನರಿವಿಪ್ಪ ಜ್ಞಾನಿಯು । ಏನಾದಡೇನು ಸರ್ವಜ್ಞ§ ॥

ಒಟ್ಟಿನ ಮೇಲೆ ನೋಡಿದರೆ ವಚನಕಾರರು ಹಳಿಗನ್ನಡವೆಂದು ಹೆಸರಿಟ್ಟು ಕೊಂಡು ತದ್ಭವಗಳ ಆಡಂಬರದಲ್ಲಿ ಮೆರೆವ ಜೈನಕಾಲದ ಕನ್ನಡವನ್ನು ಬಿಟ್ಟು ಮಾತನಾಡುವ ಭಾಷೆಯನ್ನು ಸ್ವೀಕರಿಸಿದಂತೆ ಸರ್ವಜ್ಞನಾದರೂ ಮಾಡಿರುವನು. ಇವನ ಗ್ರಂಥದಲ್ಲಿ ಕನ್ನಡ ಶಬ್ದ ಭಾಂಡಾರವು ಹೆಚ್ಚು. ಇದು ಮರಾಠಿ, ಇಂಗ್ಲಿಷ, ಹಿಂದುಸ್ಥಾನಿ ಮುಂತಾದ ಪರಭಾಷೆಗಳ ಅಭಿಯೋಗವು ಆಗುವ ಪೂರ್ವದಲ್ಲಿ ಬರೆಯಲ್ಪಟ್ಟಿದ್ದರಿಂದ ಇದರ ಭಾಷಾಸ್ವರೂಪವು ಹೆಚ್ಚು ಶುದ್ಧವಾಗಿರುತ್ತದೆ. ಅದರಿಂದ ವಚನ ಶಾಸ್ತ್ರದಂತೆ ಇವನ ಗ್ರಂಥದಲ್ಲಿಯೂ ಕನ್ನಡ ಭಾಷೆಯ ಪೂರ್ಣ ಸೊಬಗನ್ನು ಕಂಡುಕೊಳ್ಳಬಹುದು.

ವಿಷಯವನ್ನು ಸಂಗ್ರಹವಾಗಿ ಹೇಳುವದು ಇವನ ಕವಿತೆಗಿರುವ ಮತ್ತೊಂದು ಮುಖ್ಯ ಲಕ್ಷಣ. ಅದರಿಂದ ಇವನ ಗ್ರಂಥವು ಆ ಕಾಲದ ಕನ್ನಡಿಗರ ಸಣ್ಣದೊಂದು ವಿಶ್ವಕೋಶವೇ ಎಂದು ಹೇಳಬಹುದು. ಈ ಮೂಲಕ ಕನ್ನಡಿಗರ ಆಚಾರ ವಿಚಾರಗಳು ವ್ಯಕ್ತವಾಗುವವು. ಇವನ ಪದ್ಯಗಳಲ್ಲಿರುವ ಪ್ರಾಸಗಳು ಬಗೆಬಗೆಯವುಗಳಾಗಿರುವದರಿಂದ ಇದೊಂದು ಪ್ರಾಸದ ನಿಘಂಟೆಂದು ಹೇಳಿದರೆ ತಪ್ಪಾಗದು. ಇದು ಹೊಸದಾಗಿ ಕಾವ್ಯಗಳನ್ನು ರಚಿಸುವವರಿಗೆ ಬಹು ಪ್ರಯೋಜನಕರವಾಗಿದೆ.

---

§ ೩೪೫.

ಅಭ್ಯಾಸ "ಸಾಹಿತ್ಯವನ್ನಭ್ಯಾಸಿಸುವ ಅನೇಕ ರೀತಿಗಳಿರುವಂತೆ ಸಾಹಿತ್ಯದ ಪ್ರಾಣಪದಕದಂತಿರುವ ಕಾವ್ಯವನ್ನಭ್ಯಾಸಿಸುವ ರೀತಿಗಳಾದರೂ ಅನೇಕವಿರುವವು. ಕಾವ್ಯದ ಜಾತಿಯನ್ನು ನಿರ್ಣಯಿಸಿ ಆ ಜಾತಿಯಲ್ಲಿರುವ ಅದರ ತರಗತಿ ಯಾವುದೆಂದು ಗೊತ್ತುಪಡಿಸುವದೊಂದು ರೀತಿ. ಇದೇನು ವರ್ಣಕಾವ್ಯವೋ ವಸ್ತುಕವೋ ? ಓದುಗಬ್ಬವೋ ಹಾಡುಗಬ್ಬವೋ? ಖಂಡಕಾವ್ಯವೊ? ಮುಕ್ತವೊ? ಎಂದು ತಿಳಿಯುವದು ಎರಡನೆಯ ರೀತಿ. ಅದರ ವಿಷಯ ಉದ್ದೇಶಗಳನ್ನು ನಿಶ್ಚಯಿಸಿ ಉತ್ತಮಾಧಮತೆಗಳನ್ನು ನಿರ್ಣಯಿಸುವದು ಮತ್ತೊಂದು ರೀತಿ. ನೀತಿ, ಧರ್ಮ, ಸಂಸಾರ, ಚಿತ್ರ, ಕಲ್ಪನಾರಾಜ್ಯ, ನಿಸರ್ಗಸೌಂದರ್ಯ ಇವೇ ಮೊದಲಾದವುಗಳಲ್ಲಿ ಅದರ ವಿಷಯವಾವುದೆಂದು ತಿಳಿಸುವದಿನ್ನೊಂದು ರೀತಿ. ಕವಿಯ ಪ್ರಾಣೋಚ್ಛ್ವಾಸವೇ ಕಾವ್ಯವಾಗಿರುವದರಿಂದ ಕವಿಯ ಚರಿತ್ರಕ್ಕೂ ಕಾವ್ಯದೊಳಗಿನ ವಿಚಾರಸರಣಿಗೂ ಇರುವ ಒಳಗಿನ ಹತ್ತುಗಡೆಯನ್ನು ವಿಂಗಡಿಸಿ ತೋರಿಸುವದಿದೊಂದು ರೀತಿ. ಕವಿಯ ಶೀಲದಲ್ಲಿಯೇ ಶೈಲಿಯ ಉಗಮವನ್ನೂ ಕವಿಯ ಕಾಲದಲ್ಲಿಯೇ ಅವನ ಕಾವ್ಯದ ಕಾರಣಗಳನ್ನೂ ತೋರಿಸುವದಿನ್ನೊಂದು ರೀತಿ. ಕವಿಯ ಜೀವದೇವತೆಯ ಶ್ರದ್ಧಾಸೂತ್ರಗಳನ್ನು ಅವನ ಕಾವ್ಯದೊಳಗಿಂದ ಬೇರ್ಪಡಿಸಿ ಅವನ ಕಾಲವೂ ಅದರ ಮುಂದಿನ ಕಾಲವೂ ಅವುಗಳ ಅನುರೋಧದಿಂದ ಹೇಗೆ ಕುಣಿಯುತ್ತವೆಂದು ತೋರಿಸುವದು ಮತ್ತೊಂದು ರೀತಿ. ಕವಿಯ ಕಾಲದ ರಾಜಕೀಯ ಸಾಮಾಜಿಕ ಸ್ಥಿತಿಗತಿಗಳನ್ನರಿತುಕೊಳ್ಳುವದು ಬೇರೊಂದು ರೀತಿ. ಅವನನ್ನು ಅವನ ಕಾಲದ ಕವಿಗಳೊಂದಿಗೂ ಅವನ ಹಿಂದಿನ ಮುಂದಿನ ಕವಿಗಳೊಂದಿಗೂ ಅನ್ಯ ಪ್ರಾಂತದ ಹಾಗೂ ಅನ್ಯ ದೇಶದ ಕವಿಗಳೊಂದಿಗೂ ತೂಗಿ ನೋಡುವದು ಇನ್ನೊಂದು ರೀತಿ. ಹೀಗೆ ಹಲವು ವಿಧ ಸಾಧನೆಗಳಿಂದ ಈಶ್ವರ ಜೀವ ಜಗತ್ತುಗಳ ನೆಲೆಯನ್ನರಿಯಲು ನಮ್ಮಲ್ಲಿಯ ತತ್ವಜ್ಞರು ಯತ್ನಿಸಿದಂತೆ ಕವಿಯ ಮತ್ತು ಕಾವ್ಯದ ನೆಲೆಬೆಲೆಯನ್ನರಿತುಕೊಳ್ಳಲು ಕುಶಾಗ್ರ ಬುದ್ಧಿಯ ಪಾಶ್ಚಾತ್ಯರು ನಮಗೆ ನೂತನವಾದ ಅಂದರೆ ಮೇಲ್ಕಾಣಿಸಿದ ಅನೇಕ ರೀತಿಗಳನ್ನೊಳಗೊಂಡ ಒಂದು ರಾಜರೀತಿಯನ್ನು ರೂಢಿಗೊಳಿಸಿರುವರು. ಈ ಮಾರ್ಗವನ್ನವಲಂಬಿಸಿ ಸರ್ವಜ್ಞನ ಕಾವ್ಯವನ್ನು ಸಾಹಿತ್ಯವಿದ್ಯಾರ್ಥಿಗಳು ತೂಗಿ ನೋಡತಕ್ಕದ್ದು."
ಮೇಲೆಹೇಳಿದ ರೀತಿಗಳಲ್ಲಿ ಕೆಲವುಗಳಿಂದ ಸರ್ವಜ್ಞನಕವಿತೆಯನ್ನು ಈಮೊದಲು

ಪರಿಷ್ಕಾರವಾಗಿ ವಿಚಾರಿಸಿದ್ದೇವೆ. ಸೂಜ್ಞರಾದವರು ಇದರಂತೆ ಉಳಿದ ರೀತಿಗಳಿಂದ ಅವನ ಕಾವ್ಯಾಭ್ಯಾಸವನ್ನು ಕೈಕೊಳ್ಳಬಹುದು, ಆದರೆ ಈಗ ಅವನ ಕವಿತೆಯನ್ನು ಯಾವದೊಂದು ವಿಶೇಷ ರೀತಿಯಿಂದ ವಿಚಾರಿಸತೊಡಗದೆ ಅವನ ಕಾವ್ಯಾಭ್ಯಾಸದಲ್ಲಿ ಮುಖ್ಯವಾಗಿ ನೆನಪಿನಲ್ಲಿಡತಕ್ಕ ಕೆಲವು ಸಂಗತಿಗಳನ್ನು ಮಾತ್ರವೇ ಇಲ್ಲಿ ಪ್ರಸ್ತಾಪಿಸುವೆವು.—

ಸರ್ವಜ್ಞನ ಕಾವ್ಯಗಳು ಕಣ್ಣಿಗೆ ಸುಲಭವಾಗಿ ತೋರಿದರೂ ಅಗಿದಂತೆ ಹೊಸ ಹೊಸ ಸತ್ಯಾರ್ಥಗಳು ಹೊರಪಡುವವರಿಂದ ಅವುಗಳನ್ನಭ್ಯಾಸಿಸಲಿಕ್ಕೆ ಸಾರ್ವಜನೀನ ಜ್ಞಾನವು ಬೇಕು. ಪ್ರಪಂಚದ ಒಳಹೊರಗಿನ ಜ್ಞಾನವು ಎಷ್ಟು ಹೆಚ್ಚಾಗಿರುವದೋ ಅದು ಎಷ್ಟು ಶಾಸ್ತ್ರೀಯವಾಗಿ ಪರಿಪಕ್ವವಾಗಿರುವದೋ ಅಷ್ಟು ಆಳವಾಗಿಯೂ ಸೂಕ್ಷ್ಮವಾಗಿಯೂ ಅವನ ಪದ್ಯಗಳನ್ನು ವಿವಿಧ ಮುಖಗಳಿಂದ ಅಭ್ಯಾಸಿಸಲಾಗುವದು. ಆದರೆ ಇಷ್ಟು ಶ್ರಮಪಟ್ಟು ಅವನ ವಚನಗಳನ್ನು ತಿಳಿಯುವದು ಸಾಧಾರಣ ಜನರಿಂದ ಸಾಧ್ಯವಲ್ಲದ್ದರಿಂದ ಇವನ ಕವಿತೆಗೆ ಅಷ್ಟೊಂದು ಮುನ್ನಣೆಯಿರುವದಿಲ್ಲ. ಇಲ್ಲಿ ಅವನ ಕಾವ್ಯಗಳನ್ನಗಿಯುವ ರೀತಿಯನ್ನು ಸೂಚಿಸುವದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡುವೆವು—

> ಕತ್ತೆಯರಚಿದಡಲ್ಲಿ ತೊತ್ತು ಹಾಡಿದಡಲ್ಲಿ ।
> ಮತ್ತೆ ಕುಲರಸಿಕನಿರುವಲ್ಲಿ ಕಡು ನಗೆಯು ।
> ಹುತ್ತು ಕಾಣಯ್ಯ ಸರ್ವಜ್ಞ ‡ ॥

ಇಲ್ಲಿ ನಗೆಯ ತತ್ವವನ್ನು ಹೇಳಬೇಕಾಗಿ ಅಧಮ ಪಶು (ಕತ್ತೆ), ಮಧ್ಯಮ ಪಶು (ತೊತ್ತು) ಉತ್ತಮ ಪಶು (ಮನುಷ್ಯ), ಹೀಗೆ ಪ್ರಾಣಿಕೋಟಿಯ ಮೂರು ಉದಾಹರಣೆಗಳು ಹೇಳಲ್ಪಟ್ಟಿವೆ. ಈ ಮೂರೂ ಪ್ರಾಣಿಗಳ ಸ್ವರ ಕಾರ್ಯಗಳು ನಗೆಯನ್ನು ಹುಟ್ಟಿಸುವವುಗಳಾದಾಗ್ಯೂ ಇದರಲ್ಲಿಯೂ ತರಗತಿಗಳಿವೆ. ನಗೆಯು ಹೆಚ್ಚಾದಂತೆ ನಗೆಯನ್ನು ಹುಟ್ಟಿಸುವ ಪ್ರಾಣಿಗಳ ಸ್ವರದ ಕರ್ಕಶವು ಕಡಿಮೆಯಾಗುತ್ತ ಹೋಗುವದು. ಅಂದರೆ ಅರಚುವದು ಹಾಡಿಗೂ; ಹಾಡು ನುಡಿಗೂ; ರೂಪಾಂತರವಾಗುವದು. ಪ್ರಾಣಿಯು ಪಶುತ್ವವನ್ನು ಬಿಟ್ಟು ಮನುಷ್ಯತ್ವಕ್ಕೆ ಹುಟ್ಟಿದಂತೆ, ಸ್ವರವೂ ಶಿಕ್ಷಿತವಾಗುತ್ತ ಒದರುವದು ಕಡಿಮೆಯಾಗಿ ನಗೆಯ ತರಂಗವು ಹೆಚ್ಚಾಗುತ್ತ ಹೋಗುವದು. ಇದು ಕಡೆಗೆ ಕುಲರಸಿಕನಲ್ಲಿ ಕಡುನಗೆಯು ಹುತ್ತೇ ಆಗಿ ಪರಿಣಮಿಸುವದು.

---

‡ ಪದ್ಯ ೧೨೪

ಇದರಂತೆ—

ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ ।
ಮತ್ತೆ ಪಾದದ ಕೆರವಾಗಿ ಗುರುವಿನ ।
ಹತ್ತಿಲಿರು ಎಂದ ಸರ್ವಜ್ಞ †॥

ಈ ಪದ್ಯದಲ್ಲಿಯೂ ಅರ್ಥವು ತುಂಬಿಕೊಂಡಿದೆ. ಇಲ್ಲಿ ಗುರುವನ್ನು ಎತ್ತಿನಂತೆ ಹೊತ್ತು ಮೆ ಬೇಕೆಂದೂ ತೊತ್ತಿನಂತೆ ಸೇವಿಸಬೇಕೆಂದೂ ಹಿತ್ತಲದ ಗಿಡದಂತೆ ಬೇಡಿದ್ದನ್ನೆಲ್ಲ ಒದಗಿಸಿ ಕೆಂದೂ ಪಾದದ ಕೆರದಂತೆ ಅಂಗರಕ್ಷಕನಾಗಿರಬೇಕೆಂದೂ ಹೇಳಿರುವದಲ್ಲದೆ ಎತ್ತೆಂಬ ಚೇತನ ದ ಕೆರವೆಂಬ ಅಚೇತನ ವಸ್ತುವಿನ ವರೆಗೆ ಶಿಷ್ಯನ ಅಹಂಕಾರವು ಮೆಟ್ಟಿಲ ಮೆಟ್ಟಿಲಾಗಿ ಕಡಿಮೆ ತ್ತ ಕಡೆಗೆ ಹೇಗೆ ಶೂನ್ಯವಾಗಬೇಕೆಬಂದು ಹೇಳಿದೆ.

ಹೀಗೆ ಸರ್ವಜ್ಞನ ವಚನಗಳು ಅರ್ಥಗರ್ಭಿತವಾಗಿರುವದರಿಂದ ವಿಷಯ ಂಗ್ರಹವುಳ್ಳವರು ಇವುಗಳಲ್ಲೊಂದನ್ನು ತೆಗೆದುಕೊಂಡು ಒಂದೆರಡು ತಾಸು ವರೆಗೆ ವ್ಯಾಖ್ಯಾನ ಕೊಡಬಹುದು. ಇಲ್ಲವೆ ಹೇಳಿಕೊಟ್ಟ ವಿಷಯದ ತಾತ್ಪರ್ಯವು ಬಹುಕಾಲ ಮುಂದನುತಿಗಳ ನೆನಪಿನಲ್ಲುಳಿಯುವಂತೆ ಕಡೆಗೆ ಕಳ ಸದಂತಿಟ್ಟು ಇವನ ವಚನಗಳನ್ನು ಉದಾಹರಿಸಲೂ ಬಹುದು.

ಸರ್ವಜ್ಞನ ಕಾವ್ಯಾಭ್ಯಾಸದಲ್ಲಿ ನೆನಪಿಡತಕ್ಕ ಇನ್ನೊಂದು ಮುಖ್ಯಸಂಗತಿ ಯೆಂದರೆ ಕಾವ್ಯಸಂದರ್ಭ ( poetic background ). ಇದು ಅವನ ಮೂರ್ತಿ ತ್ವವನ್ನು ಯಾವಾಗಲು ಕಣ್ಣೆದುರಿನಲ್ಲಿಟ್ಟುಕೊಂಡಿದ್ದರೆ ಮಾತ್ರ ಸಂಗಡಲೆ ಹೊಳೆ ಯುವದು. "ಸರ್ವಜ್ಞನು ಶೀಲ ಪ್ರಮುಖವಾದ ಧರ್ಮಕ್ಕೆ ಸೇರಿದವನು. ದೈವಾ ಯತ್ತ ಕುಲದಲ್ಲಿ ಜನ್ಮವೆತ್ತಿ ಸ್ವಚ್ಛಂದ ಸಾಹಸದಿಂದ ಹೆಸರಿಗೆ ಬಂದವನು. ಸದೈವಸಂಚಾರಮಾಡುತ್ತ ಹಳ್ಳಿಗಾಡುಗಳೊಳಗಿನ ಜನರ ಚರಿತವನ್ನು ನೋಡಿ ನೀತಿ ( moral sentiment ) ರಸೋದ್ಭೂತ ಸ್ಫೂರ್ತಿಯನ್ನು ತ್ರಿಪದಿಯ ಪಡಿಯುಚ್ಚಿನಲ್ಲಿ ಎರಕ ಹೊಯಿದು ಆ ನಿಶಿತಾಸ್ತ್ರವನ್ನು ಗಾಳಿಯಲ್ಲೆಸೆದು ಮುಂದಕ್ಕೆ ಸಾಗುವವನು. ಯಾವದಾದರು ಧರ್ಮಶಾಸ್ತ್ರದ ಕಟ್ಟಳೆಗಳನ್ನು ಯಾವದೊಂದು ಪಟ್ಟವಣೆಯಲ್ಲಿ ಕೂಡ್ರಿಸಿ ಕೃತಾರ್ಥನಾಗುವ ಅಲಿಪ್ತನಿವನಲ್ಲ. ಹಳ್ಳಿಗಾಡಿನ ಹೀನಸ್ಥಿತಿಯ ಆಲಂಬನ ವಿಭಾವಗಳಿಂದಲೂ ಅನ್ಯಥಾಚರಣೆಯ ಉದ್ದೀಪನ ವಿಭಾವಗಳಿಂದಲೂ ಜಾಗ್ರತವಾದ ಯಥಾಚರಣಭಾವವು ಜುಗು

† ಪದ್ಯ ೪೯.

ಪ್ಪೆ ,ನಿಂದೆ, ತಿರಸ್ಕಾರ, ಅಪಹಾಸ, ಉಪಹಾಸ, ಕ್ರೋಧ ಉದ್ವೇಗ, ನಿರಾಶೆ ಮೊದಲಾದ ಸಂಚಾರಿ ಭಾವಗಳಿಂದ ಸರ್ವಜ್ಞನ ಮನಸ್ಸಿನಲ್ಲಿ ನೀತಿರಸವಾಗಿ ಪರಿಪಾಕವಾಗಲು ಆತ್ಮಗತವಂತೆ ಅವನ ತ್ರಿಪದಿಯು. ಇವು ಅಂಗಾಂಗಳ ಸ್ಫುರಣದಿಂದಲೂ ಶಬ್ದಗಳರೂಪದಿಂದಲೂ ಸ್ಫುಟವಾಗುವವು. ಅವನ ವಿಭಾವಾನುಭಾವ ಸಂಚಾರಿಭಾವಗಳನ್ನು ನಾವು ಕಲ್ಪಿಸಿಕೊಳ್ಳಬೇಕು. ಅಂದರೆ ಅವನ ಮಾತುಗಳ ಭಾವವು ಪ್ರಕಟವಾಗುವದು." ಒಂದು ವಿಷಯವನ್ನು ಹಿಡಿದು ಈಗ ಹೇಗೆ ಒಂದು ಗ್ರಂಥವನ್ನು ಬರೆಯುವ ಪದ್ಧತಿಯಿರುತ್ತದೆಯೋ ಹಾಗೆ ಸರ್ವಜ್ಞನು ತನ್ನ ಗ್ರಂಥವನ್ನು ಬರೆದವನಲ್ಲ. ಮನಸ್ಸಿನಲ್ಲಿ ಒಂದು ವಿಚಾರವು ತಲೆದೋರಿದಾಗ್ಗೆ ಅಲ್ಲಿಯೇ ಆ ಸ್ಫೂರ್ತಿಯೊಳಗೆ ಒಂದು ಅಥವಾ ಹೆಚ್ಚು ಪದ್ಯಗಳನ್ನು ರಚಿಸುವನು. ಅದರಿಂದ ಅವನ ಪದ್ಯಗಳು ಸ್ವತಂತ್ರವಾಗಿದ್ದು ಪ್ರತಿ ಒಂದೊಂದು ತನ್ನಷ್ಟಕ್ಕೆ ಸಂಪೂರ್ಣವಾಗಿದೆ. ಸರ್ವಜ್ಞನು ಯಾವ ಪರಿಸ್ಥಿತಿಯಲ್ಲಿದ್ದಾಗ ಯಾವ ವಚನವನ್ನು ರಚಿಸಿರುವನೋ ಅಂಥ ಪರಿಸ್ಥಿತಿಯು ನಮಗೆ ಬಂದರೆ ಮಾತ್ರ ಅವನ ಪದ್ಯಗಳ ಯಥಾರ್ಥಜ್ಞಾನ ವುಂಟಾಗುವದು. ಎಷ್ಟೋ ವರ್ಷಗಳವರೆಗೆ ಅವನ ಪದ್ಯವು ಕಂಠಪಾಠವಾಗಿ ಬರುತ್ತಿದ್ದರೂ ಆಗ್ಗೆ ಮಾತ್ರ ಅದರ ಅರ್ಥವು ಹೊಳೆದು ಅದು ವಿದ್ಯುತ್ತಿನಂತೆ ಮೈಯೆಲ್ಲ ವ್ಯಾಪಿಸಿಕೊಳ್ಳುವದು. ಅದರಿಂದ ಸರ್ವಜ್ಞನ ವಿದ್ಯಾರ್ಥಿಗಳಿಗೆ ಅವನಂಥ ಸ್ಥಿತಿಯು ಆಗಿಂದಾಗ್ಗೆ ಅನುಭವಕ್ಕೆ ಬರಬೇಕು. ಅವನು ನಿರೀಕ್ಷಿಸಿದ ವಸ್ತುಗಳ ಮೇಲಿಂದ ಮೇಲೆ ದೃಷ್ಟಿಗೆ ಬೀಳುತ್ತಿರಬೇಕು, ಇಲ್ಲವೆ ಅಂಥ ಕಾವ್ಯ ಸಂದರ್ಭವನ್ನು ಕಲ್ಪಿಸಿಕೊಳ್ಳಬೇಕು, ಅಂದರೆ ಮಾತ್ರ ಅವನ ವಚನಗಳ ಅಂತರಂಗವು ಯಥಾರ್ಥವಾಗಿ ಹೊಳೆಯುವದು. ಆದರೆ ಪ್ರತಿ ಒಂದು ಪದ್ಯಕ್ಕೆ ಕಾವ್ಯ ಪರಿಸ್ಥಿತಿಯನ್ನು ಕಲ್ಪಿಸಿಕೊಂಡು ಅವನ ಗ್ರಂಥವನ್ನಭ್ಯಾಸಿಸುವದು ಸಾಧಾರಣ ಜನರಿಗೆ ದುಸ್ಸಾಧ್ಯವೇ ಸರಿ. ಒಂದುಪಕ್ಷ ಇದು ಸಾಧಿಸಿದರೂ ಹೀಗೆ ಸ್ವಾಧ್ಯಾಯನ ಮಾಡುವವರು ಎಲ್ಲಿಯೋ ಲಕ್ಷಕ್ಕೊಬ್ಬರು. ಆದ್ದರಿಂದ ಇವನ ಗ್ರಂಥಕ್ಕೆ ದೊರೆಯಬೇಕಾದಷ್ಟು ಆದರವು ದೊರೆಯದಿರುವದಕ್ಕೆ ಇದೊಂದು ಮುಖ್ಯಕಾರಣವೆಂದು ಹೇಳಬೇಕು. ನಾಟಕದ ನೈತಿಕಕಲೆಯನ್ನರಿತವರಿಗೆ ಇವನ ಪದ್ಯಗಳು ಬಹು ಪ್ರಯೋಜನಕರವಾಗಿವೆ. ಅದರಿಂದ ಸರ್ವಜ್ಞನ ಕಡೆಗಿರುವ ಅನಾದರವನ್ನು ಹೋಗಲಾಡಿಸುವ ಕಾರ್ಯಭಾಗವು ಹೆಚ್ಚಾಗಿ

ಇವರನ್ನೇ ಕೂಡಿದೆ ಎಂದು ಹೇಳಿದರೂ ತಪ್ಪಾಗದು. ಈ ತರದ ಅಭ್ಯಾಸ ರೀತಿಯನ್ನು ತೋರಿಸುವದಕ್ಕೆ ಇಲ್ಲಿ ಕೆಲವು ದೃಷ್ಟಾಂತಗಳನ್ನು ಕೊಡುತ್ತೇವೆ.—

ಬೇವುಫಲವಾಗಲದು ಸೇವಿಸಲು ಯೋಗ್ಯವೇ? ।
ಗಾವಿಲನಧನವು ಘನವಾಗಿ ಬಯ್ಗುಟ್ಟಿ ।
ಠಾವಿಲ್ಲೇಪೋಕು ಸರ್ವಜ್ಞ * ॥

ಬೇವಿನ ಹಣ್ಣು ಮರದ ಕೆಳಗೆ ಸುರಿದು, ಯಾರಪ್ರಯೋಜನಕ್ಕೆ ಬಾರದೆ, ಬಿದ್ದಲ್ಲಿಯೇ ಬಿದ್ದು ಕೆಟ್ಟು ಹೋಗುವದನ್ನು ನೋಡಿ ಇಟ್ಟಲ್ಲಿಯೇ ಕಿಲುಬು ಹಿಡಿದು ನಾಶವಾಗುವ ಲೋಭಿಯ ದ್ರವ್ಯವು ಇವನ ನೆನಪಿಗೆ ಬಂದಿದೆ.

ಇವನು ಹಾಳು ಗುಡಿಯಲ್ಲಿ ಮಲಗುತ್ತಿದ ಒಂದು ರಾತ್ರಿಯಲ್ಲಿ ಮನ್ಮಥನ ಬಾಣದಿಂದ ಎಸೆಯಲ್ಪಟ್ಟು ಕಾಮಬಾಧೆಯಿಂದ ಪೀಡಿತನಾದಾಗ ಒಂದು ಚೇಳು ಕಡಿಯಿತು? ('ಕುಂಡೆಗೆ ಚೇಳು ಕಡಿದಂತೆ') ಇವೆರಡೂ ಬಾಧೆಗಳ ನೋವು ಏಕಪ್ರಕಾರವಾಗಿ ತಡೆಯಲಾರದವುಗಳೆಂದು ಅನುಭವಕ್ಕೆ ಬರುತ್ತಲೇ ಹೀಗಂದನು.—

ಊರಿದಾ ಚೇಳಿನಿಂ।ದೇರಿದಾ ಜೇಸಯುಲಿ ।
ಮೂರು ಜಗವೆಲ್ಲ ಹೊರಳುತಿಹುದಾ ನೋವ ।
ಮೀರಿದವರಿಲ್ಲ! ಸರ್ವಜ್ಞ † ॥

ಇದಲ್ಲದೆ—

ಸತ್ಯವನ್ನಂಟೆ ಜನರಿಂದ ದ್ವೇಷಿಸಲ್ಪಟ್ಟು ಯಾವದೊಂದು ಅಪರಿಹಾರ್ಯ ಸಂಕಟಕ್ಕೊಳಗಾಗಿ ಅವರ ಕಾಲನ್ನು ಹಿಡಿಯುವ ಪ್ರಸಂಗ ಬಂದರೂ ಯಾರ ಆಶ್ರಯವನ್ನು ಹುಡುಕದೆ ನೆಲವನ್ನೇ ಹಾಸಿಕೆ ಮಾಡಿ ಹಾಳುಮಣ್ಣಿನ ಗೋಡೆಯನ್ನೇ ಹೊದಿಕೆಮಾಡಿ ಮಲಗಿಕೊಂಡು ಈಶ್ವರಕೃಪೆಯಿಂದ ಕುತ ವನ್ನು ಹೀಗಿ ಬೆಳಗ್ಗೆ ಊರನ್ನು ಬಿಟ್ಟು ಹೋಗುವಾಗ್ಗೆ ಹರಸುತ್ತ—

ನಡೆವವನೆ ತಾ ಹಾಸಿ।ನಡೆನದನೆ ತಾ ಹೊದೆದು ।
ನಡೆಯುವ ಪಥದಿ ಅಡಿಯಿಡಲು ವಿಧಿಯು ತಾ ।
ತಡೆಯುದೋಡುವದು ಸರ್ವಜ್ಞ ‡ ॥ ಎಂದು ಅಂದಿರಬಹುದು.

---

* ಪದ್ಯ ೬೬೪. † ಪದ್ಯ ೧೫೨. ‡ ೮೧೨.

ಹೀಗೆ ಕಾವ್ಯ ಸಂದರ್ಭವನ್ನು ಕಲ್ಪಿಸಿಕೊಂಡು ಇವನ ಕಾವ್ಯಾಭ್ಯಾಸ ಮಾಡುವದರ ಬಗ್ಗೆ ಇಲ್ಲಿ ಇನ್ನೊಂದು ಕೌಶಲ್ಯದ ಪದ್ಯವನ್ನು ಉದ್ಧರಿಸುತ್ತೇವೆ.

ವಚನದೊಳಗೆಲ್ಲವರು ಶುಚಿ, ವೀರ, ಸಾಧುಗಳು ।
ಕುಚ, ಹೇಮ, ಶಸ್ತ್ರ ಸೋಂಕಲು ಲೋಕದೊಳ ।
ಗಚಲದವರಾರು? ಸರ್ವಜ್ಞ ॥

ಇದು ಸಕೃದ್ದರ್ಶನಕ್ಕೆ ನೀತಿಬೋಧದ ಒಂದು ಬಾಧೆಯೆಂದೆನಿಸುವದಷ್ಟೇ! ಮತ್ತೆ ಕನಕ ಕಾಮಿನಿಯರ ಮಾತು? ಹೀಗಲ್ಲ. ಪೌರ್ಣಿಮೆಯ ಚಂದ್ರನಂತೆ ಇದರ ಸತ್ಯಾರ್ಥವನ್ನು ಹೃದಯದಲ್ಲಿ ಮೂಡಿಸುವದಕ್ಕೆ ಇದೊಂದು ಪ್ರಸಂಗವನ್ನು ಕಲ್ಪಿಸುವಾ–ಒಬ್ಬ ಅರಸನೋಲಗದಲ್ಲಿ ಸುಖಸಂಕಥಾವಿನೋದವು ಸಾಗಿದೆ. ಅವನ ಸಿಂಹಾಸನದ ಬಲಬದಿಯಲ್ಲಿ ಒಬ್ಬನು ವೀರನಂತೆ ತೋರುವ ಇನ್ನೊಬ್ಬನು ಸಾಧುವರನಂತೆ ಕಾಣುವ, ಮತ್ತೊಬ್ಬನು ಶುಚಿಪುರುಷನಂತೆ ರಂಜಿಸುವ, ಹೀಗೆ ದೇಶದ ಮೂವರು ಧೊರಗಳು ತಮ್ಮ ತಮ್ಮಾಸನಗಳಲ್ಲಿ ಕುಳಿತಿದ್ದಾರೆ. ಕವಿಶೇಖರನಾದ ಸರ್ವಜ್ಞನು ಎಡ ಬದಿಯ ಆಸನದಲ್ಲಿ ಅವರೆದುರಿಗೆ ಮೂರ್ತಗೊಂಡಿದ್ದಾನೆ. ಕವಿಯೊಬ್ಬನನ್ನುಳಿದು ಎಲ್ಲರೂ ನಾನು ಮುಂದೆ ನಾನ ಮುಂದೆ ಎಂದು ಎದ್ದೆದ್ದು ಆತ್ಮಪೌರುಷವನ್ನು ಅರಸನೆದುರಿಗೆ ಹೇಳಿಕೊಳ್ಳುತ್ತಿದ್ದಾರೆ. ರಣವೀರನು–ಲೋಕೈಕವೀರನೇ ಜಗತ್ತಿನಲ್ಲಿ ವೀರತ್ವವೇ ಶ್ರೇಷ್ಠವಾದುದು. ಇದಿಲ್ಲದೆ ಅರಸನೆನ್ನಿಸಿ ಕೊಂಡು ಪ್ರಯೋಜನವಿಲ್ಲ. ನಿನ್ನ ಸೇನಾಪತಿಯಾದ ನಾನು ಯಮನಿಗೂ ಹೆದರದಿರುವದರಿಂದಲೇ ನಿನ್ನ ಸಾಮ್ರಾಜ್ಯವು ಹಬ್ಬುತ್ತ ನಡೆದಿರುವದೆಂದು ಹೇಳುವನು. ಕೂಡಲೆ ಸಾಧುವರನು — ಸಾಧು ಶಿಖಾಮಣಿಯೇ, ಸಾಮ್ರಾಜ್ಯಗಳನ್ನು ಗಳಿಸಿ ಅವನ್ನು ಆಚಂದ್ರಾರ್ಕವಾಗಿ ಮಾಡಬೇಕೆಂದು ತನುಮನಧನಗಳನ್ನು ನೀಡಿದ ರಾಜಾಧಿರಾಜರು ಮಣ್ಣುಪಾಲಾಗಿ ಹೋದರು. ಅದರಿಂದ ತನ್ನನ್ನು ಗೆದ್ದವನಲ್ಲದೆ ರಾಜ್ಯವನ್ನು ಗೆದ್ದವನು ವೀರನಲ್ಲ. ಸಾಧುತ್ವವು ವೀರತ್ವಕ್ಕಿಂತ ಸಾವಿರಪಾಲು ಶ್ರೇಷ್ಠವಾದುದು. ಆಶೆಯನ್ನು ನಾಶಪಡಿಸಿದ ನಾನು ನಿನ್ನ ಕೋಶಾಧ್ಯಕ್ಷನಾಗಿರುವದರಿಂದ ನಿಶ್ಚಿಂತನಾಗಿರಬೇಕು. ಎಂದು ಹೇಳುವನು. ಸಂಗಡಲೆ ಶುಚಿಪುರುಷನು—ನಿರ್ಮಲಾಂತಃಕರಣಿಯೇ ಕೇಳು! ತ್ರಿಕರಣಶುದ್ಧಿಯಿಲ್ಲದೆ ಸಾಧುತ್ವವನ್ನು ಪಡೆಯುವ ಬಗೆ ಹೇಗೆ? ಶುಚಿತ್ವವೇ ಸಕಲ ಗುಣಗಳಲ್ಲಿ ಮಿಗಿಲಾದದ್ದು. ಪ್ರತ್ಯಕ್ಷ ಅಪ್ಸರೆಯರ ಭೋಗಕ್ಕೂ ಮನವೆಳಸದ ನನ್ನನ್ನು ನೀನು ನ್ಯಾಯಾಧೀಶನನ್ನಾಗಿ ನೇಮಿಸಿರುವದರಿಂದ ನಿನ್ನ ಸಮಾಜವು ಧರ್ಮಸ್ಥವಾಗಿರುವದೆಂದು ನುಡಿಯುತ್ತಲೆ ಅತ್ಯಾನಂದದಿಂದ ತುಂಬಿ, ಅರಸನು ತಾನು ತ್ರಿಪಾರ್ಥನ್ಯನೆಂದು ಬಗೆದು ಇನ್ನು ಸರ್ವಜ್ಞನು ಏನು ಹೇಳುವನೋ ಎಂದು ಅವನನ್ನೇ ದೃಷ್ಟಿಸಿ ನೋಡುತ್ತಿದ್ದಾನೆ. ಸರ್ವಜ್ಞನು ಅತಿ ಖೇದಗೊಂಡವನಂತೆ ಮುಖ ಕೆಳಗಿಟ್ಟು ಸುಮ್ಮನಿರುವನು. ಅರಸನು–ಎಲೈ ಕವೀಶ್ವರನೇ, ನಿನ್ನ ಮಹಾತ್ಮ್ಯವನ್ನಷ್ಟು ಹೇಳುವಿಯಾ? ಎಂದು ಕೇಳಲು, ಸರ್ವಜ್ಞನು

ಮಹಾತ್ಮ್ಯವು? ಕಾರ್ಯಮುಖವು! ಎಂದು ಮತ್ತೂ ಮೌನಮುದ್ರೆಯನ್ನು ತಾಳುವನು. ಅರಸನು—ನನ್ನ ಪ್ರಭಾವವನ್ನು ಗೌರವಿಸುವದಕ್ಕಾದರೂ ಒಂದು ಮಾತಿಲ್ಲವೇ? ಸರ್ವಜ್ಞನು—ಸ್ವಧರ್ಮವನ್ನು ತಮಗಾಗಿಯಾದರೂ ತ್ಯಜಿಸಲಾಗದು. ಅರಸನು—ಮುಖರರಾದ ಈ ಮೂವರು ಧೊರೆಗಳು ಮೂರ್ಖರೇ? ಸರ್ವಜ್ಞನು—ನಿಃಸಂಶಯ. ಅಷ್ಟೇಕೆ? ಅದನ್ನು ಕೇಳಿ ತಲೆದೂಗಿದವರೂ ಮೂರ್ಖರೇ! ಅರಸನು ಈ ಮಾತುಗಳನ್ನು ಕೇಳುತ್ತಲೆ ಕಣ್ಣು ಕೆರಳಿಸಿ ಈ ಅಧಮನನ್ನು ಹೊರಗಟ್ಟಲು ಸೇವಕರಿಗೆ ಆಜ್ಞಾಪಿಸುತ್ತಾನೆ. ಸರ್ವಜ್ಞನು ಹೊಸ್ತಲದ ಹೊರಗೆ ಕಾಲಿಟ್ಟು

ಧೊರೆಯೇ ! ವಚನದೊಳಗೆಲ್ಲವರು ಶುಚಿವೀರ ಸಾಧುಗಳು ;
ಕುಚಹೇಮ ಶಸ್ತ್ರ ಸೋಂಕಲು ಲೋಕದೊಳ ।
ಗಚಲದವರಾರು ?

ಎಂದೆನ್ನುತ್ತ ಅಪ್ಪಣೆ ತೆಗೆದುಕೊಂಡು ಹೊರಟು ಹೋಗುವನು.

ಅಂದರೆ ಶುಚಿವಂತನಿಗೆ ಕುಚವೂ (ಸ್ತ್ರೀ) ವೀರನಿಗೆ ಶಸ್ತ್ರವೂ ಸಾಧುವಿಗೆ ಬಂಗಾರವೂ ಪ್ರಾಪ್ತವಾದ ಸಮಯದಲ್ಲಿ ನಿಶ್ಚಲವಾಗಿದ್ದರೆ ಅವರಿಗೆ ಶುಚಿವೀರ ಸಾಧುಗಳೆಂದು ಹೇಳಬೇಕಲ್ಲದೆ ಮಾತು ಮಾತ್ರದಿಂದ ಹೇಗೆ ನಿಶ್ಚಯಿಸಲಾಗದೆಂದು ತಾತ್ಪರ್ಯ.

ಇಲ್ಲಿ ಕವಿಯ ಔಚಿತ್ಯವು ಇಷ್ಟೆಂದು ಹೇಳಲಾಗದು. ಈ ವಚನದೊಳಗೆ ಮಾನವ ಸ್ವಭಾವ ಪರಿಚಯವೂ ಪರಿಪಕ್ವ ವಿವೇಕವೂ ನಿರ್ಭರ್ತ್ಸನೆಯ ಆವೇಶವೂ ಯುಕ್ತತರವಾಗಿ ಒಪ್ಪುತ್ತಿರುವದು.

ಇದು ವರೆಗೆ ಸರ್ವಜ್ಞನ ಕವಿತೆಯನ್ನು ಕುರಿತು ಹೇಳಿದ ಸಂಗತಿಗಳನ್ನು ಪುನಃ ವಾಚಕರ ಅವಗಾಹನಕ್ಕೆ ತರುವಪಕ್ಕೆ ಇಲ್ಲಿ ಕೃಷ್ಣಶರ್ಮರು ಬರೆದಿರುವ ಕೆಲವು ಮಾತುಗಳನ್ನು ಉದ್ಧರಿಸಿ ಈ ವಿಷಯವನ್ನು ಮುಗಿಸುತ್ತೇವೆ. ‡ 'ಸರ್ವಜ್ಞನಲ್ಲಿರುವ ವಿಶೇಷ ಯೋಗ್ಯತೆಯೆಂದರೆ ಕನ್ನಡ ಭಾಷೆಯೆಲ್ಲ ಇವನಿಗೆ ಸ್ವಾಧೀನವಾಗಿರುವುದು. ವಿದ್ಯೆಯೆಂದರೆ ಸಂಸ್ಕೃತಾಭ್ಯಾಸವೆನ್ನಿಸಿಕೊಂಡಿರುವದರಿಂದ ಉಳಿದ ಕವಿಗಳ ರಚನೆಯೆಲ್ಲವೂ ಕನ್ನಡ ಅಕ್ಷರಗಳಲ್ಲಿ ಬರೆಯಲ್ಪಟ್ಟ ಸಂಸ್ಕೃತ ಭಾಷೆಯಾಗಿದೆ. ಸರ್ವಜ್ಞನು ಆ ವಿದ್ಯೆಯನ್ನರಿಯದವನಾದುದರಿಂದಲೇ ಅವನ ಕವಿತೆಯಲ್ಲಿ ಕನ್ನಡ ಜೀವಿತವು ಕನ್ನಡಿಸಲ್ಪಟ್ಟಿವೆ. ಕನ್ನಡಿಗರ ಮನೋಧರ್ಮಗಳಿಗೆ ಇವನ ಕವಿತೆಯೊಂದು ಸಾಟಿಯಿಲ್ಲದ ಉದಾಹರಣೆ. ಆದುದರಿಂದಲೇ ಇವನ ಪದ್ಯಗಳು ಪಂಡಿತ ಪಾಮರರಂಜಕವಾಗಿವೆ. ಅಲ್ಲಲ್ಲಿ ಇತ

‡ ಸಾಹಿತ್ಯ ಪರಿಷತ್ಪತ್ರಿಕೆ. ಜುಲೈ ಸಂಪುಟ ೭. ಸಂಚಿಕೆ ೨. ಪುಟ. ೯೫—೯೭.

ರರೂ ಕೆಲವು ಸಮಯಗಳಲ್ಲಿ ಮಾಡಿರುವ ವ್ಯಾಕರಣ ದೋಷಗಳಿದ್ದರೂ ನಿಜವಾದ ಅರ್ಥದಲ್ಲಿ 'ತಿಳಿಗನ್ನಡ ಗಬ್ಬ'ವನ್ನು ಬರೆದವನು ಸರ್ವಜ್ಞನಲ್ಲದೆ 'ಸ್ಥಿರೆ'ಗೆ, 'ತಿರೆ' ಯೆಂದು ಮಹಾಪ್ರಾಣವನ್ನು ಅಲ್ಪ ಪ್ರಾಣವನ್ನಾಗಿಸಿ, 'ಮಹಾಲಕ್ಷ್ಮಿ ಎಂಬುವದಕ್ಕೆ 'ಮಾಲಕುಮಿ' ಎಂದು ಮೂಲಕ್ಕಿಂತ ಕಷ್ಟವನ್ನಾಗಿ ಮಾಡಿ ತದ್ಭವ ಕನ್ನಡವೆಂದು ಹೆಸರಿಟ್ಟುಕೊಂಡವರ ಕವಿತೆಯಲ್ಲಿ ತಿಳಿಯೂ (ವೂ) ಇಲ್ಲ, ಕನ್ನಡವೂ ಇಲ್ಲ.

ಎಲ್ಲಕ್ಕಿಂತಲೂ ಮುಖ್ಯವಾಗಿ ಮನಸ್ಸನ್ನೆಳೆಯುವದು ಇವನು ಸ್ವಾಭಾವಿಕ ಕವಿಯಾಗಿರುವುದು. ಕವಿಯಾಗಬೇಕೆಂಬುವವನಿಗೆ ಪ್ರಕೃತಿಯು ಎಷ್ಟು ಗುಣಗಳನ್ನು ಕೊಡಬಲ್ಲುದೋ ಅಷ್ಟು ಗುಣಗಳೂ ಇವನಲ್ಲಿವೆ. ಅವಕ್ಕೆ ಇವನು ಕಲ್ಪಿತವಾದ ಕಾಂತಿಯನ್ನು ಕೊಟ್ಟಿಲ್ಲ. ಎಷ್ಟು ಸ್ವಲ್ಪ ಪದಗಳಲ್ಲಿ ಎಷ್ಟು ಅರ್ಥವನ್ನು ಅಡಗಿಸಬಹುದೋ ಅದು ಇವನಿಗಲ್ಲದೆ ಇನ್ನೊಬ್ಬರಿಗೆ ತಿಳಿಯದು. ಯಾವ ಮಾತನ್ನು ಯಾವಸ್ಥಳದಲ್ಲಿ ಉಪಯೋಗಿಸಿದರೆ ಹೃದಯದಲ್ಲಿ ನಾಟುವದೋ ಅದನ್ನು ಇವನೇ ತಿಳಿದವನು. ಸಂಗ್ರಹಶಕ್ತಿಯ ಬಲವನ್ನು ಇವನಂತೆ ತೋರಬಲ್ಲವನಿಲ್ಲ. ಇದಕ್ಕೆ ಜೊತೆಗಾಗಿ ಹಾಸ್ಯ ಪ್ರಿಯತ್ವವೂ ಸೇರಿದೆ.

ನಾಣ್ನುಡಿಗಳು ಇವನ ಕವಿತೆಯಲ್ಲಿಯ ಜೀವಿತಗಳು. ನಾಣ್ನುಡಿಗಳೆಂದರೆ ರೂಢಿಯಲ್ಲಿರುವ ಗಾದೆಗಳನ್ನು ಉದ್ದೇಶಪೂರ್ವಕವಾಗಿ ತೂರಿಸಿರುವನೆಂದಲ್ಲ. ಇವನ ಜೀವಿತದಲ್ಲಿಯೇ ಅಂತಹ ದಾಸ್ಯಕ್ಕೆಡೆಯಿಲ್ಲ. ಬೆಟ್ಟದಷ್ಟು ಅರ್ಥವನ್ನು ಉಗುರಿನಷ್ಟು ಸ್ಥಳದಲ್ಲಿ ಮುದ್ದು ಮುದ್ದಾಗಿ ವಿಶದವಾಗಿ ಇವನು ಹೇಳುವುದನ್ನೊಮ್ಮೆ ಕೇಳಿದೆವೆಂದರೆ ಮತ್ತೆ ಅದನ್ನೆಂದೂ ಮರೆಯದೆ ಸಂದರ್ಭಾನುಸಾರ ಅವನ್ನೇ ನೆನೆಯುತ್ತಿರುವೆವು.

ಸರ್ವಜ್ಞನ ತ್ರಿಪದಿಯು ಪ್ರೌಢಿಮೆಯು ಲಕ್ಷ್ಮೀಶನ ವಾರ್ಧಿಕ ಷಟ್ಪದಿಗೂ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇದರ ಜೊತೆಗೆ ಚಿತ್ರವಿದ್ಯಾಕುಶಲನು ಒಂದು ಮೂಲೆಯಲ್ಲಿ ತನ್ನ ಹೆಸರನ್ನು ಬರೆದು ಚಿತ್ರವನ್ನು ಮುಗಿಸುವಂತೆ ಕೊನೆಯ ಪಾದದ ಕೊನೆಯಲ್ಲಿ ತನ್ನ ಹೆಸರಿನೊಡನೆ ಪದ್ಯವನ್ನು ಮುಗಿಸುವದು ಪದ್ಯಕ್ಕೆ ಒಂದು ತೆರನಾದ ಬಣ್ಣ ಕೊಡುತ್ತಿದೆ. ಕನ್ನಡದಲ್ಲಿ ಎಲ್ಲಿಯೂ ಇಲ್ಲದ ಯತಿಯು ಸರ್ವಜ್ಞನ ಜೀವನ. ಮುದ್ದು ಮುದ್ದಾಗಿ ಸಣ್ಣ ಸಣ್ಣ

ಪದಗಳು ಒಂದೂ ೪–೫ ಅಕ್ಷರಗಳಿಗಿಂತ ಹೆಚ್ಚಾಗಿಲ್ಲ. ಯತಿಸ್ಥಾನಕ್ಕೆ ಸರಿಯಾಗಿ ಬಹಳ ಕಡೆ ಭಾವವೂ ಕತ್ತರಿಸಲ್ಪಟ್ಟಂತೆ ತುಂಡಾಗಿ ಬೀಳುವದು. ಎರಡನೆಯ ಗೆರೆಯ ಕಡೆಯ ಶಬ್ದವು ಮೂರನೆಯ ಗೆರೆಯ ಆರಂಭದ ಶಬ್ದದೊಂದಿಗೆ ಜೋಡಿಸಲ್ಪಟ್ಟದ್ದು ಆಲೋಚನೆಯನ್ನು ಪೂರ್ತಿಗೊಳಿಸುತ್ತದೆ. ಹೃದಯದ ಭಾವಸಂಯೋಜನೆಯೂ ಬಾಯಿಮಾತುಗಳ ರಚನೆಯೂ ಉಚ್ಚಾರಣೆಯೂ ಒಂದೇ ಕಾಲದಲ್ಲಿ ಒಂದರೊಡನೆಯೊಂದು ಮಾತಾಡಿಕೊಂಡು ಹೊರಬೀಳುತ್ತಿವೆಯೋ ಎಂದು ಆಶ್ಚರ್ಯಪಡಿಸಬಲ್ಲ ಪದ್ಯರತ್ನಗಳು ಬಹಳವಿವೆ. ಹೀಗೆ ಇವನಲ್ಲಿ ಮಹಾಕವಿಗಳಿಗೆ ಬೇಕಾದ ರಚನಾ ಸೌಮನಸ್ಯ, ವಾಗ್ಮಿತ್ವ ಮೊದಲಾದ ಗುಣಗಳು ಬೇಕಾದಷ್ಟಿವೆ. ಭಾವಸೌಮನಸ್ಯವು ಮಾತ್ರ ಬಹಳ ಕಡೆ ಇಲ್ಲ. ಅದೊಂದನ್ನುಳಿದೆವೆಂದರೆ ಕನ್ನಡ ವಾಙ್ಮಯದಲ್ಲಿ ಇಷ್ಟರ ಕವಿಯೇ ಇಲ್ಲವೆಂದು ಕಂಠೋಕ್ತವಾಗಿ ಹೇಳಬಹುದು.

ಒಟ್ಟಾರೆ ರಾಮದಾಸನ ನಿರ್ದಾಕ್ಷಿಣ್ಯಭಾವವೂ ವರ್ಣವರ್ತಿನ ಪ್ರಾಸಾದಿಕ ಸರಣಿಯೂ ಪೋಪನ ಅಚ್ಚುಕಟ್ಟುತನವೂ ಲಕ್ಷ್ಮೀಶನ ಮಾಧುರ್ಯವೂ ಹರೀಶ್ವರನ ಆವೇಶವೂ ನಾಗಚಂದ್ರನ ಅರ್ಥಾಂತರನ್ಯಾಸವೂ ಸರ್ವಜ್ಞನೆಂಬ ಈ ವಿಲಕ್ಷಣ ಮೂರ್ತಿಯಲ್ಲಿ ಏಕೀಕರಣವಾಗಿ ಕಾವ್ಯಲೋಕವಲ್ಲಿ ಹೊಸ ಸೃಷ್ಟಿಯನ್ನೇ ಮಾಡಿನೆಯೆಂದು ಹೇಳಬಹುದು.

## ೮. ಸರ್ವಜ್ಞ ಮೂರ್ತಿವಿಚಾರ.

ಹಿಂದೆ ೬ ನೆಯ ಪ್ರಕರಣದಲ್ಲಿ ಸರ್ವಜ್ಞ ಮುದ್ರಿಕೆಯನ್ನು ಕುರಿತು ಕೆಲವು ಸಂಗತಿಗಳನ್ನು ಹೇಳಿದ್ದಾಯಿತು. ಈಗ ಅವನಿಗೆ ಈ ನಾಮಾಂಕಿತವು ಹೇಗೆ ದೊರೆಯಿತೆಂಬುವದನ್ನು ಮೊದಲು ಯೋಚಿಸಿ ತರುವಾಯ ಅವನ ಮೂರ್ತಿ ವಿಚಾರವನ್ನು ಕೈಕೊಳ್ಳುವೆವು. ಸರ್ವಜ್ಞನಿಗೆ ಅವನನ್ನು ಹೆತ್ತ ಮಾಳಿಯು ಯಾವ ಹೆಸರಿಟ್ಟಿದ್ದಳೋ ತಿಳಿಯದು. ತನ್ನ ಹೆಸರು ಪುಷ್ಪದತ್ತನೆಂದು ಸರ್ವಜ್ಞನು ಹೇಳಿಕೊಂಡಾಗ್ಯೂ ಅದು ಅವನ ಪೂರ್ವದ ಹೆಸರಲ್ಲದೆ ಈ ಜನ್ಮದಲ್ಲಿ ಕೊಟ್ಟ ಹೆಸರಲ್ಲವೆಂದು ಅವನ ಪದ್ಯದಿಂದಲೇ ತಿಳಿಯುತ್ತದೆ. ಇದು ಅವತಾರ ಸೂಚಕವಾಗಿದ್ದು ಅವನ ಜೀವಿತ ಕಾಲದಲ್ಲಿ ಯಾರೂ ಈ ಹೆಸರಿನಿಂದ ಅವನನ್ನು ಕರೆದದ್ದಿಲ್ಲ. ಹೀಗಾಗಿ ಸರ್ವಜ್ಞನೆಂಬದು ವಿಶೇಷಾರ್ಥದಲ್ಲಿ ಕೊಟ್ಟ ಒಂದು ಹೆಸರಲ್ಲದೆ ಕವಿಯ ನಿಜವಾದ ನಾಮಧೇಯವಲ್ಲವೆಂದು ತಿಳಿಯತಕ್ಕದ್ದು.

ಇದು ಆವನಿಗೆ ಯಾವನೊಬ್ಬ ಅರಸನ ಆಶ್ರಯದಲ್ಲಿ ಆಸ್ಥಾನ ಕವಿಯಾದ್ದುದ ರಿಂದಾಗಲಿ ಯಾವದೊಂದು ವಿದ್ವಜ್ಜನ ಸಭೆಯಲ್ಲಿ ವಿಶಿಷ್ಟ ವಿಷಯದ ಮೇಲೆ ಕಾವ್ಯ ಚಾತುರ್ಯವನ್ನು ತೋರ್ಪಡಿಸಿದ್ದರಿಂದಾಗಲಿ ದೊರೆತದ್ದಲ್ಲ. 'ವೊಳೆ ಯಲ್ಲಿ ಸಸಿಯನರಿತ' ಹಳ್ಳಿಯ ಜನರು ಇವನು ಪ್ರಾಯಕ್ಕೆ ಬಂದು ಪ್ರತಿಯೊಂ ದರ ಮೇಲೆ ಪದ್ಯಗಳನ್ನು ಕಟ್ಟಿ ಅನ್ನುವದನ್ನು ನೋಡಿ ಇವನೇನು ಸರ್ವಜ್ಞ ನಂತೆ ಎಲ್ಲ ವಿಷಯಗಳನ್ನು ಬಲ್ಲವನಾಗಿದ್ದಾನೆ? ಇವನು ಆ ಅಂಬಲೂರಿನ ಕುಂಬಾರ ಸಾಲೆಯಲ್ಲಿ ಹುಟ್ಟಿ ಬೆಳೆದವನಲ್ಲವೇ! ಎಂದು ಪ್ರಶ್ನಿಸುವವರಾದರು. ಇದೇ ಮುಂದೆ ಅವನಿಗೆ 'ಸಾಲೆ ಸರ್ವಜ್ಞ' ನೆಂಬ ಹೆಸರು ರೂಢಿಯಾಗುವ ದಕ್ಕೆ ಕಾರಣವಾಯಿತು. ಇಂಥ ನಾಮಧೇಯವು ಹಿಂದಿನ ಕಾಲದಲ್ಲಿ ವಿದ್ಯಾ ಪಾರಂಗತನಿಗೆ ದೊರೆಯುತ್ತಿದ್ದುದರಿಂದ ಇದೊಂದು ಬಿರುದಿನ ಹೆಸರೆಂದು ತಿಳಿದುಬರುತ್ತದೆ. ನಾವು ಈಗಿನ ಕಾಲದ ವಿಶ್ವವಿದ್ಯಾನಿಲಯದಲ್ಲಿ ತೇರ್ಗಡೆ ಹೊಂದಿ ಬಹುಮಾನವನ್ನು ಪಡೆದ ಮನುಷ್ಯನಿಗೆ 'ಯುನಿವರ್ಸಿಟಿ ಮ್ಯಾನ್' ಎಂದು ಹೇಗೆ ಕರೆಯುತ್ತೇವೋ ಹಾಗೆಯೇ ಹಿಂದಿನವರು ಇಂಥವನಿಗೆ 'ಸರ್ವ ಜ್ಞ' ನೆಂದೆನ್ನುತ್ತಿದ್ದರು. ಸರ್ವಜ್ಞನೆಂಬದು ಸಂಸ್ಕೃತ ಶಬ್ದವಿದ್ದು ಆರ್ಯರು ಗೀರ್ವಾಣ ವಿದ್ಯೆಯಲ್ಲಿ ಅಸಾಧಾರಣ ನೈಪುಣ್ಯವನ್ನುಪಡೆದವರಿಗೆ ಕೊಡುತ್ತಿದ್ದ ಒಂದು ವಿಶೇಷ ತರದ ಬಿರುದೆಂದು 'ಸರ್ವಜ್ಞನೆನಿಸಿಕೊಳ್ಳಲಿ ಗೀರ್ವಾಣಾಧೀ ಪನೆ ಭಾಗ್ಯಮಂ ಪಡೆಯಲಿ ತಾಂ'ಎಂಬ ಚನ್ನನ ನೀತಿಕಂದದಿಂದಲೂ ಸಂಸ್ಕೃತ ಸಾಹಿತ್ಯ ಚರಿತ್ರೆಯಿಂದಲೂ ವ್ಯಕ್ತವಾಗುತ್ತದೆ. ೧೪ನೆಯ ಶತಮಾನದಲ್ಲಿ ಮಹಾ ಭಾರತಕ್ಕೆ ಸಂಸ್ಕೃತದಲ್ಲಿ ಭಾಷ್ಯವನ್ನು ಬರೆದ ವಿದ್ವಾಂಸನೊಬ್ಬನಿಗೆ 'ಸರ್ವಜ್ಞ ನಾರಾಯಣ' ನೆಂದೂ* ಸುಮಾರು ಇದೇ ಶತಮಾನದಲ್ಲಿ ಬದುಕಿದ ಸಾಯ ಣಾಚಾರ್ಯನ ಅಣ್ಣನಾದ ಮಾಧವನಿಗೆ 'ಸರ್ವಜ್ಞ,' ಹಾಗೂ 'ವಿದ್ಯಾರಣ್ಯ' ನೆಂತಲೂ ಬಿರುದುಗಳಿದಂತೆ ಗೊತ್ತಾಗುತ್ತದೆ. ೧೬ನೆಯ ಶತಮಾನದಲ್ಲಿ ಆಗಿ ಹೋದ ೩ನೆಯ ಸೋಮೇಶ್ವರ ಅರಸನಿಗೆ 'ಭೂಲೋಕೇಶಮಲ್ಲ' ನೆಂತಲೂ 'ಸರ್ವಜ್ಞ ಚಕ್ರವರ್ತಿ' ಯೆಂತಲೂ ಬಿರುದುಗಳಿದ್ದವೆಂದು ಅವನ ಗ್ರಂಥದಿಂದ ತಿಳಿದು ಬರುತ್ತದೆ. ಇವನು 'ಮಾನಸೋಲ್ಲಾಸ' ಇಲ್ಲವೆ 'ಅಭಿಲಾಷಿತಾರ್ಥ ಚಿಂತಾಮಣಿ' ಎಂಬ ಗ್ರಂಥವನ್ನು ಬರೆದಿರುವನು. ಇವರಲ್ಲಿ ಕಾವ್ಯ, ನೀತಿ,

* Macdonell's Sanskrit Literature page 275, 291.

ವೈದ್ಯ, ಅಶ್ವವಿದ್ಯೆ, ರಸಾಯನ, ಜ್ಯೋತಿಷ, ಅಲಂಕಾರ ಮುಂತಾದ ವಿವಿಧ ವಿಷಯಗಳು ನಿರೂಪಿಸಲ್ಪಟ್ಟಿವೆ. † ಹೀಗಾಗಿ ಸಂಸ್ಕೃತೀಯರಂತೆ ಕನ್ನಡಿಗರಾದರು ಕನ್ನಡ ವಿದ್ಯೆಯಲ್ಲಿ ಶಾಸ್ತ್ರೀಯ ಹಾಗೂ ವ್ಯವಹಾರಿಕ ಮುಖದಿಂದ ನಿಪುಣನಾದವನಿಗೆ ಈ ಬಿರುದನ್ನು ಕೊಡುತ್ತಿದ್ದರೆಂದು ಸೋಮೇಶ್ವರ ಶತಕದ ಒಂದು ಶ್ಲೋಕದಿಂದ ತಿಳಿದುಬರುತ್ತದೆ...

" ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳ್ದು ತಾಂ ।
ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂ ನೋಡುತಂ ।
ಕೆಲವಂ ಸಜ್ಜನಸಂಗದಿಂದಲರಿಯುಲ್ **ಸರ್ವಜ್ಞನಪ್ಪಂತೆಕೇಳ್**" ಇತ್ಯಾದಿ

ಸರ್ವಜ್ಞನಾದರು ಈ ಶ್ಲೋಕಾರ್ಥದಲ್ಲಿ ಹೇಳಲ್ಪಟ್ಟ ಮಾರ್ಗಾಂತರಗಳಿಂದಲೇ ಜ್ಞಾನಾರ್ಜನೆಯನ್ನು ಮಾಡಿಕೊಂಡವನಾಗಿದ್ದು ಅಂದರೆ 'ಸರ್ವರೊಳೊಂದೊಂದು ನುಡಿಗಲಿತು' 'ವಿದ್ಯದ ಪರ್ವತವೆ' ಆಗಿ ಈ ಹೆಸರಿಗೆ ಒಪ್ಪುತ್ತಿರುವನು.

ಈಗ ಅವನ ಮೂರ್ತಿ ವಿಚಾರಕ್ಕೆ ತೊಡಗಿ ಸರ್ವಜ್ಞನ ಮೂರ್ತಿತ್ವದಿಂದಲೆ ಅವನ ಕವಿತೆಗೆ ಮಹತ್ವ ಬಂದಿರುವದಲ್ಲದೆ ಅವನ ಕವಿತೆಯಿಂದ ಮೂರ್ತಿತ್ವಕ್ಕೆ ಮಹತ್ವ ಬಂದದ್ದಲ್ಲವೆಂದು ಮೊದಲು ತಿಳಿದಿರತಕ್ಕದ್ದು. ಅವನ ಪದ್ಯಗಳಿಗೆ ಅವನ ಮೂರ್ತಿಯ ಛಾಯೆಯು ಇಲ್ಲದೆ ಹೋದರೆ ಅವು ನಿರ್ಜೀವವಾದ ಅಂಗಗಳೇ ಸರಿ. ಅವನು ಜೀವಂತನಿಲ್ಲದಿದ್ದರೂ ಭಾವರೂಪವಾಗಿ ಅವನ ಮೂರ್ತಿತ್ವವನ್ನು ಆರೋಪಿಸಿಕೊಂಡರೆನೇ ಅವು ಜೀವಕಳೆಯಿಂದ ತುಂಬುವವು. ಹೀಗಾಗಿ ಅವನ ಮೂರ್ತಿ ವಿಚಾರವನ್ನು ಎಲ್ಲ ವಿಚಾರಗಳಿಂಗಿತ ಸೂಕ್ಷ್ಮವಾಗಿಯೂ ಸಾಂಗವಾಗಿಯೂ ಪ್ರಸ್ತಾಪಿಸಬೇಕಾಗಿದೆ. ಅದುಕಾರಣ ಈ ವಿಚಾರವನ್ನು ಸರ್ವಜ್ಞನಬಾಲ್ಯಯೌವನ, ರೂಪವೇಷ, ಸಂಚಾರ, ವಿದ್ಯೆ, ಗುಣಸ್ವಭಾವ, ಧರ್ಮ, ಚರಮಕಾಲವೆಂದು ಸಪ್ತಭಾಗಗಳಾಗಿ ವಿಭಾಗಿಸಿರುವೆವು.

ಸರ್ವಜ್ಞನಿಗೂ ಅವನ ಹೆತ್ತವರಿಗೂ ಅವನ ಹುಟ್ಟಿನ ವಿಷಯದಲ್ಲಿ ವಿಪರ್ಯಾಸವಾಗಿ ಅವನನ್ನು ಮನೆಬಿಟ್ಟು ಹೊರಗೆ ಹಾಕುವಷ್ಟು ಪರಸ್ಪರ ಮನಃಕ್ಲೇಸವುಂಟಾಯಿತೆಂದು ಹಿಂದೆ ಜನ್ಮ ವಿಚಾರದಲ್ಲಿ ಹೇಳಿದ್ದೇವೆ. ಅವನು ಆ ಕುಂಬಾರ ಮಾಳಿಯ ಮನೆಯಲ್ಲಿ ಎಷ್ಟು ವರ್ಷವಿದ್ದನೋ ತಿಳಿಯದು. 'ನೂಕಿದರು ಅವರಾಗ ಕುಹ

ಬಾಲ್ಯವೂ ಯೌವನವೂ,

* Fleet's Kanarese Dynesties page 445-56

ಕತನದೊಳು ಬೇಗ' ಎಂಬದರಿಂದ ಇನ್ನೂ ಹೆತ್ತವರ ಆಶ್ರಯದಲ್ಲಿರಬೇಕಾಗಿದ್ದ ಕಾಲದಲ್ಲಿಯೇ ಅಂದರೆ ಸುಮಾರು ೮–೧೦ ವರ್ಷದವನಾಗಿರುವಾಗಲೇ ಹೊರಗೆ ನೂಕಲ್ಪಟ್ಟನೆಂದು ಕಾಣುತ್ತದೆ. ಅಂದಿನಿಂದ ಇವನು ಅನಾಥನಾಗಿ ಭಿಕ್ಷೆಬೇಡುತ್ತ 'ಹೆಚ್ಚಾಗಿ' ಕೇಳಿಕೆಯಿಂದ ಲೋಕವಿದ್ಯೆಯನ್ನು ಸಂಪಾದಿಸಿ ಪರಿಸ್ಥಿತಿಗನುಸಾರವಾಗಿ ಸ್ವಂತ ಕಾಲುಗಳ ಮೇಲೆ ನಿಲ್ಲ ಶಕ್ತನೂ ವ್ಯವಹಾರ ಚತುರನೂ ತನ್ನ ಮೂರ್ತಿಯ ದೃಢತ್ವವನ್ನು ಸ್ಥಾಪಿಸುವಲ್ಲಿ ಸಂಭವಿಸಬಹುದಾದ ಕಷ್ಟಗಳನ್ನು ತಾಳುವದಕ್ಕೆ ಬೇಕಾದ ವಿರಕ್ತಿ ಎಂಬ ಚಡ್ಡಿಯನ್ನು ಕಟ್ಟಿಕೊಂಡವನೂ ಆಗಿ ಯೌವನ ಪ್ರಾಯದಲ್ಲಿಯೇ ಕರ್ನಾಟಕಕ್ಕೆ ಸಡ್ಡು ಹೊಡೆದು ನಿಂತನೆಂದು ಕಾಣುತ್ತದೆ.

ರೂಪವೂ ವೇಷವೂ.

ಇವನ ರೂಪ ಆಕಾರಗಳು ಹೇಗಿದ್ದವೆಂದು ಹೇಳುವದು ಕಷ್ಟ. ಹೀಗಿದ್ದರೂ ಅವನ ಗ್ರಂಥದಲ್ಲಿ ದೊರೆಯುವ ಕೆಲವು ಸೂಚನೆಗಳಿಂದ ಅವನ ಭಾವಚಿತ್ರವನ್ನು ಊಹಿಸಲೆತ್ನಿಸಿದ್ದೇವೆ. ಇವನು 'ಇಂಬಿನ' ಹಾಗೂ 'ಕಳೆಯುಳ್ಳ' 'ಮಾಳಿಯ' ಮಗನಾದ್ದರಿಂದ ಚನ್ನಿಗನೂ ಪುಷ್ಟನೂ 'ಕಟ್ಟಾಳೂ' ಆಗಿರಬಹುದು. 'ಚಿಂತಿಸಿ ದೇಹ ಬಡವಕ್ಕು' ಎಂಬ ನುಡಿಯಿಂದಲೂ ಇದೇ ಧ್ವನಿತವಾಗುತ್ತದೆ. ಇವನು ಆರಾಧ್ಯ ಬ್ರಾಹ್ಮಣನ ವರಪುತ್ರನಾಗಿ 'ಬುದ್ಧಿವಂತಿಕೆಯು ಸುರಿಯುತ್ತಿ'ರುವ 'ಮುದ್ದು ಮುಖವುಳ್ಳವನೂ' ಗಂಭೀರತ್ವದಿಂದ ಕೂಡಿದ ಮೌನಮುದ್ರೆಯುಳ್ಳವನೂ ಆಗಿರಬಹುದು. ಆರ್ಯರ ಅಗಲವಾದ ಹಣೆ, ನಿಡುದಾದ ಮೂಗು, ಕೆಂಪಾದಗಲ್ಲ, ಕೊರೆದಿಟ್ಟ ತುಟಿ, ಶುಭ್ರವಾದ ಹಲ್ಲು (ಪುಷ್ಟದಂತ; 'ಮಾಣದೆ ವದನ ಶುಚಿಲೇಸು') ಮಿಾಟುವ ಹುಬ್ಬು, ಉಪಹಾಸ ರಂಜಿತವಾದ ಕಣ್ಣು, ನಿರ್ಭತ್ಸಿಸುವ ಕೈ, ನಿರ್ಧಾರದ ಹೆಜ್ಜೆಗಳನ್ನಿಕ್ಕುವ ಕಾಲುಗಳಿಂದ ಯುಕ್ತವಾಗಿ ಸಿಂಹ ಸಂಹನನವುಳ್ಳ ಈ ಅಸಾಧಾರಣ ಮೂರ್ತಿಯನ್ನು ಕೇವಲ ಊಹೆಯಿಂದ ವರ್ಣಿಸುವದು ಅಸಾಧ್ಯವೇ ಸರಿ. 'ಮುಂಡೆ ಬೋಳಾದವರ ಕಂಡು ನಂಬಲಿಬೇಡ, 'ಹಿರಿಯರಿಗೆ ಗಡ್ಡಲೇಸೆಂದ' ಮಿಾಸೆಯಿಲ್ಲದ ಮೋರೆ ಹೇಸಿ ಕಾಣಯ್ಯ' ಮುಂತಾದ ನುಡಿಗಳಿಂದ ಇವನು ತಕ್ಕಮಟ್ಟಿಗೆ ಕೂದಲು ಬಿಡುತ್ತಿದ್ದನೆಂದು ಕಾಣುತ್ತದೆ. ಆದರೆ ಹೀಗೆ ಚಿತ್ರಿಸಿದರೆ ವೀರಶೈವ ಸೂಚಕವಾದ ಲಿಂಗ ರುದ್ರಾಕ್ಷಿಗಳು ಸ್ಪಷ್ಟವಾಗಿ ಕಾಣಲಿಕ್ಕಿಲ್ಲೆಂದು ಭಾವ

ಚಿತ್ರದಲ್ಲಿ ಅದನ್ನು ಲೋಪಿಸಿದ್ದೇವೆ. ಇವನು ತಲೆಯ ಮೇಲೆ ಭಾರ ಹೊರುವದನ್ನೂ ಬರಿಗಾಲು ಪಯಣವನ್ನೂ, ಮೆದಳು, ಕಣ್ಣುಗಳಿಗೆ ಹಾನಿಕರವೆಂದು ಬಹಳವಾಗಿ ಖಂಡಿಸಿರುವದರಿಂದ ಕಾಲಿಗೆ ಹಾವುಗೆ ಇಲ್ಲವೆ ಯಾವದೊಂದು ತರದ ಪಾದರಕ್ಷೆಯನ್ನು ಪ್ರಯೋಗಿಸುತ್ತಿದ್ದಂತೆ ತೋರುತ್ತದೆ. ಚಿತ್ರದಲ್ಲಿ ಕರವನ್ನು ಮೆಡಿಸಿದಂತಿರುವದು ಕೆಲವರ ಮನಸಿಗೆ ಅಷ್ಟು ಒರುತ್ತಿರಲಿಕ್ಕಿಲ್ಲ? 'ತುಂಡುಗಂಬಳಿ ಹೊವೆದು' 'ಕಂಬಳಿಯು ಬೆನ್ನ ಬಿಡದಿರಲು' ಎಂಬದರಿಂದ ಮೈಮೇಲೆ ಒಂದು ಜೀರ್ಣವಾದ ಕಂಬಳಿಯ ತುಂಡನ್ನು ಹೊರುತ್ತಿದ್ದಂತೆಯೂ 'ದೇವಾಂಗದ ದುಸ್ತುಬಿದ್ದಂತೆ' ಎಂಬ ದೃಷ್ಟಾಂತದಿಂದ ಲಂಗೋಟಿಯೊಂದನ್ನು ಧರಿಸುತ್ತಿದ್ದಂತೆಯೂ 'ಕರದಿ ಕಪ್ಪರವುಂಟು' ಎಂಬದರಿಂದ ಭಿಕ್ಷಕ್ಕಾಗಿ ಒಂದು ಗುಂಡುಗಪ್ಪರವನ್ನು 'ಬಿದಿರಿಂದ ಸಕಲ ಸಂಪದವಕ್ಕು' ಎಂಬದರಿಂದ ಪ್ರಯಾಣದಲ್ಲಿ ಸಹಾಯವಾಗುವಂತೆ ಗಂಡು ಬಿದರಿನದೊಂದು ಕೋಲನ್ನು ಹಿಡಿದಿದ್ದಂತೆಯೂ ತಿಳಿಯುತ್ತದೆ. ಇವನ ಸ್ವಭಾವವು ಬಹಿರಂಗದಲ್ಲಿ ಕಠಿಣವಿದ್ದಂತೆ ಇವನ ಧ್ವನಿಯು ಸಹ ದಪ್ಪವಾಗಿಯೂ ಕಠೋರವಾಗಿಯೂ ಇದ್ದಿರಬಹುದು. ಇವನು ಸ್ವತಂತ್ರ ವಿಚಾರಿಯೂ ಸ್ವಚ್ಛಂದ ವೃತ್ತಿಯುಳ್ಳವನೂ ಆದ್ದರಿಂದ ಲಿಂಗ, ರುದ್ರಾಕ್ಷಿ, ವಿಭೂತಿ ಮೊದಲಾದವುಗಳನ್ನು ಈಡಾಡಿರಬಹುದಾದಾಗ್ಯೂ ವೀರಶೈವನೆಂದು ಗುರುತಿಸುವದಕ್ಕೆ ಇವುಗಳ ಸಹಿತವಾಗಿ ಚಿತ್ರಿಸಿದ್ದೇವೆ.

'ಯಥಾರ್ಥವಾದೀ ಸಲೋಕವಿರೋಧೀ' ಎಂಬೀ ಲೋಕೋಕ್ತಿಯನ್ನು ದಿನಾಲು ಹೆಚ್ಚೆಚ್ಚು ಅನುಭವ ಮಾಡುತ್ತ ಬಂದ ಸರ್ವಜ್ಞನು ಪ್ರಪಂಚದ ಮೇಲೆ ಬೇಸರಗೊಂಡು 'ಹಿಂಡಿನಗಲಿದ ಗಜದಂತೆ' ಮಾನವ ಸಂಸರ್ಗವನ್ನು ತ್ಯಜಿಸಿ, 'ನೆಚ್ಚಿ ಒಂದೂರೊಳಿರದೆ' ಈಶ್ವರನಲ್ಲಿ ಭರವಸವಿಟ್ಟು ದೇಶದೇಶಗಳನ್ನು ಸಂಚರಿಸುತ್ತಿದ್ದನೆಂದು ಕಾಣುತ್ತದೆ. ಇವನು ಭಿಕ್ಷ ಬೇಡಿ ಜೀವಿಸುತ್ತ 'ಹೊಟ್ಟೆ ಎಲ್ಲವನ್ನು ಮಾಡಿಸು' ವದೆಂಬ ಅನುಭವವು ಇವನಿಗೆ ಮೇಲಿಂದ ಮೇಲೆ ಆಗುತ್ತಿದ್ದಾಗ್ಯೂ ಯಾರಿಗೂ ದಾಸನಾಗುವವನಲ್ಲ. ಇದನ್ನು 'ನಿಚ್ಚಯುವ ಬಿಡದೊಬ್ಬರಿಚ್ಛೆಯಲಿ ನುಡಿಯದಿರು' 'ನಡೆಯೊಳೆಚ್ಚರವ ಬಿಡದಿರು' 'ಪರವಶದಿ ದೃಢವನಗಲದಿರು' ಮುಂತಾದ ಉದ್ಗಾರಗಳಿಂದ ಕಂಠೋಕ್ತವಾಗಿ ಹೇಳುತ್ತಾನೆ. ಜನರ ದಾಕ್ಷಿಣ್ಯಕ್ಕೊಳಗಾಗುವ ಪ್ರಸಂಗವು ಇವನಿಗೆ ಅನೇಕಾವರ್ತಿ ಒದಗುತ್ತಿತ್ತೆಂದು 'ಅಪಮಾನದೂಟದಿಂದುಪವಾಸವಿರಲೇಸು' ಮುಂತಾದ

ಸಂಚಾರ

ಕೆಲವು ಪದ್ಯಗಳಿಂದ ತಿಳಿಯುತ್ತದೆ. 'ಹೊಂದಿ ಸಾಸಿರವ ಕೊಟ್ಟರೂ ಕರ್ವಿಗೆಯು ದಂದುಗವೆ ಬೇಡ' ಎಂಬ ಮಾತಿನಿಂದ ಹಣವನ್ನೋ ಜನಮೆಚ್ಚಿಕೆಯನ್ನೋ ಪಡೆಯುವದಕ್ಕೆ 'ಕೊಂಡಾಡುತಿಚ್ಛೆ ನುಡಿ'ಯಬೇಕೆಂಬ ಪ್ರೇರಣೆಯು ಇವನಲ್ಲಿ ಅನೇಕಾವರ್ತಿ ಉಂಟಾಗುತ್ತಿದ್ದರೂ ಎಷ್ಟು ಮಾತ್ರವೂ ಅದಕ್ಕೆ ಒಳಬೀಳದೆ 'ನುಡಿಯನ್ನು ಹೋಗಾಡದೆ' ತನ್ನ ವ್ರತವನ್ನು ಬಿಡದೇ ಹಿಡಿದಿದ್ದನೆಂದು 'ಭಂಗ ಬಟ್ಟುಂಬ ಬಿಸಿಯನ್ನಕ್ಕಿಂತಲು ತಂಗುಳವೆ ಲೇಸು' 'ಹುಸಿಯ ಪೇಳ್ವದರಿಂದ ಹಸಿದು ಸಾವುದು ಲೇಸು' 'ಹುಸಿದು ಮೆರೆಯುವನ ಬದುಕಿಂವ ಹಂದಿಯು ಇಸಿಯು ಲೇಸೆಂದ' ಮುಂತಾದ ಪದ್ಯಗಳಿಂದ ವಿಶದವಾಗುತ್ತದೆ. 'ಭಿಕ್ಷೆಬೇಡುವದು ಅತಿಕಷ್ಟ'ವೆಂದೂ 'ಕುಕ್ಷಿಗೀನರರ ಕಾಡುವದು ಪಾಪ'ವೆಂದೂ ತಿಳಿದ ಸರ್ವಜ್ಞನು ನಿರಪೇಕ್ಷಬುದ್ಧಿಯಿಂದ ಯಾರಾದರೂ 'ಅನ್ನವನ್ನಿಕ್ಕಿದರೆ' ಅದನ್ನು ಇಸಿಕೊಂಡು ಹೊಟ್ಟೆ ಹೊರೆಯುತ್ತಿದ್ದನಲ್ಲದೆ ಯಾರ ಮೇಲೆಯೂ ಭಾರವನ್ನು ಹಾಕುತ್ತಿದ್ದಿಲ್ಲವೆಂದು 'ಬೇಡನು, ಇಕ್ಕಿದಡೆ ಉಂಬ' ಎಂಬ ಪದ್ಯದಿಂದಲೂ ದಾನಪದ್ಧತಿಯಲ್ಲಿ ಹೇಳುವ ಕೆಲವು ವಚನಗಳಿಂದಲೂ ವ್ಯಕ್ತವಾಗುತ್ತದೆ. ಎಲ್ಲಿ ನಿದ್ರೆ ಬಂತೋ ಅಲ್ಲಿಯೇ ಇವನ ಮೆತ್ತನ ಹಾಸಿಗೆ. ಇವನ ಪದ್ಯಗಳಲ್ಲಿ 'ಹಂಗಿನರಮನೆಯಿಂದ ವಿಂಗಡದ ಗುಡಿ ಲೇಸು' ಎಂಬದಲ್ಲದೆ 'ಹಾಳೂರ ಶುನಕನಂತಕ್ಕು' 'ಹಾಳೂರ ಗೂಗೆಯಂತಕ್ಕು' 'ಹಾಳೂರ ಹದ್ದಿನಂತಕ್ಕು' 'ಹಾಳೂರ ಸ್ಥಾನದಂತಕ್ಕು' 'ಹಾಳೂರ ಕೊಟ್ಟೆಗುರಿದಂತೆ' ಮುಂತಾದ ಉಪಮೆಗಳು ಮೇಲಿಂದ ಮೇಲೆ ಬರುವದರಿಂದ ಇವನು ಹಗಲಲ್ಲಿ ತಿರಿದುಂಡು ರಾತ್ರಿಯಲ್ಲಿ ಸಮೀಪದ ಯಾವದೊಂದು ಹಾಳೂರಲ್ಲಿ ಶಯನಿಸುತ್ತಿದ್ದಂತೆ ಭಾಸವಾಗುತ್ತದೆ. ಹೀಗಿಲ್ಲದಿದ್ದರೂ ಇತರ ಪದ್ಯಗಳನ್ನು ನೋಡಿದರೆ ಇವನು ಹಾಗೂ ನಿರ್ಜನ ಪ್ರಿಯನೂ ವಿವಿಕ್ತದೇಶಿಯೂ ಆಗಿದ್ದನೆಂದು ನಿಸ್ಸಂದೇಹವಾಗಿ ಹೇಳಬಹುದು. 'ಸರ್ಪನ ಹೆಡೆಯ ನೆಳಲಡಿಗ ಓಡಿ ಬರುವ ಕಪ್ಪೆ' 'ಮೊಲದ ಹಿಂದೆ ಓಡುವ ಮುದಿನಾಯಿ' 'ಫಕ್ಕನೆ ತುಂಬಿ ಬರುವ ಹಳ್ಳ' 'ಆನೆಯ ನೀರಾಟ' 'ಸರೋವರದ ಮಧ್ಯದಲ್ಲಿ ಹಣ್ಣಾದ ಮಾವಿನ ಮರ' 'ಗದ್ದೆಯ ಹಸರು ತಿನಹೋಗಿ ಬಿದ್ದು ಸತ್ತ ಕೋಣ' 'ಮದದಿಂದ ಜರಿದು ಬಿದ್ದ ಆನೆ' 'ಹಾವನ್ನು ಎರಗುವ ಹದ್ದು' 'ಎಳೆಯ ತೆಂಗಿನಕಾಯಿ ತಿಂದು' 'ಓಕರಿಸುತ್ತ ಹುಚ್ಚು ಹಿಡಿವಂತೆ ಅಡವಿಯೆಲ್ಲಾ ಓಡಾಡುವ ನರಿ' 'ಕಾಡಿನಲ್ಲಿ ಹಿಡಿಯಲ್ಪಡುವ ಹೆಬ್ಬಾವು' 'ವನವ

ಹಿಂದೆ ಹೋಗುವ ಬೆಳ್ಳಕ್ಕಿ' 'ಸತ್ತು ತಿಂಗಳಾಗಿ ಕೊಳೆತು ನಾರುವ ಹೆಣದ ಮಾಂಸವನ್ನು ತಿನ್ನುವ ನಾಯಿ' ಮುಂತಾದ ದೃಷ್ಟಾಂತಗಳಿಂದ ಇವನು ಊರಲ್ಲಿರುವದಕ್ಕಿಂತಲು ಹೆಚ್ಚು ಹೊರಗೆ ಸಂಚಾರ ಮಾಡುತ್ತಿದ್ದನೆಂದು ಕಾಣುತ್ತದೆ. ಇವನ ಮೊದಲನೆಯ ಭಾಗದಲ್ಲಿ ಮನೆತನದ ಸಂಬಂಧವಾದ ಉಪಮೆಗಳೂ ಎರಡನೆಯ ಭಾಗದಲ್ಲಿ ಹೊರಗಿನ ತರದ ಉಪಮೆಗಳೂ ಹೆಚ್ಚಾಗಿ ಕಂಡುಬರುವದರಿಂದ ಇವನು ಜನಸಂಪರ್ಕದಲ್ಲಿದ್ದಾಗ ಪಾರಮಾರ್ಥಿಕ ಹಾಗೂ ಲೌಕಿಕ ಪದ್ಯಗಳನ್ನು ರಚಿಸುವದಕ್ಕೂ ಸಂಚಾರದಲ್ಲಿದ್ದಾಗ ಏಕಾಂತಿಕನಾಗಿ ನೈತಿಕ ಪದ್ಯಗಳನ್ನು ರಚಿಸುವದಕ್ಕೂ ಪ್ರೇರಿತನಾದಂತೆ ಭಾಸವಾಗುತ್ತದೆ. ಇದರಿಂದ ಇವನ ತಲೆಯಲ್ಲಿ ಯಾವಾಗಲೂ ತಿರುಗುತ್ತಿದ್ದ ಮುಖ್ಯ ವಿಚಾರಗಳಾವುವೆಂದು ಗೊತ್ತುಪಡಿಸಬಹುದು. ಭಿಕ್ಷಾಪಾತ್ರೆಯೊಡೆದೋ ಜನರಿಂದ ತೊಂದರೆಯುಂಟಾಗಿಯೋ ಇವನಿಗೆ 'ಸಂಚಾರದಲ್ಲಿ ಕಾರಣಾಂತರಗಳಿಂದ ಅನೇಕ ಕಷ್ಟಗಳು ಸಂಭವಿಸಿರುವವು. 'ಜನರು ಬೈದರೂ ಕಲ್ಲುಕೊಂಡೊಗೆದರೂ' 'ತಡೆಯೆಡರು ನಿಂದೆಗಳು ಬಂದರೂ' 'ಸಂಕೋಲೆಯಿಂದ ಬಂಧಿಸಲ್ಪಟ್ಟರೂ' ಇವನು 'ಸಮತೆಯನ್ನು ಬಿಡದೆ' 'ಚಂದನವು ಬೆಂದು ಪರಿಮಳವ ಕೊಡುವಂತೆ' ಕಷ್ಟಗಳನ್ನೆಲ್ಲ 'ನುಂಗಿ' 'ಸೈರಿಸುತ್ತ ಹಿತವನ್ನೇ ಕೋರುವನು.' ಇವನು ಅನುಭವಿಸಿದ ತಾಪತ್ರಯಗಳನ್ನು 'ಸಂಗ, ವಿಧಿ ಪದ್ಧತಿ' ಗಳಲ್ಲಿ ಹೇಳಲ್ಪಟ್ಟ ಪದ್ಯಗಳಿಂದ ಕೆಲವು ಮಟ್ಟಿಗೆ ಊಹಿಸಿಕೊಳ್ಳಬಹುದು.

ಸರ್ವಜ್ಞನು ಎಲ್ಲಿ ಓದುಬರಹ ಕಲಿತನು? ಅವನ ವಿಷಯ ಸಂಗ್ರಹಕ್ಕೆ ಆಧಾರವಾದ ಗ್ರಂಥಗಳಾವುವು? ಅವನಿಗೆ ಸಂಸ್ಕೃತ ಭಾಷೆಯ ಪರಿಚಯವು ಇತ್ತೋ ಇಲ್ಲವೋ? ಇವೇ ಮೊದಲಾದ ವಿಷಯಗಳನ್ನು ಇಲ್ಲಿವಿಚಾರಿಸತಕ್ಕದ್ದು. 'ವಿದ್ಯವೇ ತಾಯ್ತಂದೆ ಬುದ್ಧಿಯೇ ಸೋದರನು' 'ವಿದ್ಯವುಳ್ಳನ ಮುಖವು ಮುದ್ದು ಬರುವಂತಿಕ್ಕು' 'ವಿದ್ಯವಿಲ್ಲದವನ ಬರಿಮುಖವು ಹಾಳೂರ ಹದ್ದಿನಂತಕ್ಕು' 'ಬರೆಯದಲೆ ಓದುವನ ಕೆರದಿ ಹೊಡೆಯೆಂದ' 'ಬರೆವಂಗೆ ಓದು ಬರುವಂತೆ' 'ಅಕ್ಕರವು ಲೇಖಕ್ಕೆ ತರ್ಕ ತಾ ವಾದಕ್ಕೆ' 'ಓದಿನಾ ಒಡಲನರಿದಡೆ' ಮುಂತಾದ ಮಾತುಗಳಿಂದ ಇವನಿಗೆ ಓದುಬರಹಗಳು ಬರುತ್ತಿದ್ದಂತೆ ಭಾಸವಾಗುತ್ತದೆ. 'ಅಡಿಯನಿಮ್ಮಡಿ ಮಾಡಿ ಒಡಗೂಡಿ ಹನ್ನೊಂದ ತಡೆಯದಿನ್ನೂರ ಹತ್ತಕ್ಕೆ ಭಾಗಿಸಲು' ಮುಂತಾದ ಜೋತಿಷ ಗಣಿತದಿಂದಲೂ

ವಿದ್ಯೆ.

'ಉಂಡು ನೂರಡಿಯೆಣಿಸಿ' 'ಶತಕೋಟಿಧನವ ಗಳಿಸೇನು' 'ವೀಸವೇ ನವಲಕ್ಷ' ಮುಂತಾದ ಸಂಖ್ಯಾವಾಚಕಗಳಿಂದಲೂ ಅವನಿಗೆ ತಕ್ಕಮಟ್ಟಿಗಾದರೂ ಲೆಕ್ಕದ ಜ್ಞಾನವಿತ್ತೆಂದು ಗೊತ್ತಾಗುತ್ತದೆ. ಹೇಗಾದರೂ ತ್ರಿಪದಿಯ ಮಾತ್ರೆಗಳನ್ನು ಎಣಿಸುವಷ್ಟು ಅಂಕಿಗಳ ಜ್ಞಾನವೂ ಈ ಬಗ್ಗೆ ಅವಶ್ಯವಾಗಿದ್ದ ಛಂದಸ್ಸಿನ ಕೆಲವು ಸೂತ್ರಗಳ ಪರಿಚಯುವೂ ಇವನಿಗೆ ಇರಲೇಬೇಕು. ಬರಹವು ಬರುತ್ತಿದ್ದದರಿಂದ ಇವನು ಹಳೆಯ ಪದ್ಧತಿಯಂತೆ ತನ್ನ ಎಲ್ಲ ಪದ್ಯಗಳನ್ನು ತಾಳದೋಲೆಯ ಮೇಲೆ ಬರೆದಿಟ್ಟಿರಬೇಕೆಂದು ಕೆಲವರು ಊಹಿಸುವರು. ಆದರೆ ಸರ್ವಜ್ಞನು ಇಷ್ಟು ಶ್ರಮಪಟ್ಟು ಬರೆಯುವಷ್ಟು ತಾಳ್ಮೆಯುಳ್ಳವನಾಗಿದ್ದನೇನೋ ಹೇಳುವದು ಕಷ್ಟ. ಒಂದು ತರದ ಕ್ರಮವು ತೋರುವದರಿಂದ ಇವನು ಗುರುಪದ್ಧತಿ, ದಾನಪದ್ಧತಿ, ಜೋತಿಷಪದ್ಧತಿ ಮುಂತಾದವುಗಳಲ್ಲಿ ಕೆಲವು ಪದ್ಯಗಳನ್ನು ಸ್ವತಃ ಬರೆದಿಟ್ಟಿರಬಹುದಾದಾಗ್ಯೂ ಇವನ ಸಂಗಡಿಗರು ಕಲಿತು ಕಂಠಸ್ಥವಾಗಿ ಉಳಿಸಿರುವ ಪದ್ಯಗಳೇ ಹೆಚ್ಚು. ಇವನು ರಾಜನೀತಿ ಪದ್ಧತಿಯ ಪದ್ಯ ೬೨೯ ರಲ್ಲಿ 'ಜಾತಸ್ಯ ಮರಣಂ ಧ್ರುವಂ' ಎಂಬ ಶ್ರುತಿವಾಕ್ಯವನ್ನು ಉದ್ಧರಿಸಿರುವದರಿಂದಲೂ ಗೀತೆಯಲ್ಲಿ ನಿರ್ದಿಷ್ಟವಾದ ಫಲಾಪೇಕ್ಷೆಯಿಲ್ಲದ ಕರ್ಮಯೋಗವನ್ನು ಹೊಗಳಿರುವದರಿಂದಲೂ 'ಕೋಟಿಗೀತವನೋದಿ ಪಾರ್ಥೈಸಿ ಫಲವೇನು' 'ಕೂಟಸ್ಥನಲ್ಲದನ ನೋದು' ಎಂಬ ಮಾತುಗಳಿಂದಲೂ ಸಮಿಧೆ, ದೌರ್ಜನ್ಯಕಾರಿ, ನಿರ್ಜರರು, ವಿತರಣ, ವಿರತಿ, ಸುಘೃತ ಪ್ರಕೃತಿವಿರಹಿತ ಮುಂತಾದ ಸಂಸ್ಕೃತ ಪದಗಳನ್ನು ಪ್ರಯೋಗಿಸಿರುವದರಿಂದಲೂ ಇವನಿಗೆ ದೇವವಾಣಿಯ ಪರಿಚಯವಿದ್ದು ಭಗವದ್ಗೀತೆ ಶಾಸ್ತ್ರಗಳು, ಪುರಾಣ, ರಾಮಾಯಣ, ಭಾರತಾದಿ ಸಂಸ್ಕೃತ ಗ್ರಂಥಗಳ ವ್ಯಾಸಂಗವು ತಕ್ಕಮಟ್ಟಿಗಾದರೂ ಇದ್ದಿರಬೇಕೆಂದು ಕೆಲವರು ತರ್ಕಿಸುವರು. ಆದರೆ ಇಂಥ ಸಂಸ್ಕೃತ ಯಥೋಕ್ತಗಳು ಕನ್ನಡ ಗ್ರಂಥಗಳಲ್ಲಿ ಧಾರಾಳವಾಗಿ ದೊರೆಯುತ್ತಿದ್ದು ಇವು 'ಸರ್ವರೊಳೊಂದೊಂದು ನುಡಿಗಲಿತು' ಕೇಳಿಕೆಯಿಂದ ಬಂದವುಗಳಲ್ಲದೆ ಕಲಿಕೆಯಿಂದಲ್ಲವೆಂದು ತಿಳಿಯತಕ್ಕದ್ದು. ಇವನ ವಿಷಯ ಸಂಗ್ರಹಕ್ಕೆ ತರ್ಕ, ಜೋತಿಷ, ವೈದ್ಯ ಮುಂತಾದ ಲೌಕಿಕ ಶಾಸ್ತ್ರಗಳಲ್ಲಿ ಹೇಳಲ್ಪಟ್ಟು ಆಗಿನ ಕಾಲದ ಕನ್ನಡಿಗರಲ್ಲಿ ಪ್ರಚುರವಾಗಿದ್ದ ಕೆಲವು ಮುಖ್ಯ ಮಾತುಗಳೂ ಯೋಗ, ವೇದಾಂತ ಮುಂತಾದ ತತ್ವದರ್ಶನಗಳಲ್ಲಿ ಚರ್ಚಿಸಲ್ಪಟ್ಟು ವಾಡಿಕೆಯಾಗಿರುವ ಕೆಲವು ಪ್ರಮಾಣಗಳೂ ಧರ್ಮಶಾಸ್ತ್ರ ಸೂತ್ರಗಳಲ್ಲಿ

ವಿಧಿಸಲ್ಪಟ್ಟ ಗೃಹಸಮಾಜಗಳಲ್ಲಿ ರೂಢಿಯಾಗಿರುವ ಕೆಲವು ಕಟ್ಟಳೆಗಳೂ ಕಂದ ಕಾರ, ಶತಕಕಾರರಲ್ಲಿ ದೊರೆಯುವ ಕೆಲವು ನೀತಿಯ ನುಡಿಗಳೂ ವಚನ ಶಾಸ್ತ್ರ ಗಳಲ್ಲಿ ಹೇಳಲ್ಪಟ್ಟ ಧರ್ಮ ಸಂಬಂಧವಾದ ಕೆಲವು ಉನ್ನತ ವಿಚಾರಗಳೂ ಹಾಗೂ ಸಂಸ್ಕೃತ ನ್ಯಾಯ, ಲೋಕೋಕ್ತಿ, ಕನ್ನಡ ನಾಣ್ಣುಡಿ, ದಾಸರ ಪದ, ತತ್ವಲಾವಣಿ ಮುಂತಾದ ಕೆಳಗಿನ ತರದ ಸಾಹಿತ್ಯವೆಲ್ಲವೂ ಇವನ ಕವಿತೆಗೆ ಆಧಾರ ವಾಗಿದ್ದಂತೆ ತಿಳಿದು ಬರುತ್ತದೆ. ಆದರೆ 'ಓದು ಒಕ್ಕಾಲಾದರೆ ಬುದ್ಧಿ ಮುಕ್ಕಾ ಲೆಂಬ' ನಾಣ್ಣುಡಿಯಂತೆ ವಿಶೇಷ ಪ್ರಪಂಚ ಪರಿಚಯವುಳ್ಳ ಸರ್ವಜ್ಞನು ಕಲಿ ತದ್ದಕ್ಕಿಂತಲೂ ಸ್ವಂತ ಅನುಭವದಿಂದ ನುಡಿದದ್ದೇ ಹೆಚ್ಚೆಂದು ತಿಳಿಯತಕ್ಕದ್ದು. ಇವನು ಸೋಮೇಶ್ವರ ಶತಕ, ಸಿದ್ಧ ನೀತಿ, ವಚನಶಾಸ್ತ್ರ, ವಿವೇಕ ಚಿಂತಾಮಣಿ ಮೊದಲಾದ ನಿಜಗುಣರ ಗ್ರಂಥಗಳನ್ನೂ ನೀತಿಯ ಕಂದಗಳನ್ನೂ ಹೆಚ್ಚಾಗಿ ಪ್ರಯೋಗಿಸಿಕೊಂಡಂತೆ ತೋರುತ್ತದೆ. ಇದನ್ನು ಸ್ಫುಟಗೊಳಿಸುವದಕ್ಕೆ ತುಲ ನಾತ್ಮಕವಾದ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡುವೆವು.—

| ಸೋಮೇಶ್ವರಶತಕ. | ಸರ್ವಜ್ಞನ ವಚನ. |
| --- | --- |
| ಕೃತರಾಪಾನ್ವಿತಸಾಹಿಮಾಂಶು ಗುರುವಿಂ, ಗೋ<br>ತ್ರಾರಿ ಭಂಗಾಂಗ, ದ್ರೌ- ।<br>ಪದಿಯಿಂ ಕೀಚಕನುಂಬಕಾರಿ ಮುರಿದಂ ಸುಗ್ರೀ<br>ವನಿಂ ವಾಲಿತಾಂ ॥ | ಈ ಶ್ಲೋಕದಲ್ಲಿ ಇರುವ ಯೋಚನೆಗಳು ಸರ್ವ<br>ಜ್ಞನ ನೀತಿ ಪದ್ಧತಿಯ ಎಂಟು ವಚನಗಳಲ್ಲಿ<br>ಹೇಳಲ್ಪಟ್ಟವೆ. |
| ಹತನಾದಂ ದಶಕಂಠನಾ ಹರಿಶರಕ್ಕೀಡಾದನೇ<br>ಪೇಳ್ವೆನಾ ।<br>ನತಿ ಕಾಮರ್ಗತಿ ಹಾನಿಯ್ಕೆ ಹರಹರಾ ಶ್ರೀ ಚನ್ನ<br>ಸೋಮೇಶ್ವರಾ ॥ | ನೋಡಿ ಪದ್ಯ ೧೧೯೧-೧೧೯೯. |

ಇದೇ ಶತಕದ ಮೃಡತಾಂ ಭಿಕ್ಷವ ಬೇಡನೆ? ಎಂಬ ಶ್ಲೋಕದಲ್ಲಿ ಉದಾಹರಿಸಿದ ದೃಷ್ಟಾಂತ ಗಳನ್ನು ಸರ್ವಜ್ಞನು ತನ್ನ ವಿಧಿವಶ ಪದ್ಧತಿಯ ೨೫ ವಚನಗಳಲ್ಲಿ ವಿಸ್ತರಿಸಿದ್ದಾನೆ.

ನೋಡಿ ಪದ್ಯ ೭೬೦-೭೮೫ ಇತ್ಯಾದಿ.

**ಶಿಷ್ಟನೀತಿ.**

ಕಂದ

ಪುರುಷಂ ಕಂಡೊಡೆ ಕೊಂದಪ ।
ನರಸರಿದೊಡೆ ದಂಡಮುಕ್ಕು ಮುಳಿದರ್ಪಳಿವರ್॥
ನರಕಂ ತಪ್ಪದು ಕಡೆಯೊಳ್ ।
ಪರವಧುವಿಂಗಳಿಪೆ ಕೇಡು ಪಲವಗೆಯಿಂದಂ ॥

**ಸರ್ವಜ್ಞವಚನ.**

ತ್ರಿಪದಿ

ಪುರುಷಕಂಡರೆ ಕೊಲುವ ಅರಸುದಂಡವ ಕೊಂಬ।
ನರರು ಸುರರೆಲ್ಲ ಮುನಿವರು; ಅಂತ್ಯಕ್ಕೆ ।
ನರಕ ಪರಸತಿಯು ಸರ್ವಜ್ಞ ॥

**ಮಡಿವಾಳಯ್ಯನ ವಚನ.**

ಪಡೆದ ದ್ರವ್ಯವು ನಿಮ್ಮೊಡವೆಯಾದರೆ ನೀವು ।
ಮಡಿದು ಹೋಗಲು ನಿಮ್ಮೊಡನೆ ಬಪ್ಪವೇ
ಹೇಳಿರೋ! ॥

**ಸರ್ವಜ್ಞವಚನ.**

ಒಡಲ್ಬಿಡಿಸು ಗಳಿಸಿದಾ ಒಡವೆ ತನ್ನೊಡನಿರಲು।
ಕೊಡದುಣ್ಣದಿಟ್ಟು ಮಡಿದರಾ ಒಡವೆಯು- ।
ನೊಡನೆ ಹೂಳುವರೆ? ಸರ್ವಜ್ಞ ॥

ಇನ್ನು ಕೆಲವು ಸಂಸ್ಕೃತನ್ಯಾಯ, ಹಾಗೂ ಲೋಕೋಕ್ತಿಗಳನ್ನು ಕೊಡುವೆವು.—

**ಸಂಸ್ಕೃತ ನ್ಯಾಯಗಳು.**

ಅಂಧಪರಂಪರ ನ್ಯಾಯಃ (ಪದ್ಯ ೫೧).
ಚೌರಾಪರಾಧಾನ್ ಮಾಂಡವ್ಯನಿಗ್ರಹನ್ಯಾಯಃ (ಪ. ೭೯೫).
ವೀಚೀತರಂಗ ನ್ಯಾಯಃ (ಪ. ೨೭೧).
ಊಷರವೃಷ್ಟಿ ನ್ಯಾಯಃ (ಪ. ೯೩೫).
ಗಜಕಪಿತ್ಥ ನ್ಯಾಯಃ (ಪ. ೫೬).
ಅರಣೀಯವಹ್ನಿ ನ್ಯಾಯಃ (ಪ. ೨೬).
ಚಂದನ ನ್ಯಾಯಃ (ಪ. ೫೭).
ಚಿತ್ರಾಂಗನಾ ನ್ಯಾಯಃ (ಪ. ೨೭೩).
ಧಾನ್ಯಪಲಾಲ ನ್ಯಾಯಃ (ಪ. ೨೮೩) ಇತ್ಯಾದಿ.

**ಸಂಸ್ಕೃತ ಲೋಕೋಕ್ತಿಗಳು.**

ಅನಿರ್ವೇದಪ್ರಾಪ್ಯಾಣಿ ಶ್ರೇಯಾಂಸಿ=ಸಾಹಸದಿಂದೆ ಶ್ರೇಯಸ್ಸು (ಪ. ೧೨೦೪).
ಅನ್ನ ಮೂಲಂ ಬಲಂ ಪುಂಸಾಂ=ಅನ್ನವೇ ಪ್ರಾಣ (ಪ. ೧೮೪೨).
ಅಹಿಂಸಾ ಪರಮೋ ಧರ್ಮಃ (ಪ. ೯೨೮).
ಆಜ್ಞಾ ಗುರೂಣಾಂ ಹ್ಯವಿಚಾರಣೀಯಾ (೪೮).
ಆತ್ಮಚ್ಛಿದ್ರಂನ ಜಾನಂತಿ ಪರಚ್ಛಿದ್ರಾನು ಸಾರಿಣಃ (ಪ. ೧೧೪೪).
ಉದರನಿಮಿತ್ತೋ ಬಹುಕೃತ ವೇಷಃ (೧೮೧೮)
ಕೋಪಃ ಪಾಪಸ್ಯ ಕಾರಣಂ (ಪ. ೯೧೦).

ಸಂಸ್ಕೃತ ಲೋಕೋಕ್ತಿ.

ನಹಿಸರ್ವ: ಸರ್ವಂ ಜಾನಾತಿ=ಎಲ್ಲ ಬಲ್ಲವರಿಲ್ಲ (ಪ. ೧೩೪೩).

ಪಂಡಿತಾ ಮೂರ್ಖ ಜೀವಿನ:=ಅಕ್ಕರವ ಕಲಿತಾತ ಒಕ್ಕಲನು ತಿನಗಲಿತ (ಪ. ೮೦೮).

ಪರಾನ್ನಂ ಪ್ರಾಣಸಂಕಟಂ (ಪ. ೫೩೬)

ಭುಕ್ತ್ವಾ ಶತಪದಂಗಚ್ಛೇತ್ (ಪ. ೧೮೪೪).

ಮನ್ಯು: ಸತ್ಪುರುಷಾಣಾಂ ತುಲ್ಯ: ಸ್ನೇಹೇನ ನೀಚಾನಾಂ (ಪ. ೭೧೬).

ಮುಖೇ ಮುಖೇ ಸರಸ್ವತಿ (ಪ. ೧೨೨೭).

ಮೂರ್ಖೇನ ಕಿಂ ಭಾಷಣಂ (ಪ. ೯೩೭).

ಗುರುನಿಂದಾ ಅಧೋಗತಿ: (ಪ. ೪೪).

ಜೇಷ್ಠತ್ವಂ ನಹಿ ಜ್ಯೇಷ್ಠೆ ಜೇಷ್ಠತ್ವಂ ಗುಣ ಮುಚ್ಯತೆ (ಪ. ೩೨೦).

ಸಂಸ್ಕೃತ ಲೋಕೋಕ್ತಿ.

ಧನಮೂಲಂ ಮಿದಂ ಜಗತ್ (ಪ. ೧೬೨೫).

ನೀಚೋ ವದತಿ ನ ಕುರುತೇನ ವದತಿ ಕುರತೇ ಸಜ್ಜನ:=ಆಡದೆ ಮಾಡುವನು ರೂಢಿಯೊಳ ಗುತ್ತಮನು (ಪ. ೧೦೪೭).

ಯಾವದೇವಭವೇತ್ಕಲ್ಯಸ್ತಾವತ್‌ಶ್ರೇಯ: ಸಮಾಚರೇತ್ (ಪ. ೫೪೨).

ಯೋಗ್ಯಂ ಯೋಗ್ಯೇನ ಯುಜ್ಯತೇ (ಪ. ೬೪೦).

ವಿದ್ಯಾಹೀನ: ಪಶು: (ಪ. ೧೧೯೯).

ವಿನಾಶಕಾಲೇ ವಿಪರೀತ ಬುದ್ಧಿ: (ಪ. ೭೭೩).

ಸರ್ವಮೇಕಂ ಜಗನ್ನಾಥೇ (ಪ. ೮೬೪).

ಯ: ಸರ್ವಜ್ಞಮಾತ್ಮಾನಂ ಮನುತೇ ಸ ಏವ ಮೂಢ,

ಯ: ಸರ್ವಜ್ಞೋಪಿ ಮೂಢಮಾನೀಭವತಿ ಸಏವ ವಿದ್ವಾನ್ (ಪ. ೩೨೦) ಇತ್ಯಾದಿ.

ವಿಸ್ತಾರಭಯಕ್ಕೋಸ್ಕರ ದಾಸರಪದ ಮುಂತಾದ ಇತರ ಗ್ರಂಥಗಳಲ್ಲಿ ದೊರೆಯುವ ಉದಾಹರಣೆಗಳನ್ನು ಬೇಕೆಂದು ಲೋಪಿಸಿದ್ದೇವೆ. ಕನ್ನಡ ನಾಣ್ಣುಡಿಗಳನ್ನು ಪುಟ ೪೪ರಲ್ಲಿ ಕೊಟ್ಟ ಅಂಕಿಗಳಿಂದ ತಿಳಿಯಬಹುದು.

ಸರ್ವಜ್ಞನ ಕೆಲವು ಕಠಿಣೋಕ್ತಿಗಳನ್ನೂ ಅವನು ಇತರರ ವಿಚಾರಕ್ಕೆ ಇಂಬುಗೊಡದೆ ಕಿವಿಯಲ್ಲಿ ಬೆರಳಿಟ್ಟು ಬಧಿರನಂತೆ ಹೋಗುವದನ್ನೂ ನೋಡಿ ಕೆಲವರು ಇವನು ಕೇವಲ ದುರಹಂಕಾರಿಯೆಂದೂ 'ಅಲ್ಪ ವಿದ್ಯಾ ಮಹಾ ಗರ್ವಿ' ಯೆಂಬೂ ಹೇಳುವರು.

ಗುಣಸ್ವಭಾವ.

ಬಹಿರಂಗದಲ್ಲಿ ಅವನು ಹೀಗೆ ತೋರಿದರೂ ಅಂತರಂಗದಲ್ಲಿ ಅವನ ಮೂರ್ತಿತ್ವದ ಇಂಗಿತವು ಪೂರ್ಣ ಬೇರೆಯಾಗಿದೆ. 'ಒಬ್ಬನಲ್ಲದೆ ಜಗಕ್ಕೆ ಇಬ್ಬರುಂಟೆ? ಮತ್ತೆ ಒಬ್ಬ ಸರ್ವಜ್ಞ ಜಗಕೆಲ್ಲ'! 'ಎಲ್ಲವನು ಬಲ್ಲಡೆ ಬಲ್ಲೆನೆಂದೆನಬೇಕು ಅಲ್ಲಲ್ಲಿ ಗೊಂದನರಿದುಲಿಯೆ' ಸರ್ವಜ್ಞನೆನ್ನಬಹುದೇ? ಎಂಬ ಮಾತಿನಿಂದ ದೇವರೊಬ್ಬನ ಹೊರತು ಭೂಲೋ

ದೀನಾತ್ಮ.

ಕದಲ್ಲಿ ಈ ಹೆಸರಿಗೆ ಯೋಗ್ಯನಿಲ್ಲವೆಂದೂ ತಾನು ಸಾಧನೆಯಿಂದ ' ವಿದ್ಯದ ಪರ್ವತ ' ವಾದರೂ ಅಲ್ಪಜ್ಞನಲ್ಲದೆ ಸರ್ವಜ್ಞನಲ್ಲವೆಂದೂ ಕಂಠೋಕ್ತವಾಗಿ ಹೇಳುತ್ತಾನೆ. ತಾನು ಸಂಪಾದಿಸಿದ ಜ್ಞಾನವಾದರು ಬೇರೊಬ್ಬರಿಗಿಂತ ಸ್ವಲ್ಪ ಹೆಚ್ಚಿಗಿರಬಹುದಲ್ಲದೆ ದೇವರಷ್ಟು ಸಂಪೂರ್ಣವಾದದ್ದಲ್ಲವೆಂದು ' ಎಲ್ಲ ಬಲ್ಲವರಿಲ್ಲ' 'ಬಲ್ಲೆನೆಂಬುವ ಮಾತು ಎಲ್ಲವೂ ಹುಸಿ ಕಾಣೊ' ಮುಂತಾದ ನುಡಿಗಳಿಂದ ವಿಶದಪಡಿಸುತ್ತಾನೆ. ಇದಲ್ಲದೆ 'ಸತ್ಯವನರಿದಿಹರೆ ಸತ್ತ ಹಾಗಿರಬೇಕು' 'ಬಲ್ಲರೆ ಬಲ್ಲೆನೆನಬೇಡ' ' ಸುಮ್ಮನಿರಬಲ್ಲವನೆ ಬಲ್ಲ ' ' ಇದು ಮಹಾ ತತ್ವದ ಮಾತು ' ಎಂದು ಹೇಳಿದರೆ ಅಹಂಕಾರದಿಂದ ತುಂಬಿದ ' ಕತ್ತೆ ಮಾನವರು ' ಇವೊಂದು ಬೈಗಳವೆಂದೆನ್ನುತ್ತಾರೆಂದು ದುಃಖಿಸುತ್ತಾನೆ. ನಿಜವಾದ ಜ್ಞಾನಕ್ಕೆ 'ತಾನೆಂಬುದಿಲ್ಲ' ವಾದ್ದರಿಂದ ಯಾವನು ತಾನು ಏನಿಲ್ಲವೆಂದು ತಿಳಿಯುತ್ತಾನೋ ಅವನು ಚಿಕ್ಕವನಾದರೂ ಪೂಜಾರ್ಹನೇ ಸರಿ. ಯಾವನು ಎಲ್ಲ ಬಲ್ಲೆನೆಂದು ಅಹಂಕರಿಸುತ್ತಾನೋ ಅವನು ಹಿರಿಯನಿದ್ದರೂ ಅಯೋಗ್ಯನೆಂಬುವದನ್ನು 'ಬಲ್ಲೆನೆಂದೆಂಬುವವರೆಲ್ಲರು ಹಿರಿಯರೇ ? ' ಸೊಲ್ಲಿನ ಭೇದವರಿವಡೆ ಕಿರಿಯ ತಾವೆಲ್ಲರಿಗೆ ಹಿರಿಯ' ' ಹಲವನೋದಿದಡೇನು ? ಮುಂತಾದ ಮಾತುಗಳಿಂದ ವ್ಯಕ್ತಪಡಿಸುತ್ತಾನೆ. ಹೀಗಿದ್ದು ಯಾರಾದರು ಅವನಿಗೆ ಅಹಂಕಾರಿಯೆಂದರೆ ಸರ್ವಜ್ಞನೆಂಬನನು ಗರ್ವದಿಂದಾದವನೆ ? ಎಂದು ಪ್ರಶ್ನಿಸುವದಲ್ಲದೆ ತನಗಿರುವ ಬುದ್ಧಿವರವು ಕೇವಲ ಈಶ್ವರಕೃಪೆಯಿಂದ ದೊರೆತದ್ದೆಂದು 'ಎನ್ನ ಮನಸಿಗೆ ನೆನಹ' 'ಕಣ್ಣು ಮನನಾಲಿಗೆಯು, ಪನ್ನಗಧರಕೊಟ್ಟ ಚನ್ನಾಗಿ ಮನವ ತೆರೆದು ಬಿಡದೆ ಶ್ರೀಚನ್ನನ ನೆನೆಯೋ" ಎಂದು ಉದ್ಘೋಷಿಸುವನು. ಇದರಿಂದ ಇವನ ನಿಗರ್ವ ಮನಸ್ಸೂ ನಮ್ರ ಸ್ವಭಾವವೂ ತಿಳಿದು ಬರುತ್ತದೆ.

ಸರ್ವಜ್ಞನಲ್ಲಿ ಪ್ರಕಾಶಿಸುವ ಎರಡನೆಯ ಗುಣವೆಂದರೆ ಸೇವೆ. ಇದು ದೀನತೆಯ ಸ್ವಾಭಾವಿಕ ಫಲವೆಂದು ಹೇಳಬೇಕು. ಇವನು ತನಗಿರುವ ಅಸಾಧಾರಣ ಬುದ್ಧಿ ಸಾಮರ್ಥ್ಯದಿಂದ ಅಪೂರ್ವ ವಿದ್ಯಾರ್ಜನೆ ಮಾಡಿ ದಿಗ್ವಿಜಯ ಪಂಡಿತನೆನ್ನಿಸಿಕೊಳ್ಳಬಹುದಿತ್ತು. ಆದರೆ ಹೀಗೆ ಮಾಡದೆ ಸ್ವಕೀರ್ತಿಯನ್ನು ತೃಣವೆಂದು ಬಗೆದು ಪರಹಿತವೇ ಪರಮ ಪುರುಷಾರ್ಥವೆಂದರಿತು ಯಾವಜ್ಜೀವದಲ್ಲಿ ತನುಮನಗಳಿಂದ ಅದನ್ನೇ ಸಾಧಿಸಲೆತ್ನಿಸಿದ್ದು ಸ್ತುತ್ಯವಾದ ಸ್ವಾರ್ಥತ್ಯಾಗವೇ ಸರಿ. ಇವರಿಂದ ಇವನು ಸಂಸ್ಕೃ

ಸೇವಕ.

ವನ್ನು ತಿರಸ್ಕರಿಸಿ ಕನ್ನಡದ ಗೆಳೆಯನಾದನು. ಷಟ್ಪದಿಯನ್ನು ಬಿಟ್ಟು ತ್ರಿಪದಿಯನ್ನು 'ತಲೆಯಲ್ಲಿಟ್ಟನು' ಪಂಡಿತರನ್ನಗಲಿ ಪಾಮರರನ್ನಂಟಿದನು. ಅವಿದ್ಯಾವಂತರಲ್ಲಿರುವ ಅವಿಚಾರಗಳನ್ನು ತೆಗೆದು ಸುವಿಚಾರಗಳನ್ನು ಮೂಡಿಸುವ ಬಗ್ಗೆ, ಪಶುಪ್ರಾಯರಾಗಿ ದುರ್ಮಾರ್ಗ ಪ್ರಿಯರಾಗಿರುವವರನ್ನು ಸತ್ಪಥಕ್ಕೆಳೆಯುವ ಬಗ್ಗೆ, ಹಳ್ಳಿಯ ಜನರ ಸ್ವಭಾವಾಭಿರುಚಿಗಳನ್ನರಿತನು. ಮಂದಮತಿಗಳಿಗೆ ಹೇಗೆ ಬೋಧಿಸಿದರೆ ಅವರು ದಾರಿಗೆ ಬರುವರೆಂಬುದೇ ಅಹೋರಾತ್ರಿ ಇವನಿಗಿದ್ದ ಚಿಂತೆ. ಅದರಿಂದ ಅವರಿಗೆ ಪ್ರಯೋಜನಕರವಾಗಿರುವ ವಿಚಾರಗಳನ್ನೇ ಆದಷ್ಟು ಸಂಗ್ರಹಿಸಿ ಅವು ಆದಷ್ಟು ಹೆಚ್ಚು ಜನರಿಗೆ ಸುಲಭವಾಗಿ ತಿಳಿಯುವಂತೆ ಮಾಡುವದೇ ಪರಮೋಪಾಯವೆಂದು ನಿರ್ಧಾರಮಾಡಿಕೊಂಡನು. ಇವನು 'ಶರಣರ ಆಳಾಗಿ ಮಾನವೂ ಆಯುರಾರೋಗ್ಯವೂ ಸೇವೆಯಿಂದಲ್ಲದೆ ಅಧಿಕಾರದಿಂದ ಎಂದಿಗೂ ದೊರೆಯುವೆಂಬದನ್ನು'ಆಳಾಗ ಬಲ್ಲವನು ಆಳುವನು ಅರಸಾಗಿ ಆಳಾಗಿ ಬಾಳಲರಿಯದನು ಹಾಳಾಗಿಹೋಹ ಮುಂತಾದ ವಚನಗಳಿಂದ ವಿಶದಗೊಳಿಸುತ್ತಾನೆ. ಕಷ್ಟದಲ್ಲಿ ನೆರವಾಗದವನು 'ಶುದ್ಧ ವೈರಿ' ಯೆಂದೂ ನೆರವಾದವನು ' ನಿಜನೆಂಟ ' ನೆಂದೂ ಇವನ ಮತ. ತಿರುಕನಾದ ಇವನ ಸಹಾನುಭೂತಿಯು ಬರಿ ಬಾಯಿಮಾತಿನದಾಗಿರದೆ ಕಾರ್ಯಾರ್ಥವಾದದ್ದಾಗಿತ್ತೆಂದು 'ತಿರಿದು ತಂದಾದರೂ ಕರೆದು ಜಂಗಮಗಿಕ್ಕು' 'ತಿರಿದುಂಬುತೊಬ್ಬರನು ಕರೆದುಂಬುದತಿ ಹಿತವು.' ' ತಿರಿದು ಹರಿದೂ ಕೊರೆದು ಕರೆದು ದಾನವ ಮಾಡು ' ಮುಂತಾದ ಪದ್ಯಗಳಿಂದ ವಿಶದವಾಗುತ್ತದೆ. ಒಟ್ಟಾರೆ ದೀನತ್ವವೂ ಸೇವಾಪ್ರಿಯತೆಯೂ ಈ ಮೂರ್ತಿಯ ಮೂಲ ಸ್ವಭಾವಗಳೆಂದೂ ಇವುಗಳಲ್ಲಿಯೇ ಆ ವ್ಯಕ್ತಿಯ ಕೇಂದ್ರಸ್ಥಾನವಿರುವದೆಂದೂ ತಿಳಿದು ಬರುತ್ತದೆ.

ಸ್ವಾತಂತ್ರ್ಯ ಪ್ರಿಯ.

ಸ್ವಾತಂತ್ರ್ಯವು ಈ ಮೂರ್ತಿಯ ಇನ್ನೊಂದು ಮುಖ್ಯ ಲಕ್ಷಣ. ಹೀಗಾಗುವದಕ್ಕೆ ಇವನು ಜನ್ಮವೆತ್ತಿದ ರೀತಿಯೂ ಬೆಳೆದ ಪರಿಸ್ಥಿತಿಯೂ ಮುಖ್ಯ ಕಾರಣಗಳೆಂದು ಹೇಳಬೇಕು. ಇವನು ಬಾಲ್ಯದಲ್ಲಿಯೇ ಸ್ವಚ್ಛಂದವೃತ್ತಿಯನ್ನು ಕೈಕೊಂಡು ಸ್ವತಂತ್ರ ವಿಚಾರಕ್ಕೆ ತೊಡಗಿದನು. ತನ್ನ ಅನುಭವಕ್ಕೆ ಬಾರದೆ ಇವನು ಯಾರ ಮಾತನ್ನೂ ಮನ್ನಿಸುವವನಲ್ಲ. ಅದರಿಂದ ಒಂದು ವೇಳೆ ಇವನಿಗೆ ಗುರುವಿರಲಿಕ್ಕಿಲ್ಲ. ಇದ್ದರೂ ಅವನು 'ಹಸನಾದ 'ನೆಟ್ಟನೆ' ಗುರುವಿರಬೇಕಲ್ಲದೆ ಸಾಧಾರಣನಿರಕೂಡದು. ಅಂಥವನಿಗೆ ಇವನು

ಎಂದಿಗೂ ಮಣಿಯನು. ಪ್ರತಿ ಒಂದು ಪದಾರ್ಥ, ವ್ಯಕ್ತಿ, ಗುಂಪಿನ ವಿಷಯದಲ್ಲಿ ಇವನಿಗೆ ತನ್ನದೊಂದು ಸ್ವಂತ ಅಭಿಪ್ರಾಯವು ಇದ್ದೇ ಇರುವದು. ಇದು ಓದಿನಿಂದಾಗಲಿ ಶಿಷ್ಟವರ್ಗದವರ ಉಪದೇಶದಿಂದಾಗಲಿ ಬಂದದ್ದಲ್ಲ. ಅದರಿಂದ ಇವನಲ್ಲಿ ಚಾಂಚಲ್ಯವು ಕಡಿಮೆ. 'ಜಗದೊಳು ಸ್ವಾತಂತ್ರ್ಯವೇ ಲೇಸೆ'ಂದು ಕೊಂಡಾಡಿದ ಕವಿಯ, ಕವಿತೆಯ ಮೇಲೆ ಈ ಗುಣವು ಎಂಥ ಪರಿಣಾಮವನ್ನುಂಟು ಮಾಡಿರುವದೆಂದು ಸ್ಪಷ್ಟಗೊಳಿಸುವದಕ್ಕೆ ಹಿಂದೆ ಹೇಳಿದ ಕೃಷ್ಣ ಶರ್ಮರ ಕೆಲವು ಮಾತುಗಳನ್ನು ಇಲ್ಲಿ ಉದ್ಧರಿಸುತ್ತೇವೆ.† "ಕವಿತೆಯನ್ನು ತಮ್ಮ ಇಚ್ಛೆಗೆ ಬಂದಂತೆ ಹೇಳುವದರಿಂದುಂಟಾಗುವ ಮಾನಸಿಕಾನಂದವು ಫಲಾಪೇಕ್ಷೆಯಿಂದ 'ಒಬ್ಬರಿಚ್ಛೆಗೆ ನುಡಿ' ಯುವದರಿಂದುಂಟಾಗುವ ಸೌಖ್ಯಕ್ಕಿಂತ ಸಾವಿರ ಪಾಲು ಮೇಲೆಂದೂ ಎಣೆಯಿಲ್ಲದುದೆಂದೂ ನಂಬಿದವರು ತೀರ ಕಡಿಮೆ. ಸ್ವಾತಂತ್ರ್ಯದ ಗಾಳಿಯನ್ನು ಕುಡಿದರಿಯದ ನಮ್ಮ ಹಿಂದಿನ ಕವಿಗಳು ಅರಸರನ್ನೋ ಆಶ್ರಯದಾತರನ್ನೋ ಮೆಚ್ಚಿಸಹೋಗಿ ಕನ್ನಡ ಸಾಹಿತ್ಯವನ್ನು ನಾಲ್ಕೂ ಕಡೆಯಲ್ಲಿಯೂ ಬಂಧಿಸಿದರು. ಆದರೆ ಈ ಹುರಿಕಟ್ಟುಗಳನ್ನು ಹರಿದೊಗೆದು ಹೊರಬಿದ್ದ ಕವಿಗಳು ನಮ್ಮ ಭಾಗ್ಯವಶದಿಂದ ಅಲ್ಲಲ್ಲಿ ಕಾಣುವರು. ಸರ್ವಜ್ಞನು ಈ ಜಾತಿಗೆ ಸೇರಿದ ಕವಿ. ಇವರ ಪದ್ಧತಿಯಿದು. ಜನಗಳ ಭೂಷಣವೂ ದೂಷಣವೂ ಎರಡೂ ಇವರಿಗೆ ಒಂದೇ. 'ನಿನ್ನ ಕವಿತೆ ಚನ್ನಾಗಿಲ್ಲ'ವೆಂದಾರಾದರು ಹೇಳಿದರೆ ಒಪ್ಪದೆ ತಮ್ಮ ಕವಿತೆಯ ಮೇಲ್ಮೆಯನ್ನು ಕುರಿತು ವಾದಿಸುವವರಲ್ಲ. ಇವರು ಹೊಸ ಹೊಸ ರುಚಿಗಳನ್ನು ಹೊರಗೆಡಹುವ ಸ್ವತಂತ್ರ ಮಾರ್ಗಗಳನ್ನು ತುಳಿಯುವರೇ ಹೊರತು ಹಳೆಯ ರುಚಿಗಳನ್ನು ಹೆಚ್ಚಿಸುವವರಲ್ಲ. ಆದುದರಿಂದ ಕವಿತೆಗೆ ಅವಶ್ಯಕಗಳೆಂದು ನಮಗೆ ತೋರುವ ವ್ಯಾಕರಣ ಶುದ್ಧತೆ, ಛಂದೋನಿಯಮ, ರಸಾಲಂಕಾರ ಮೊದಲಾದುವನ್ನು ಇವರು ಲೆಕ್ಕಿಸರು. ಹುಲಿಯ ಬಣ್ಣಕ್ಕೆ ನರಿಯು ಮೈಸುಟ್ಟುಕೊಂಡಂತೆ ಅನುಕರಣದ ಹುಚ್ಚು ಹಿಡಿದು ಇಂದು ಲಕ್ಷ್ಮೀಶನಂತೆ ನಾಳೆ ವರ್ಡ್ಸ್ವರ್ತನಂತೆ ನಾಡಿದ್ದು ರವೀಂದ್ರನಂತೆ ಬರೆಯ ಹೋಗಿ ಕೊನೆಗೆ ಮೂರು ಕೆಟ್ಟ ಇಂದಿನ ಅಂಗಡಿಯ ಕವಿಗಳಂತೆ ಒಂದು ನೆಲೆ ತಿಳಿಯದವರಲ್ಲ ಮನಸ್ಸಿಗೆ ತೋರಿದಾಗ ತಮಗೆ ತಾವೇ ಕವಿತೆ ಹಾಡಿ ಕೊಳ್ಳುವದು ಇವರ ಗುಣ. ಆದುದರಿಂದಲೇ ಇವರ ಕವಿತೆಗೆ

† ಸಾಹಿತ್ಯ ಪರಿಷತ್ಪತ್ರಿಕೆ ಜುಲೈ ೧೯೩೩ ಸಂಪುಟ ೭, ಸಂಚಿಕೆ ೨, ಪುಟ ೮೬ ೮೭.

ಕಟ್ಟಿಲ್ಲ. ಅಲ್ಲದೆ ಮನಸ್ಸಿಗೆ ಬಂದಾಗ ಆ ಭಾವವನ್ನು ಕವಿತೆಯಾಗಿ ಹೆಣೆದು, ಹಾಡಿ, ನಲಿದು ಅದನ್ನಲ್ಲಿಯೇ ಮರೆಯುವದಲ್ಲದೆ, ತನಗೆತೋರಿದುದು ಸರಿಯೇ ತಪ್ಪೇ ಕಾರಣವುಳ್ಳದುದೇ ಕಾರಣವಿಲ್ಲದುದೇ ನ್ಯಾಯವೇ ಅನ್ಯಾಯವೇ ತಕ್ಕುದೇತಕ್ಕುದಲ್ಲದೇ ಎಂಬುವದನ್ನು ಲೆಕ್ಕಿಸರು. ಇಂತಹ ವಿಮರ್ಶನೆಯು ವಾಸನೆಯೇ ಇವರಿಗಿಲ್ಲ. ಆದುದರಿಂದಲೇ ಇವರ ನುಡಿಗಳಲ್ಲಿ ಕೆಲವನ್ನು ದುರ್ನಯಗಳೆಂದೂ ಮತ್ತೆ ಕೆಲವನ್ನು ಅವುಗಳ ಸತ್ಯಾರ್ಥವನ್ನು ಕಂಡು ಹಿಡಿಯಲಾರದೆ ಹುಚ್ಚು ಮಾತುಗಳೆಂದೂ ನಾವು ಕರೆಯುತ್ತಿರುವೆವು."

**ಖಂಡಿತ ವಾದಿ.**

ಸ್ವಾತಂತ್ರ್ಯದಂತೆ ಖಂಡಿತತ್ವವು ಈ ಮೂರ್ತಿಯಲ್ಲಿ ಪ್ರಕಾಶಿಸುವ ಮತ್ತೊಂದು ವಿಶೇಷಗುಣವಾಗಿದೆ. 'ಕಂಡುದನು ಆಡೆ ಭೂಮಂಡಲವು ಮುನಿಯುವದು' 'ಕಂಡಿತವನಾಡುವರ ಕಂಡಿಹುದೆ ಕಷ್ಟ' ಮುಂತಾದ ಮಾತುಗಳಿಂದ ಜಗತ್ತಿನಲ್ಲಿ ಮೆಚ್ಚಿಗೆಯ ಮಾತುಗಳನ್ನಾಡಿ ತನ್ನ ಕೆಲಸವನ್ನು ಸಾಧಿಸಿಕೊಳ್ಳುವವರೇ ಹೆಚ್ಚಿದ್ದು ಖಂಡಿತ ಮಾತಾಡುವವರು ದೊರೆಯುವದು ದುರ್ಲಭವೆಂದೂ ದೊರೆತರೂ ಇಂಥವರು ಸಂಗಡಲೇ ಲೋಕವಿರೋಧಿಗಳಾಗುವರೆಂದೂ ಇವನ ಅನುಭವ. 'ಒಪ್ಪರದಿ ನಡೆ' ಯುವದರಿಂದ ಸತ್ಯವನ್ನು ಯಾರಲ್ಲಿ ಕಂಡರೂ ಸರಿಯೇ ಕುಲ, ಮಾನ, ಸ್ಥಾನಗಳನ್ನು ನೋಡದೆ ಅವರಿಗೆ ಸಾಷ್ಟಾಂಗ ಹಾಕುವರು 'ತಪ್ಪಿದರೆ' ಇಲ್ಲವೆ ಕಪಟ ಬುದ್ಧಿಯನ್ನು ಕಂಡರೆ ಅವರು 'ಹಲ್ಲ ಕಳೆವರು' ಇದೇ 'ಮಹಾತ್ಮರಿಗಿರುವ ಒಪ್ಪವು' ಖಂಡಪರಶುವಿನ ಪುತ್ರನಾದ ಸರ್ವಜ್ಞನು ಸ್ಪಷ್ಟಮಾತಿನವನು. ಇವನಿಗೆ ಕರ್ನಾಟಕದ ಕೊಲಿಯೆಂದರೂ ಸಲ್ಲುವದು. ಇವನಿಗೆ ಯಾರ ಮುಖದಾಕ್ಷಿಣ್ಯವಿಲ್ಲ. ಇವರು ತನ್ನವರು, ಇವರು ಹೆರವರು ಎಂಬ ಪಕ್ಷಪಾತವಿಲ್ಲ. ಯಾರಲ್ಲಿ ಅನಾಚಾರ ದುಷ್ಟತ್ವಗಳು ಕಾಣುವವೋ? ಅಂಥವರನ್ನು ಸ್ಪಷ್ಟ ಶಬ್ದಗಳಿಂದಲೂ ಅತಿಶಯ ಧೈರ್ಯದಿಂದಲೂ ನಿಂದಿಸುವನು. ಜನರು ನೊಂದಾರು ಬೆಂದಾರು ಎಂಬ ಅರಿವೇ ಇವನಿಗಿಲ್ಲ. ಹೀಗಾಗಿ ಇವನಿಂದ ಬೈಯಿಸಿಕೊಳ್ಳದವರು ಕಡಿಮೆ. ಸೂಕ್ಷ್ಮ ವಿಷಯಗಳನ್ನು ಸಹ ಬಿರಸು ಕೈಗಳಿಂದ ಹಿಡಿದು ಪರೀಕ್ಷಿಸುವವನು. ಇವನು ಕೆಟ್ಟದ್ದನ್ನು ವಿರೋಧಿಸುತ್ತ ಸ್ವಲ್ಪ ಶೀಘ್ರ ಕೋಪಿಯಾಗಿದ್ದರೂ ಇರಬಹುದು! ಇವನ ನುಡಿಗಳ ಹೊಡತವು ಗುಂಡಿನ ಏಟಿನಂತೆ ಮನಸ್ಸಿಗೆ ತಗ

ಲುವದು. ಇವನ ವಚನಗಳು ಪ್ರಾರಂಭದಲ್ಲಿ ಬಹು ಕಟುವಾಗಿ ತೋರುವದ ರಿಂದ ವಾಚಕರಲ್ಲಿ ಉಪೇಕ್ಷ ಬುದ್ಧಿಯುಂಟಾಗುವದು ಸಹಜ. ಆದರೆ ದುರಹಂ ಕಾರವನ್ನಳಿದು ಇವನ ವಚನಗಳನ್ನಭ್ಯಾಸಿಸಿದಂತೆ ಆದರ ಬುದ್ಧಿಯುಂಟಾಗುತ್ತ ಹೋಗುವದು.

ಸರ್ವಜ್ಞನ ಸ್ವಾತಂತ್ರ್ಯ ಪ್ರಿಯತೆಯೂ ಖಂಡಿತ ಸ್ವಭಾವವೂ ಒಟ್ಟಿಗೆ ಸೇರಿ ಅವನನ್ನು ಕುಮಾರ ಪ್ರತಿಷ್ಠನಾಗ ಮಾಡಿವೆ. 'ಸುಂದರಾಂಗನೆ ಬಂದು ಮುಂದೆ ತಾ ನಿಂದಳಲು ಸಂದರಿವನರಿದ ಜ್ಞಾನಿ ಯು ಎಲುವಿನ ಹಂದರವ ಕಾಂಬ' 'ಹೆಣ್ಣೆಂಬ ಹಂಚ ನಂಬುವರೆ?' ಮುಂತಾದ ಸ್ತ್ರೀ ಧಿಕ್ಕಾರದ ಪದ್ಯಗಳಿಂದಲೂ ದೇಹದ ಹೇಸಿಕೆ, ಅಸ್ಥಿರತ್ವಗಳನ್ನು ವ್ಯಕ್ತಿಗೊಳಿಸುವ ನುಡಿಗಳಿಂದಲೂ ಇವನು ಸಂಸಾ ರಿಕನಾಗಿದ್ದಿಲ್ಲವೆಂದು ಕಾಣುತ್ತದೆ.

ವಿರಕ್ತ

ಹೀಗಿದ್ದರೂ ಇವನು ತನ್ನ ಲೌಕಿಕ ಪದ್ಯಗಳಲ್ಲಿ ಅಲ್ಲಲ್ಲಿ ಪ್ರಯೋಗಿಸಿ ರುವ ಅಮಂಗಲ ಶಬ್ದಗಳನ್ನೂ ಕೆಲವೆಡೆಯಲ್ಲಿ ಹೇಳಿರುವ ಹೆಂಗಸರ ರಹಸ್ಯ ಗಳನ್ನೂ ನೋಡಿ ಕೆಲವರು ಇವನು ಕೇವಲ ಸ್ತ್ರೀಲೋಲನಾಗಿರಬೇಕೆಂದೂ ಇವನ ಪಾರಮಾರ್ಥಿಕ, ನೈತಿಕ ಪದ್ಯಗಳನ್ನೋದುವ ಕೆಲವರು ಇವನು ವೀರವಿರ ಕ್ತನಾಗಿರಬೇಕೆಂದೂ ಹೀಗೆ ಭಿನ್ನಾಭಿಪ್ರಾಯ ಪಡುವರು. ಅನೇಕಾವರ್ತಿ ಕೇವಲ ವಿಷಯಲಂಪಟನು ಸಹ ವೈರಾಗ್ಯವನ್ನು ಹುಟ್ಟಿಸುವ ಕಾವ್ಯ ಇಲ್ಲವೆ ಉಪನ್ಯಾಸಗಳನ್ನು ಕೊಡಬಹುದಾಗಿರುವದರಿಂದ ಸರ್ವಜ್ಞನ ನಡತೆಯ ಬಗ್ಗೆ ನಮಗೆ ಯಥಾರ್ಥ ಚರಿತ್ರಾಧಾರವಿಲ್ಲದೆ ಅವನ ವಚನಗಳ ಮೇಲಿಂದಲೇ ಯಾವ ನಿರ್ಣಯವನ್ನೂ ಮಾಡಲಾಗದು. ಇವನು ತ್ರಿಗುಣಗಳಿಂದ ಬಂಧಿಸಲ್ಪಟ್ಟು ಪ್ರಕೃತಿ ಗುಣಧರ್ಮಕ್ಕನುಸಾರವಾಗಿ ವಿಷಯ ವ್ಯಾಮೋಹಕ್ಕೊಳಗಾಗಬಹು ದಾದಾಗ್ಯೂ ಜಿತೇಂದ್ರಿಯನಾಗಲಿಕ್ಕೆ ಸತತ ಧಾವತಿಪಡುತ್ತಿದ್ದನೆಂದು 'ಇಂದ್ರಿ ಯವು ಮೂತ್ರವು ಒಂದೆನಾಳದಿ ಬಕ್ಕು ಒಂದು ಬಿಟ್ಟೊಂದು ತಡೆದರೆ' 'ಇಂದ್ರಿ ಯವಕಾದಾತ ಯೋಗಿ' 'ಕಚ್ಚೆ-ಕೈ ಬಾಯಿಗಳು ಇಚ್ಛೆಯಲಿ ಇದ್ದಿಹರೆ' 'ಅಯ್ವರಟ್ಟಾಸುವನು ಹೊಯ್ದು ತನ್ನೊಳಕೆ ತಂದಾತ,' 'ಏರಿದ ಜವ್ವನವ ತಡೆದರೆ' 'ಪ್ರಕೃತಿ ವಿರಹಿತರೊಳು' 'ಬಿಂದುವು ಬಲಿದಾತ ವಂದ್ಯನಹ ಜಗ

ದೊಳಗೆ' ಮುಂತಾದ ವಚನಗಳಿಂದ ವ್ಯಕ್ತವಾಗುತ್ತದೆ. ಗ್ರಾಮಗಳಲ್ಲಿರುವ ಕಾಮುಕ ಸ್ತ್ರೀಪುರುಷರಲ್ಲಿ ನಡೆಯುವ ಅವಾಚ್ಯ ಭಾಷಣ, ಈ ಸಂಬಂಧವಾಗಿ ಕಾಮಶಾಸ್ತ್ರಾದಿ ಗ್ರಂಥಗಳಲ್ಲಿ ಹೇಳಿರುವ ಸ್ತ್ರೀಲಕ್ಷಣಾದಿ ರಹಸ್ಯಗಳನ್ನು ಇವನು ಕೇಳಿಕೆಯಿಂದ ಹೇಳಿರಬಹುದಲ್ಲದೆ ಸ್ವತಃ ಅನುಭೋಗಿಸಿ ಹೇಳುವ ಹೆಸರಿನ ವಿರಕ್ತನಾಗಿದ್ದನೆಂದು ತಿಳಿಯಲಾಗದು. ಯೋಗಿಗಳಿಗೆ ಎಲ್ಲ ಅಂಗಗಳು ಒಂದೇ ಆಗಿದ್ದು ಅವರು ಸತ್ಯಾರ್ಥವನ್ನು ಬೋಧಿಸಬೇಕಾಗಿ ಮುಚ್ಚು ಮರೆಯಿಲ್ಲದೆ ಮಾತಾಡುವದರಿಂದ ಅವುಗಳಲ್ಲಿ ಕೆಲವು ನಮಗೆ ಬಂಡು ನುಡಿಗಳೆಂದು ತೋರುವವಷ್ಟೆ. ಪರರ ದೋಷಗಳನ್ನು ಇದ್ದಲ್ಲಿಂದ ಹುಡುಕಿ ಅವುಗಳನ್ನು ಸಲ್ಲದ ರೀತಿಯಿಂದ ಖಂಡಿಸಿ ಅಲ್ಲದ ಪರಿಹಾಸ್ಯಮಾಡುವದರಿಂದ ಸರ್ವಜ್ಞನಲ್ಲಿ ಇಂಥ ಸಿಥಿಲ ಸ್ವಭಾವವು ಕಂಡು ಬಂದಿದ್ದರೆ ಜನರು ಅವನ ಕೈಹಿಡಿದು ನಿಲ್ಲಿಸುತ್ತಿದ್ದರಲ್ಲದೆ ಉಪಹಾಸ್ಯ ಗೈಯ್ಯವ ಸರ್ವಜ್ಞಗಳನ್ನೆಷ್ಟೋ ಕಟ್ಟುತ್ತಿದ್ದರು. ಸರ್ವಜ್ಞನಿಗೆ ವಿರೋಧವಾಗಿ ಮಾತಾಡುವದು ಯಾರಿಂದ ಆಗುತ್ತಿದ್ದಿಲ್ಲವೆಂಬೀ ಪ್ರತೀತಿಯಿಂದ ಅವನು, ಬಾಯಲ್ಲಿ ಹಗುರಿದ್ದರೂ ನಡತೆಯಲ್ಲಿ ಬಹು ಬಿಗಿಯಾಗಿದ್ದನೆಂದು ಧ್ವನಿತವಾಗುತ್ತದೆ. ಹೆತ್ತವರ ಹಾದರವನ್ನು ಬೈಲಿಗೆಳೆದು 'ಮಾತಿಂಗೆ ಮಾತುಗಳು ಓತು ಸಾಸಿರವುಂಟು ಮಾತಾಡಿದಂತೆ ನಡೆವರೆ ಕೈಲಾಸಕ್ಕಾತನೇ ಒಡೆಯ' ನೆಂದು ಹೇಳಿದ ಸರ್ವಜ್ಞನು ಒಂದು ವೇಳೆ ಮನ ಭಯವಿಲ್ಲದವನಾಗಿದ್ದಾಗ್ಯೂ ಜನಭಯಕ್ಕಾದರು ತನ್ನ ಹೆಸರಿಗೆ ಕುಂದಕ ಬಾರದಂತೆ ನಡೆದಿರಬೇಕು ?

" ದೃಢತನದೊಳಿದ್ದರೂ ನುಡಿಯಲ್ಲಿ ಶಿವನ ಮರೆದಡೆ ಗುಡವಿಲ್ಲದಡಿಗೆಯುಂಡಂತೆ" ಎಂಬ ಪದ್ಯದಿಂದ ನಡತೆಯಲ್ಲಿ ಜಾಗ್ರತನಾದ ಸರ್ವಜ್ಞನು ಮನಭಯವುಳ್ಳವನು ಸಹ ಆಗಿದ್ದನೆಂದು ಕಂಡು ಬರುತ್ತದೆ.

ಈಶ್ವರಭಕ್ತ.

ಇದು ಅವನ ಈಶ್ವರಾವಲಂಬನ ಸ್ವಭಾವದಿಂದ ಮತ್ತಷ್ಟು ಸ್ಪಷ್ಟವಾಗುತ್ತದೆ. ಖಂಡಿತವಾದಿಯಾದ ಸರ್ವಜ್ಞನು ಸ್ವಾಭಾವಿಕವಾಗಿ ಮನುಷ್ಯರನ್ನು ಬಿಟ್ಟು ದೇವರ ಮೇಲೆ ಭರವಸವಿಡುವದನ್ನು ಕಲಿತುಕೊಂಡನು. 'ದಯಾಳು ದೇವರನ್ನು ಭಕ್ತಿಯಿಂ ನೆನೆದರೆ ಆಳಿನಾಳಯ್ಯ' 'ಸೊಲ್ಲಿನ ಶಿವನ ಬೇಡಿದಡೆ ಬಯಸಿದುದೆಲ್ಲವನು ಕೊಡುವ' 'ಸ್ಮರ ಹರನ ಕರುಣವಿರದಲೆ ಜಗದೊಳಗಿರುವದೇ ಕಷ್ಟ' ಭಕ್ತಗೆ ಸಂದೇಹವುಂಟೆ ? ಭಕ್ತಿಯೊಳು ಬೆರೆದಿರ್ದ

ಭಕ್ತನು ಮುಕ್ತನಾಗಿಹನು' ಮುಂತಾದ ನುಡಿಗಳಿಂದ ಇವನು ಈಶ್ವರನಲ್ಲಿ ಅನು ರಾಗವುಳ್ಳ ದೃಢಭಕ್ತನಾಗಿದ್ದನೆಂದೂ ಆತನನ್ನು ಬೇಡಿ ಅನೇಕ ಕಷ್ಟಗಳಲ್ಲಿ ಪಾರಾದನೆಂದೂ ತಿಳಿದು ಬರುತ್ತದೆ. 'ಅನುದಿನ ಶೂಲಿಯನು ನೆನೆಯೊ' 'ಕುಂಜ ರವು ವನವ ನೆನೆವಂತೆ ಬಿಡದೆ ನಿರಂಜನನ ನೆನೆಯೋ' ಮುಂತಾದ ವಚನಗಳಿಂದ ಇವನು ಸರ್ವದಾ ಸರ್ವತ್ರ ಈಶ್ವರಚಿಂತನವುಳ್ಳವನಾಗಿದ್ದನೆಂದು ತಿಳಿಯು ತ್ತದೆ. ಆದರಿಂದ 'ಕುಲಗೆಟ್ಟವರು ಚಿಂತೆಯೊಳಗಿರ್ಪರೆಂತಲ್ಲ' 'ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು ಕುಲವಾದರಯ್ಯ' 'ಹೊರಗಾದ ಮೇಲೆ ಭಯವಿಲ್ಲ' ವೆಂದು ಘಂಟಾಘೋಷವಾಗಿ ಹೇಳಿದ್ದಾನೆ. ಇವಲ್ಲದೆ ಇವನು ಎಲ್ಲ ವಿಧ್ಯವಾ ನಗಳಲ್ಲಿ ಸಂತೋಷದಿಂದಿರುವದಕ್ಕೆ ಕಲಿತ ಆತ್ಮತೃಪ್ತನಾಗಿದ್ದನೆಂದು 'ತಿರಿವರಿಂ ಸಿರಿವಂತರಾರು?' 'ಸುಖದಿ ತಾನಿದ್ದುದೇ ರಾಜ್ಯ'. ಮುಂತಾದ ಪದ್ಯಗಳಿಂದ ತಿಳಿ ಯುತ್ತದೆ. ಇವನು ವಿಧಿಗೂ ಪರಿಹಾಸ್ಯಗೈಯುವಷ್ಟು ಈಶ್ವರನಲ್ಲಿ ಶ್ರದ್ಧೆಯು ಳ್ಳವನಾಗಿದ್ದು ಆತನ ಚಿತ್ತದಂತೆ ಅಂದರೆ 'ಖಂಡಿತದಿ' ನಡೆದರೆ ಕಷ್ಟವೇ ಇಲ್ಲ ವೆಂದು ದೃಢವಾಗಿ ನಂಬಿದ್ದನೆಂದು 'ನಡೆಯುವ ಪಥದಿ ಅಡಿಯಿಡಲು ವಿಧಿಯು ತಡೆಯದೋಡುವದು' 'ಬಂದುದನೆಲ್ಲ ನುಂಗಿದರೆ ವಿಧಿಕರ್ಮ ನಂದಿ ಹೋಗು ವದು,' 'ಮೃತ್ಯುವಿನ ಗಂಡನೆಂದರಿಗು' 'ಸಿಟ್ಟೇಲಿ ಶಿವನ ಬೈದು ಫಲವಿಲ್ಲ' 'ಚಿಂತಿಸಿ ದೇಹಬಡವಕ್ಕು' 'ಶಿವತೋರಿದಂತಿಹುದೆ ಲೇಸು' ಮುಂತಾದ ಮಾತು ಗಳಿಂದ ವಿಶದವಾಗುತ್ತದೆ.

ಈಶ್ವರಭಕ್ತನಾದ ಸರ್ವಜ್ಞನಲ್ಲಿ ಪ್ರತಿಪ್ರಕಾಶಿಸುವ ಇನ್ನೊಂದು ಗುಣ ವೆಂದರೆ ಸಮದರ್ಶಿತ್ವ. 'ದೇವರಲ್ಲಿ ಕುಲಭೇದವು' ಇಲ್ಲದಿರುವಂತೆ ಇವನಲ್ಲಿಯೂ ಗುಣಭೇದವನ್ನುಳಿದು ಬೇರೆ ಯಾವತರದ ಭೇದಭಾವಗ

ಸಮದರ್ಶಿ.

ಳಿಲ್ಲ. ಇವನು ಉದಾರಮನಸ್ಕನಿದ್ದು ಎಲ್ಲ ಪ್ರಾಣಿಗಳನ್ನು ಒಂದೇ ದೃಷ್ಟಿಯಿಂದ ನೋಡುವನು. ಇವನು ಬ್ರಾಹ್ಮಣ, ಇವನು ಹೊಲೆಯ, ಇವನು ಜಂಗಮನೆಂಬ ಪಕ್ಷಪಾತವು ಇಲ್ಲ. ಇದು 'ಊರೆಲ್ಲ ನೆಂಟರು ಕೇರೆಲ್ಲ ಬಳಗವು ಧಾರುಣಿಯೆಲ್ಲ ಕುಲದೈವವಾಗಿನ್ನು ಯಾರನ್ನು ಬಿಡಲೋ?' 'ತ್ರೈಭು ವನತನ್ನೊಳಗಿಹದು' ಮುಂತಾದ ಪದ್ಯಗಳಿಂದ ಸ್ಪಷ್ಟವಾಗುತ್ತದೆ. ಹೀಗೆ ಹೇಳುವದು ಮಾತ್ರವಲ್ಲದೆ ವ್ಯವಹರಿಸುವದಕ್ಕೂ ಅವನಲ್ಲಿ ಬೇಕಾದಷ್ಟು ಧೈರ್ಯ ವಿದೆ. ಇದು ನಿಜವೀರಶೈವ ಲಕ್ಷಣವೇ ಸರಿ.

ಅನಾಚಾರವು ಎಲ್ಲಿದೆಯೋ ಅಲ್ಲಿ ವ್ಯಕ್ತಿಯನ್ನು, ಇಂಥ ದುರಾಚಾರದಿಂದ ಕೂಡಿದ ವ್ಯಕ್ತಿಗಳು ಅನೇಕವಾಗಿದ್ದರೆ ಗುಂಪನ್ನು ಸಹ ಹಳಿಯುವದು ಇವನ ಪದ್ಧತಿ. ಇದರಿಂದ ವಿಮರ್ಶಾದಿಗಳಲ್ಲದೆ, ವ್ಯಕ್ತಿಗಳನ್ನಲ್ಲದೆ 'ಗುಂಪುಗಳನ್ನೇ ಬೈಯುವದು ಇವನ ಮನ್ನಿಸಬಾರದ ತಪ್ಪುಗಳಲ್ಲಿ ಒಂದೆಂದು' ಕೆಲವರು ಹೇಳುವರು. ಇದಕ್ಕೋಸ್ಕರ ಅನೇಕಾವರ್ತಿ ಅವನ ಮೇಲೆ ಕೋಪಿಸಿಕೊಳ್ಳುವದೂ ಉಂಟು. ಆದರೆ ಇವನ ಖಂಡನೆಯಿಂದ ಮನಸ್ಸು ಸ್ವಲ್ಪ ಕಹಿಯಾದರೂ ಅವನ ಯಥಾರ್ಥತ್ವವನ್ನೂ ನಿಷ್ಕಪಟ ಬುದ್ಧಿಯನ್ನೂ ನೋಡಿದರೆ ಓದುವವರ ಮನಸು ಹರ್ಷಯುಕ್ತವಾಗುವದು. ಈ ಸಂಬಂಧ ಮುಂದೆ ಧರ್ಮವಿಚಾರದಲ್ಲಿ ಹೆಚ್ಚು ಹೇಳುವೆವು. ಓದುವವರಲ್ಲಿ ದುರಭಿಮಾನವು ಕಡಿಮೆ ಇದ್ದರೆ ಸರ್ವಜ್ಞನಲ್ಲಿರುವ ಸ್ವಾಭಿಮಾನದಿಂದ ವಿಶೇಷ ಕೇಡಾಗದು. ಹೀಗಾಗಿ ವಾಚಕರು ಯಾವ ಧರ್ಮದವರಿದ್ದರೂ ಇವನ ವಚನಗಳನ್ನು ಓದಿ ಓದಿ ಆನಂದಿಸುವರು.

ನಿಷ್ಕಪಟ.

ಗುಣವನ್ನಲ್ಲದೆ ದೋಷವನ್ನು ಸಹ ಹೇಳಬೇಕಾದರೆ ಇವನು ಸ್ವಲ್ಪ ಕಠಿಣಮನಸ್ಸಿನವನೂ ಬಿರುಸುಸ್ವಭಾವದವನೂ ಎಂದು ಒಪ್ಪಿಕೊಳ್ಳಬೇಕು. 'ಸಮಾಜಸಂಸ್ಕಾರತ್ವ, ಬೋಧಕತ್ವ, ಪ್ರಪಂಚದ ಮೇಲೆ ಜಿಹಾಸೆ, ವಿದ್ಯೆಯಲ್ಲಿ ಅವಿಶ್ವಾಸ ಇವೇ ಮೊದಲಾದ ಗುಣಗಳೆಲ್ಲ ಸೇರಿ ಇವನನ್ನು ಸಹಜವಾಗಿ ಕಠಿಣಸ್ವಭಾವಿಯನ್ನಾಗಿಯೂ ಪ್ರಪಂಚದ ನಡತೆಯಲ್ಲಿ ಕನಿಕರವಿಲ್ಲದವನನ್ನಾಗಿಯೂ ಮಾಡಿವೆ.' ಆದರೆ ಇದರಿಂದ ಭಾವಸೌಮನಸ್ಯವು ಸ್ವಲ್ಪ ಕಡಿಮೆಯೆಂದು ತಿಳಿಯತಕ್ಕದ್ದಲ್ಲದೆ ಇವನು ಕೇವಲ ಹೃದಯ ಶೂನ್ಯನಾದ ನಿರ್ದಯಾತ್ಮಕನಾಗಿದ್ದನೆಂದು ಎಂದಿಗೂ ಹೇಳಲಾಗದು. ಇದು ನೊಂದಂತೆ ನೋವನರಿಯದ 'ನರನಂದು' ಕೊಂದಿಸುದೆ ನಿಜವು, "ಕೊಲ್ಲದೇಕೊಂದ' 'ಎಡೆಯಾಡಿಸಿ ಕೊಡದ ಲೋಭಿಯಮಾತು ಕೊಡಲಿಯ ಗಾಯ' ಮುಂತಾದ ಮಾತುಗಳಿಂದ ವ್ಯಕ್ತವಾಗುತ್ತದೆ.

ಕಠಿಣಸ್ವಭಾವಿ.

ಕಠಿಣತ್ವದೊಂದಿಗೆ ಹಾಸ್ಯಪ್ರಿಯತ್ವವೂ ಸೇರಿಕೊಂಡಿದೆ. ಇದು ಅವನು ಮೆಚ್ಚಿದ ರಸ. ಅದರಿಂದ 'ರಸಿಕನಾಡಿದ ಮಾತು ಶಶಿಯುದಿಸಿಬಂದಂತೆ ಕುಲ ರಸಿಕನಿರುವಲ್ಲಿ ಕಡುನಗೆಯು ಹುತ್ತು ಕಾಣಯ್ಯ' ಎಂದು ಹೇಳುತ್ತಾನೆ. ಹಾಸ್ಯದಲ್ಲಿ ಇವನು ಕೆಲವಾವರ್ತಿ ಹೀನೋಪಮೆಗಳನ್ನು ಪ್ರಯೋಗಿಸಿದ್ದು 'ಕತ್ತೆ ಮಾನವ' ರಿಗೆಂದು ತಿಳಿಯತಕ್ಕದ್ದು.

ರಸಿಕ.

ಇವನ ಬಾಯಲ್ಲಿ ಕನ್ನಡವೆಂದರೆ "ಯಾತವು ಸುರಿದಂತೆ." ಹೊಲಬರಿತು ಯೋಗ್ಯ ಮಾತನ್ನು ಯೋಗ್ಯ ಸ್ಥಳದಲ್ಲಿ ಆಡುವದೇ ಇವನ ಸ್ವಭಾವಗುಣ. ಯಾರಾದರೂ "ಪ್ರಸ್ತುವ ತಪ್ಪಿ ನುಡಿದರೆ" "ಬರಿಮಾತನಾಡಿದರೆ" 'ಹೋದಲ್ಲಿ ಮಾತನುರೆದರೆ' 'ಅನುಚಿತಗೋಷ್ಟಿಯನ್ನಾಡಿದರೆ' ಇವನಿಗೆ "ತಲೆಬೇನೆ ಏಳುವದು" ತನ್ನ ಮಾತು ಎಷ್ಟು ಸತ್ಯವಾಗಿದ್ದರೂ ತಾನು ಬಡವನಾಗಿದ್ದದರಿಂದ ಅನೇಕಾವರ್ತಿ ಜನರು ಅದನ್ನು ಜೊಲ್ಲು ಸುರಿದಂತೆ ನೆನಸಿದರೆಂದು ಹೇಳುತ್ತಾನೆ. ಹೀಗೆ ಇವನ ಬಗ್ಗೆ ಇನ್ನು ಅನೇಕ ಉಪಲಕ್ಷಣಗಳನ್ನು ಹೇಳಬಹುದಾದಾಗ್ಯೂ ಇದುವರೆಗೆ ಪ್ರಸ್ತಾಪಿಸಿದ ಲಕ್ಷಣಗಳಿಂವ ಸರ್ವಜ್ಞನು ಒಬ್ಬ ವಿಲಕ್ಷಣ ಮೂರ್ತಿಯೆಂಬು ವುಂದಟವಾಗುತ್ತದೆ.

ಸರ್ವಜ್ಞನು ಯಾವ ಧರ್ಮದವನಿದ್ದನು ? ಈ ಬಗ್ಗೆ ಅವನ ವಿಚಾರಗಳೇನು ! ಎಂದು ಇಲ್ಲಿ ನೋಡತಕ್ಕದ್ದು. ಇವನ ಸ್ವಾತಂತ್ರ್ಯಪ್ರಿಯತೆ ಖಂಡಿತತ್ವಾದಿ ಗುಣಗಳನ್ನು ವಿಶೇಷಿಸಿ ಕೆಲವರು, ಇವನು ನಿಃಶಾಸ್ತ್ರವಾದಿಯಾಗಿರಬೇಕೆಂದು (free thinker) ತರ್ಕಿಸುವರು. ಆದರೆ ಬೇರೆ ಕೆಲವರು ಮೂರ್ತಿಪೂಜೆ, ತೀರ್ಥಯಾತ್ರೆ, ಜಾತಿವಿಚಾರ, ಪುನರ್ಜನ್ಮ ಮುಂತಾದವುಗಳಲ್ಲಿ ಇವನಿಗೆ ವಿಶೇಷ ನಂಬಿಕೆ ಇಲ್ಲದಿರುವದನ್ನು ನೆನಸಿ ಕ್ರೈಸ್ತ ಗುರುದೇಶಿಕರಾದ ಮಿಶನರಿಗಳ ಸುಂಕ ತಗಲಿರಬೇಕೆಂದೂ ಇಲ್ಲದೆ ಹೋದರೆ ಇವನು ಮಹಮ್ಮದೀ ಹಾಗೂ ಯೆಹೂದಿ ಮತಸ್ಥರಂತೆ ಏಕದೇವೋಪಾಸಕನಾಗಿರಬೇಕೆಂದೂ (Monotheist) ಹೇಳುವರು.* ಆದರೆ ಈ ಸಂಬಂಧ ನಮಗೆ ಅವನ ಗ್ರಂಥವಲ್ಲಿ ಬೇಕಾದಷ್ಟು ಆಧಾರಗಳು ದೊರೆಯುವದರಿಂದ ಇದನ್ನು ನಿರ್ಣಯಿಸುವದು ಇತರ ವಿಷಯಗಳಷ್ಟು ಕಷ್ಟವಾಗಿರುವದಿಲ್ಲ. ಇವನ ವಚನಗಳಲ್ಲಿ ಲಿಂಗಾರ್ಚನೆ, ರುದ್ರಾಕ್ಷಿ, ವಿಭೂತಿ, ಮುಂತಾವ ಅಷ್ಟಾವರಣ ಸಂಬಂಧವಾದ ತತ್ವೋಪದೇಶ, ಷಟ್ಸ್ಥಲವಿಚಾರ, ಲಿಂಗಾಂಗಸಕೀಲ, ಲಿಂಗಾರ್ಪಣೆ, ಯೋಗ್ಯಯೋಗಿಯ ಲಕ್ಷಣ ಮುಂತಾದ ವೀರಶೈವ ಧರ್ಮಕ್ಕೆ ಸಂಬಂಧಿಸಲ್ಪಟ್ಟ ಅನೇಕಾನೇಕ ವಿಷಯಗಳು ವಿಮರ್ಶಿಸಲ್ಪಟ್ಟಿರುವದಲ್ಲದೆ ಪದ್ಯಗಳಲ್ಲಿ ಭವಿ ಭಕ್ತನೆಂಬ ಲಿಂಗಾಯತ ಪಾರಿಭಾಷಕ ಶಬ್ದಗಳು ಪ್ರಯೋಗವಾ

ಧರ್ಮ

* H. Narayanrao 'Sarvajna and his poetry Madras Christian College Magazine Vol III (October 1885) Page 269.

ಗಿರುವದರಿಂದ ಇವನು ಶೈವ ಪಕ್ಷಪಾತಿಯಾಗಿದ್ದು ಶಿವಭಕ್ತಿಯನ್ನು ಕೊಂಡಾಡಿ ಇತರ ದೈವಗಳನ್ನು ಜರಿದು ತ್ರಿಮೂರ್ತಿಗಳಲ್ಲಿ ಶಿವನೇ ಸರ್ವೋತ್ತಮನೆಂದು ಹೊಗಳುತ್ತಿರುವ ಶಕ್ತಿವಿಶಿಷ್ಟಾದ್ವಯಿತವನ್ನನುಸರಿಸಿರುವ ವೀರಶೈವನಾಗಿದ್ದ ನೆಂದು ನಿಸ್ಸಂದೇಹವಾಗಿ ಹೇಳಬಹುದು. ಇನ್ನು ಧರ್ಮಕ್ಕೆ ಸಂಬಂಧಿಸಲ್ಪ ಟ್ಟಿರುವ ಮುಖ್ಯ ವಿಷಯಗಳಲ್ಲಿ ಚರ್ಚಾಸ್ಪದವಾದ ಕೆಲವು ಸಂಗತಿಗಳನ್ನು ಮಾತ್ರವೇ ಇಲ್ಲಿ ಪ್ರಸ್ತಾಪಿಸುತ್ತೇವೆ.

ಮೂರ್ತಿಪೂಜೆ.

ಇವನ ಗ್ರಂಥದಲ್ಲಿ ಹೇಳಲ್ಪಟ್ಟ 'ಕಲ್ಲುಕಲ್ಲೆಂಬುವಿರಿ ಕಲ್ಲೊಳಿರ್ಪುದೆದೈವ' 'ಹಾದಿಯು ಕಲ್ಲಿಗೆಡೆಮಾಡಿ ನಮಿಸುವ ಮಾದಿಗರ ನೋಡು.' 'ಬಿನ್ನಣದಿ ಕಟೆದ ಪ್ರತಿಮೆಗಳಿಗೆರಗುವಾ ಅನ್ಯಾಯನೋಡು' 'ನಡುರಂಗತಾ' ಕಲ್ಲು, ವರವನು ಕೊಡುವಾತ ಬೇರೆ' ಮುಂತಾದ ವಚನ ಗಳನ್ನು ನೋಡಿ ಇವನು ವಿಗ್ರಹಪೂಜೆಗೆ ಕಡುವಿರೋಧಿಯಾಗಿರಬೇಕೆಂದು ಅನೇಕರು ಭಾವಿಸುವರು. ಇದಲ್ಲದೆ 'ದೇಹಿಯುನಬೇಡ ನಿರ್ದೇಹಿ ಜಗಲಿಂಗ ಎಂಬ ನುಡಿಯಿಂದ ದೇವರು ನಿರಾಕಾರನಾಗಿದ್ದು ಆತನನ್ನು ವಿಶ್ವದಲ್ಲಿರುವ ಯಾವರೂಪದಿಂದಲಾದರೂ ಪೂಜಿಸಲಾಗದೆಂದು ಇವನ ಮತವಿದ್ದಂತೆ ಬೇರೆ ಯವರು ಅಭಿಪ್ರಾಯಪಡುವರು. ಆದರೆ ಲಿಂಗವು ನಿರಾಕಾರ ಸೂಚಕವಾಗಿದ್ದು ಅದರ ವರ್ತುಲವು ಈಶ್ವರನ ಘನತ್ವ ಅಖಂಡತ್ವ ಅನಂತತ್ವಾದಿ ಗುಣದರ್ಶಕ ವಾಗಿರುವದರಿಂದ ಈ ರೂಪದಲ್ಲಿ ಆತನನ್ನು ಪೂಜಿಸುವದು ಒಂದು ಪ್ರಕಾರ ವಾಗಿ ಮೂರ್ತಿಪೂಜೆಯೆನಿಸದೆಂದು ಇವನ ಮತವಿದ್ದಂತೆ ತಿಳಿಯುತ್ತದೆ. ಆದರೆ ಇದನ್ನಾದರೂ ಭಕ್ತಿಯಿಲ್ಲದೆ ಕಂಡವರನ್ನು ಕಂಡು, ತಿಳಿಯದೆ ಕೊಂಡು ಲಿಂಗ ವನ್ನು ಕಟ್ಟಿದರೆ ಆ ಲಿಂಗವು ಕೆಂಡವಾಗುವದೆಂದು ಇವನ ಖಂಡಿತ ಅಭಿಪ್ರಾಯ. ಹೀಗಿದ್ದರೂ ಬೇರೆ ಕೆಲವರು 'ಉಣದಿಪ್ಪ ಲಿಂಗಕುಣಬಡಿಸಿ ಕೈಮುಗಿವ ಬಣಗು ಗಳನೋಡ' 'ಕಟ್ಟಿದ ಲಿಂಗವಡಿಯಾಗಿ ಶರಣೆಂಬ ಭ್ರಷ್ಟರನು ನೋಡ' ಸಂಬಾರ ವರೆವ ಬಲುಕಲ್ಲು ಹರನೆಂದು ನಂಬುವರಾರು' ಕಲ್ಲುಗುಂಡಿಗೆ ನಿಲ್ಲದೆ ಹಣೆಯ ಬಡಿವರ್ಗೆ ಬುಗುಟಿಲ್ಲದಿಲ್ಲ ಕಾಣಯ್ಯ' ಮುಂತಾದ ಹಾಸ್ಯೋಕ್ತಿಗಳನ್ನು ನೋಡಿ ಇವನು ವೀರಶೈವನಾಗಿರಕೂಡದೆಂದು ತರ್ಕಿಸುವರು. ಆದರೆ ಇದು ಅವನ ಖಂಡನೆಯ ಪದ್ಧತಿಯಲ್ಲದೆ ನಿಜನಂಬಿಕೆಯಲ್ಲ. ಉದ್ವೇಗದ ಮಾತಲ್ಲದೆ ಅವನ ಭಾವವಲ್ಲೆಂದು ಬೇರೆ ಪದ್ಯಗಳಿಂದ ವ್ಯಕ್ತವಾಗುತ್ತದೆ. ಸ್ವಲ್ಪದರಲ್ಲಿ ಹೇಳಿದರೆ

ಇವನು ಮಹಮ್ಮದಿ ಇಲ್ಲವೆ ಯೆಹೂದಿ ಮತಸ್ಥರಂತೆ ಮೂರ್ತಿ ಭೇದಕನಾಗಿರದೆ ಮೂರ್ತಿ ಪೂಜಾ ಸುಧಾರಕನಾಗಿದ್ದನೆಂದು ಹೇಳಬಹುದು. ವೀರ ಮಹಮ್ಮದಿಯನೊಬ್ಬನು ಮೂರ್ತಿಯನ್ನು ಕಂಡರೆ ಹೇಗೆ ಮತಭ್ರಾಂತನಾಗುವನೋ ಹಾಗೆಯೇ ಸರ್ವಜ್ಞನು ಯಾರಲ್ಲಿಯಾದರೂ ಸರಿಯೇ ಭಕ್ತಿಶೂನ್ಯವಾದ ಬಹಿರಾಚಾರವನ್ನು ಕಂಡರೆ ಕಂಪಿಸುವನು. ಅದರಿಂದ ಇವನು ಮೂರ್ತಿಭೇದಕನಲ್ಲದಿದ್ದರೂ ಆಚಾರ ಭೇದಕನಾಗಿದ್ದನೆಂದೂ ಬರಡಿಗೆಯ ಭಕ್ತಿಗೆ ಎತ್ತಿದ ಕೊಡಲಿಯೆಂದೂ ಹೇಳಿದರೆ ತಪ್ಪಾಗದು. ಸಕಲಾಂಗ ಸಂಪೂರ್ಣವಾಗಿದ್ದು ಭಕ್ತಿಶೂನ್ಯವಾದ ಬಹಿರಾಚಾರಕ್ಕಿಂತ, ಆಚಾರವನ್ನೀಡಾಡಿ, ಬಾಹ್ಯಗಳಳಿದು, ಭಜಿಸುವ ಭಕ್ತಿಯು ಮೇಲಾದದ್ದೆಂದು ಇವನ ಮನೋಭಿಪ್ರಾಯ. ಅದರಿಂದ ಇವನು ದೇಹವೇ ದೇವಾಲಯವೆಂದು ತಿಳಿದು ಭಾವಪುಷ್ಪದಿಂದ ಈಶ್ವರನನ್ನು ಅಂತರಂಗದಲ್ಲಿ ಧ್ಯಾನಿಸುತ್ತ ಅವನಲ್ಲಿಯೇ ಕಣ್ಣು ಮನವನ್ನು ಕಟ್ಟಿ ಕೈಕೊಳ್ಳುವ ಮಾನಸ ಪೂಜೆಯೇ ಯಥಾರ್ಥವಾದದ್ದೆಂದೂ ಎಲ್ಲಕ್ಕು ಮಿಗಿಲಾದದ್ದೆಂದೂ ಕಂಠೋಕ್ತವಾಗಿ ಹೇಳುತ್ತಾನೆ. †

"ಹುಟ್ಟನ್ನು ಬಿಟ್ಟು ಆಚಾರವನ್ನು ಹಿಡಿದು ನೋಡಿದರೆ ಸರ್ವಜ್ಞನಿಗೆ ಜಾತಿಯೇ ಇಲ್ಲ. ಜಾತಿ ಭೇದವನ್ನು ಖಂಡಿಸಲು ಮೊದಲಿಟ್ಟ ಕನ್ನಡಿಗರಲ್ಲಿ

ಜಾತಿಭೇದ.

ಇವನು ಮೊದಲನೆಯವನೆಂದು ಹೇಳಲಿಕ್ಕಾಗದಿದ್ದರೂ ಅವರಲ್ಲಿ ಇವನು ಅಗ್ರಗಣ್ಯನೆಂದು ಹೇಳಬಹುದು. ಇವನಲ್ಲಿ ಸಮಾಜದ ಐಹಿಕ ಸುಖಕ್ಕಿಂತಲು ಪ್ರತಿಯೊಬ್ಬ ವ್ಯಕ್ತಿಯ ಪರತ್ರಿಯೇ ಮುಖ್ಯವೆಂದು ಗಣಿಸಲ್ಪಟ್ಟಿದೆ. ಜಾತಿಭೇದವು ಹಗೆ, ಹೊಟ್ಟೆಕಿಚ್ಚು ಭೇದ ಬುದ್ಧಿ ಮೊದಲಾದವುಗಳನ್ನು ಹೆಚ್ಚು ಮಾಡುವದೇ ಹೊರತು ಮುಕ್ತಿ ಸಾಧಕವಾಗದು. ಗುಣಕರ್ಮಗಳಿಗನುಸಾರವಾಗಿ ಹುಟ್ಟನೊಡನೆ ಹೆಚ್ಚು ಕಡಿಮೆಗಳು ಬರಬಹುದಾದಾಗ್ಯೂ ಜಾತಿಭೇದಗಳೆಂದಿಗೂ ಸಾಂಘಿಕ ಯೋಗ್ಯತೆಯನ್ನು ನಿರ್ಣಯಿಸುವಕ್ಕೆ ಸಹಾಯಕಾರಿಯಲ್ಲವೆಂದೂ ಇನ್ನೊಬ್ಬರನ್ನು ಹೀನೈಸುವಷ್ಟು ಶುದ್ಧ ಕುಲವು ಎಲ್ಲಿಯೂ ಇಲ್ಲವಾದ್ದರಿಂದ ಜಾತಿ ಮತ್ಸರವು

---

† He preached the vanity of idol-worship, the indefficiency of pilgrimages and of outward rites, and the need sincerity in life. *E. P Rice's Kan, page Lit 72 73.*

ನಿಷ್ಪ್ರಯೋಜನವೆಂದೂ ಇವನ ಮತ. ತಿಳಿದು ನೋಡಿದರೆ ಗುಣದಿಂದಲ್ಲದೆ ಹುಟ್ಟಿನಿಂದ ಜಾತಿಯಿಲ್ಲ. ಶಿವನಿಗೆ ಶರಣೆನ್ನದಾತ ಮಾದಿಗನಲ್ಲದೆ ಭೂತೇಶಗೆರಗುವವನು ಜಾತಿಯಲ್ಲಿ ಮಾದಿಗನಿದ್ದರೂ ಮಾದಿಗನಲ್ಲ. ಅದರಿಂದ 'ಜಾತಿವಿಜಾತಿಯೆನಬೇಡ' 'ದೇವನೊಲಿದಾತನೆ ಜಾತ' 'ಯಾತರದು ಹೂವೇನು ನಾತರದು ಸಾಲದೇ' ! 'ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ'? ಎಂದು ಪ್ರಶ್ನಿಸುತ್ತಾನೆ. ಎಲ್ಲರೂ ನಡೆಯುವ ಭೂಮಿ ಕುಡಿಯುವ ನೀರು ಒಂದೇ ಆಗಿರಲು ಅಗ್ರಕುಲಜರು ಹೀನ ಕುಲದವರೊಂದಿಗೆ ಏಕೆ ಉಣ್ಣಲಾಗದೆಂದೂ ದುರಹಂಕಾರಿಗಳಾದ ಇಂಥ ಕುಲೀನರ ಒಡನಾಟವೇ ಬೇಡವೆಂದೂ ಇವನ ಮತ. ಇವನು ಏಕವರ್ಣ ಪ್ರತಿಪಾದಕನಾಗಿದ್ದದರಿಂದ ಅಗ್ರಜಾತಿಯವರೆನ್ನಿಸಿಕೊಂಡು ಆಚಾರ ನಿಸ್ಸೀಮರಾದ ಬ್ರಾಹ್ಮಣರನ್ನು ಶೀಘ್ರವಾಗಿ ಖಂಡಿಸಿರುವನು.' ಇದರಿಂದ ಕೆಲವರು ಇವನು ಕೇವಲ ಬ್ರಾಹ್ಮಣ ದ್ವೇಷಿಯಾಗಿರಬೇಕೆಂದು ನೆನಸುವರು.

ಹೀಗನ್ನುವದಕ್ಕೆ ರಾಮಾಯಣ ಮಹಾಭಾರತಗಳನ್ನು 'ಹಾದರದ ಕಥೆಯೆಂದೂ ಸೋದರರ ವಧೆಯೆಂದೂ ಹೇಳುವ ಒಂದೆರಡು ಪದ್ಯಗಳು ಸ್ವಲ್ಪ ಕಾರಣ ಕೊಡುತ್ತಿದ್ದರೂ ಪೂರ್ಣವಾಗಿ ಇವನ ಗ್ರಂಥವನ್ನು ನೋಡದರೆ ಇವನ ಮೇಲೆ ಈ ದೋಷವನ್ನು ಹೊರಿಸಲಾಗದು. ಅವನು ಶ್ಲಾಘ್ಯಗುಣೋತ್ಕರ್ಷ ಮಾಡಿ ಅಶ್ಲಾಘ್ಯಗುಣವನ್ನು ಅವಹೇಳನ ಮಾಡದೆ ಹೋಗಿದ್ದರೆ ಮುಂದಿನ ಕಾಲದಲ್ಲಿ ಯಾವನೊಬ್ಬನು ತಾನು ಸರ್ವಜ್ಞನು ಹೇಳದ ಹೊಸ ಸಂಗತಿಯನ್ನು ಹೇಳಿದ್ದೇನೆಂದು ಹೆಗ್ಗಳಿಸಿಕೊಳ್ಳುವದಕ್ಕೆ ಕಾರಣವಾಗದ ಹಾಗೆಯೂ ಹೀಗಾಗಿ ಸರ್ವಜ್ಞನೆಂಬ ತನ್ನ ಹೆಸರಿನ ಕುಂದಕಬಾರದ ಹಾಗೆಯೂ ಇವನು ಬಹುಶಃ ಪ್ರತಿ ಒಂದು ವಸ್ತುವಿನ ಸ್ತುತಿ ನಿಂದೆಯನ್ನು ಮೊದಲೇ ಮಾಡಿರುವನಲ್ಲದೆ ಇದನ್ನು ದ್ವೇಷದಿಂದ ಹೇಳಿದವನಲ್ಲ. ಇದರಿಂದ ಅವನ ನಿರ್ದ್ವಂದ್ವ ಸ್ವಭಾವವು ಸ್ಪಷ್ಟವಾಗುವದಲ್ಲದೆ ಧರ್ಮದ ದ್ವೇಷವು ಸಿದ್ಧವಾಗದು. ಹೀಗಿದ್ದರೆ ಅವನು ಬ್ರಾಹ್ಮಣರಲ್ಲಿರುವ ಶಿವಗುಣಗಳನ್ನೂ ಲಿಂಗಾಯತರಲ್ಲಿರುವ ಅವಗುಣಗಳನ್ನೂ ಬೈಲಿಗಿಡುತ್ತಿದ್ದಿಲ್ಲ.

ಯೊಬ್ಬನು ಬೇಕು. ಇಂಥವನ ಸೇವೆಯು ಚಾಕರಿಯಾಗಿರುವದರಿಂದ 'ಧೊರೆ ಚಿತ್ತವೇ ದೇವರ ಚಿತ್ತ' ವೆಂದು ತಿಳಿದು ನಡೆಯಬೇಕಲ್ಲದೆ ಪ್ರಸಂಗ ಬಿದ್ದರೆ ಪ್ರಾಣವನ್ನೂ ಕೊಡಬೇಕು. ಎಂಥ ಅರಸನ ಸೇವೆಮಾಡಬಾರದೆಂದು ಅಂದವಾಗಿ ಹೇಳಿದ್ದಾನೆ. ಸಂಗ ಪದ್ಧತಿ—ಸತ್ಸಂಗವನ್ನು ಹೇಗಾದರೂ ಸಂಪಾದಿಸತಕ್ಕದ್ದು. ದುಸ್ಸಂಗವನ್ನು ಹಣಕೊಟ್ಟಾದರೂ ಬಿಡತಕ್ಕದ್ದು. ವಿಧಿ ಪದ್ಧತಿಯಿಂದ ನಿಂದಾ ಪದ್ಧತಿಯ ವರೆಗಿರುವ ವಿಚಾರಗಳು ಆಯಾ ಶಿರೋಲೇಖಗಳಿಂದ ಸ್ಪಷ್ಟವಾಗಿವೆ. ನೀತಿ ಪದ್ಧತಿ— ಸುಳ್ಳಾಡುವದು ಮಹಾಪಾಪವಾಗಿದ್ದು ಸತ್ಯವನ್ನು ಬಿಡದಾಡುವವನೇ ದೇವರೆಂದು ಇವನ ಮತ. ಪಾಪವು ಸ್ನಾನದಿಂದಾಗಲಿ ಹಣದಿಂದಾಗಲಿ ಹೋಗುವದಲ್ಲ. ಜೈನರ ಅಹಿಂಸಾವಾದವು ಎಷ್ಟೋ ಉತ್ತಮವಾಗಿದ್ದರೂ ಅದು ಅವ್ಯವಹಾರಿಕವಾಗಿರುವದರಿಂದ 'ಕೊಂದು ತಿನ್ನುವದಕ್ಕಿಂತ ನೊಂದಂತೆ ನೋವನರಿಯದಿರುವದೇ ಜೀವ ಹಿಂಸೆ' ಎಂದು ಇವನ ಅಭಿಪ್ರಾಯ. ದಾನಪದ್ಧತಿ ನೀತಿ ಪದ್ಧತಿಯಲ್ಲಿ ಇವನ ವಿಚಾರಗಳು ಉಚ್ಚ ಸ್ಥಿತಿಗೆ ಮುಟ್ಟಿವೆ ಎಂದು ಹೇಳಬಹುದು. ಇವನ ದೃಷ್ಟಿಯಲ್ಲಿ ಪರಸ್ತ್ರೀಯನ್ನು ಕಣ್ಣೆತ್ತಿ ನೋಡದೆ, ಮನಸ್ಸಿನಿಂದ ಆಶಿಸದೆ, ಪರರನ್ನು ತನ್ನಂತೆ ಬಗೆದು, ಅಪಕಾರಕ್ಕೆ ಪ್ರತಿಯಾಗಿ ಅಪಕಾರ ಮಾಡದಿರುವದೇ ಉತ್ತಮ ನೀತಿ. ಆದರೆ ಅಪಕಾರಕ್ಕೂ ಉಪಕಾರಮಾಡಬೇಕೆಂಬ ಆದರ್ಶ ಬೋಧನೆಯು ಇವನಲ್ಲಿ ಸ್ಪಷ್ಟವಾಗಿ ಕಾಣದು. ವಿದ್ಯೆಯೆಂದರೆ ಬ್ರಾಹ್ಮಣರಿಗೆ ಹೇಳಿದ್ದು. ಇದನ್ನು ಇತರರು ಕಲಿತರೂ (ಒಕ್ಕಲಿಗನೋದಲ್ಲ) ಅವರಿಗೆ ಸಮಾನವಾಗಲಾರರು. ಆದರೆ ಇವರು ವಿದ್ಯೆಯನ್ನು ಇನ್ನೊಬ್ಬರ ರೊಕ್ಕವನ್ನು ಸುಲಿಯುವದಕ್ಕೆ ಪ್ರಯೋಗಿಸುವದರಿಂದ 'ಓದುಗಳು ತಿರುಪೆಗೆ' ಎಂದು ಹೇಳುತ್ತಾನೆ. ಆದರೆ ವಿದ್ಯೆಯನ್ನು ವಿದ್ಯೆಯು ಸಲುವಾಗಿ ಅಂದರೆ ಮುಕ್ತಿ ಆತ್ಮೋನ್ನತಿಗಳ ಸಲುವಾಗಿ ಕಲಿಯಬೇಕಲ್ಲದೆ ಹೊಟ್ಟೆಗಾಗಿ ಕಲಿಯಲಾಗದೆಂದು ಇವನ ಖಂಡಿತ ಮತ. ಜ್ಯೋತಿಷ ಪದ್ಧತಿ— ಇಲ್ಲಿ ಗಡಿಯಾರವಿಲ್ಲದೆ ಬಿಸಲಿನಿಂದ ಹೊತ್ತನ್ನು ತಿಳಿಯುವದಕ್ಕೆ ಇವನು ಹೇಳಿಕೊಟ್ಟಿರುವ ಕ್ರಮವೂ ವೈದ್ಯ ಪದ್ಧತಿಯಲ್ಲಿ— ದೀರ್ಘಾಯುರಾರೋಗ್ಯವನ್ನು ಪಡೆಯುವದಕ್ಕೆ ಹೇಳಿದ ಸೂತ್ರಗಳೂ ವಿವಿಧ ಆಹಾರದಿಂದ ಜ್ಞಾನತಂತುಗಳ ಮೇಲೆ ಆಗುವ ಪರಿಣಾಮವೂ ಈಗಿನ ಕಾಲದ ಶಾಸ್ತ್ರಜ್ಞರು ವಿಚಾರಿಸತಕ್ಕ ವಿಷಯಗಳಾಗಿವೆ. ಇದಲ್ಲದೆ ಇವನ ಕೆಲವು ಸೂತ್ರಗಳು (Hydropathy) ಜಲಚಿಕಿತ್ಸೆ, (Gastronomy) ಪಚನಶಾಸ್ತ್ರ ಜರ್ಮನಿಯ ಪ್ರಸಿದ್ಧ ವೈದ್ಯರಾದ ಕುನ್ಹೆ ಮುಂತಾದವರ ಚಿಕಿತ್ಸಾ ಕ್ರಮಕ್ಕೆ ಅನುಗುಣವಾಗಿದೆ. ಸ್ತ್ರೀ ಪದ್ಧತಿ— ಸ್ತ್ರೀ ಜಾಲದಲ್ಲಿ ಬೀಳದವರು ಯಾರೂ ಇಲ್ಲದ್ದರಿಂದ ಸ್ತ್ರೀಯು ಧಿಕ್ಕರಿಸಲ್ಪಡತಕ್ಕ ವಸ್ತುಗಳಲ್ಲೊಂದೆಂದು ಹೇಳಿದಾಗ್ಯೂ ಇವನು ತನ್ನ ಸರ್ವಜ್ಞತ್ವಕ್ಕೆ ಕುಂದುಕ ಬಾರದಂತೆ ಅವರ ಉತ್ತಮ ಗುಣೋತ್ಕರ್ಷವನ್ನೂ ಮಾಡಿದ್ದಾನೆ. ಇವನ ಪದ್ಯಗಳಲ್ಲಿ ಕೆಲವು ವಿಷಯಗಳನ್ನು ಕುರಿತು ಸ್ತುತಿ ನಿಂದೆಗಳೆರಡೂ ಒಂದೇ ಪದ್ಯದಲ್ಲಿ ಅನೇಕಾವರ್ತಿ ಕಂಡುಬರುತ್ತದೆ. ಸ್ತ್ರೀನಿಂದಾ ಪದ್ಧತಿ—

ಇಲ್ಲಿ ಅಯೋಗ್ಯ ಮನೆವಾರ್ತೆಯನ್ನು ಕುರಿತು ಅಂದರೆ ಬಾಳ್ವೆಯಲ್ಲಿ ತಾತ್ಪರ್ಯವಿಲ್ಲದವಳಿಂದ ಹೇಗಾಗುವದೆಂದು ತೋರಿಸುವದಕ್ಕೆ ಇವನು ಪ್ರಯೋಗಿಸಿದ ದೃಷ್ಟಾಂತಗಳೇ ಆ ಅಧ್ಯಾಯದ ವಚನ ಸಾರವೆಂದು ಹೇಳಬಹುದು. ಅದು 'ಅರನಾರಿ ಪುರುಷನಂತೆ' 'ಬೆರಣಿಯು ಹೊಗೆಯಂತೆ' ಬೇವು ತಿಂದಂತೆ' 'ಎಣ್ಣೆಯ ಕುಡಿಕೆಯೊಡೆದಂತೆ' 'ಮಳಲೊಳಗೆಣ್ಣೆಹೊಯಿದಂತೆ' 'ಹಣಹೋದ ವೇಶಿಯಂತೆ' 'ತಾಯ್ಸತ್ತ ಕೂಸಿನಂತೆ' 'ತಿಪ್ಪೆಯ ಕಸದಂತೆ' 'ಕರಕು ಸವಿದಂತೆ' 'ಇರಿದುಕೊಂಡಂತೆ' 'ಮುಣುಗಿ ಹೋದಂತೆ' 'ಕತ್ತೆಯು ಹೂಸಿನಂತೆ' ಕಿಚ್ಚು ಕಾದಂತೆ' 'ಕಿಲುಬಿಡಿದ ಕಂಚಿನಂತೆ' 'ಸಮರದಿ ಬಿಲ್ಲು ಮುರಿದಂತೆ' 'ನಾಯಿ ಹಳಿಕೆರೆವ ಕಡಿದಂತೆ' ಎಂದು ಹೇಳಿದ್ದಾನೆ, ರಸವಾದ ಪದ್ಧತಿ– ಬಂಗಾರವು ಮೂಲತತ್ವಗಳಲ್ಲೊಂದಾಗಿದ್ದು ಇದು ಮಿಶ್ರ ಧಾತುಗಳಿಂದುಂಟಾಗುವದು ಅಸಾಧ್ಯವೆಂದು ಈಗಿನ ರಸಾಯನಜ್ಞರ ಮತವು. ಆದರೆ ಇದಕ್ಕೆ ವಿರುದ್ಧವಾಗಿ ನಮ್ಮ ದೇಶದಲ್ಲಿ ಅನೇಕರ ನಂಬಿಕೆಯಿರುತ್ತದೆ, ಇದು ಒಂದು ವೇಳೆ ಮಿಶ್ರ ಧಾತುಗಳಿಂದುಂಟಾಗುವ ಜರ್ಮನ್‌ಗೋಲ್ಡ ಇದ್ದಿರಬಹುದೇನೋ? ಬೆಡಗಿನ ಪದ್ಧತಿ– 'ಸರ್ವಜ್ಞನನ್ನು ಪಾಮರನೆಂದು ಯಾರೋ ನಿಂದಿಸಲು ಪರರಿಗೆ ತಿಳಿಯದಂತೆ ಬರೆಯ ಬಲ್ಲೆನೆಂಬ ಹೆಮ್ಮೆಯಿಂದಲೂ ತನ್ನ ತಿಳಿವನ್ನು ತೋರಿ ಪರರನ್ನು ಸೋಲಿಸಬೇಕೆಂಬ ಉದ್ದೇಶದಿಂದಲೂ ಇಲ್ಲವೆ ಸುಮ್ಮನೆ ವಿನೋದಕ್ಕಾಗಿಯೂ ಇಂಥ ಬೆಡಗುಗಳನ್ನು ರಚಿಸಿರುವನೆಂದು ಕೃಷ್ಣ ಶರ್ಮರು ಹೇಳಿದ್ದಾರೆ, ಆದರೆ ಇದು ಸರಿಯಲ್ಲ, ಯಾವದೊಂದು ಧರ್ಮತತ್ವವನ್ನು ಗೂಢವಾಗಿಟ್ಟು ಹೇಳುವದು ವಚನಕಾರರಲ್ಲಿ ಬಹು ರೂಢಿಯಾಗಿರುವದರಿಂದ ಸರ್ವಜ್ಞನಾದರೂ ಇವರನ್ನನುಸರಿಸಿ ಬೆಡಗಿನ ಪದ್ಯಗಳನ್ನು ರಚಿಸಿರುವನಲ್ಲದೆ ಬೇರೊಂದು ಕಾರಣವಿಲ್ಲ, ಇವನು ಧಾರ್ಮಿಕ ವಿಷಯಗಳನ್ನು ಹೇಳುವ ಬೆಡಗುಗಳನ್ನು ಬಿಟ್ಟು ವ್ಯವಹಾರಿಕ ಬೆಡಗುಗಳನ್ನು ಮಾತ್ರವೇ ಹೇಳಿರುವನು, ಇದೇ ವಚನಕಾರರಿಗೂ ಸರ್ವಜ್ಞನಿಗೂ ಇರುವ ಅಂತರ–

## ೧೦. ಉಪಸಂಹಾರ.

ಮುಕ್ಕಾಲು ಪಾಲು ದೋಷಗಳಿಂದ ತುಂಬಿದ್ದ ಸರ್ವಜ್ಞನ ಗ್ರಂಥವನ್ನು ಸಂಶೋಧಿಸಿ ಅದನ್ನು ವಿಷಯಾನುಸಾರವಾಗಿ ವ್ಯವಸ್ಥೆಗೊಳಿಸುವ ಪ್ರಯತ್ನವು ಈಗ ತಾನೇ ಪ್ರಾರಂಭವಾಗಿರುದರಿಂದ ಇದನ್ನು ಪ್ರಥಮಾವೃತ್ತಿಯಲ್ಲಿಯೇ ಪೂರ್ಣತೆಗೆ ಮುಟ್ಟಿಸುವದು ಅಶಕ್ಯವೆಂದು ಮೊದಲು ಹೇಳಿ ತರುವಾಯ ಇವನ ಜನ್ಮ, ದೇಶಕಾಲಗಳ ವಿಚಾರವನ್ನು ಕೈಕೊಂಡಿದೆ. ಆದರೆ ಈ ಬಗ್ಗೆ ಬಹಿರಾಧಾರಗಳು ದೊರೆಯದಿರುವದರಿಂದ ಅವನ ಗ್ರಂಥದಲ್ಲಿಯೇ ದೊರೆಯುವ ಆಧಾರಗಳನ್ನು ಸೂಕ್ಷ್ಮವಾಗಿ ವಿಚಾರಿಸಿಕೊಂಡು ಅವುಗಳ ಮೇಲಿಂದ ಕೆಲವು ಫಲಿತಾಂಶಗಳು ಹೇಳೋಣವಾಗಿವೆ. ತರುವಾಯ ಇವನ ಕಾವ್ಯಕೌಶಲ್ಯವನ್ನು

ತೋರಿಸುವ ಕೆಲವು ಉದಾಹರಣೆಗಳು ಬಂದು . ಅವನ ಮೂರ್ತಿತ್ವದ ಮುಖ್ಯ ಗುಣ ಲಕ್ಷಣಗಳು ಹೇಳೋಣವಾಗಿವೆ. ಆಬಳಿಕ ನೂತನ ತರಗತಿಗೆ ಸೇರುವ ಅವನ ಕಾವ್ಯವನ್ನಭ್ಯಾಸಿಸುವದು ಎಷ್ಟು ಅವಶ್ಯವೆಂದೂ ಅದನ್ನು ಕೈಕೊಳ್ಳುವ ವಿಧಾನಗಳಾವುವೆಂದೂ ಸೂಚಿಸಿಯದೆ. ಕಡೆಯಲ್ಲಿ ಅವನ ವಿಚಾರ ಸರಣಿಯ ಮುಖ್ಯಾಂಶಗಳು ವಚನಸಾರರೂಪವಾಗಿ ಹೇಳಲ್ಪಟ್ಟವೆ. ಸರ್ವಜ್ಞನ ಮೂರ್ತಿತ್ವವನ್ನು ಕುರಿತು ಸ್ವಲ್ಪದರಲ್ಲಿ ಹೇಳಬೇಕಾದರೆ ಹೀಗನ್ನ ಬಹುದು—ಧರ್ಮಗ್ರಂಥವನ್ನು, ಮಾತನಾಡುವ ಭಾಷೆಯಲ್ಲಿ ಬರೆದು ಜನರನ್ನು ಆಚಾರ್ಯರ ಬಂಧನದಿಂದ ಬಿಡಿಸಿ ಲೋಕಕ್ಕೆ ವಿಚಾರ ಸ್ವಾತಂತ್ರ್ಯವನ್ನು ತಂದುಕೊಟ್ಟ ಲುಥರನು ಪ್ರೊಟೆಸ್ಟಾಂತ ಧರ್ಮದ ಪುನಸ್ಥಾಪಕನೆಂದು ಕರಿಸಿ ಕೊಂಡರೆ ಇವನಿಗೆ ಪೂರ್ವದಲ್ಲಿ ಬದುಕಿ ಇವನಿಗೆ ಸದೃಶವಾದ ಕಾರ್ಯವನ್ನು ನಡಿಸಿದ ಬಸವೇಶ್ವರನನ್ನು ದಕ್ಷಿಣ ಹಿಂದುಸ್ತಾನದ ಪ್ರೊಟೆಸ್ಟಾಂತ ಧರ್ಮವೆನ್ನಿ ಸಿಕೊಳ್ಳುವ ವೀರಶೈವ ಧರ್ಮ ಪುನಸ್ಥಾಪಕನೆಂದು ಹೇಳಬಹುದು. ಬಸವೇಶ್ವ ರನು ಲುಥರನೆಂತಾದರೆ ಧರ್ಮಪ್ರಸಾರಣೆಗಾಗಿ ದೇಶವನ್ನೆಲ್ಲ ಸಂಚರಿಸಿ ಅನೇಕ ಕಷ್ಟಗಳನ್ನು ಸಹಿಸಿ ಅದರ ತತ್ವಗಳನ್ನು ಬಿತ್ತಲೆತ್ನಿಸಿದ ಸರ್ವಜ್ಞನು ಇಂಥ ಪ್ರೊಟೆ ಸ್ಟಾಂತ ಧರ್ಮದ ಮೇಲ್ತರದ ಮಿಶನರಿಯೆಂದು ನಿಸ್ಸಂದೇಹವಾಗಿ ಒಪ್ಪಿಕೊ ಳ್ಳಬೇಕು. ಬೇರೊಂದು ರೀತಿಯಿಂದ ದೃಷ್ಟಿಸಿದರೆ ಖಂಡನೆಯ ದೆಸೆಯಿಂದ ಸಿಂ ಹನಾದಮಾಡಿದ ಇವನನ್ನು ಕರ್ನಾಟಕದ ಮೃಗೇಂದ್ರನೆಂದೂ ಕನ್ನಡ ಗ್ರಂಥ ಪುಷ್ಪಗಳ ಸಾರವನ್ನು ಸಂಗ್ರಹಿಸಿರುವದರಿಂದ ಕರ್ನಾಟಕದ ಜೇನುದುಂಬಿ ಯೆಂದೂ ಸಂಗ್ರಹಿಸಿದನ್ನು ಸೊಗಸಾದ ಕನ್ನಡದಲ್ಲಿ ಹೆಣೆದು ಕನ್ನಡಿಗರು ಎಚ್ಚರಗೊಳ್ಳುವಂತೆ ಹಾಡಿರುವದರಿಂದ ಕರ್ನಾಟಕದ ಕೋಕಿಲೆ ಎಂದೂ ಕರೆ ಯಬಹುದು. ಇಂಥ ಸರ್ವಜ್ಞನ ಗ್ರಂಥಕ್ಕೆ ಆದರವಿಲ್ಲದಿರುವದು ಕನ್ನಡಿಗರ ದುರ್ದೈವವೇಸರಿ. ಕರ್ನಾಟಕದಲ್ಲಿ ಕಲ್ಪನೆಗಿಂತ ಕೃತ್ಯಕ್ಕೂ, ಜನ ಮಂಡನೆ ಗಿಂತ ಖಂಡನೆಗೂ ಸಂಸ್ಕೃತಕ್ಕಿಂತ ಕನ್ನಡಕ್ಕೂ ಮಹತ್ವವು ದೊರೆತ ಪ್ರತಿ ಒಂದು ಯುಗದಲ್ಲಿ ಇವನ ಗ್ರಂಥಕ್ಕೆ ವಿಶೇಷತ್ವ ಬರುವದು ನಿಶ್ಚಯ.

**ಚನ್ನಪ್ಪ ಉತ್ತಂಗಿ**

---

# ವಿಷಯಸೂಚಿಕೆ



## ೧ ಭಾಗ

## ಪಾರಮಾರ್ಥಿಕ ಪದ್ಯಗಳು.

ಪ್ರತಿಪದ್ಧತಿಯಲ್ಲಿರುವ ಪದ್ಯಗಳು ಒಟ್ಟು



## ೨ ಭಾಗ

## ನೈತಿಕ ಪದ್ಯಗಳು.

## ೩ ಭಾಗ

## ಲೌಕಿಕ ಪದ್ಯಗಳು.

# ವಿಷಯಾನುಕ್ರಮಣಿಕೆ.

## ೫. ದೈವಪದ್ಧತಿ.



## ೬. ಭಕ್ತಪದ್ಧತಿ.



## ೭. ಮಹೇಶ್ವರ ಪದ್ಧತಿ.



## ೮. ಜ್ಞಾನಪದ್ಧತಿ.

## ೯. ಯೋಗಪದ್ಧತಿ.

## ೧೦. ಶಿವಯೋಗಪದ್ಧತಿ.



# ದ್ವಿತೀಯ ಭಾಗ.

## ನೈತಿಕ ಪದ್ಯಗಳು.

## ೧೧. ದಾನಪದ್ಧತಿ.

### ೧. ದಾನದ ವಿಷಯ

## ೧೩. ಸಂಗ ಪದ್ಧತಿ.



## ೧೪. ವಿಧಿವಶ ಪದ್ಧತಿ.

### (೧) ಸರ್ವರೂ ವಿಧಿವಶರು.

### ( ದೃಷ್ಟಾಂತ )



### (೨) ಎಲ್ಲಿ ಹೋದರೂ ವಿಧಿಬಿಡದು.



## ೧೫. ಬ್ರಾಹ್ಮಣರ ಪದ್ಧತಿ.

### (೧) ಬಾಹ್ಯಜ್ಞಾನ ಖಂಡನ.

## ೨೨ ಜೋತಿಷ ಪದ್ಧತಿ.



## ೨೩ ತೃತೀಯ ಭಾಗ.

## ಲೌಕಿಕ ಪದ್ಯಗಳು.

## ೨೩ ದೇಶ ಪದ್ಧತಿ.

# ಗ್ರಂಥ ಶುದ್ಧೀಕರಣಕ್ಕೆ ದೊರೆತ ಆಧಾರಗಳು.

## ೧ ಓಲೆಯ ಪ್ರತಿಗಳು.

A. ಮದ್ರಾಸು ಸರಕಾರದ ಪ್ರಾಚ್ಯಕೋಶಾಲಯ (Gov. Oriental Miss. Library)ದಲ್ಲಿ ದೊರೆತ ಒಂದು ಗ್ರಂಥ. ಇದಕ್ಕೆ 'ಸರ್ವಜ್ಞ ನೀತಿ' ಪದ್ಯಗಳೆಂದು ಹೆಸರು. ಪದ್ಯ ಸಂಖ್ಯೆ ೭೬೪. ಮಧ್ಯದ ಎರಡು ಪುಟಗಳು. ಹುಳ ಮುಟ್ಟವೆ. ಕೆಲವೆಡೆಯಲ್ಲಿ ಪದ್ಯಗಳು ಸರ್ವಜ್ಞ ಎಂಬದರ ಬದಲಿಗೆ ಪರಮಾರ್ಥವೆಂದು ಮುಗಿಯುವವು.

B. ಅದೇ ಪ್ರಾಚ್ಯಕೋಶಾಲಯದಲ್ಲಿ ದೊರೆತ ಇನ್ನೊಂದು ಗ್ರಂಥ. ಇದಕ್ಕೆ 'ಸರ್ವಜ್ಞ ಪದ್ಯ'ಗಳೆಂದು ಹೆಸರು. ಇದರಲ್ಲಿರುವ ಪದ್ಯಗಳು ೬೯೯.

C. ಮೈಸೂರು ಸರಕಾರದ ಪ್ರಾಚ್ಯಕೋಶಾಲಯದಲ್ಲಿ ದೊರೆತ ಒಂದು ಗ್ರಂಥ. ಇದರಲ್ಲಿರುವ ಪದ್ಯಗಳು ೮೯೯. ಆರಂಭದ ಪುಟವು ಹೋಗಿದೆ. ಅಚ್ಚಾದ ಪ್ರತಿಗಳಲ್ಲಿ ಕಾಲಜ್ಞಾನ, ಪೀಠಿಕಾಪದ್ಧತಿಗಳಿಗೆ ಸೇರುವ ಪದ್ಯಗಳು. ಇದರಲ್ಲಿ ಕಾಣುವದಿಲ್ಲ.

D. ಮೇಲೆ ಹೇಳಿದ ಮೈಸೂರು ಪ್ರಾಚ್ಯಕೋಶಾಲಯದಲ್ಲಿ ದೊರೆತ ಇನ್ನೊಂದು ಗ್ರಂಥ. ಇದಕ್ಕೆ 'ಪರಮಾರ್ಥಿಕೆ' ಎಂದು ಹೆಸರು. ಇದರ ಪ್ರತಿ ಅಧ್ಯಾಯದ ಮೇಲ್ಗಡೆಯಲ್ಲಿ 'ಪದ್ಧತಿ' ಎಂಬದರ ಬದಲಿಗೆ 'ಗುಣವರ್ಗ'ವೆಂದು ಶಿರೋಲೇಖವಿರುವದು.

ಉದಾ:—ಗುರುವರ್ಗ, ಲಿಂಗಗುಣವರ್ಗ, ಯೋಗಗುಣವರ್ಗ ಇತ್ಯಾದಿ

E. ಬಾದಾಮಿಯಲ್ಲಿ ದೊರೆತ ಒಂದು ಗ್ರಂಥ. ಇದಕ್ಕೆ ಸರ್ವಜ್ಞ ಗಣೇಶ್ವರನು ನಿರೂಪಿಸಿದ ಕಾಲಜ್ಞಾನ ವಚನವೆಂದು ಹೆಸರು. ಇದು ಅಸಂಪೂರ್ಣವಾಗಿದೆ. ಅಂತೂ ಪದ್ಯಗಳು ೬೭೨. ಇದರಲ್ಲಿ ಬಸವನಿಂದೀಚೆಗೆ ಇರುವ ಕೆಲವು ಕಾಲಜ್ಞಾನ ನುಡಿಗಳೂ ವಿಜಯನಗರದ ನಾಶನವೂ ವಚನರೂಪವಾಗಿ ಹೇಳಲ್ಪಟ್ಟವೆ.

F. ನವಲಗುಂದದಲ್ಲಿ ದೊರೆತ ಒಂದು ಗ್ರಂಥ. ಇದರಲ್ಲಿ ಸುಮಾರು ೩೦೦ ಪದ್ಯಗಳಿರುವವು.

H. ಸಂಪಾದನೆಯ ಸಿದ್ಧವೀರಣಾಚಾರ್ಯರು ಸೇರಿಸಿದ ಸರ್ವಜ್ಞ ತ್ರಿಪದಿಗಳು. ಪದ್ಯಗಳ ಸಂಖ್ಯೆ ೨೬೪. ಇವು ಸಾಧಾರಣವಾಗಿ ಸರ್ವಜ್ಞನ ಮೂರ್ತಿತ್ವವನ್ನು ಕುರಿತಿರುವ ಪದ್ಯಗಳೇ ಹೆಚ್ಚು.

## ೨ ಅಚ್ಚಾದ ಪ್ರತಿಗಳು.

W. ರೆವರೆಂಡ. ಜಿ. ವಿರ್ತ್‌ಕೃತ 'ಪ್ರಾಕ್ಕಾವ್ಯ ಮಾಲಿಕೆ' ಎಂಬ ಗ್ರಂಥ ದಲ್ಲಿ ಪುಟ ೯೪—೩೫೩ ವರೆಗೆ ದೊರೆಯುವ ಸರ್ವಜ್ಞ ತ್ರಿಪದಿಗಳು ೩೪೧. ಇದು ೧೮೬೮ ರಲ್ಲಿ ಬಾಸೆಲ್ ಮಿಶನ್ನಿನ ಮುದ್ರಣಾಲಯದಲ್ಲಿ ಅಚ್ಚಾಗಿರುವದು.

M. ಗಂಗಾಧರ ಮಡಿವಾಳೇಶ್ವರ ಇವರಿಂದ ಕನ್ನಡಿಸಲ್ಪಟ್ಟ ಆರನೆಯ ಪುಸ್ತಕದಲ್ಲಿ ದೊರೆಯುವ ಪದ್ಯಗಳು ೨೨೫. ಇದು ಬೆಂಗಳೂರು ವಸ್ಲಿಯನ್ ಮಿಶನ್ನಿನವರಿಂದ ೧೮೭೦ರಲ್ಲಿ ಮುದ್ರಿಸೋಣವಾಗಿರುವದು.

K. ರೆವರೆಂಡ. ಎಫ್. ಕಿಟಲ ಕೃತ 'ಕರ್ನಾಟ ಕಾವ್ಯಮಾಲೆ' ಎಂಬ ಗ್ರಂಥವಲ್ಲಿ ಪುಟ ೧೮—೨೪೩ ವರೆಗೆ ಅಲ್ಲಲ್ಲಿ ಕೆಲವು ಪದ್ಯಗಳು ದೊರೆಯುವವು. ಇದು ೧೮೭೪ರಲ್ಲಿ ಅಚ್ಚಾದದ್ದು. ಅದೇ ಕಿಟೆಲ್ ಪಂಡಿತರು ರಚಿಸಿದ ಪ್ರಸಿದ್ಧ ಕನ್ನಡ ಇಂಗ್ಲಿಷ ನಿಘಂಟಿನಲ್ಲಿ ದೊರೆಯುವ ಪದ್ಯಗಳು ಸುಮಾರು ೩೦೦ ಇದು ೧೮೯೪ರಲ್ಲಿ ಅದೇ ಬಾಸೆಲ್ ಮಿಶನ್ನಿನವರಿಂದ ಅಚ್ಚಾಗಿದೆ.

G. ಉಂತಕಲ್ಲು ಗಿರಿಮಲ್ಲಯ್ಯನವರಿಂದ ಪರಿಶೋಧಿಸಲ್ಪಟ್ಟು ೧೮೯೩ ರಲ್ಲಿ ಚಿತ್ತೂರ ಅಪ್ಪಸ್ವಾಮಿ ಮುದಲಿಯರ ಮದ್ರಾಸ ಇವರ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾದದ್ದು. ಇದರಲ್ಲಿರುವ ಪದ್ಧತಿಗಳು ೯. ಪುಟ ೮೯. ಪದ್ಯ ಸು. ೧೨೩೪

S. ಬಳ್ಳಾರಿ ಶಿವಲಿಂಗ ಶೆಟ್ಟರಿಂದ ಕರ್ನಾಟಕ ಬುಕ್‌ಡಿಪೋದ ಮುದ್ರಾಲಯದಲ್ಲಿ ೧೯೦೩ ರಲ್ಲಿ ಮುದ್ರಿಸೋಣವಾಗಿದೆ. ಇದರಲ್ಲಿರುವ ಪದ್ಧತಿಗಳು ೩೪ ಪುಟ ೮೦ ಪದ್ಯಗಳು ೧೫೦೦.

R. ಇದು ೧೯೦೬ರಲ್ಲಿ ವಾಜಪೇಯ ಕೃಷ್ಣಯ್ಯ ಹಾಗೂ ವೆಂಕಟಾದ್ರಿ ಅಯ್ಯನವರಿಂದ ಬೆಂಗಳೂರು ಬುಕ್‌ಡಿಪೊದಲ್ಲಿ ಮುದ್ರಣವಾದದ್ದು. ಇದರಲ್ಲಿರುವ ಪದ್ಯಗಳು ೧೧೩೬.

N. ಇದು ೧೯೧೧ರಲ್ಲಿ ಬೆಂಗಳೂರು ಡಿ. ಜಿ. ನಾರಾಯಣ ಶಾಸ್ತ್ರಿಗಳಿಂದ ಮೂಲಗ್ರಂಥಕ್ಕೆ ಸಟೀಕ ತಾತ್ಪರ್ಯ ಸಹಿತವಾಗಿ ಬಳ್ಳಾರಿ ಕರ್ನಾಟಕ ಡಿಪೊದ ಮುದ್ರಣಾಲಯದಲ್ಲಿ ಅಚ್ಚಾದದ್ದು. ಇದರಲ್ಲಿರುವ ಪದ್ಯಗಳು ೧೧೫೬. ಪುಟ ೨೨೦.

V. 'ವೇಮನ ಸರ್ವಜ್ಞ ಸಂವಾದ' ಇದು ರಾಮಲಿಂಗ ಕವಿಗಳಿಂದ ಪರಿಶೋಧಿಸಲ್ಪಟ್ಟು ಶ್ರೀವೆಂಕಟೇಶ ಪ್ರೆಸ್ಸ್ ಬೆಂಗಳೂರಿನಲ್ಲಿ ೧೯೧೬ ರಲ್ಲಿ

ಮುದ್ರಣವಾದದ್ದು. ಇದರಲ್ಲಿ ತೆಲಗು ಕನ್ನಡ ಪದ್ಯಗಳು ಕೂಡಿ ೫೧೫ ಇರುವವು. ಕೇವಲ ಕನ್ನಡ ಪದ್ಯಗಳು ಸುಮಾರು ೨೫೦. ಇದರಲ್ಲಿ ಪದ್ಯಗಳು ಅಲ್ಲಲ್ಲಿ ಪುನರಾವರ್ತನೆಯಾಗಿವೆ.

P. ಬೆಂಗಳೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪನಿಯವರಿಂದ ಪ್ರಕಟಿಸಲ್ಪಟ್ಟದ್ದು. ಇದಕ್ಕೆ ' ನೀತಿಸಾರ ' ಇಲ್ಲವೆ ' ಸರ್ವಜ್ಞ ಪದ 'ಗಳೆಂದು ಹೆಸರು. ಇದು ೧೯೨೦ರಲ್ಲಿ ಮುದ್ರಣವಾಗಿದ್ದು, ಕರ್ನಾಟಕ ಗ್ರಂಥಾವಳಿಯ ತ್ರಿತೀಯ ಭಾಗಕ್ಕೆ ಸೇರುತ್ತದೆ.

## ಸೂಚನಾ ಚಿನ್ಹಗಳು.

* ಈ ಗುರುತು ಸರ್ವಜ್ಞಕೃತ ಪದ್ಯಗಳನ್ನು ಸೂಚಿಸುವದು. ಈಗ ನಿಜ ಪದ್ಯಗಳನ್ನು ಮಿಶ್ರಪದ್ಯಗಳಿಂದ ವಿವೇಕಿಸಿ ತಿಳಿಯುವದು ದುಸ್ಸಾಧ್ಯವಾಗಿದ್ದರೂ ಒಂದುತರದ ಸೂತ್ರವನ್ನನುಸರಿಸಿ ಇದನ್ನು ನಿಶ್ಚಯಿಸಿರುವೆವು. ವಿಶೇಷ ವಿರೂಪ ಹೊಂದದೆ ಕೈಬರಹದ ಹಾಗೂ ಅಚ್ಚಾದ ಎಲ್ಲ ಪ್ರತಿಗಳಲ್ಲಿ ದೊರೆಯುವ ಪದ್ಯಗಳು ಕವಿಕೃತವೆಂದು ತಿಳಿಯಲ್ಪಟ್ಟಿದೆ.

? ಈ ಗುರುತು ಏತತ್ಕೃತವೋ ಅನ್ಯಕೃತವೋ ಎಂದು ನಿಶ್ಚಯಿಸಿ ಹೇಳಲಿಕ್ಕೆ ಸಾಕಷ್ಟು ಆಧಾರವಿಲ್ಲದೆ ಸಂಶಯಾತ್ಮಕವಾಗಿ ಉಳಿದಿರುವ ಪದ್ಯಗಳನ್ನು ಸೂಚಿಸುವದು.

+ ಈ ಗುರುತು ಕೆಲವು ಪ್ರತಿಗಳಲ್ಲಿ ಮಾತ್ರವೇ ದೊರೆಯುವ ಪದ್ಯಗಳನ್ನು ಸೂಚಿಸುವದು. ಇವು ಬರವಣಿಗೆಯಿಂದಲೂ ಭಾಷಾಪ್ರಯೋಗದಿಂದಲೂ ತರುವಾಯದಲ್ಲಿ ಅಂತರ್ಗತವಾದ ಪದ್ಯಗಳೆಂದು ತಿಳಿಯುವದರಿಂದ ಅನ್ಯಕೃತಗಳೆಂದು ಹೇಳಬಹುದು. ಇವುಗಳ ಛಂದೋಬಂಧನವು ಸಿಥಿಲವಾಗಿದ್ದು ಮುಂಚೆ ಇದ್ದ ಪದ್ಯಗಳ ಅಭಿಪ್ರಾಯವನ್ನೇ ತಿರುತಿರುಗಿ ಬೇರೆ ಬೇರೆ ಪ್ರಾಸಗಳಲ್ಲಿ ಹೇಳಿರುವದರಿಂದ ಇವುಗಳು ಅನುಕರಣ ಪದ್ಯಗಳೆಂದು ತಿಳಿಯ ತಕ್ಕದ್ದು.

॥ ಈ ಗುರುತು ಇನ್ನೂ ಕಂಠಸ್ಥವಾಗಿ ಉಳಿದಿರುವ ಕೇವಲ ನವೀನ ಪದ್ಯಗಳನ್ನು ಸೂಚಿಸುವದು. ಇವುಗಳನ್ನು ಕೆಲವು ವರ್ಷಗಳಿಂದ ಸಂಗ್ರಹಿಸಿ ಇಲ್ಲಿ ಕೊಟ್ಟಿರುವೆವು. ಇವು ಅನ್ಯಕೃತಗಳೆಂದು ಸ್ಪಷ್ಟವಾಗುತ್ತಿದ್ದರೂ ಇವುಗಳಲ್ಲಿ ಕೆಲವು ಸರ್ವಜ್ಞನಕೃತ ಪದ್ಯಗಳಿದ್ದು ಒಂದು ವೇಳೆ ಪಾಠ ಪರಂಪರೆಯಿಂದ ಉಳಿದು ಬಂದಿದ್ದರೂ ಬಂದಿರಬಹುದು.

"Their (*Preachers'*) business is to instruct and guide; his (*Poet's*) to stir and vivify to inspire energise and delight."

--*W. H. Hudson*

# ಸರ್ವಜ್ಞನ ತ್ರಿಪದಿ.



## (ಸರ್ವಜ್ಞ ಮೂರ್ತಿ ವಚನಗಳು.)



## ೧ ಪೀಠಿಕಾ ಪ್ರಕರಣ.

---

### ಶಿವಸ್ತುತಿ.

? ನಂದಿಯನು ಏರಿದನ ಚಂದಿರನ ಸೂಡಿದನ ।
ಕಂದನಬೇಡಿ, ನಲಿದಾನು ನೆನವುತ್ತ ।
ಮುಂದೆ ಪೇಳುವೆನು ಸರ್ವಜ್ಞ ॥ ೧ ॥

### ಸರ್ವಜ್ಞನ ಜನನ.

* ಮುನ್ನ ಕೈಲಾಸದಲಿ[1] ಪನ್ನಗಧರನಾಳು ।
ಎನ್ನಯ ಪೆಸರು ಪುಷ್ಪದತ್ತನು ಎಂದು ।
ಮನ್ನಿಪರು ದಯದಿ ಸರ್ವಜ್ಞ ॥ ೨ ॥

* ಅಂದಿನಪುಷ್ಪದತ್ತ[2] ಬಂದ[3] ವರರುಚಿಯಾಗಿ[4] ।
ಮುಂದವ ಸಾಲೆ[5]ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥ ೩ ॥

* ಮಕ್ಕಳಿಲ್ಲವೆಂದು ಅಕ್ಕಮಲ್ಲಮ್ಮನು ।
ದುಕ್ಕವ ಬಸವರಸಗರುಪಲು ಕಾಸಿಯ ।
ಮುಕ್ಕಣ್ಣನೊಲಿದ ಸರ್ವಜ್ಞ ॥ ೪ ॥

---

1 G.S. ಪೂರ್ವದಲಾನು. 2 K ಪುಷ್ಪದತ್ತ; ಪುಷ್ಪದಂತ. (Kavyamale preface) 3 A. ಬಂದೆ.
3 & 4 G.S. ಬಂದೇವ ಋಷಿಯಾಗಿ = N. ಒಮ್ಮೆ ದೇವಸಭೆಯಲ್ಲಿ ಋಷಿಯಾಗಿದ್ದವನು. 5 ಸಲೆ?

* ಮಾಸೂರ ಬಸವರಸ ಕೂಸನೀಶನ ಕೇಳೆ।
ಕಾಶಿಯಾ ಅಭವನೊಳು ಪಡೆದ ವರವದು।
ಸೂಸಿತೆಂತೆನಲು ಸರ್ವಜ್ಞ ॥ ೫ ॥

* ಗಂಡಾಗಬೇಕೆಂದು ಪಿಂಡವನು ನುಂಗಲದು।
ರಂಡೆ[1]ಮಾಳವ್ವೆ[2]ಯೊಳು ಬರುವೆನೆಂದೆನಲು।
ಕಂಡದನು ಪೇಳ್ದೆ ಸರ್ವಜ್ಞ ॥ ೬ ॥

* ಗಡಿಗೆ ಮಡಿಕೆಯ ಕೊಂಡು ಅಡಿಗೆಯಾ ವೇಳೆಯೊಳು।
ಬಿಡದೆ ಮಳೆಮೋಡ ಪೊಡೆಯಲು ಈರ್ವರಿಗೆ।
ತಡೆಬಿಡಲಾಯ್ತು ಸರ್ವಜ್ಞ ॥ ೭ ॥

* ಅಂಬಲೂರೊಳೆಸೆವ ಕುಂಬಾರಸಾಲೆಯಲಿ।
ಇಂಬಿನಾ ಕಳೆಮಾಳಿಯೊಳು[3] ಬಸವರಸ-।
ನಿಂಬಿಟ್ಟನೆನ್ನ ಸರ್ವಜ್ಞ ॥ ೮ ॥

? ಬಿಂದುವನು ಬಿಟ್ಟುಹೋ। ದಂದು ಬಸಿರಾದಳವ-।
ಳೊಂದಾಗಿ ಹೊತ್ತ ದಶಮಾಸವುದರದಿ।
ನಿಂದಾನು ಬೆಳದೆ ಸರ್ವಜ್ಞ ॥ ೯ ॥

? ಹೆತ್ತವಳು ಮಾಳಿಯೆ। ನ್ನೊತ್ತಿ ತೆಗೆದವಳು ಜೆ-।
ನ್ನೊತ್ತಿ ಹಿಡಿದವಳು ಕಾಳಿಯು, ಮೊರದೊಳಗೆ।
ಬಿತ್ತರಿಸಿದವಳು[4]; ಸರ್ವಜ್ಞ ॥ ೧೦ ॥

---

1 G S. ಲೆಂಡ. 2 G.S. ಪಾಳ್ವೆ = N. ಮಾಳವ ಜಾತಿಯ ಹೆಂಗಸು. 3 G S. ಶಂಭುವು ಕೊಟ್ಟ ಶಿಶುವಾನು = ಶಿಶುವು + ಆನು 4 G.S. ಒತ್ತಲಿರಿಸಿದಳು.

## ಬಾಲ್ಯವೂ ಪ್ರೌಢತ್ವವೂ.

? ಬೆಳೆಯೆನ್ನದರಿದೆಂದು ಕಳೆಯಕಂಡವರೆಲ್ಲ ।
ಮೊಳೆಯಲ್ಲಿ ಸಸಿಯನರಿತು ತಾಂ ಮಾಳಿಯ ।
ತಿಳಿವವರು ಅರಿಗು ಸರ್ವಜ್ಞ ॥ ೧೧ ॥

* ಗಂಡು ತನ್ನದು ಎಂದು ಲಂಡೆ ಸುತನೆಂಬುವಳು ।
ಖಂಡಪರಶುವಿನ ವರ[1]ಪುತ್ರ ನಾನೆರೆ ।
ಕಂಡುದನೆ ನುಡಿದೆ ಸರ್ವಜ್ಞ ॥ ೧೨ ॥

* ಮಾಳನೂ ಮಾಳಿಯೂ ಕೂಳಿಂದ[2] ಹೆಮ್ಮೆಯಲಿ ।
ಕೇಳಲೆನ್ನಾರ[3]ಮುಗನೆಂದು, ನಾ ಶಿವನ ।
ಮೇಳದವನೆಂದೆ ಸರ್ವಜ್ಞ ॥ ೧೩ ॥

? ತಂದೆ ವಿಪ್ರನು ಅಲ್ಲ ತಾಯಿ ಮಾಳಿಯು ಅಲ್ಲ ।
ಚಂದ್ರಶೇಖರನ ವರದಿಂದ ಪುಟ್ಟಿದ ।
ಕಂದ ತಾನೆಂದ ಸರ್ವಜ್ಞ ॥ ೧೪ ॥

* ತಾ, ಎಂದೆನಲ್ಲದೇ ತಾಯಿ ನಾನೆಂದೆನೇ? ।
ತಾಯಿಯೆಂದಾನು ನುಡಿದೇನು ಪರಸ್ತ್ರೀಯ ।
ತಾಯಿಯೆಂದೆಂಬೆ! ಸರ್ವಜ್ಞ ॥ ೧೫ ॥

* ನೂಕಿದರು ಅವರಾಗ ಕು[4]ಹಕತನದೊಳು ಬೇಗ ।
ಲೋಕದೊಳಗೆಲ್ಲ ಕಂಡುದ ನುಡಿದು ತಾ ।
ನೇಕವಾಗಿಹನು ಸರ್ವಜ್ಞ ॥ ೧೬ ॥

---

1 G. S. ದೊರೆ. 2 A. ಕೂಳ್ತಿಂದ 3 G. S. ಕೇಳರಿನ್ನಾರ. 4 P. ಕಾಕು.

* ನಾರಿಬೆಳೆಯಲಿ ತನುವು ಆರುಬಣ್ಣವನುಡಿಸಿ |
ಮೂರುರುಚಿದೋರಿ ಮರಸಿ ತಾ[1] ತನ್ನನು |
ತೋರದೇ ಹೋದ ಸರ್ವಜ್ಞ || ೧೭ ||

ಋಷಿಮೂಲ ಕೇಳಬೇಡ.

* ಕುಲಗೆಟ್ಟವರು ಚಿಂತೆ[2] | ಯೊಳಗಿರ್ಪರಂತಲ್ಲ |
ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು[3] |
ಕುಲವಾದರಯ್ಯ[4] ಸರ್ವಜ್ಞ || ೧೮ ||

* ಹೊಲಸುಮಾಂಸದಹುತ್ತ ಎಲುವಿನಾ ಹಂದರವು |
ಹೊಲೆಬಲಿದ[5] ತನುವಿನೊಳಗಿರ್ದುಮದರೊಳು |
ಕುಲವನರಸುವರೆ? ಸರ್ವಜ್ಞ || ೧೯ ||

* ಎಲುವಿನೀಕಾಯಕ್ಕೆ ಸಲೆಚರ್ಮದಾಹೊದಿಕೆ |
ಮಲಮೂತ್ರ ಕ್ರಿಮಿಗಳೊಳಗಿರ್ದ ದೇಹಕೆ |
ಕುಲವಾವುದಯ್ಯ ಸರ್ವಜ್ಞ || ೨೦ ||

* ಮಾಸಿನೊಳು ಮುಸುಕಿರ್ದು ಮೂಸಿಬಹುದಾಸನವ |
ಹೇಸಿಕೆ ಮಲವು ಸೂಸುವದಕಂಡು ಕುಲ- |
ದಾಸೆಯನುಬಿಡರು! ಸರ್ವಜ್ಞ || ೨೧ ||

ಕೃತಜ್ಞತೆ.

* ಸರ್ವಜ್ಞನೆಂಬವನು ಗರ್ವದಿಂದಾದವನೆ?[6] |
ಸರ್ವರೊಳೊಂದೊಂದು ನುಡಿಗಲಿತು[7] ವಿದ್ಯದ[8] |
ಪರ್ವತವೆಆದ ಸರ್ವಜ್ಞ || ೨೨ ||

---

1 P. ಮರೆಬದ. 2 W.K, ಕುಲಗೆಟ್ಟವರಚಿಂತೆ G.S. ಕುಲಗೆಟ್ಟವರಚಿಂತೆ, ಒಳಗಿರ್ಪರಂತಲ್ಲ. 3 & 4 A.C. ಋಷಿಗಳಿಗೆ ಕುಲಗೋತ್ರವುಂಟೆ? 5 W. ಹೊಲಹದ 6 G.S. ಗರ್ವದಿಂದೈದಾನೆ. V. ಗರ್ವದಿಂದಾಡುವನೆ? 7 A. ಸರ್ವರೊಳು ಜ್ಞಾನವ ಸಾಧಿಸಿ ೮ C. ಕವಿತ್ವದ V. ಮಹಮೇರು

* ಹೇಳಲರಿಯೆನು ನಾನು  ಹೇಳಿನಲು ಹೇಳಿದೆನು ।
ಬಾಳಲೋಚನನ ಶರಣರ ಆಳಾಗಿ ।
ಹೇಳಿದೆನು ನೋಡ ಸರ್ವಜ್ಞ ॥ ೨೩ ॥

* ಎನ್ನ ಮನಸಿಗೆ ನೆನಹ  ಪನ್ನಗಧರ ಕೊಟ್ಟ ।
ಬಿನ್ನಣದಿಂದ ಸ್ತುತಿಗೈದು ಪೊಗಳುವೆ ।
ಚನ್ನ ಮೂರುತಿಯ ಸರ್ವಜ್ಞ ॥ ೨೪ ॥

---

## ೨ ಗುರುಪದ್ಧತಿ.

---

### ಗುರುವಿನ ವಿಷಯ.

#### ಗುರುಮಹಾತ್ಮ್ಯ.

* ಗುರುವಿನಾವಿಸ್ತರದ  ಪರಿಯನಾನೇನೆಂಬೆ ! ।
ಮೆರೆವ[1] ಬ್ರಂಹ್ಮಾಂಡದೊಳ ಹೊರಗವ ಬೆಳಗಿ ।
ಪರಿಪೂರ್ಣನಿಪ್ಪ ಸರ್ವಜ್ಞ ॥ ೨೫ ॥

#### ಗುರುವಿನ ಆಗತ್ಯ.

* ಹರತನ್ನೊಳಿರ್ದುಗುರು  ತೋರದೇ ತಿಳಿವುದೇ ।
ಮರದೊಳಗಗ್ನಿಯಿರುತಿರ್ದು ತನ್ನತಾ ।
ನರಿಯದೇಕೆಂದ[2]? ಸರ್ವಜ್ಞ ॥ ೨೬ ॥

* ಮೂರು ಕಣ್ಣೀಶ್ವರನ  ತೋರಿಕೊಡಬಲ್ಲ, ಗುರು ! ।
ಬೇರದರೊಳೊಂದು[3] ತೆರನಿಲ್ಲ; ಗುರುಕರುಣ ।
ತೋರುವದು ಹರನ! ಸರ್ವಜ್ಞ ॥ ೨೭ ॥

---

1 C, ಧರೆಯ, 2 ಅರಿಯದು ಕಂಡ್ಯಾ. 3 P, ಬೇರಿರುವದೊಂದು.

† ಜ್ಯೋತಿಯಿಂದಲಿನೇತ್ರ ರಾತ್ರಿಯೊಳು ಕಾಂಬಂತೆ।
ಸೂತ್ರದಿಂದಾತನರಿವಂತೆ ಶಿವನಗುರು[1]-।
ನಾಥ[2]ನಿಂದರಿಗು ಸರ್ವಜ್ಞ ॥ ೨೮ ॥

† ವಿದ್ಯಕಲಿತಡೆ ಇಲ್ಲ ಬುದ್ಧಿಕಲಿತಡೆ ಇಲ್ಲ।
ಉದ್ಯೋಗ ಮಾಡಿದಡೆ ಇಲ್ಲ ಗುರುಮುಖ-।
ವಿದ್ದಲ್ಲದಿಲ್ಲ ಸರ್ವಜ್ಞ ॥ ೨೯ ॥

* ಮುಂಡೆಬೋಳಾದೊಡಂ ದಂಡಕೋಲ್ವಿಡಿದೊಡಂ।
ಹೆಂಡತಿಯುಬಿಟ್ಟು ನಡೆದೊಡಂ ಗುರುಮುಖ।
ಕಂಡಲ್ಲದಿಲ್ಲ ಸರ್ವಜ್ಞ ॥ ೩೦ ॥

ಗುರುಲಕ್ಷಣ.

* ಊರಿಂಗೆದಾರಿಯನು ಯಾರು ತೋರಿದಡೇನು।
ಸಾರಾಯದಾನಿಜವ ತೋರುವ[3] ಗುರುವು।
ಯಾರಾದಡೇನು[4] ಸರ್ವಜ್ಞ ॥ ೩೧ ॥

* ಪರತತ್ವ ತನ್ನೊಳಗೆ ಎರವಿಲ್ಲ[5]ದಿರುತಿರ್ದು।
ಪರದೇಶಿಯಂತೆ ಇರುತಿಪ್ಪ[6]ಯೋಗಿಯ।
ಪರಮಗುರುವೆಂಬೆ ಸರ್ವಜ್ಞ ॥ ೩೨ ॥

* ಹರನಿಚ್ಛೆಯಿಲ್ಲದಲೆ ಹರಿದು ಹೋಗದು ಪಾಪ।
ಹರಭಕ್ತಿಯುಳ್ಳ ಗುರುವರನೋರ್ವನೇ।
ನರದೈವವೆಂಬೆ ಸರ್ವಜ್ಞ ॥ ೩೩ ॥

---

1 C. ಸೂತ್ರದಿಂಧಾತ್ರ D. ದಾತ. 1&2 A. ಗುರುದಾತ. 3 A. ಸ್ವಾರಸ್ಯಪದದ ನಿಜವನರುಪಿದ 4 G.S. ಆರಾಧ್ಯನಕ್ಕು. 5 V. ಪರುವಾಗಿ F. ಎರಡಿಲ್ಲ = ಜೀವೇಶ್ವರ ಭೇದವಿಲ್ಲದೆ. 6 G.S. ತಿರುಗುವ.

* ಬಂಧುಗಳು ಆದವರು ಬಂದುಂಡು[1] ಹೋಗುವರು ।
ಬಂಧನವಕಳೆಯಲರಿಯರು ಗುರುವಿಂದ ।
ಬಂಧುಗಳುಂಟೆ? ಸರ್ವಜ್ಞ ॥ ೩೪ ॥

† ಜೀಯ! ಸದ್ಗುರುನಾಥ! ಕಾಯಪುಸಿಯನೆ ತೋರಿ ।
ಮಾಯಪಾಶವ ಹರಿಸುತ್ತ ಶಿಷ್ಯಂಗೆ ।
ತಾಯಿಯುಂಟಾದ[2] ಸರ್ವಜ್ಞ ॥ ೩೫ ॥

* ತಂದೆಗೂ ಗುರುವಿಗೂ ಒಂದು ಅಂತರವುಂಟು ; ।
ತಂದೆ ತೋರುವ ಸದ್ಗುರುವ; ಗುರುರಾಯ[3], ।
ಬಂಧನವ ಕಳೆವ[4]; ಸರ್ವಜ್ಞ ॥ ೩೬ ॥

* ಗುರುವಿಗೂ ದೈವಕ್ಕೂ ಹಿರಿದು ಅಂತರವುಂಟು ।
ಗುರುತೋರ್ವ ದೈವದೆಡೆಗಳ ದೈವತಾ ।
ಗುರುವ ತೋರುವದೆ? ಸರ್ವಜ್ಞ ॥ ೩೭ ॥

### ನಿಷಿದ್ಧಗುರು.

* ಹುಸಿವವನ ಜೇಹಾರ, ಕಸಹತ್ತಿದಾರಂಬ, ।
ವಿಷಯವುಳ್ಳವನ ಗುರುತನವಿವು ಮೂರು ।
ಮಸಿವಣ್ಣವೆಂದ; ಸರ್ವಜ್ಞ ॥ ೩೮ ॥

### ಗುರುವೇ ಪರಮೇಶ್ವರ.

* ದರುಶನಗಳಾರರಿಂ ಪುರುಷರು ಮೂವರಿಂ ।
ಪರತತ್ವದಿರವು ಬೇರೆಂದು ತೋರಿದ ।
ಗುರುತಾನೆ ಹರನು ಸರ್ವಜ್ಞ ॥ ೩೯ ॥

---

1 D. ಮಿಂದುಂಡು. 2 G.S. ತಾಯಿತಂದ್ಯಾದೆ, 3&4 G.S.F. ತಂದೆ ಹೇಳುವನು ಬಹುಬುದ್ಧಿ ಗುರುವಿಂದ ಬಂಧನವು ಬಯಲು. B. ತಂದೆ ಹೇಳುವನು ಅನುಭವವ.

† ನಂಬುವದು ! ನಿನಗೇಕೆ? ಹಂಬಲವು ಪರಶಿವನ? ।
ನಂಬಿ ಗುರುದೈವವನೆಗಸ್ತ್ಯ ಮುನಿತಾ ।
ನಂಬುಧಿಯು ಸವಿದ ಸರ್ವಜ್ಞ ॥ ೪೦ ॥

* ಪರಮನೆಯ್ಮೊಗವುಳಿದು[1] ನೆರವಿಯನೊಲ್ಲದೇ[2] ।
ನರರೂಪಧರಿಸಿ ಗುರುವಾಗಿ ಎರೆವಗೆ[3] ।
ಸರಿಯುಹರಕಾಣೆ ಸರ್ವಜ್ಞ ॥ ೪೧ ॥

* ಪರಮನಾ ರೂಪದಲಿ ನೆರವೀಯಲರಿಯದೇ ।
ನರನಾಗಿ ಬಂದು ವರೆವೀವ ಗುರುವಿಗೆ ।
ಸರಿಯಾರಕಾಣೆ ಸರ್ವಜ್ಞ ॥ ೪೨ ॥

* ಸುರತರುವು ಮರನಲ್ಲ ಸುರಭಿಯೊಂದಾವಲ್ಲ ।
ಪರುಷ ಪಾಷಾಣದೊಳಗಲ್ಲ ಗುರುರಾಯ ।
ನರರೊಳಗಲ್ಲ ಸರ್ವಜ್ಞ ॥ ೪೩ ॥

ಗುರುನಿಂದೆ ತರವಲ್ಲ.

* ಗುರುವ ನರನೆಂದವಗೆ ಹರನ ಶಿಲೆಯೆಂದವಗೆ ।
ಕರಣ[4]ಪ್ರಸಾದವೆಂಜಲೆಂದವನಿಗೆ ।
ನರಕ ತಪ್ಪುವದೆ? ಸರ್ವಜ್ಞ ॥ ೪೪ ॥

* ಹಿರಿಯನಾ[5]ನೆನಬೇಡ ಗುರುವನಿಂದಿಸಬೇಡ[6] ।
ಬರೆವರ ಕೂಡ ಹಗೆಬೇಡ ಬಂಗಾರ ।
ದೆರವು ಬೇಡೆಂದ ಸರ್ವಜ್ಞ ॥ ೪೫ ॥

---

1 N. ಹರಗೆ ಕೈಮುಗಿದಿರ್ದು. G.S. ಪರಮಗೈಮೊಗವಿರ್ದು 2 G.S. ನೆರವೀಯಲೊಲ್ಲನು. 3 A. ಬೋಧಿಪಗೆ. D. ಬರುವಗೆ. 4 P. ಕರುಣ. 5 G.S. ಹಿರಿಯೂರ. 6 G.S. ಪರರನ ಯುಲುಬೇಡ.

† ಒಂದೊರೊಳಿರಲು ಗುರು[1]। ವಂದನೆಯ ಮಾಡದೇ।
ಸಂದಿಸಿ ಕೊಳನುಣತಿಪ್ಪವನ ಬದುಕು।
ಹಂದಿಯುಂತೆಂದ ಸರ್ವಜ್ಞ || ೪೬ ||

ಗುರುವಿಗೆ ಭಯಪಡು.

† ಉುರಿ, ಯುುದಕ ಮಾರುತವು, ಉರಗ, ಹರಿ, ನಾಗವೂ।
ಗುರುವಾಜ್ಞೆಗಂಜಿ ನಿಲುವವು; ಇದನು ನರ-।
ರರಿಯದೇ ಕೆಡಗು! ಸರ್ವಜ್ಞ || ೪೭ ||

† ಕೊರಡು ಸುರತರುವಾಯ್ತು ಬರಡು ನೆರೆಹಯಿನಾಯ್ತು।
ಮರುಳು ತಂಡಗಳು ಪ್ರಣವನುಚ್ಚರಿಸುವ।
ಗುರುವಾಜ್ಞೆಗಂಜಿ! ಸರ್ವಜ್ಞ || ೪೮ ||

ಗುರುಸೇವೆ ಮಾಡು.

† ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ।
ಮತ್ತೆ ಪಾದದ ಕೆರವಾಗಿ ಗುರುವಿನ।
ಹತ್ತಿಲಿರು ಎಂದ ಸರ್ವಜ್ಞ || ೪೯ ||

## ಗುರುಬೋಧ ವಿಷಯ.

ಗುರುಬೋಧೆ ಅವಶ್ಯ.

† ಗುರುವಚನವುಪದೇಶ ಗುರುವಚನ ಪರಭಕ್ತಿ।
ಗುರುವಚನ ಮೋಕ್ಷಪದವದು ಗುರುವಚನ।
ಪರಮಾರ್ಥವಯ್ಯ ಸರ್ವಜ್ಞ || ೫೦ ||

* ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ।
ಒಳ್ಳೆಯ ಗುರುವಿನುಪದೇಶವಿಲ್ಲದಿರೆ।
ಎಲ್ಲಿಯುದು ಮುಕ್ತಿ? ಸರ್ವಜ್ಞ || ೫೧ ||

1 C ಒಂದರಲಿ = ಪರಮಾತ್ಮನಲ್ಲಿ.

* ನರಕ ಪಾಪಿಷ್ಟರಿಗೆ ಸುರಲೋಕನಿಷ್ಠರಿಗೆ ।
ಗುರುಬೋಧೆಯಿಂದ[1] ಜಗಮುಳಿದುದಲ್ಲದೆ ।
ಉರಿದು ಹೋಗಿಹುದು ಸರ್ವಜ್ಞ ॥ ೫೨ ॥

ಯೋಗ್ಯಗುರುಬೋಧ ಲಕ್ಷಣ.

† ಬೆಳ್ಳುಳ್ಳಿ ಪೊಡೆದಿಹರೆ ಹೋಳಪ್ಪತೆರನಂತೆ ।
ಒಳ್ಳೆಯ ಗುರುವಿನುಪದೇಶದಿಂಪಾಪ ।
ಹೊಳ್ಳಿಬೀಳುವದು ! ಸರ್ವಜ್ಞ ॥ ೫೩ ॥

* ಮೊಸರು ಕಡೆಯಲು ಬೆಣ್ಣೆ । ಯೊಸೆದು ತೋರುವ ತೆರದಿ ।
ಹಸನುಳ್ಳ ಗುರುವಿನುಪದೇಶದಿಂ ಮುಕ್ತಿ ।
ವಶವಾಗದಿಹುದೆ ? ಸರ್ವಜ್ಞ ॥ ೫೪ ॥

* ತುಪ್ಪವಾದಾ ಬಳಿಕ ಹೆಪ್ಪನೆರೆದವರುಂಟೆ ? ।
ನಿಷ್ಪನ್ನ[2]ನಾದ ಗುರೂಪದೇಶದಿಂ ।
ತಪ್ಪದದು ಮುಕ್ತಿ ಸರ್ವಜ್ಞ ॥ ೫೫ ॥

* ಮರಹುಳ್ಳ[3] ಮನುಜರಿಗೆ ತೆರನಾವುದರಿವುದಕೆ ? ।
ಕರಿಗೊಂಡ ಬೆಳಲಹಣ್ಣಂತೆ,[4] ಗುರುಬೋಧೆ ।
ನೆರೆಗೊಳ್ಳ[5]ಬೇಕು ! ಸರ್ವಜ್ಞ ॥ ೫೬ ॥

* ಸಾಣೆಕಲ್ಲೊಳು ಗಂಧ ಮಾಣದೇ ಎಸೆವಂತೆ[6] ।
ಜಾಣ ಸದ್ಗುರುವಿನುಪದೇಶದಿಂ ಮುಕ್ತಿ ।
ಕಾಣಿಸುತ್ತಿಹುದು ಸರ್ವಜ್ಞ ॥ ೫೭ ॥

---

1 V. ಗುರುಕರುಣದೊಳಗೆ. F. ಗುರುಶರಣರೊಳಗೆ. 2 G.S. ನಿಷ್ಪೃಹ, A. ನಿಷ್ಪತ್ತಿ ನಿಷ್ಪಕ್ಷಿ? 3 P. ಮರನುದ್ದ D. ಮಾರುದ್ದ. 4 A.C. ಕರಿಗೊಂಡ ಭ್ರಮೆಯು ಪರಿಹಾರ. 5 A.C. ಹಿರಿದಾಗ. 6 C. ಸವೆದನ್ತೆ.

* ಬೊಮ್ಮವೆಂಬುದು ತಾನು ಒಮ್ಮಾರು[1]ದೂರವೇ? ।
ಒಮ್ಮೆ ಸದ್ಗುರುವಿನುಪದೇಶವಪ್ಪಡೆ ।
ಗಮ್ಮನೇ ಮುಕ್ತಿ ಸರ್ವಜ್ಞ ॥ ೫೮ ॥

* ಹೇಳಿದ್ದೇ ಹೇಳುವರು, ಕೇಳಿದ್ದೇ ಕೇಳುವರು, ।
ಕೇಳಿದ್ದೆ ಕೇಳಿ ಸುಖಿಸುವರು; ಗುರುಗಳ ।
ಹೇಳಿಕೆಯೆ ಬೇರೆ! ಸರ್ವಜ್ಞ ॥ ೫೯ ॥

### ಯೋಗ್ಯಗುರು.

† ಎಂಟು ಕಂಟಕರಿಂಗೆ ನೆಂಟರುಗಳಯ್ವರಿಗೆ ।
ಗಂಟಲಗಾಳನಾಗಿಪ್ಪಗುರು ನೀಲ- ।
ಕಂಠನಾಗಿಕ್ಕು ಸರ್ವಜ್ಞ ॥ ೬೦ ॥

† ಮೂರರಿಂದಲಿ ಹೊರಗೆ ತೋರಿರುವದನು ಗುರುವು ।
ಆರರಿಂದೊಳಗೆ ತೋರಿದಡೆ ಶಿಷ್ಯತಾ ।
ನಾರಡಿಗೊಂಬ ಸರ್ವಜ್ಞ ॥ ೬೧ ॥

### ಅಯೋಗ್ಯಗುರು.

* ಒಂದರೊಳಗೆಲ್ಲವೂ ಸಂದಿಸಿರುವದನುಗುರು ।
ಚಂದದಿಂ[2] ತೋರಿಕೊಡದಿರೆ ಶಿಷ್ಯನವ ।
ಕೊಂದನೆಂದರಿಗು ಸರ್ವಜ್ಞ ॥ ೬೨ ॥

* ಹಂದಿಯಾ ಚಂದನದ ಗಂಧವನು ಅರಿವುದೇ ।
ಒಂದನು ತಿಳಿಯಲರಿಯದಾ ಗುರುವಿಂಗೆ ।
ನಿಂದೆಯೇ ಬಹುದು ॥ ೬೩ ॥

---

1 A. ಏಸ್ಮಹಾ V. ಇಮ್ಮರದ ನೆರಳಂತೆ 2 D. ಹೊಂದ್ಸಿಡಿದು.

* ಗುರುವೆ ನಿಮ್ಮನು ನೆನೆದು ಉರಿವಕಿಚ್ಚನು ಹೊಗಲು ।
ಉರಿತಗ್ಗಿ ಉದಕ ಕಂಡಂತೆ[1] ನಿಮ್ಮಯ ।
ಕರುಣವುಳ್ಳರಿಗೆ ಸರ್ವಜ್ಞ ॥ ೭೫ ॥

† ದುರ್ಗಿಮಾರಿಯು ಚಂಡಿ। ಯುಗ್ಗದಾ[2] ಶಕ್ತಿಗಳು ।
ಸದ್ಗುಣ ಸತ್ಯ ಮುಸುಕಿಹರ ಮುಟ್ಟವಿದು ।
ಸದ್ಗುರುವಿನಾಜ್ಞೆ ಸರ್ವಜ್ಞ ॥ ೭೬ ॥

* ವಿಷಯಕ್ಕೆ ಕುದಿಯದಿರು ಅಶನಕ್ಕೆ ಹರಿಯದಿರು ।
ಅಸಮಾಕ್ಷನಡಿಯ ಬಿಡದಿರು ಗುರುಕರುಣ ।
ವಶವರ್ತಿಯಹುದು[3] ಸರ್ವಜ್ಞ ॥ ೭೭ ॥

ಭಕ್ತಿಹೀನರಿಗೆ ಹಾನಿ.

* ಹಸಿಯ ಸಮಿಧೆಯ ತಂದು ಹೊಸೆದರುಂಟೇ[4] ಕಿಚ್ಚು ।
ವಿಷಯಂಗಳುಳ್ಳ ಮನುಜಗೆ ಗುರುಕರುಣ ।
ವಶವರ್ತಿಯಹುದೆ? ಸರ್ವಜ್ಞ ॥ ೭೮ ॥

† ಕುಟ್ಟಿಕೊಂಡರೆ ಏನು ಅಟ್ಟಿಬೂದಿಡಲೇನು ।
ಬೆಟ್ಟದಲಿದ್ದು ಫಲವೇನು ಗುರುತೋರ್ದ ।
ಬಟ್ಟೆ ತಪ್ಪಿದರೆ ಸರ್ವಜ್ಞ ॥ ೭೯ ॥

## ಗುರುವಿಂದ ಮುಕ್ತಿ.

ಗುರುದರ್ಶನವೇ ಮುಕ್ತಿ.

* ಪರುಷಲೋಹವ ಸೋಂಕಿ ವರುಷ[5]ವಿರಬಲ್ಲದೇ ।
ಪರುಷವೆಂತಂತೆ? ಶಿಷ್ಯಂಗೆ ಗುರುವಿನ ।
ದರುಶನವೇ ಪರುಷ! ಸರ್ವಜ್ಞ ॥ ೮೦ ॥

---

1 G.S. ಕೊಂಡಂತೆ. 2 P. ಹೆಗ್ಗಳದ. 3 C. ವಶರುತ್ತಲಿಹುದು. 4 G S. ಅಶನಮಾಡಿದರುಂಟೆ?
5 P. ಪರಸೆ.

ಗುರುಪಾದವೇ ಮುಕ್ತಿ.

* ತಾಪದಲಿ ಸಂಸಾರ ಕೂಪದಲಿ ಬಿದ್ದವರು[1] ।
ಆಪತ್ತನಳಿದು ಪೊರಮಡಲು, ಗುರುಪಾದ[2] ।
ಸೋಪಾನವಯ್ಯ! ಸರ್ವಜ್ಞ ॥ ೮೧ ॥

* ಮನವು ಮುಟ್ಟಲು ಗಂಡ ತನುವು ಮುಟ್ಟಲು ಪಾಪ ।
ಮನವೇರಕವಾಗಿ[3] ಗುರುಚರಣಸೋಕಿದರೆ ।
ತನುಶುದ್ಧವಯ್ಯ ಸರ್ವಜ್ಞ ॥ ೮೨ ॥

* ಗುರುಪಾದಕೆರಗಿದರೆ ಶಿರಸುತಾಮಣಿಯಕ್ಕು ।
ಪರಿಣಾಮವಕ್ಕು ಪದವಕ್ಕು ಕೈಲಾಸ ।
ನೆರೆಮನೆಯಕ್ಕು ಸರ್ವಜ್ಞ ॥ ೮೩ ॥

* ಗುರುಪಾದ ಸೇವೆ ತಾ ದೊರಕೊಂಡಿತಾದಡೇ ।
ಹಿರಿದಪ್ಪಪಾಪ ಪರಿವುದು; ಕರ್ಪೂರದ ।
ಗಿರಿಯುಬೆಂದಂತೆ! ಸರ್ವಜ್ಞ ॥ ೮೪ ॥

† ಬಾಗಿ ಗುರುಚರಣವನು ಬೇಗದಿಂದಲಿ ಭಜಿಸಿ ।
ಆಗಮಾತೀತನೊಳು ಭವವದಾಟಿದನು ।
ಭೋಗದೊಳಿಹನೆ? ಸರ್ವಜ್ಞ ॥ ೮೫ ॥

ಗುರುವಿಂದ ಪಾಪ ಪರಿಹಾರ.

* ಬೆಟ್ಟ ಕರ್ಪೂರವುರಿದು ಬೊಟ್ಟಿಡಲು ಬೂದಿಲ್ಲ ।
ನೆಟ್ಟನೆ ಗುರುವಿಗೆರಗಿದರೆ[4] ಕರ್ಮತಾ[5] ।
ಸುಟ್ಟು ಹೋಗುವದು[6] ಸರ್ವಜ್ಞ ॥ ೮೬ ॥

---

1&2 W.K. ಬಿದ್ದವರ ಕೂಪದಿಂ ಪಾರುಮಾಡುವ ಗುರುಕರುಣ P. ಕೂಪವನೊಡೆದು, 3 G.S. ಮನವೇಗದಿಂದ A. ಮನವೇಕದಿಂದ. 4 A. ಗುರುವನರಿದಂಗೆ, 5&6 A,C, ಕರ್ಮಗಳು ಮುಟ್ಟ ಲಂಜುವವು. B, ಬಿಟ್ಟುಬಯಲಹುದು.

* ಗುರುರಾಯನುಪದೇಶ ದೊರಕೊಂಡಿತಾದಡೇ ।
ಪರಿವುದು ಪಾಪವೆಂತೆನಲು? ವಜ್ರದಿಂ ।
ಗಿರಿಯು ಹೊಯಿದಂತೆ! ಸರ್ವಜ್ಞ || ೮೭ ||

† ಹಾರಿದಾ ಬಲದಿಂದ ಜೇರುಕಿತ್ತಿತು ಗಿರಿಯು ।
ತಾರಕ ಗುರುವಿನುಪದೇಶದಿಂ ಕರ್ಮ ।
ಹಾರದಿರುತಿಹುದೆ? ಸರ್ವಜ್ಞ || ೮೮ ||

† ಬೆಳಗ ನುಂಗಿದ ಗುರುವಿ। ನೊಳಗ ನುಂಗಿದ ಶಿಷ್ಯ ।
ಬೆಳಗಿನಿಂದೊಳಗನರಿದೊಡೆ ಕರ್ಮದ[1] ।
ಕಳೆಯುಗಳೆಯುವನು[2] ಸರ್ವಜ್ಞ || ೮೯ ||

ಗುರುವಿನಿಂದಲೆ ಮೋಕ್ಷ.

* ಉರಿಯುಂಡ ಕರ್ಪುರವು ಸರಕುಮಾರುವದುಂಟೆ ।
ಗುರುಕರುಣದಿಂದ ನಿಜದೊಳಗೆ ಬೆರೆದಾತ ।
ನರಕ[3] ಕೂಡುವನೆ? ಸರ್ವಜ್ಞ || ೯೦ ||

* ಗುರುವಿಂದ ಬಂಧುಗಳು ಗುರುವಿಂದ ದೈವಗಳು ।
ಗುರುವಿಂದಲಿಹುದು ಪುಣ್ಯವು, ಜಗಕೆಲ್ಲ ।
ಗುರುವಿಂದ ಮುಕ್ತಿ; ಸರ್ವಜ್ಞ ೯೧ ||

---

1&2 A, ಪರಜ್ಞೊಮ್ಮದುಳುಮೆತಾನಕ್ಕು. 3 F, ನರರ.

# ೨ ಲಿಂಗಪದ್ಧತಿ.

---

### ಲಿಂಗಮಹಾತ್ಮ್ಯೆ.

* ಕಲ್ಲಿನೊಳು ಕಂಭದೊಳು[1] ಬಳ್ಳದೊಳು ಹಿಕ್ಕೆ[2]ಯೊಳು ।
ಎಲ್ಲಿ ಭಾವಿಸಿದಡಲ್ಲಿರ್ಪ ಭರಿತನ ।
ಬಲ್ಲವೇ ನಿಗಮ? ಸರ್ವಜ್ಞ ॥ ೯೧ ॥

* ಲಿಂಗಕ್ಕೆ ಕಡೆಯೆಲ್ಲಿ[3] ಲಿಂಗಿಲ್ಲದೆಡೆಯಲ್ಲಿ ।
ಲಿಂಗದಿ ಜಗವು ಅಡಗಿಹುದು ಲಿಂಗವನು ।
ಹಿಂಗಿದವರುಂಟೆ[4]? ಸರ್ವಜ್ಞ ॥ ೯೨ ॥

† ಲಿಂಗವುಳ್ಳನೆ ಪುರುಷ ಲಿಂಗವುಳ್ಳನೆ ಸರಸ ।
ಲಿಂಗವುಳ್ಳವನ ಭೋಗದಿ ಜಗವು, ಶುಭ- ।
ಲಿಂಗದಿಂ ಜನನ; ಸರ್ವಜ್ಞ ॥ ೯೩ ॥

* ಆಕಾರ[5] ತಾನಲ್ಲ ಓಕಾರ[6] ಮುಖವಲ್ಲ ।
ಆಕಾಶ ತಳವ ಮೀರಿಹುದು ಹರಿಯಜ ।
ರ್ತಾ ಕಾಣರಯ್ಯ ಸರ್ವಜ್ಞ ॥ ೯೪ ॥

### ಷಟ್ಸ್ಥಲ ವಿಷಯ

#### ಭಕ್ತಸ್ಥಲ.

* ಶಿವಪೂಜೆ ಮಾಡಿದಡೆ ಶಿವನ ಕೊಂಡಾಡಿದಡೆ ।
ಶಿವನೊಳು ನೆನಹ ನಿಲಿಸಿದಡೆ ಶಿವಲೋಕ ।
ವವಗೆ ಕಾಣಯ್ಯ ಸರ್ವಜ್ಞ ॥ ೯೫ ॥

---

1 A. ಕುಚದಲ್ಲಿ. 2 A. ದಿಕ್ಕೆ 3 C. ಲಿಂಗದಾಗರುಡಿಯುಲಿ. 4 C. ಹಿಂಗೆ, ಪರವುಂಟು. 5 A.C. ಓಂಕಾರ. 6 A.C. ತಾನಲ್ಲ ಹಂಕಾರ.

* ನಿಷ್ಠೆಯಿದ್ದಡೆ ಶಿವನು ಗಟ್ಟಿ[1]ಗೊಂಡೊಳಗಿರ್ಪ ।
ನಿಷ್ಠೆಯಿಲ್ಲದನು ಭಜಿಸಲು ಶಿವನವನ[2] ।
ಬಿಟ್ಟು[3] ಬಯಲಪ್ಪ ಸರ್ವಜ್ಞ ॥ ೯೭ ॥

† ಇಟ್ಟ ವಿಭೂತಿತಾ ಪಟ್ಟಗಟ್ಟಿರುತಿಕ್ಕು ।
ಇಟ್ಟ ವಿಭೂತಿಯರಿಯದಡೆ ಸೀಳಿದಾ ।
ಬಟ್ಟೆಯಂತಕ್ಕು ಸರ್ವಜ್ಞ ॥ ೯೮ ॥

* ರುದ್ರಾಕ್ಷಿ ಭಸಿತವನು ಹೊದ್ದಿರಲು ದೇಹದೊ ।
ಳಿದ್ದ ಪಾಪಗಳು ಬಯಲಾಗಿ ಶಿವ ತಾ ।
ನಿದ್ದಲ್ಲಿ ಬರುವ! ಸರ್ವಜ್ಞ ॥ ೯೯ ॥

### ಮಹೇಶ್ವರ ಸ್ಥಲ.

* ಲಿಂಗದಲಿ ಮನವಾಗಿ[4] ಲಿಂಗದಲಿ ನೆನಹಾಗಿ[5] ।
ಲಿಂಗದಿ ನೋಟ[6] ನುಡಿಕೂಟವಾದವನು ।
ಲಿಂಗವೇ ಅಕ್ಕು ಸರ್ವಜ್ಞ ॥ ೧೦೦ ॥

† ದೇಹಿಯೆನಬೇಡ ನಿ । ರ್ದೇಹಿ ತಾ ಜಗಲಿಂಗ[7] ।
ದೇಹಗುಣದಾಸೆಯನಳಿದೊಡೆ ಆತ ನಿ- ।
ರ್ದೇಹಿ ಕಾಣಯ್ಯ! ಸರ್ವಜ್ಞ ॥ ೧೦೧ ॥

† ಲಿಂಗವೇ ದರುಶನವು ಲಿಂಗವೇ ಸ್ಪರುಶನವು ।
ಲಿಂಗಸಹ ಸರ್ವಸುಖ ಭೋಗವಾದವನು ।
ಲಿಂಗ ಕಾಣಯ್ಯ! ಸರ್ವಜ್ಞ ॥ ೧೦೨ ॥

---

1. G.S. ಕಟ್ಟಿ. 2&3 A. ಶಿವನವಗೆ ಬಟ್ಟ ಬಯಲಪ್ಪ 4&5 G,S. ನಡೆಯಾಗಿ; ನುಡಿಯಾಗಿ. 6 G.S. ಬೇಟ. 7 A. ಜಂಗವ ಲಿಂಗ.

* ಅಂಗದಿಚ್ಛೆಗೆ[1] ಹರಿದು ಭಂಗಗೊಳದಿರು ಮನುಜ ।
ಲಿಂಗದೊಳು ನೆನಹನಿರಿಸಿ ಸತ್ಯದಿ ನಿಲೆ ।
ಲಿಂಗನೀನಪ್ಪೆ! ಸರ್ವಜ್ಞ ॥ ೧೦೩ ॥

* ವಂಶವನು ಪುಗನೆಂದಿ ಗಾಂಶಿಸನು ಪರಧನವ ।
ಸಂಶಯವಳಿದ ನಿಜಸುಖಿಮಹೇಶ್ವರನು ।
ಹಿಂಸೆಗೊಡಬಡನು ಸರ್ವಜ್ಞ ॥ ೧೦೪ ॥

ಪ್ರಸಾದ ಸ್ಥಲ.

* ಅರ್ಪಿತದ ಭೇದವನು ತಪ್ಪದೇ ತಿಳಿದಾತ ।
ಸರ್ಪಭೂಷಣನ ಸಮನೆಹನು ನಿಜಸುಖದೊ- ।
ಳೊಪ್ಪುತ್ತಲಿಹನು ಸರ್ವಜ್ಞ ॥ ೧೦೫ ॥

* ಈಶ ಪ್ರಸಾದವನು ಸೂಸದಲೆ ತಾಕೊಳ್ಳೆ ।
ಶಾಶ್ವತವಾದ ಪದವಕ್ಕು ಜಗಕೆಲ್ಲ ।
ಈಶ್ವರನಕ್ಕು ಸರ್ವಜ್ಞ ॥ ೧೦೬ ॥

* ಭೋಗಿಸುವ ವಸ್ತುಗಳ ಭೋಗಸುತ ಶಿವಗಿತ್ತು ।
ರಾಗದಿಂ ಸತ್ಯವೆರಸಿಹ ಪಸಾದಿಯು ।
ಶ್ರೀಗುರುವೆಂಬೆ ಸರ್ವಜ್ಞ ॥ ೧೦೭ ॥

* ಲಿಂಗವಿರಹಿತನಾಗಿ ನುಂಗದಿರು ಏನುವನು ।
ತಿಂಗಳಲಿ ಸತ್ತ ಕೊಳೆನಾಯ ಮಾಂಸವ ।
ನುಂಗಿದಂತಕ್ಕು! ಸರ್ವಜ್ಞ ॥ ೧೦೮ ॥

* ಅಂಜದಲೆ ಕೊಂಡಿಹರೆ ನಂಜು ಅಮೃತವಕ್ಕು ।
ಅಂಜಿ ಅಳಕುತ ಕೊಂಡಿಹರೆ ಅಮೃತವು ।
ನಂಜಿನಂತಕ್ಕು ಸರ್ವಜ್ಞ ॥ ೧೦೯ ॥

1 G.S. ಕಂಗಳಿಚ್ಛೆಗೆ.

† ಲಿಂಗಕ್ಕೆ ತೋರದೇ ನುಂಗಿದಡೆ ಏನಹುದು ।
ಭಂಗ ಬಂಧನವು ಘನವಹುದಾಲಿಂಗ ।
ಹಿಂಗಿಹುದು ನೋಡ! ಸರ್ವಜ್ಞ ॥ ೧೧೦ ॥

ಪ್ರಾಣಲಿಂಗಸ್ಥಲ.

† ಅಣಿಮಾದಿಯೋಳಿರಲು ಹೂಣಿ ಲಿಂಗದಿ ಮನವ ।
ಕೇಣವಿಡಿದಿಹನು ವಿರತಿಯಲಿ[1] ದೇಹವಿಹ ।
ಪ್ರಾಣಲಿಂಗಿತಾ ಸರ್ವಜ್ಞ ॥ ೧೧೧ ॥

ಶರಣಸ್ಥಲ.

* ಸಿರಿಯು ಬಂದರೆ ಲೇಸು ತಿರದಜನ್ಮನ ಲೇಸು ।
ಮರಣವಿಲ್ಲದಾ ಮಗಲೇಸು ಲಿಂಗಕೆ ।
ಶರಣವೇ ಲೇಸು ಸರ್ವಜ್ಞ ॥ ೧೧೨ ॥

* ಸೋಕಿದಾ ಸುಖಂಗಳೆ। ನೇಕವಾ ಶಿವಗಿತ್ತು ।
ತಾಕಿಂಕರತೆಯ ಕೈಕೊಂಡ ಮನುಜನೆ[2] ।
ಲೋಕಕ್ಕೆ ಶರಣ ಸರ್ವಜ್ಞ ॥ ೧೧೩ ॥

* ಮಲಯಜದ ಮರದೊಳಗೆ ಸಲೆಗಂಧವಿಪ್ಪಂತೆ ।
ಸುಲಲಿತವಾದಾ ಶರಣರ ಹೃದಯದಿ ।
ನೆಲಸಿಹನು ಶಿವನು ಸರ್ವಜ್ಞ ॥ ೧೧೪ ॥

* ಕಿಚ್ಚಿನೊಳು ಸುಘೃತವು[3] ಪಚ್ಚತಳ[4] ಕರ್ಪುರವು ।
ಅಚ್ಚಳಿದು ನಿಜದಿ ನಿಂದಂತೆ, ಭೇದವನು, ।
ಮುಚ್ಚುವನೆ ಶರಣ! ಸರ್ವಜ್ಞ ॥ ೧೧೫ ॥

1 B. ನಿರತಿಯುನು 2 ಅವಂಚಕನೆ C. ವಂಚನೆ 3 &4 G.S. ಕಿಚ್ಚಿನ ಸಂಗಾತ ವೆಚ್ಚತ್ತ.

* ಕಿಚ್ಚ ಸುರಿಗೋಲಲ್ಲಿ[1] ಬಚ್ಚಿಟ್ಟಂತಿರಬೇಕು ।
ಅಚ್ಚಳಿದು ಐಕ್ಯದೊಳಗಿಪ್ಪ ಶರಣಂಗೆ ।
ನಿಚ್ಚಟದ ನಿಲವು ಸರ್ವಜ್ಞ ॥ ೧೧೬ ॥

* ಗಂಗೆಯಾ ತಡಿಲೇಸು ಮಂಗಳನ ಬಲಲೇಸು ।
ಜಂಗಮ ಭಕ್ತರ ನಡೆಲೇಸು ಶರಣರ ।
ಸಂಗವೇಲೇಸು ಸರ್ವಜ್ಞ ॥ ೧೧೭ ॥

ಐಕ್ಯಸ್ಥಲ.

* ಆಕಾಶಪಥವಿಾರಿ[2] । ದೇಕವಸ್ತುವ ತಿಳಿದು ।
ಸಾಕಾರವಳಿದು ನಿಜವಾದ ಐಕ್ಯಂಗೆ ।
ಏಕತ್ರ ನೋಡ! ಸರ್ವಜ್ಞ ॥ ೧೧೮ ॥

* ನಾನು ನೀನುಗಳಳಿದು ತಾನು ಲಿಂಗದಿ ಉಳಿದು ।
ನಾನಾ ಭ್ರಮೆಗಳತಿಗಳೆದು ನಿಂದಾತ ।
ತಾನೈಕ್ಯ ನೋಡ ಸರ್ವಜ್ಞ ॥ ೧೧೯ ॥

* ಹೀನಂಗೆ ಗತಿಯಿಲ್ಲ[3] ದೀನಗನುಚಿತವಿಲ್ಲ ।
ಏನು ಇಲ್ಲದಗೆ ಭಯವಿಲ್ಲ ಐಕ್ಯಂಗೆ ।
ತಾನೆಂಬುದಿಲ್ಲ ಸರ್ವಜ್ಞ ॥ ೧೨೦ ॥

* ಆರಾರು ಒಳಗೆನಿಲ । ಲಾರು ಸ್ಥಲವು ಬೇಕು ।
ಆರು ಮೊಗವಾರು ಕರವರಿದ ಉತ್ತಮನು ।
ಸೇರುವನು[4] ಶಿವನ! ಸರ್ವಜ್ಞ ॥ ೧೨೧ ॥

---

1 G.S. ಕಿಚ್ಚಿನೊಳಗಣ ಕೋಲು. A. ಕಿಚ್ಚಿನೊಳು...ಅರಿಗೋಲು, 2. ವರಿದು A. ಆಕಾಶದೊಳಗಿಪ್ಪಏಕ 3 ಜ್ಞಾನಿಗೆ ಮತವಿಲ್ಲ P. ಮದವಿಲ್ಲ 4. C. ತೋರುವನು,

## ೪ ಇಷ್ಟಲಿಂಗ ಪದ್ಧತಿ.

### ಲಿಂಗವಿಚಾರ.

* ಆಗಿಲ್ಲ ಹೋಗಿಲ್ಲ[1] ಮೇಗಿಲ್ಲ ಕೆಳಗಿಲ್ಲ ।
ತಾಗಿಲ್ಲ ತಪ್ಪು ತಡೆಯಿಲ್ಲ ಲಿಂಗಕೆ ।
ದೇಗುಲವೆ ಇಲ್ಲ ಸರ್ವಜ್ಞ ॥ ೧೨೨ ॥

### ಶಿವಪೂಜಾ ವಿಷಯ.

* ಅಲಸದಾ ಶಿವಪೂಜೆ ಹುಲಸುಂಟು ಕೇಳಯ್ಯ[2] ।
ಬಲುಕವಲೊಡೆದು ಬೇರಿಂದ ತುದಿತನಕ ।
ಹಲಸು ಕಾತಂತೆ ಸರ್ವಜ್ಞ ॥ ೧೨೩ ॥

* ಉಂಡುಂಡು ತಿರುಗುತಿಹ ಭಂಡರಾ ಕೆಳೆಬೇಡ ।
ಕಂಡು ಲಿಂಗವನು ಪೂಜಿಸದವಗೆ ಯಮ-।
ದಂಡ ಕಾಣಯ್ಯ! ಸರ್ವಜ್ಞ ॥ ೧೨೪ ॥

### ಅಂತರಂಗ ಶಿವಾರ್ಚನೆ.

#### ಮಾನಸ ಪೂಜೆಯೇ ಶ್ರೇಷ್ಠ.

* ಸೃಷ್ಟಿಯೆಲ್ಲವನು ಮನ ಮುಟ್ಟುವದು ನಿಮಿಷದಲಿ ।
ನೆಟ್ಟು ಶಿವ[3] ಜೀವವಿಷ್ಟ ಮೂರೊಂದೆಂದು ।
ದೃಷ್ಟಿಪನೆ ಶ್ರೇಷ್ಠ ಸರ್ವಜ್ಞ ॥ ೧೨೫ ॥

* ಕಾಮುಕಮಲವೆ ಸಜ್ಜೆ ಜೀವರತುನವೆ ಲಿಂಗ ।
ಭಾವಪುಷ್ಪದಿ ಶಿವಪೂಜೆ ಮಾಡುವನ ।
ದೇವನೆಂತೆಂಬೆ ಸರ್ವಜ್ಞ ॥ ೧೨೬ ॥

* ಆತುಮದ ಲಿಂಗವನು ಪ್ರೀತಿಯಲಿ ಪೂಜಿಪಗೆ ।
ಆತಂಕವಿಲ್ಲ ಭಯವಿಲ್ಲ ದಶವಿಧ ।
ಪಾತಕಗಳಿಲ್ಲ ಸರ್ವಜ್ಞ ॥ ೧೨೭ ॥

---

1. C. ಹಾಗಿಲ್ಲ ಹೀಗಿಲ್ಲ. 2. A. ನಿಮ್ಮಾಣೆ C. ಶಿವನಾಣೆ. 3. C. ನೆಟ್ಟಿಭವ.

*ಲಿಂಗವನು ಅರಿದವನ ಅಂಗಹಿಂಗಿರಬೇಕು ।
ತೆಂಗಿನಕಾಯಿ ಪರಿಪೂರ್ಣ ಜಲಬಲಿದು ।
ಹಿಂಗಿದಪ್ಪಂದ ಸರ್ವಜ್ಞ ॥ ೧೨೮ ॥

ನಿಷ್ಠಪೂಜೆಯೇ ಇಷ್ಟ.

* ಅಂಗವನು ಲಿಂಗವನು ಸಂಗೊಳಿಸಲೆಂತಕ್ಕು ।
ಲಿಂಗದಿನೆನಹು ಘನವಾಗೆ ಶಿವಲಿಂಗ ।
ಹಿಂಗಿರದು ಅವನ ಸರ್ವಜ್ಞ ॥ ೧೨೯ ॥

* ಒಮ್ಮನದಿ ಶಿವಪೂಜೆ ಗಮ್ಮನೇ ಮಾಡುವದು! ।
ಇಮ್ಮನ[1]ವಿಡಿದು ಕೆಡಬೇಡ, ವಿಧಿವಶವು! ।
ಸುಮ್ಮನೇ ಕೆಡುಗು! ಸರ್ವಜ್ಞ ॥೧೩೦ ॥

ಬಹಿರಂಗ ಶಿವಾರ್ಚನೆ.

ಭಕ್ತಿ ಇಲ್ಲದ ಪೂಜೆ ವ್ಯರ್ಥ.

* ಅಷ್ಟವಿಧದರ್ಚನೆಯ। ನೆಷ್ಟು ಮಾಡಿದಡೇನು ।
ನಿಷ್ಠೆನೆಲೆಗೊಳದೆ ಭಜಿಸುವಾ ಪೂಜೆಯು ।
ನಷ್ಟ ಕಾಣಯ್ಯ ಸರ್ವಜ್ಞ ॥ ೧೩೧ ॥

* ಇಷ್ಟಲಿಂಗದಿ ಮನವ ನೆಟ್ಟನೇ ನಿಲಿಸದೇ।
ಕಷ್ಟ ಭ್ರಮೆಗಳಲಿ ಮುಳುಗಿದನು ಕರ್ಮದ ।
ಬಟ್ಟೆಗೇ ಹೋಹ! ಸರ್ವಜ್ಞ ॥ ೧೩೨ ॥

* ಎಷ್ಟು ಬಗೆಯಾರತಿಯ ಮುಟ್ಟಿಸಿದ ಫಲವೇನು ।
ನಿಷ್ಠೆಯಿಲ್ಲದನ ಶಿವಪೂಜೆ ಹಾಳೂರ ।
ಕೊಟ್ಟಿಗುರಿದಂತೆ ಸರ್ವಜ್ಞ ॥ ೧೩೩ ॥

---

1, A. ದುಮ್ಮನ

* ಒಸೆದೆಂಟು[1] ದಿಕ್ಕಿನಲಿ ಮಿಸುನಿ ಗಿಣ್ಣಿಲು ಗಿಂಡಿ[2] ।
ಹುಸಿದು ಮಾಡುವನ ಪೂಜೆಯು ಬೋಗಾರ ।
ಪಸರ ವಿಟ್ಟಂತೆ ಸರ್ವಜ್ಞ ॥ ೧೩೪ ॥

* ಹುಸಿದು ಮಾಡುವಪೂಜೆ ಮುಸಿವಣ್ಣವೆಂತೆನಲು? ।
ಮುಸುಕಿರ್ದ ಮಲವನೊಳಗಿರಿಸಿ, ಪೃಷ್ಠವ[3] ।
ಒಸುಕಿ ತೊಳೆದಂತೆ[4]; ಸರ್ವಜ್ಞ ॥ ೧೩೫ ॥

* ಬತ್ತಿ ಹೆತ್ತುಪ್ಪವನು ಹತ್ತಿಸಿದ ಫಲವೇನು ।
ನಿತ್ಯನೆಲೆಗೊಳದೆ ಭಜಿಸುವಾ ಪೂಜೆಯು ।
ಹತ್ತಿಗೇಡೆಂದ ಸರ್ವಜ್ಞ ॥ ೧೩೬ ॥

* ಆಳುತೇಳುತ ಬೆರಳು ಚಾಳಿ, ಮಿಡುಕುವ ಬಾಯಿ, ।
ಮೇಳದೊಳು ತೊಡಕ ಬಿಡದವನ, ಜಪವದು ।
ಹಾಳು ಮನೆಯಂತೆ; ಸರ್ವಜ್ಞ ॥ ೧೩೭ ॥

* ಎಣಿಸುತಿರ್ಪುದು ಬಾಯಿ ಪೊಣರುತಿರ್ಪುದು ಬೆರಳು ।
ಕ್ಷಣಕೊಮ್ಮೆ ಒಂದನೆಣಿಸುವ ಜಪಕೊಂದು ।
ಕುಣಿಕೆ[5]ಯುಂಟೆಂದ ಸರ್ವಜ್ಞ ॥ ೧೩೮ ॥

* ಎಣಿಸುತಿರ್ಪುದು ಬೆರಳು ಗುಣಿಸು[6]ತಿರ್ಪುದು ಜಿಹ್ವೆ ।
ಮನಹೋಗಿ ಹಲವನೆನೆದರೆ ಹಾಳೂರ ।
ಶುನಕನಂತಕ್ಕು ಸರ್ವಜ್ಞ ॥ ೧೩೯ ॥

---

1. C. ಎಸೆವೆಂಟು, 2. C. ಮಿಸುಪ ...ನೂರು. 3. 4. G.S. ಪುಷ್ಪವ (ಪುಷ್ಪದಿ) ಹಸ ಮಾಡಿದಂತೆ 5. C. ಎಣಿಕೆ 6. ಕುಣಿಯು.

* ಕೊಲುವ ಕೈಯೊಳುಪೂಜೆ ಮೆಲುವ[1]ಬಾಯೊಳು ಮಂತ್ರ ।
ಸಲೆಪಾಪವೆರೆದ ಮನದೊಳು ಪೂಜಿಪನು ।
ಹೊಲೆಯ ಕಾಣಯ್ಯ! ಸರ್ವಜ್ಞ || ೧೪೦ ||

ಪ್ರಬೋಧ.

* ಲಿಂಗಪೂಜಿಸುವಾತ ಜಂಗಮಕೆ ನೀಡಿದೊಡೆ[2] ।
ಲಿಂಗದ ಕ್ಷೇಮ[3] ಘನವಾಗಿ ಆ ಲಿಂಗ[4] ।
ಹಿಂಗದಿರುತಿಹುದು[5]! ಸರ್ವಜ್ಞ || ೧೪೧ ||

† ಲಿಂಗಕ್ಕೆ ತೋರಿಸುತ ನುಂಗುವಾತನೆ ಕೇಳು! ।
ಲಿಂಗವುಂಬುವದೆ? ಇದನರಿದು, ಕಪಿಯೆ ನೀ ।
ಜಂಗಮಕೆ ನೀಡು! ಸರ್ವಜ್ಞ || ೧೪೨ ||

* ಲಿಂಗ ಪ್ರಸಾದವನು ಅಂಗಕ್ಕೆಕೊಂಬುವರು ।
ಗಂಗಾಳದೊಳಗೆ ಕೈತೊಳೆದು ಚಲ್ಲುವ ।
ಮಂಗಗಳನೋಡು! ಸರ್ವಜ್ಞ || ೧೪೩ ||

* ಹಲವನೋದಿ[6]ದಡೇನು ಚಲುವನಾದೆಡೆಯೇನು ।
ಕುಲವೀರನೆನಸಿ[7] ಫಲವೇನು? ಲಿಂಗದ ।
ಒಲುಮೆ ಇಲ್ಲದಲೆ[8]! ಸರ್ವಜ್ಞ || ೧೪೪ ||

* ಓದುವಾದಗಳೇಕೆ ಗಾದೆಯಾ ಮಾತೇಕೆ ।
ವೇದ ಪುರಾಣ[9] ನಿನಗೇಕೆ[10] ಲಿಂಗದಾ ।
ಹಾದಿಯರಿಯದಗೆ ಸರ್ವಜ್ಞ || ೧೪೫ ||

---

1. C. ಉಲಿವ. 2.&3. C. ನೀಡದಿರೆ...ಕ್ಷೋಭೆ 4&5 ಮಹಲಿಂಗ ಹಿಂಗಿರುವದವನ. 6.D, ನೋಡಿ. 7.G.S. ಕುಲಭಲವಿದ್ದು. 8. ಒಲವಿಲ್ಲದನಕ. 9 F. ವೇದಪಾರಾಯಣ 9&10. C ಆಗಮ ಭೇದ ನಿಮಗೇಕೆ?

* ಒಪ್ಪಾದ ನುಡಿಯೇಕೆ ಪುಷ್ಪವೇರಿಸಲೇಕೆ ।
ಅರ್ಪಿತದಗೊಡವೆ ತನಗೇಕೆ ಲಿಂಗದ ।
ನೆಪ್ಪನೆರಿಯದಗೆ ಸರ್ವಜ್ಞ ॥ ೧೪೬ ॥

* ಕೆಂಡವರ ಕಂಡು ತಾ ಕೊಂಡು[1] ಲಿಂಗವಕಟ್ಟಿ ।
ಕೊಂಡಾಡಲರಿಯದಧಮಂಗೆ ಲಿಂಗವು ।
ಕೆಂಡದಂತಿಹುದು! ಸರ್ವಜ್ಞ ॥ ೧೪೭ ॥

* ಕಟ್ಟಲೂ ಬಿಡಲು ಶಿವ ಬಟ್ಟಲವ ಕದ್ದನೇ? ।
ಕಟ್ಟಲುಬೇಡ! ಬಿಡಬೇಡ! ಕಣ್ಮನವ[2] ।
ಕಟ್ಟಿದರೆ ಸಾಕು[3]! ಸರ್ವಜ್ಞ ॥ ೧೪೮ ॥

* ಗಂಗೆ ಗೋದಾವರಿಯು ತುಂಗಭದ್ರೆಯು ಕೃಷ್ಣೆ ।
ಹಿಂಗದೆ ಮುಳುಗಿ ಫಲವೇನು? ತನ್ನಲಿಹ ।
ಲಿಂಗವರಿಯದಿರೆ! ಸರ್ವಜ್ಞ ॥ ೧೪೯ ॥

## ೫. ದೈವ ಪದ್ಧತಿ.

---

ದೇವರು ಒಬ್ಬನೇ.

* ಒಬ್ಬನಲ್ಲದೆ, ಜಗಕೆ ಇಬ್ಬರುಂಟೇ? ಮತ್ತೆ ।
ಒಬ್ಬ ಸರ್ವಜ್ಞ ಕರ್ತನು; ಜಗಕೆಲ್ಲ ।
ಒಬ್ಬನೇ ದೈವ! ಸರ್ವಜ್ಞ ॥ ೧೫೦ ॥

* ಆ ದೇವ ಈ ದೇವ ಮಾದೇವ ನೆನಬೇಡ ।
ಆ ದೇವರ ದೇವ ಭುವನ ಪ್ರಾಣಿಗಳ[4] ।
ಗಾದವನೇ[5] ದೇವ ಸರ್ವಜ್ಞ ॥ ೧೫೧ ॥

---

1 D. ಕೈಕೊಂಡು 2 & 3 ಕಟ್ಟಿದ ಲಿಂಗ ಭಜಿಸದೆ ಬಿಡಲದು 4 & 5 C ಪ್ರಾಣಿಗಳ ಕಾದವನೆ

ದೇವರು ಜ್ಞಾನಿ.

† ಚಿತ್ರವನುನವಿಲೊಳು ವಿಚಿತ್ರವನು ಗಗನದೊಳು ।
ಪತ್ರಪುಷ್ಪಗಳ ವಿವಿಧ ವರ್ಣಗಳಿಂದ ।
ಚಿತ್ರಿಸಿದರಾರು? ಸರ್ವಜ್ಞ ॥ ೧೫೩ ॥

॥ ಹಿಡಿಹಣ್ಣು ಕುಂಬಳಕೆ ಮಿಡಿಹಣ್ಣು ಆಲಕ್ಕೆ ।
ಅಡಿನೆಳಲೊಳಿರ್ಪ ಪಾಂಥನು ಕೆಡದಂತೆ ।
ಮೃಡನು ಮಾಡಿಹನು! ಸರ್ವಜ್ಞ ॥ ೧೫೪ ॥

† ಇಂಗಿನೊಳು ನಾತವನು ತೆಂಗಿನೊಳಗೆಳೆನೀರ ।
ಭೃಂಗಕೋಕಿಲೆಯಕಂಠದಿ ಗಾಯನವ ।
ತುಂಬಿದವರಾರು? ಸರ್ವಜ್ಞ ॥ ೧೫೫ ॥

॥ ಕಳ್ಳಿಯೊಳು ಹಾಲುಮುಳು । ಗಳ್ಳಿಯೊಳು ಜೇನುಗಳು ।
ಎಳ್ಳಿನೊಳಗೆಣ್ಣೆಹನಿದಿರಲು ಶಿವಲೀಲೆ ।
ಸುಳ್ಳೆನ್ನಬಹುದೆ? ಸರ್ವಜ್ಞ ॥ ೧೫೬ ॥

ಆತನನ್ನೇ ಬೇಡು.

* ಭ್ರಷ್ಟ ದೈವಕೆ ಬಾಯ ಬಿಟ್ಟಲ್ಲಿ ಫಲವಿಲ್ಲ ।
ಸೃಷ್ಟಿಗೀಶ್ವರನ ಭಜಿಸಿದರೆ ಮುಂದಕೆ ।
ಇಷ್ಟಾರ್ಥವೀವ! ಸರ್ವಜ್ಞ ॥ ೧೫೭ ॥

* ಎಲ್ಲ[1]ದೈವವ[2]ಬೇಡಿ ಹಲ್ಲು ಬಾಯ್ದೆರೆಯದೇ[3], ।
ಬಲ್ಲಿದ ಶಿವನ ಭಜಿಸಿ ಬೇಡಿದಡಾತ ।
ನಿಲ್ಲೆನಲಿಕರಿಯ ಸರ್ವಜ್ಞ ॥ ೧೫೮ ॥

---

1 D. ಖುಲ್ಲ 1 & 2 ಎಲ್ಲರನು ನೆರೆಬೇಡಿ 3 C.... ಬಾಯಾರದೆ.

* ನರನಬೇಡುವ ದೈವ ವರವೀಯುಬಲ್ಲದೇ? ।
ತಿರಿವರನಡರಿ ತಿರಿವರೇನಿದನರಿದು[1] ।
ಹರನ ಬೇಡುವದು! ಸರ್ವಜ್ಞ ॥ ೧೫೮ ॥

ಪ್ರತಿಮಾ ಪೂಜೆ ಕನಿಷ್ಠ

* ಆದಿ ದೈವವನು ತಾ[2] ಬೇಧಿಸಲಿಕರಿಯದೇ ।
ಹಾದಿಯಾ ಕಲ್ಲಿಗೆಡೆಮಾಡಿ ನಮಿಸುವ ।
ಮಾದಿಗರ ನೋಡು! ಸರ್ವಜ್ಞ ॥ ೧೫೯ ॥

* ತನ್ನಲಿಹ ಲಿಂಗವನು ಮನ್ನಿಸಲಿಕರಿಯದೇ
ಬಿನ್ನಣದಿ ಕಟೆದ ಪ್ರತಿಮೆಗಳಿಗೆರಗುವ ।
ಅನ್ಯಾಯ ನೋಡು! ಸರ್ವಜ್ಞ ॥ ೧೬೦ ॥

* ಉಣಬಂದ ಜಂಗಮಕೆ ಉಣಬಡಿಸಲೊಲ್ಲದೇ ।
ಉಣದಿಪ್ಪ ಲಿಂಗಕುಣಬಡಿಸಿ ಕೈಮುಗಿವ ।
ಬಣಗುಗಳ ನೋಡು! ಸರ್ವಜ್ಞ ॥ ೧೬೧ ॥

* ಕಲ್ಲು ಕಲ್ಲೆಂಬುವಿರಿ ಕಲ್ಲೊಳಿರ್ಪುದೆದೈವ[3]? ।
ಕಲ್ಲಲ್ಲಿ ಕಳೆಯ ನಿಲಿಸಿದ ಗುರುವಿನಾ ।
ಸೊಲ್ಲಲ್ಲೆ[4] ದೈವ! ಸರ್ವಜ್ಞ ॥ ೧೬೨ ॥

* ಬಟ್ಟೆಯಾ[5]ಕಲ್ಲಿಂಗೆ ಒಟ್ಟಿ ಪತ್ರಿಯನಿಟ್ಟು ।
ಕಟ್ಟಿದ ಲಿಂಗವಡಿಯಾಗಿ ಶರಣೆಂಬ ।
ಭ್ರಷ್ಟರನು ನೋಡ! ಸರ್ವಜ್ಞ ॥ ೧೬೩ ॥

---

1. A ತಿರಿದಂತೆ 2. A. ಆದಿಯಾ ಲಿಂಗವನು 3. C ಕಲ್ಲು ದೈವವು ಎಂಬ ಸಲ್ಲದಾನುಡಿಬೇಡ
4. G.S. ಸೊಲ್ಲೆಲ್ಲ, 5. G.S. ಮೆಟ್ಟಿದಾ

† ಕಲ್ಲುಕಲ್ಲನೆ ಒಟ್ಟಿ ಕಲ್ಲಿನಲಿ ಮನೆಕಟ್ಟಿ ।
ಕಲ್ಲಮೇಲ್ಕಲ್ಲ ಕೊಳುವ ಮಾನವರೆಲ್ಲ ।
ಕಲ್ಲಿನಂತಹರು ಸರ್ವಜ್ಞ ॥ ೧೬೪ ॥

* ನಂಬುತಿರು ನಂಬದಿರು ಎಂಬುವರು ಮಾನವರು ।
ಸಂಬಾರವರೆವ ಬಲುಕಲ್ಲ ಹರನೆಂದು ।
ನಂಬುವವರಾರು? ಸರ್ವಜ್ಞ ॥ ೧೬೫ ॥

* ಗುಡಿಯ ಬೋದಿಗೆಕಲ್ಲು ನಡುರಂಗತಾ ಕಲ್ಲು ।
ಕಡೆಮೂಲೆ ಸೆರಗುತಾಕಲ್ಲು[1] ವರವನು ।
ಕೊಡುವಾತ ಬೇರೆ[2] ಸರ್ವಜ್ಞ ॥ ೧೬೬ ॥

† ಪ್ರಾಣನೂ ಪರಮನೂ ಕಾಣದೇ ಒಳಗಿರಲು ।
ಮಾಣದೆ ಶಿಲೆಯ ಹಿಡಿದದಕೆ ಮೂರ್ಖತಾ ।
ಪ್ರಾಣಾತ್ಮನೆಂಬ! ಸರ್ವಜ್ಞ ॥ ೧೬೭ ॥

* ಕಲ್ಲುಗುಂಡಿನ ಮೇಲೆ ಮಲ್ಲಿಗೆಯ ಅರಳಿಕ್ಕಿ ।
ನಿಲ್ಲದೆ ಹಣೆಯ ಬಡಿವರ್ಗೆ ಬುಗುಟೆಲ್ಲ ।
ದಿಲ್ಲಕಾಣಯ್ಯ! ಸರ್ವಜ್ಞ ॥ ೧೬೮ ॥

### ತ್ರಿಮೂರ್ತಿ ಜಿಜ್ಞಾಸ.

† ಹೆಣ್ಣಿನಾ ಹೊನ್ನಿನಾ ಮಣ್ಣಿನಾ ಬಲೆಯನ್ನು ।
ಹಣ್ಣಿಸಿ ಜಗವನದರೊಳು ಹಿಡಿದಾ ಮು- ।
ಕ್ಕಣ್ಣನ ನೋಡು! ಸರ್ವಜ್ಞ ॥ ೧೬೯ ॥

---

1 G S ಪೊಡಮಡಿಸಿ ಕೊಂಬುದದುಕಲ್ಲು. 2 G S ಕೊಡುವದೂ ಕಲ್ಲು.

* ನರನಬೇಡುವ ದೈವ ವರವೀಯಬಲ್ಲದೇ? ।
ತಿರಿವರನಡರಿ [1]ತಿರಿವರೇನಿದನರಿದು ।
ಹರನ ಬೇಡುವದು! ಸರ್ವಜ್ಞ ॥ ೧೫೮ ॥

### ಪ್ರತಿಮಾ ಪೂಜೆ ಕನಿಷ್ಠ

* ಆದಿ ದೈವವನು ತಾ[2] ಬೇಧಿಸಲಿಕರಿಯದೇ ।
ಹಾದಿಯಾ ಕಲ್ಲಿಗೆಡೆಮಾಡಿ ನಮಿಸುವ ।
ಮಾದಿಗರ ನೋಡು! ಸರ್ವಜ್ಞ ॥ ೧೫೯ ॥

* ತನ್ನಲಿಹ ಲಿಂಗವನು ಮನ್ನಿಸಲಿಕರಿಯದೇ
ಬಿನ್ನಣದಿ ಕಟೆದ ಪ್ರತಿಮೆಗಳಿಗೆರಗುವ ।
ಅನ್ಯಾಯ ನೋಡು! ಸರ್ವಜ್ಞ ॥ ೧೬೦ ॥

* ಉಣಬಂದ ಜಂಗಮಕೆ ಉಣಬಡಿಸಲೊಲ್ಲದೇ ।
ಉಣದಿಪ್ಪ ಲಿಂಗಕುಣಬಡಿಸಿ ಕೈಮುಗಿವ ।
ಬಣಗುಗಳ ನೋಡು! ಸರ್ವಜ್ಞ ॥ ೧೬೧ ॥

* ಕಲ್ಲು ಕಲ್ಲೆಂಬುವಿರಿ ಕಲ್ಲೊಳಿರ್ಪುದೆದೈವ[3]? ।
ಕಲ್ಲಲ್ಲಿ ಕಳೆಯ ನಿಲಿಸಿದ ಗುರುವಿನಾ ।
ಸೊಲ್ಲಲ್ಲೆ[4] ದೈವ! ಸರ್ವಜ್ಞ ॥ ೧೬೨ ॥

* ಬಟ್ಟೆಯಾ[5]ಕಲ್ಲಿಂಗೆ ಒಟ್ಟೆ ಪತ್ರಿಯನಿಟ್ಟು ।
ಕಟ್ಟಿದ ಲಿಂಗವಡಿಯಾಗಿ ಶರಣೆಂಬ ।
ಭ್ರಷ್ಟರನು ನೋಡ! ಸರ್ವಜ್ಞ ॥ ೧೬೩ ॥

---

1. A ತಿರಿದಂತೆ 2. A. ಆದಿಯಾ ಲಿಂಗವನು 3. C ಕಲ್ಲು ದೈವವು ಎಂಬ ಸಲ್ಲದಾಸುಡಿಬೇಡ
4. G.S. ಸೊಲ್ಲಿಲ್ಲ, 5. G.S. ಮೆಟ್ಟಿದಾ

† ಕಲ್ಲುಕಲ್ಲನೆ ಒಟ್ಟಿ ಕಲ್ಲಿನಲಿ ಮನೆಕಟ್ಟಿ ।
ಕಲ್ಲಮೇಲ್ಕಲ್ಲ ಕೊಳುವ ಮಾನವರೆಲ್ಲ ।
ಕಲ್ಲಿನಂತಹರು ಸರ್ವಜ್ಞ ॥ ೧೬೪ ॥

* ನಂಬುತಿರು ನಂಬದಿರು ಎಂಬುವರು ಮಾನವರು ।
ಸಂಬಾರವರೆವ ಬಲುಕಲ್ಲ ಹರನೆಂದು ।
ನಂಬುವವರಾರು? ಸರ್ವಜ್ಞ ॥ ೧೬೫ ॥

* ಗುಡಿಯ ಬೋದಿಗೆಕಲ್ಲು ನಡುರಂಗತಾ ಕಲ್ಲು ।
ಕಡೆಮೂಲೆ ಸೆರಗುತಾಕಲ್ಲು[1] ವರವನು ।
ಕೊಡುವಾತ ಬೇರೆ[2] ಸರ್ವಜ್ಞ ॥ ೧೬೬ ॥

† ಪ್ರಾಣನೂ ಪರಮನೂ ಕಾಣದೇ ಒಳಗಿರಲು ।
ಮಾಣದೆ ಶಿಲೆಯ ಹಿಡಿದದಕೆ ಮೂರ್ಖತಾ ।
ಪ್ರಾಣಾತ್ಮನೆಂಬ! ಸರ್ವಜ್ಞ ॥ ೧೬೭ ॥

* ಕಲ್ಲುಗುಂಡಿನ ಮೇಲೆ ಮಲ್ಲಿಗೆಯ ಅರಳಿಕ್ಕಿ ।
ನಿಲ್ಲದೆ ಹಣೆಯ ಬಡಿವರ್ಗೆ ಬುಗುಟೆಲ್ಲ ।
ದಿಲ್ಲಕಾಣಯ್ಯ! ಸರ್ವಜ್ಞ ॥ ೧೬೮ ॥

### ತ್ರಿಮೂರ್ತಿ ಜಿಜ್ಞಾಸ.

† ಹೆಣ್ಣಿನಾ ಹೊನ್ನಿನಾ ಮಣ್ಣಿನಾ ಬಲೆಯನ್ನು ।
ಹಣ್ಣಿಸಿ ಜಗವನದರೊಳು ಹಿಡಿದಾ ಮು- ।
ಕ್ಕಣ್ಣನ ನೋಡು! ಸರ್ವಜ್ಞ ॥ ೧೬೯ ॥

---

1 G S ಪೊಡಮಡಿಸಿ ಕೊಂಬುದದುಕಲ್ಲು. 2 G S ಕೊಡುವದೂ ಕಲ್ಲು.

† ಉತ್ಪತ್ತಿಗೆ ಬೊಮ್ಮಗಡ ಸ್ಥಿತಿಗೆ ತಾ ವಿಷ್ಣುಗಡ ।
ಹತವ ಗೈವುದಕೆ ರುದ್ರಗಡ ಇವರುಗಳ ।
ಸ್ಥಿತಿಯನರಿಯೆಂದ! ಸರ್ವಜ್ಞ ॥ ೧೭೦ ॥

† ಜಂತ್ರ ಖಡುಗಕೆ ಹರನು ತಂತ್ರಚಕ್ರಕೆ ಹರಿಯು ।
ಮಂತ್ರಮೋಹಕ್ಕೆ ಬೊಮ್ಮನು ಜಗದಿಸ್ವ- ।
ತಂತ್ರನಾರುಂಟು? ಸರ್ವಜ್ಞ ॥ ೧೭೧ ॥

ಬ್ರಹ್ಮನು ಅಸಮರ್ಥ.

* ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ ನೀ ಕೇಳು ।
ಬೊಮ್ಮನ ಸತಿಗೆ ಮೂಗಿಲ್ಲವಾಮೂಗ ।
ನಿರ್ಮಿಸನದೇಕೆ? ಸರ್ವಜ್ಞ ॥ ೧೭೨ ॥

* ಹುಟ್ಟಿಸುವನಜನೆಂಬ ಕಷ್ಟದಾನುಡಿಬೇಡ ।
ಹುಟ್ಟಿಪನು ತನ್ನ ಶಿರಹರಿಯೆ ಮತ್ತೊಂದ ।
ಹುಟ್ಟಿಸನದೇಕೆ? ಸರ್ವಜ್ಞ ॥ ೧೭೩ ॥

ವಿಷ್ಣು ಅಸಮರ್ಥ.

* ಹತ್ತುಭವವನು ಎತ್ತಿ ಎತ್ತು ಎಮ್ಮೆಯಕಾದು ।
ಮತ್ತೆ ಪಾಂಡವರಿಗಾಳಾದ ಹರಿಯು ತಾ ।
ನೆತ್ತಣಾದೈವ? ಸರ್ವಜ್ಞ ॥ ೧೭೪ ॥

* ನರಸಿಂಹನವತಾರ ಹಿರಿದಾದ ಅದ್ಭುತವು ।
ಶರಭನುಗುರಿಂದ ಕೊಲುವಾಗ ಹರಿಯೂರ ।
ನರಿಯಂದವಾದ[2] ಸರ್ವಜ್ಞ ॥ ೧೭೫ ॥

1 & 2 A C. ಹರಿನಾಮು ನರಿಯಂತೆ ಆಯ್ತು.

* ಪಾಲಿಸುವ ಹರಿಯುತಾ ಸೋಲನೆಂದೆನಬೇಡ! ।
ಶೂಲಿಯು ಮಗನ ತಲೆಜಿಗುಟೆ, ಹರಿಯೇಕೆ ।
ಪಾಲಿಸದೆ ಹೋದ? ಸರ್ವಜ್ಞ ॥ ೧೭೬ ॥

ಶಿವನು ಸರ್ವಸಮರ್ಥ.

* ಷಡುದರುಶನಾದಿಗಳು ಮೃಡಮಾಡಲಾದವು[1] ।
ಪೊಡಮಡುತ ನಿಗಮಗಳೆರಸುವ ಅಭವನ ।
ಗಡಣಕೆಣೆಯಾರು? ಸರ್ವಜ್ಞ ॥ ೧೭೭ ॥

* ಹರನವನ ಕೊಲುವಂದು ಎರಳೆಯನು ಎಸೆವಂದು ।
ಮರಳಿ ವರಗಳನು ಕೊಡುವಂದು ಪುರಹರಗೆ ।
ಸರಿಯಾರ ಕಾಣೆ[2]! ಸರ್ವಜ್ಞ ॥ ೧೭೮ ॥

* ಹರಿಬೊಮ್ಮರೆಂಬುವರು ಹರನಿಂದಲಾದವರು ।
ಅರಸಿಗೆ ಆಳು ಸರಿಯಹನೆ? ಶಿವನಿಂದ ।
ಮೆರೆವರಿನ್ನಾರು? ಸರ್ವಜ್ಞ ॥ ೧೭೯ ॥

* ಹಿರಿಯ ಬೊಮ್ಮನುಕೆಂಚ ಕಿರಿಯಹರಿತಾಕರಿಗ ।
ಪುರಹರನು ಶುದ್ಧಧವಳಕನಿವರುಗಳು ।
ಸರಿಯೆ ದೈವಕ್ಕೆ ಸರ್ವಜ್ಞ ॥ ೧೮೦ ॥

* ಹರಿದಲೆಯು ಬೊಮ್ಮಂಗೆ ಕುರಿದಲೆಯು ದಕ್ಷಂಗೆ ।
ನೆರೆಹತ್ತು ಜನನವಾಹರಿಗೆ ಇವರುಗಳು ।
ಸರಿಯಹರೆ ಹರಗೆ? ಸರ್ವಜ್ಞ ॥ ೧೮೧ ॥

---

1D. ಮೃಡನ ಒಡಲಾದವು 2 C. ಸರಿಯೆ ಹರನಾಣೆ!

## ಶಿವಸ್ತೋತ್ರ.

† ಧರೆಯ ತೇರನು ಮಾಡಿ ಅಜನಸಾರಥಿಮಾಡಿ ।
ಹರಿಯುಶರಮಾಡಿ ತ್ರಿಪುರವನಳಿದಗೆ ।
ಸರಿಯಾರು ಹೇಳಿ? ಸರ್ವಜ್ಞ ॥ ೧೮೨ ॥

* ಇಂದ್ರನಾನೆಯನೇರಿ ಒಂದನೂ ಕೊಡಲರಿಯ ।
ಚಂದ್ರಶೇಖರನು ಮುದಿಯೆತ್ತನೇರಿ ಬೇ- ।
ಕೆಂದುದನು ಕೊಡುವ! ಸರ್ವಜ್ಞ ॥ ೧೮೩ ॥

* ಉಂಬಳಿಯು ಇದ್ದವರು[1] ಕಂಬಳಿಯ ಹೊದೆಯುವರೆ? ।
ಶಂಭುವಿದ್ದಂತೆ ಮತ್ತೊಂದು ದೈವವ ।
ನಂಬುವನೆ ಹೆಡ್ಡ ಸರ್ವಜ್ಞ ॥ ೧೮೪ ॥

† ಸುರತರುವು, ಸುರಧೇನು, ಸುರಮಣಿಯು, ಸುರಲತೆಯು ।
ಪುರುಷೋತ್ತಮನು ಹರಿಯಾಗಿ ಇವರುಗಳು ।
ಪರಮನಿಂದಾದ್ದು ಸರ್ವಜ್ಞ ॥ ೧೮೫ ॥

* ದೇಶಕ್ಕೆ ಸಜ್ಜನನು[2] ಹಾಸ್ಯಕ್ಕೆ ಹನುಮಂತ[3]
ಕೇಶವ ಭಕ್ತರೊಳೆಲ್ಲರಲಿ ಮೂರು ಕ- ।
ಣ್ಣೇಶನೇ ದೈವ! ಸರ್ವಜ್ಞ ॥ ೧೮೬ ॥

* ಕನಕದಿಂ ಹಿರಿದಿಲ್ಲ ದಿನಪನಿಂ ಬೆಳಕಿಲ್ಲ ।
ಜನಕನಿಂದಧಿಕ ಗಣವಿಲ್ಲ ಪರದೈವ ।
ತ್ರಿಣಯನಿಂದಿಲ್ಲ; ಸರ್ವಜ್ಞ ॥ ೧೮೭ ॥

* ಸತ್ಯಕ್ಕೆ ಸರಿಯಿಲ್ಲ ಚಿತ್ತಕ್ಕೆ ಸ್ಥಿರವಿಲ್ಲ ।
ಹಸ್ತದಿಂದಧಿಕ ಹಿತರಿಲ್ಲ, ಪರದೈವ ।
ನಿತ್ಯನಿಂದಿಲ್ಲ; ಸರ್ವಜ್ಞ ॥ ೧೮೮ ॥

---

1 Ac ಇದ್ದಂತೆ; 2 C ಸಚಿವನು 3 C ಭೃಂಗೀಶ

* ಶೇಷನಿಂಬಲರಿಲ್ಲ ಮೋಸದಿಂ ಕಳವಿಲ್ಲ ।
ನೇಸರಿಂಜಗಕೆ ಹಿತರಿಲ್ಲ, ಪರದೈವ ।
ಈಶನಿಂದಿಲ್ಲ; ಸರ್ವಜ್ಞ ॥ ೧೮೯ ॥

† ಭಾಷೆಯಿಂ ಮೇಲಿಲ್ಲ ದಾಸನಿಂ ಕೀಳಿಲ್ಲ ।
ಮೋಸದಿಂದಧಿಕ ಕೇಡಿಲ್ಲ; ಪರದೈವ ।
ಈಶನಿಂದಿಲ್ಲ; ಸರ್ವಜ್ಞ ॥ ೧೯೦ ॥

† ಸಂಗದಿಂ ಕೆಳೆಯಿಲ್ಲ ಭಂಗದಿಂ ಮೊರೆಯಿಲ್ಲ ।
ಗಂಗೆಯಿಂದಧಿಕ ನದವಿಲ್ಲ, ಪರದೈವ ।
ಲಿಂಗದಿಂದಿಲ್ಲ; ಸರ್ವಜ್ಞ ॥ ೧೯೧ ॥

† ನಿದ್ರೆಯಿಂ ಸುಖವಿಲ್ಲ । ಪದ್ರದಿಂ ಅರಿಯಿಲ್ಲ ।
ಮುದ್ರೆಯಿಂದಧಿಕ ಮಾತಿಲ್ಲ,[1] ದೈವವು ।
ರುದ್ರನಿಂದಿಲ್ಲ; ಸರ್ವಜ್ಞ ॥ ೧೯೨ ॥

† ಮಾತೆಯಿಂ ಹಿತರಿಲ್ಲ । ಕೋತಿಯಿಂ ಮರುಳಿಲ್ಲ ।
ಜ್ಯೋತಿಯಿಂದಧಿಕ, ಬೆಳಕಿಲ್ಲ ದೈವವ- ।
ಜಾತನಿಂದಿಲ್ಲ; ಸರ್ವಜ್ಞ ॥ ೧೯೩ ॥

† ಇದ್ದಲಿಂ ಕರಿದಿಲ್ಲ ಬುದ್ಧಿಯಿಂ ಹಿರಿದಿಲ್ಲ ।
ವಿದ್ಯೆದಿಂದಧಿಕ ಧನವಿಲ್ಲ[2] ದೈವತಾ ।
ರುದ್ರನಿಂದಿಲ್ಲ; ಸರ್ವಜ್ಞ ॥ ೧೯೪ ॥

† ಲೀಲೆಯಿಂ ಕಣ್ಣಿಲ್ಲ ಗಾಲಿಯಿಂ ಬಟುವಿಲ್ಲ ।
ವಾಲಿಯಿಂದಧಿಕ ಬಲರಿಲ್ಲ, ಪರದೈವ ।
ಶೂಲಿಯಿಂದಿಲ್ಲ; ಸರ್ವಜ್ಞ ॥ ೧೯೫ ॥

---

1 G. S. ಸಿದ್ಧರಿಂದಧಿಕ ಬಲವಿಲ್ಲ. 2. A. ದಿಗಂತದಿಂ ಹೊದೆಯಿಲ್ಲ.

† ನಿಂಬೆಗಿಂ ಹುಳಿಯಿಲ್ಲ ತುಂಬೆಗಿಂ ಕರಿದಿಲ್ಲ ।
ನಂಬಿಗೆಯಿಂದಧಿಕ ಗುಣವಿಲ್ಲ, ದೈವವು ।
ಶಂಭುವಿಂದಿಲ್ಲ; ಸರ್ವಜ್ಞ ॥ ೧೯೬ ॥

† ನಾಲಿಗಿಂನುಣುಪಿಲ್ಲ ಹಾಲಿಗಿಂ ಬಿಳುಪಿಲ್ಲ ।
ಕಾಲನಿಂದಧಿಕ ಅರಿಯಿಲ್ಲ ದೈವವು ।
ಶೂಲಿಯಿಂದಿಲ್ಲ; ಸರ್ವಜ್ಞ ॥ ೧೯೭ ॥

* ಉಣಲಡಿಗೆ ಹಲವಾಗಿ ಕಣಿಕತಾನೊಂದಯ್ಯ ।
ಮಣಿಯಿಸುವ ದೈವ ಘನವಾಗಿ ಜಗಕೆಲ್ಲ
ತ್ರಿಣಯನೇ ದೈವ ಸರ್ವಜ್ಞ ॥ ೧೯೮ ॥

* ಆಡಿಂಗೆ ಆರ್ಕೋಟಿ ಕೋಡಗಕ್ಕೊಂದುದಿನ ।
ಕೋಡಗವು ಕೋಟಿ ಮಡಗಿದಲಿ[1] ಬಳ್ಳುಹು- ।
ಬ್ಬಾಡಹೊತ್ತಿಲ್ಲ ಸರ್ವಜ್ಞ ॥ ೧೯೯ ॥

* ಆಡಾದನಾ ಅಜನು ಕೋಡಗಾದನು ಹರಿಯು ।
ನೋಡಿದರೆ ಶಿವನು ನರಿಯಾದನೀಬೆಡಗ ।
ರೂಢಿಯೊಳು ಬಲ್ಲೆ ಸರ್ವಜ್ಞ ॥ ೨೦೦ ॥

## ೬. ಭಕ್ತಪದ್ಧತಿ.

### ೧. ಭಕ್ತಿಯೇ ಶ್ರೇಷ್ಠ.

* ತೆರೆದ ಹಸ್ತವು ಲೇಸು ಹಿರಿದು ಪೂಜ್ಯವು ಲೇಸು ।
ಅರಸೊಲಿಯೆ ಲೇಸು, ಸರ್ವಕ್ಕು ಶಿವನಿಗೆ ।
ಶರಣವೇ ಲೇಸು ಸರ್ವಜ್ಞ ॥ ೨೦೧ ॥

1. G. S. ಮಡಿದರೆ.

* ಖುಲ್ಲ ಮಾನವಬೇಡೆ ಕಲ್ಲತಾ ಕೊಡುವನೇ? ।
ಸೊಲ್ಲರಿವ ಶಿವನ ಬೇಡಿದಡೆ, ಬಯಸಿದು- ।
ದೆಲ್ಲವನು ಕೊಡುವ ಸರ್ವಜ್ಞ ॥ ೨೦೨ ॥

* ನಿಲ್ಲದೇ ಹರಸಿದೊಡೆ ಕಲ್ಲು ಭೇದಿಸಲಕ್ಕು ।
ಬಲ್ಲಂತ ಶಿವನ ಭಕ್ತಿಯಿಂ ಭಜಿಸಿದ- ।
ಡಿಲ್ಲಿನಲಿಕರಿಯ ಸರ್ವಜ್ಞ ॥ ೨೦೩ ॥

॥ ಭಕ್ತಿಯಿಂದಲೆ ಯುಕ್ತಿ ಭಕ್ತಿಯಿಂದಲೆ ಶಕ್ತಿ ।
ಭಕ್ತಿ ವಿರಕ್ತಿಯುಳಿದರೀ ಜಗದಲ್ಲಿ ।
ಮುಕ್ತಿಯಿಲ್ಲೆಂದ ಸರ್ವಜ್ಞ ॥ ೨೦೪ ॥

ಸರ್ವೇಶನ ಕೃಪೆ ಇಲ್ಲದಿದ್ದರೆ ಸರ್ವವೂ ವ್ಯರ್ಥ.

॥ ಆಗುಹೋಗುಗಳು ನೆರೆ ರಾಗಭೋಗಗಳು ಸ- ।
ರಾಗವಾಗಿಕ್ಕು ಶಿವನೊಲಿದಡಿಲ್ಲದೆ ।
ಹೋಗಿಕ್ಕು ಕಾಣೊ! ಸರ್ವಜ್ಞ ॥ ೨೦೫ ॥

* ವೈದ್ಯ, ಮಂತ್ರವು, ಶಕುನ[1] ತಿದ್ದುವವುಕುತ್ರಗಳ ।
ತಿದ್ದಿಯೂ ತಿದ್ದಲರಿಯವು; ಶಿವನೊಲಿಯ- ।
ದಿದ್ದರೆ ಕಾಣೊ! ಸರ್ವಜ್ಞ ॥ ೨೦೬ ॥

* ಕಂಡವರು ಕೆರಳುವರು ಹೆಂಡತಿಯು ಕನಲುವಳು ।
ಖಂಡಿತ ಲಕ್ಷ್ಮಿ ತೊಲಗುವಳು! ಶಿವನೊಲುಮೆ[2] ।
ಕಂಡು ಕೊಳದಿರಲು;[3] ಸರ್ವಜ್ಞ ॥ ೨೦೭ ॥

1 A. ವಾದ 2 & 3 G.S. ಇದು ಸತ್ಯ! ಖಂಡ್ಯಪರಶುವಿನ.

ಕೊಟ್ಟಲ್ಲಿ ಬಾರದದು ಇಟ್ಟಲ್ಲಿ ಹೋಗುವದು ।
ಮುಟ್ಟಿ ಕೈಯೊಳಗೆ ನಿಲ್ಲದು ಜಗದೀಶ ।
ಕೊಟ್ಟಲ್ಲದಿಲ್ಲ ಸರ್ವಜ್ಞ ॥ ೨೦೮ ॥

ಭಕ್ತಿಹೀನತ್ವವು ಕನಿಷ್ಠ.

* ಜ್ವರಬಂದ ಮನುಜಂಗೆ ನೊರೆವಾಲು ವಿಷವಕ್ಕು ।
ನರಕದಿ ಬೀಳ್ವ ಅಧಮಂಗೆ ಶಿವಭಕ್ತಿ ।
ಹಿರಿದು ವಿಷವಕ್ಕು ಸರ್ವಜ್ಞ ॥ ೨೦೯ ॥

* ಹರನಾಮ ಕರೆಯದಲೆ ಪರಶಿವನನೆನೆಯದಲೆ ।
ಸ್ಮರಹರನ ಕರುಣವಿರದಲೆ ಜಗದೊಳ- ।
ಗಿರುವದೇ ಕಷ್ಟ ಸರ್ವಜ್ಞ ॥ ೨೧೦ ॥

* ಎಲ್ಲರೂ ಶಿವನೆಂದ । ರಿಲ್ಲಿಯೇ ಹಾಳಕ್ಕು ! ।
ಎಲ್ಲರೂ ಶಿವನ ಮರೆದಡೆ, ಕೈಲಾಸ- ।
ದಲ್ಲಿ ಹಾಳಕ್ಕು! ಸರ್ವಜ್ಞ ॥ ೨೧೧ ॥

* ಆವಕಾಲಡವಿಯಲಿ ಜೀವ ಕಾಲವ ಕಳೆದು ।
ಜೀವಚಯದಲ್ಲಿ ದಯವಿಲ್ಲದಿರುವನ ।
ಕಾವನೇ ಶಿವನು? ಸರ್ವಜ್ಞ ॥ ೨೧೨ ॥

* ಅಡವಿಯಲಿ ತಪದಲ್ಲಿ ದೃಢ ತನದೊಳಿದ್ದರೂ ।
ನುಡಿಯಲ್ಲಿ[1] ಶಿವನ ಮರೆದಡೆ ಗುಡವಿಲ್ಲ ।
ದಡಿಗೆಯುಂಡಂತೆ ಸರ್ವಜ್ಞ ॥ ೨೧೩ ॥

---

1 G. S. ಮುಡಿವಲ್ಲಿ C. ನಡೆಯುಲ್ಲಿ.

* ಕಡುಭಕ್ತನಾಗಲೀ ಜಡೆಧಾರಿಯಾಗಲೀ ।
ನಡೆವ ವೃತ್ತಿಯಲಿ ನಡೆಯದೊಡಾಭಕ್ತಿ ।
ಹೊಡೆವ ಶಂಖೆಂದ[2] ಸರ್ವಜ್ಞ ॥ ೨೧೪ ॥

ಬಹಿರಂಗ ಭಕ್ತಿ ವ್ಯರ್ಥ.

* ಗುರಿಯತಾಗದಕೋಲ ನೂರಾರನೆಸೆದೇನು ।
ಬರಡಿಗೆ ಭಕ್ತಿ ಭಜಿಸಿದಡದು ತಾನು ।
ಇರಲರಿಯದಯ್ಯ ಸರ್ವಜ್ಞ ॥ ೨೧೫ ॥

* ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು? ।
ಎತ್ತು ಗಾಣವನು ಹೊತ್ತು ತಾ ನಿತ್ಯದಿ ।
ಸುತ್ತಿ ಬಂದಂತೆ! ಸರ್ವಜ್ಞ ॥ ೨೧೬ ॥

ಅಂತರಂಗ ಭಕ್ತಿಯೇ ಶ್ರೇಷ್ಠ.

* ಮನದಲ್ಲಿ ನೆನೆವಂಗೆ ಮನೆಯೇನು ಮಠವೇನು? ।
ಮನದಲ್ಲಿ ನೆನೆಯದಿರುವನು ದೇಗುಲದ ।
ಕೊನೆಯಲಿದ್ದೇನು? ಸರ್ವಜ್ಞ ॥ ೨೧೭ ॥

* ಮನೆಯೇನು ವನವೇನು ನೆನಹು ಇದ್ದರೆಸಾಕು ।
ಮನಮುಟ್ಟ ಶಿವನ ನೆನೆಯದನು ಬೆಟ್ಟದ ।
ಕೊನೆಯಲ್ಲಿದ್ದೇನು ಸರ್ವಜ್ಞ ॥ ೨೧೮ ॥

* ಮನದಲ್ಲಿ ನೆನವಿರಲು ತನುವೊಂದು ಮಠವಕ್ಕು ।
ಮನಹೋಗಿ ಹಲವ ನೆನೆದರೆ ಅದು ಹಾಳು ।
ಮನೆಯೆಂದು ತಿಳಿಯೊ! ಸರ್ವಜ್ಞ ॥ ೨೧೯ ॥

೭. W. ಹುಡಿಸಂಗ C. ಹುಡಿಯು ಮಣ್ಣಿಂದ.

† ದೇಹದೇವಾಲಯವು ಜೀವವೇ ಶಿವಲಿಂಗ ।
ಬಾಹ್ಯಗಳಳಿದು ಭಜಿಪಂಗೆ[1] ಮುಕ್ತಿ ಸಂ- ।
ದೇಹವಿಲ್ಲೆಂದ ಸರ್ವಜ್ಞ ॥ ೨೨೦ ॥

ಭಕ್ತನ ಲಕ್ಷಣ.

† ಜಂಗಮಕೆ ವಂಚಿಸನು; ಹಿಂಗಿರನು ಲಿಂಗವನು; ।
ಸಂಗಭಕ್ತರೊಳು, ಪರಸತಿಗೊಲಿಯದಗೆ ।
ಭಂಗವೇ ಇಲ್ಲ[2] ಸರ್ವಜ್ಞ ॥ ೨೨೧ ॥

* ಕಾತು ವೀಳ್ಯಕೆ ಇಂಬು ಲೋಚನಾಂಜನಕಿಂಬು ।
ಕೊಚುಗಳಿಂಬು ಮಾಳಿಗೆಗೆ ಭಕ್ತಗೈ ।
ದಾಚಾರವಿಂಬು ಸರ್ವಜ್ಞ ॥ ೨೨೨ ॥

* ಇಂದುವಿನೊಳುರಿಯುಂಟೆ ಸಿಂಧುವಿನೊಳರಬುಂಟೆ ।
ಸಂದವೀರನೊಳು ಭಯವುಂಟೆ ಭಕ್ತಗೆ ।
ಸಂದೇಹವುಂಟೆ ಸರ್ವಜ್ಞ ॥ ೨೨೩ ॥

* ಆಹಾರವುಳ್ಳಲ್ಲಿ ಬೇಹಾರ ಘನವಕ್ಕು ।
ಆಹಾರದೊಳಗನರಿದಿಪ್ಪ ಶೆಟ್ಟಿಗೆ ।
ಬೇಹಾರವಕ್ಕು ಸರ್ವಜ್ಞ ॥ ೨೨೪ ॥

* ಜಂಗಮನು ಭಕ್ತತಾ ಲಿಂಗದಂತಿರಬೇಕು ।
ಭಂಗಿಸಿ ಪರರನಳಿವ ಜಂಗಮನೊಂದು ।
ಮಂಗನೆಂದರಿಗು ಸರ್ವಜ್ಞ ॥ ೨೨೫ ॥

1 V ದೇವರ ಹೃದಯವರಿದಂಗೆ 2 A. ಸಂಗಿಯು ಶಭಕ್ತ.

* ಕಾಯಕದ ಭಕ್ತನಾ ಆಯತವನೋಡಿರೋ! ।
ಕಾಯಕವ ಬಿಟ್ಟ ಮರುದಿನ ಕಪ್ಪರದ ।
ಕಾಯಕವೆ ಬಕ್ಕು ಸರ್ವಜ್ಞ ‖ ೨೨೬ ‖

ಭಕ್ತಿಹೀನನ ಲಕ್ಷಣ.

* ಸಾಲುವೇದವನೋದಿ ಶೀಲದಲಿ ಶುಚಿಯಾಗಿ ।
ಶೂಲಿಯ ಪದವನರಿಯದೊಡೆ[1] ಗಿಳಿಯೋದಿ ।
ಹೇಲುಬಿಟ್ಟಂತೆ[2] ಸರ್ವಜ್ಞ ‖ ೨೨೭ ‖

* ಈಶಭಕ್ತನು ಆಗಿ ವೇಶಿಯನು ತಾ ಹೋಗೆ ।
ವಿೂಸಲಾಗಿರ್ದ ಬೋನವನು ಹಂದಿಯು ।
ಮೂಸಿ ಹೋದಂತೆ ಸರ್ವಜ್ಞ ‖ ೨೨೮ ‖

† ಹಲವು ಸಂಗದತಾಯಿ ಹೊಲಸುನಾರುವ ಬಾಯಿ।
ಸಲೆಸ್ಮರಹರನ ನೆನೆಯದ ಬಾಯಿ ನಾಯ್ ।
ಮಲವಮೆದ್ದಂತೆ ಸರ್ವಜ್ಞ ‖ ೨೨೯ ‖

* ಭಕ್ತರೊಡಗೂಡುವದು! ಭಕ್ತರೊಡನಾಡುವದು! ।
ಭಕ್ತಿಯೊಳು ಬಿಡದೆ ಬೆರೆದಿರ್ದ[3] ಭಕ್ತನು ।
ಮುಕ್ತನಾಗಿಹನು! ಸರ್ವಜ್ಞ ‖ ೨೩೦ ‖

* ಪರುಷ ಕಬ್ಬುನದೆಸೆವ ಕರಡಿಗೆಯೊಳಡಗಿಹುದೆ? ।
ಹರಭಕ್ತಿಯುಳ್ಳ ಮಹಿಮ ಸಂಸಾರದೊ- ।
ಳೆರಕವಾಗಿಹನೆ? ಸರ್ವಜ್ಞ ‖ ೨೩೧ ‖

---

1 C ಪಾದವ ಮರೆದೊಡೆ 2 C ಓಂದಂತೆ P ಬಿದ್ದಂತೆ 3 A ಭಕ್ತರೊಳುಭಕ್ತಿ ಬೆರಸಿಪ್ಪ

* ತೆಪ್ಪವನು ನಂಬಿದಡೆ ತಪ್ಪದೇತಡಿಗೆಹುದು ।
ಸರ್ಪಭೂಷಣನ ನಂಬಿದಡೆ ಭವಭಯ[1] ।
ತಪ್ಪಿಹೋಗುವದು! ಸರ್ವಜ್ಞ ॥ ೨೩೨ ॥

† ಶಿವಭಕ್ತಿಯುಳ್ಳಾತ ಭವಮುಕ್ತನಾದಾತ ।
ಶಿವಭಕ್ತಿಯಿರದ ಭುಕ್ತಗೆ ಎಂದೆಂದು ।
ಭವ ಮುಕ್ತಿ ಇಲ್ಲ ಸರ್ವಜ್ಞ ॥ ೨೩೩ ॥

ಭಕ್ತಸಂಗವು ಶ್ರೇಷ್ಠ.

* ಲಿಂಗದಾಗುಡಿಲೇಸು ಗಂಗೆಯಾತಡಿಲೇಸು ।
ಲಿಂಗ ಸಂಗಿಗಳ ನುಡಿಲೇಸು ಭಕ್ತರ ।
ಸಂಗವೇ ಲೇಸು ಸರ್ವಜ್ಞ ॥ ೨೩೪ ॥

* ನೋಟ ಶಿವಲಿಂಗದಲಿ ಕೂಟಜಂಗಮದಲ್ಲಿ ।
ನಾಟದ ಮನವು ಗುರುವಿನಲಿ; ಭಕ್ತಸಂ- ।
ಗಾಟವನು ನೋಡ! ಸರ್ವಜ್ಞ ॥ ೨೩೫ ॥

* ಲಜ್ಜೆಯನು ತೊರೆದು ನೀ ಹೆಜ್ಜೆಯನು ಸಾಧಿಪಡೆ ।
ಸಜ್ಜೆಯಲಿ ಶಿವನ ಧರಿಸಿಪ್ಪ ಶರಣರ ।
ಹೆಜ್ಜೆಯಲಿ ನಡೆಯೊ! ಸರ್ವಜ್ಞ ॥ ೨೩೬ ॥

ಭಕ್ತಿಯ ಫಲಗಳು.

† ದೇವರನು ನೆನೆವಂಗೆ ಭಾವಿಸಿದು ಬಂದಿಹುದು ।
ದೇವರನು ನೆನೆಯದಧಮಂಗೆ ಇಹಪರದಿ ।
ಯಾವದೂ ಇಲ್ಲ ಸರ್ವಜ್ಞ ॥ ೨೩೭ ॥

---

1 G S ಭವಪಾಶ.

† ನಿತ್ಯವೂ ಶಿವನತಾ ಹೊತ್ತಾರೆ ನೆನೆದಿಹರೆ ।
ಉತ್ತಮಗತಿಯಹುದ[1]ಲ್ಲದಡೆಹಪರದಿ ।
ಮೃತ್ಯು ಕಾಣಯ್ಯ! ಸರ್ವಜ್ಞ ॥ ೨೩೮ ॥

* ಎರಿಯನ್ನು ಉಳುವಂಗೆ ಧೊರೆಯನ್ನು ಪಿಡಿದಂಗೆ ।
ಉರಗಭೂಷಣನ ನೆನೆವಂಗೆ ಭಾಗ್ಯವು ।
ಅರಿದಲ್ಲವೆಂದ ಸರ್ವಜ್ಞ ॥ ೨೩೯ ॥

* ಹಾಸಂಗಿ ಹರಿಯುವಡೆ ದಾಸಿಯರು ದೊರೆಯುವಡೆ ।
ವೀಸಕ್ಕೆವೀಸ ಕೂಡುವಡದು ತನಗೆ ।
ಈಶನ ಒಲುಮೆ ಸರ್ವಜ್ಞ ॥ ೨೪೦ ॥

† ಇಪ್ಪೊತ್ತು ದೇಗುಲವ ತಪ್ಪದೇ ನೆನೆದಿಹರೆ ।
ತುಪ್ಪ ಓಗರವು ಉಣಲುಂಟು ಬೈಗಿಗೊ- ।
ಮ್ಮೆಪ್ಪುವವಳುಂಟು ಸರ್ವಜ್ಞ ॥ ೨೪೧ ॥

* ಕೂಡಲೊಬ್ಬಳು ಸತಿಯು ನೋಡಲೊಬ್ಬನುನೆಂಟ ।
ಬೇಡಿದನು ಕೊಡುವ ನೃಪತಿಯು ಭಕ್ತಿಯ ।
ಮಾಡಿದರಿಗುಂಟು ಸರ್ವಜ್ಞ ॥ ೨೪೨ ॥

* ಬಸವನೆಂದರೆಪಾಪ ದೆಸೆಗೆಟ್ಟು ಹೋಗುವದು[2] ।
ಬಿಸಿಲಿಗೆ ಹಸುರೊಳೆಸೆದಿರ್ಪ ಹನಿಯಾರಿ ।
ಹುಸಿದು[3] ಹೋದಂತೆ ಸರ್ವಜ್ಞ ॥ ೨೪೩ ॥

---

1 G S ಸತ್ಯವು ಬಿಡದಿಹುದು. 2. A. ಎಸೆದಿಪ್ಪಪಾತಕ ಬಸವಾ ಶರಣೆಂದರೆ.
3. C. ಬಸಿದು.

* ಸಾರವನು ಬಯಸುವಡೆ ಕ್ಷಾರವನು ಬೆರಸುವದು[1] ।
ಮಾರಸಂಹರನ ನೆನೆದಡೆ ಮೃತ್ಯು ತಾ ।
ದೂರಕ್ಕೆದೂರ! ಸರ್ವಜ್ಞ ॥ ೨೪೪

ಈಶ್ವರನು ಭಕ್ತಕಿಂಕರ.

* ಕೋಳಿಕೂಗದ ಮುನ್ನ ಏಳುವದು ನಿತ್ಯದ- ।
ಯಾಳು ದೇವರನು ಭಕ್ತಿಯಿಂ ನೆನೆದರೆ ।
ಆಳಿನಾಳಯ್ಯ! ಸರ್ವಜ್ಞ ॥ ೨೪೫

ಎಡೆಬಿಡದೆ ಭಜಿಸು.

* ಎಂಜಲವು ಶವುಚವು ಸಂಜೆಯೆಂದೆನಬೇಡ ।
ಕುಂಜರವು ವನವ ನೆನೆವಂತೆ ಬಿಡದೆ ನಿ- ।
ರಂಜನನ ನೆನೆಯೊ! ಸರ್ವಜ್ಞ ॥ ೨೪೬ ॥

* ಬಾಲ್ಯಯವ್ವನದೊಳಗೆ ಲೋಲುಪ್ತನಾಗಿ ನೀ- ।
ನೇಳುತಲಿ ಮುದಿಸುತಿರಬೇಡ; ಅನುದಿನ ।
ಶೂಲಿಯನು ನೆನೆಯೊ! ಸರ್ವಜ್ಞ ॥ ೨೪೭ ॥

* ಮಾಯಮೋಹವನೆಚ್ಚಿ ಕಾಯವನು ಕರಗಿಸುತ ।
ಆಯಾಸಗೊಂಡು ಬಳಲದೋನ್ನಮಶ್ಶಿ- ।
ವಾಯವೆಂದೆನ್ನು ಸರ್ವಜ್ಞ ॥ ೨೪೮ ॥

* ಒಡಲನೀಡಾಡದಿರು! ನುಡಿಯ ಹೋಗಾಡದಿರು! ।
ನಡೆಯೊಳೆಚ್ಚರವ ಬಿಡದಿರು! ಪರವಶದಿ ।
ದೃಢವನಗಲದಿರು! ಸರ್ವಜ್ಞ ॥ ೨೪೯ ॥

---

1. G,S. ಧರಿಸುವದು

* ಕಣ್ಣುನಾಲಿಗೆ ಮನವ ಪನ್ನಗಧರಕೊಟ್ಟ ।
ಚನ್ನಾಗಿ ಮನವ ತೆರೆದು, ಬಿಡದೆ ಶ್ರೀ ।
ಚನ್ನನ ನೆನೆಯೋ! ಸರ್ವಜ್ಞ ॥ ೨೫೦ ॥

ಪ್ರಬೋಧ.

* ಸತಿಯರಾದಡದೇನು ಸುತರಾಗಿ ಫಲವೇನು ।
ಶತಕೋಟಿಧನವ ಘಳಿಸೇನು ಭಕ್ತಿಯ ।
ಸ್ಥಿತಿಯಿಲ್ಲದನಕ ಸರ್ವಜ್ಞ ॥ ೨೫೧ ॥

† ಎಲ್ಲವೂ ಶಿವನೆಂದ। ರೆಲ್ಲಿನ್ನುಭಯುವಯ್ಯ? ।
ಎಲ್ಲರೂ ಶಿವನ ನೆನೆದರೆ ಕೈಲಾಸ ।
ಏಲ್ಲಿಯೋ ಇಹುದು! ಸರ್ವಜ್ಞ ॥ ೨೫೨ ॥

* ಭಕ್ತಿಗೆರಡಕ್ಕರವು ಮುಕ್ತಿಗೆರಡಕ್ಕರವು ।
ಭಕ್ತಿಯಿಂ ಮುಕ್ತಿಪಡೆವರೆ ಬಿಡದೆ ಆ- ।
ರಕ್ಕರವ ಹೇಳೋ! ಸರ್ವಜ್ಞ ॥ ೨೫೩ ॥

## ೭. ಮಹೇಶ್ವರ ಪದ್ಧತಿ.

ಜಿತೇಂದ್ರಿಯನೇ ಈಶ್ವರನು.

† ಅಯ್ವರಟ್ಟಾಸವನು ಯವ್ವನದ ಹಿಂಡನ್ನು ।
ಹೊಯ್ದುತನ್ನೊಶಕೆ ತಂದಾತ ಜಗದೊಳು ।
ದಯ್ವ[1]ತಾನಕ್ಕು ಸರ್ವಜ್ಞ ॥ ೨೫೪ ॥

1. A. ದೈವಜ್ಞನಕ್ಕು

* ಆರರಟ್ಟುಳಿಗಳನು ಮೂರುಕಂಟಕರನ್ನು ।
ಏರಿದ ಜವ್ವನ ತಡೆದರೆ ಶಿವತಾನು ।
ಬೇರೆ ಇಲ್ಲೆಂದ ಸರ್ವಜ್ಞ ॥ ೨೫೫ ॥

† ವಿಷಯದಾ ಬೇರನ್ನು[1] ಬಿಸಿಮಾಡಿ ಕುಡಿದಾತ ।
ಪಶುಪತಿಯಕ್ಕು, ಸಸಿನಕ್ಕು, ಮೆಯ್ಬಣ್ಣ ।
ಮಿಸುನಿಯಂತಕ್ಕು[2] ಸರ್ವಜ್ಞ ॥ ೨೫೬ ॥

* ಕಚ್ಚೆಕೈಬಾಯಿಗಳು ಇಚ್ಛೆಯಲಿ ಇದ್ದಿಹರೆ ।
ಅಚ್ಯುತನಪ್ಪ ಅಜನಪ್ಪ ಲೋಕದಲಿ ।
ನಿಶ್ಚಿಂತನಪ್ಪ ಸರ್ವಜ್ಞ ॥ ೨೫೭ ॥

* ಹರಿವ ಹಕ್ಕಿಯನುಂಗಿ ನೊರೆವಾಲ ಕುಡಿದಾತ ।
ಹರಿಹರನಕ್ಕು ಅಜನಕ್ಕು ಲೋಕಕ್ಕೆ ।
ಅರಿವು[3]ತಾನಕ್ಕು ಸರ್ವಜ್ಞ ॥ ೨೫೮ ॥

ಪಾಪರಹಿತನೇ ಪರಮಾತ್ಮನು,

* ರುದ್ರಾಕ್ಷಿಮಾಲೆಯನು ಭದ್ರದಲಿಧರಿಸಿದಗೆ ।
ಹೊದ್ದಿರ್ದಪಾಪ ಹೋಗಲವ ಸಾಕ್ಷಾತು ।
ರುದ್ರನೇ ಅಕ್ಕು ಸರ್ವಜ್ಞ ॥ ೨೫೯ ॥

† ಅಣುರೇಣುವಂದ್ಯದಾ ಪ್ರಣವದಾ ಬೀಜವನು ।
ಅಣುವಿನೊಳಗಣುವೆಂದರಿದ ಮಹಾತ್ಮನು ।
ತ್ರಿಣಯನೇ ಅಕ್ಕು ಸರ್ವಜ್ಞ ॥ ೨೬೦ ॥

1. V ಪುಡಿಯನ್ನು 2. F. ಕುಸುಮದಂತಕ್ಕು. 3. B. ಗುರುವು.

† ಆಸನವು ದೃಢವಾಗಿ ನಾಸಿಕಾಗ್ರದಿದಿಟ್ಟ ।
ಸೂಸುವ ಮನವ ಘನದಲಿರಿಸಿದನು ಜಗ- ।
ದೀಶನಾಗಿಕ್ಕು ಸರ್ವಜ್ಞ ॥ ೨೬೧ ॥

† ಪವನಪರಿಯುರಿದಂಗೆ ಶಿವನು ಸಾಧಿಸಲಕ್ಕು ।
ಭವಮಾಲೆ ಹರಿದು ಸುಖಿಸಲು ಅವಸದಾ- ।
ಶಿವನು ತಾನಕ್ಕು ಸರ್ವಜ್ಞ ॥ ೨೬೨ ॥

* ಮೆಟ್ಟಪ್ಪುದಾಸೆಯನು ಕಟ್ಟಪ್ಪುದಿಂದ್ರಿಯವ ।
ತೊಟ್ಟಪ್ಪುದುಳ್ಳ ಸಮತೆಯನು, ಶಿವಪದವು ।
ಮುಟ್ಟಪ್ಪುದಯ್ಯ! ಸರ್ವಜ್ಞ ॥ ೨೬೩ ॥

---

## ೮. ಜ್ಞಾನಪದ್ಧತಿ.

---

### ಜ್ಞಾನ ಪ್ರಶಂಸೆ.

#### ಜ್ಞಾನವೇ ಉತ್ತಮ.

* ಜ್ಞಾನದಿಂ ಮೇಲಿಲ್ಲ ಶ್ವಾನನಿಂ ಕೀಳಿಲ್ಲ ।
ಭಾನುಮಂಡಲದಿಂ ಬೆಳಗಿಲ್ಲ ಜಗದೊಳು ।
ಜ್ಞಾನವೇ ಅಧಿಕ ಸರ್ವಜ್ಞ ॥ ೨೬೪ ॥

† ಜ್ಞಾನದಿಂದಲೆಇಹವು ಜ್ಞಾನದಿಂದಲೆ ಪರವು ।
ಜ್ಞಾನವಿಲ್ಲದಲೆ ಸಕಲವು ತನಗಿದ್ದು ।
ಹಾನಿಕಾಣಯ್ಯ ಸರ್ವಜ್ಞ ॥ ೨೬೫ ॥

† ಅರಿವಿನಾಅರಿವು ತಾ ಧರೆಯೊಳಗೆ ಮೆರೆದಿಹುದು ।
ಅರಿವಿನಾ ಅರಿವ ಹರಿಹರ ಬೊಮ್ಮರೂ ।
ಅರಿಯರು ಕಂಡ್ಯಾ! ಸರ್ವಜ್ಞ ॥ ೨೬೬ ॥

† ಎತ್ತಹೋದರು ಮನವ ಹತ್ತಿಕೊಂಡೇ ಬಹುದು ।
ಮತ್ತೊಬ್ಬ ಸೆಳೆದುಕೊಳಲರಿಯ ಜ್ಞಾನದ ।
ಬಿತ್ತು ಲೇಸೆಂದ ಸರ್ವಜ್ಞ ॥ ೨೬೭ ॥

ಭಕ್ತಿ ಕೂಡಿದ ಜ್ಞಾನವೇ ಸರ್ವೋತ್ತಮ.

* ತತ್ವದಾಜ್ಞಾನತಾ[1] । ನುತ್ತಮವೆನಬೇಕು ।
ಮತ್ತೆ ಶಿವಧ್ಯಾನ ಬೆರೆದರೆ ಶಿವನಿಂ– ।
ದತ್ತಲೆನಬೇಕು ಸರ್ವಜ್ಞ ॥ ೨೬೮ ॥

* ನಾಟರಾಗವು ಲೇಸು; ತೋಟ ಮಲ್ಲಿಗೆ ಲೇಸು; ।
ಕೂಟವು ಲೇಸು ಹಿರಿಯರೊಳು; ಶಿವನ ಅರಿ– ।
ದಾಟವೇ ಲೇಸು; ಸರ್ವಜ್ಞ ॥ ೨೬೯ ॥

ಸೃಷ್ಟಿ ವಿವೇಕ.

† ಒಂದರಾ ಮೊದಲೊಳಗೆ ಬಂದಿಹುದು ಜಗವೆಲ್ಲ ।
ಒಂದರಾ ಮೊದಲನರಿದಡೆ ಜಗಕಣ್ಣ ।
ಮುಂದೆ ಬಂದಿಹುದು! ಸರ್ವಜ್ಞ ॥ ೨೭೦ ॥

† ವನಧಿಯೊಳಡಗಿತೆರೆ ವನಧಿಯೊಳೆಸೆವಂತೆ ।
ಚಿನುಮಯನಿಪ್ಪ ನಿಜದೊಳು ತ್ರೈಜಗದ ।
ಜನನ ತಾನೆಂದ! ಸರ್ವಜ್ಞ ॥ ೨೭೧ ॥

---

1. A. ಸತ್ಯರ ಚಿತ್ರವು.

† ಕನಕವು ಕಂಕಣದಾ ಜನಕನೆಂದೆನಿಸಿಹುದು ।
ಕ್ಷಣಿಕವು ರೂಪವೆಂದರಿಯದ ಮನುಜನು ।
ಶುನಕನಲೆದಂತೆ ಸರ್ವಜ್ಞ ॥ ೨೭೨ ॥

† ಭಿತ್ತಿಯಾ ಚಿತ್ರದಲಿ ತತ್ವತಾನೆರೆದಿಹುದು! ।
ಚಿತ್ರತ್ವ ತನ್ನ ನಿಜದೊಳಗೆ; ತ್ರೈಜಗದ ।
ತತ್ವ ತಾನೆಂದ! ಸರ್ವಜ್ಞ ॥ ೨೭೩ ॥

### ಈಶ್ವರ ವಿವೇಕ.

#### ಆತ್ಮಸ್ವರೂಪಿ.

* ಓಂಕಾರ ಮುಖವಲ್ಲ ಆಕಾರವದಕಿಲ್ಲ ।
ಆಕಾಶದಂತೆ ಅಡಗಿಪ್ಪ ಪರಬೊಮ್ಮ ।
ತಾ ಕಾಣದಯ್ಯ! ಸರ್ವಜ್ಞ ॥ ೨೭೪ ॥

* ಕ್ಷೀರದಿ ಘೃತ, ವಿಮಲ ನೀರಿನೊಳು ಶಿಖಿಯಿರ್ದು ।
ಆರಿಗು ತೋರದದರಂತೆ[1] ಎನ್ನೊಳಗೆ ।
ಸಾರಿಹನು ಶಿವನು ಸರ್ವಜ್ಞ ॥ ೨೭೫ ॥

#### ಜಗದ್ಭರಿತ.

† ಕಲ್ಲಿನಲಿ ಮಣ್ಣಿನಲಿ ಮುಳ್ಳಿನಾ ಮೊನೆಯಲ್ಲಿ ।
ಎಲ್ಲಿ ನೆನೆದಲ್ಲಿ ಶಿವನಿರ್ಪ ಅವನೀಸಿ- ।
ದ್ದಲ್ಲಿಯೇ ಇರುವ ಸರ್ವಜ್ಞ ॥ ೨೭೬ ॥

* ಕಲ್ಲು ಕಾಷ್ಟದೊಳಿರುವ ಮುಳ್ಳು ಮೊನೆಯಲ್ಲಿರುವ ।
ಸುಳ್ಳು ಈ ಮಾತು ಎನಬೇಡ ಪರಮಾತ್ಮ ।
ನೆಲ್ಲೆಲ್ಲು ಇರುವ ಸರ್ವಜ್ಞ ॥ ೨೭೭ ॥

---

1. B. ತೋರದಿರುವಂತೆ.

ಜಗದತೀತ.

* ತಿಟ್ಟೆಯೊಳು ತೆವರದೊಳು ಹುಟ್ಟಿಹನೆ ಪರಶಿವನು ।
ಹುಟ್ಟುಸಾವುಗಳು ಅವಗಿಲ್ಲ ಜಗವನು ।
ಬಿಟ್ಟಿಹನು ನೋಡ ಸರ್ವಜ್ಞ ॥ ೨೭೮

ಸರ್ವಗತ.

† ಸರ್ವಾಂತರ್ಯಾಮಿಯು ಓರ್ವನೆಂಬುವ ತತ್ವ ।
ನಿರ್ದಿಷ್ಟವಾಗಿ ಇರುತಿರೆ ಮೋಕ್ಷವು ।
ಸರ್ವರಿಗೆ ಸುಲಭ ಸರ್ವಜ್ಞ ॥ ೨೭೯

ಆತ್ಮಸ್ಥ.

* ಸಣ್ಣನೆಯ ಮಳಲೊಳಗೆ ನುಣ್ಣನೆಯ ಶಿಲೆಯೊಳಗೆ ।
ಬಣ್ಣಿಸಿ ಬರೆದ ಪಟದೊಳಗೆ ಇರುವಾತ ।
ತನ್ನೊಳಗೆ ಇರನೆ ಸರ್ವಜ್ಞ ॥ ೨೮೦ ।

* ಆನೆಕನ್ನಡಿಯಲ್ಲಿ ತಾನಡಗಿ ಇಪ್ಪಂತೆ ।
ಜ್ಞಾನವುಳ್ಳರ ಹೃದಯದಿ ಪರಶಿವನು ।
ತಾನಡಗಿ ಇಹನು ಸರ್ವಜ್ಞ ॥ ೨೮೧ ।

ತ್ವಂಪದಾರ್ಥರಹಿತ.

* ನಾನು ನೀನು ಭೇದಗ । ಳೇನು ಬೊಮ್ಮಗೆ ಇಲ್ಲ ।
ತಾನೇ ತಾನಾಗಿ ಇಪ್ಪುದೆ ಬೊಮ್ಮದ ।
ಸ್ಥಾನವೆಂದರಿಗು ಸರ್ವಜ್ಞ ॥ ೨೮೨ ।

ತ್ರಿಮೂರ್ತಿಗಳಿಗೆ ಮೀರಿದವ.

* ನೂರು ಕಂಡುಗ ಹೊಟ್ಟ ತೂರಿದರೆ ಫಲವೇನು ।
ಮೂರರಾ ಮಂತ್ರದಿಂದಲಿ ಪರಬೊಮ್ಮ ।
ಮೀರಿಹುದು! ನೋಡ ಸರ್ವಜ್ಞ ॥ ೨೮೩ ।

## ಮಾಯಾ ವಿವೇಕ.

### ಕರ್ಮದಿಂದ ದೇವರು ಮರೆ.

* ಕಾಣಿಸಿರುವಂತವನ ಕಾಣದೇಕಿರುವಿರೋ ।
ಕಾಣಲು ಬಿಡಲು ಕರ್ಮಗಳು ನಿನ್ನಿರದ ।
ಆಣೆ ಇಟ್ಟಿಹವು ಸರ್ವಜ್ಞ ॥ ೨೮೪ ॥

### ಮಾಯಾಜಾಲ.

* ಜೊಳ್ಳು ಮನುಜರು ತಾವು ಸುಳ್ಳು ಸಂಸಾರದೊಳು ।
ಮಳ್ಳಿಡಿದು ಮಾಯೆಯೆಂಬವಳ ಬಲೆಯೊಳು ।
ಹೊಳ್ಳಾಡುತಿಹರು ಸರ್ವಜ್ಞ ॥ ೨೮೫ ॥

* ಇಲ್ಲದಾ ಮಾಯೆಯದು ಎಲ್ಲಿಂದೇನಲರಿಯದೆ ।
ಬಲ್ಲಿತು ಮಾಯೆಯೆನಬೇಡ! ತಿಳಿಯಲ್ಕೆ ।
ಎಲ್ಲಿಹುದು ಮಾಯೆ? ಸರ್ವಜ್ಞ ॥ ೨೮೬ ॥

* ಕಾಯವಿಂದ್ರಿಯದಿಂದ ಜೀವವಾಯುವಿನಿಂದ ।
ಮಾಯವು ಬೊಮ್ಮನಿಂದೆಂಬುವಾನಾಯ ।
ಬಾಯ ನೋಡೆಂದ ಸರ್ವಜ್ಞ ॥ ೨೮೭ ॥

### ಮಾಯೆಯ ಮಿಥ್ಯಾತ್ವ.

* ಇಲ್ಲದನು ಇಲ್ಲೆನಲಿ। ಕಿಲ್ಲಿಯೇ ಕಲಿಯದಲೆ ।
ಇಲ್ಲದಾ ಮಾಯೆಯುಂಟೆಂಬ ಮೂಢಾತ್ಮ- ।
ಗೆಲ್ಲಿಯದು ಮುಕ್ತಿ? ಸರ್ವಜ್ಞ ॥ ೨೮೮ ॥

## ಜನ್ಮಾಂತರ ವಿವೇಕ.

### ಅಜ್ಞಾನದಿಂದ ಪುನರ್ಜನ್ಮಪ್ರಾಪ್ತಿ.

* ಪಂಚಭೂತತತ್ವದೊಳ ಸಂಚತಾ ನರಿಯದೇ ।
ಹಂಚನು ಹಿಡಿದು ತಿರಿದುಂಬ ಶಿವಯೋಗಿ ।
ಹಂಚು ಹರಿಯುಹನು ಸರ್ವಜ್ಞ ॥ ೨೮೯ ॥

† ಪಂಚವಿಂಶತಿ ತತ್ವ ಸಂಚಯದ[1] ದೇಹವನು ।
ಹಂಚೆಂದು[2] ಕಾಣಲರಿಯರು; ಭವಮುಂದೆ ।
ಗೊಂಚಲಾಗಿಹುದು! ಸರ್ವಜ್ಞ ॥ ೨೯೦ ॥

* ಒಂದು[3] ಆವಿಗೆ ಭಾಂಡ ಒಂದೊಂದು ಭೋಗವನು ।
ಅಂದದಿ ಸಂದು[4], ಒಡೆದು, ಹಂಚಾದಂತೆ ।
ಬಿಂದುವಿನ ದೇಹ; ಸರ್ವಜ್ಞ ॥ ೨೯೧ ॥

### ಜ್ಞಾನದಿಂದ ಜನ್ಮಾಂತರ ಮುಕ್ತಿ.

* ಮತ್ತೆ ಸದ್ಗುರು ಮುಖದಿ ತತ್ವಮಸಿಯನೆ ತಿಳಿದು ।
ಸತ್ಯವಿಂತೆಂದು ಅರಿದಿಪ್ಪ ಜ್ಞಾನಿಯು ।
ಸತ್ತು ಹುಟ್ಟುವನೆ? ಸರ್ವಜ್ಞ ॥ ೨೯೨ ॥

### ಪುನರ್ಜನ್ಮ ಮಿಥ್ಯಾತ್ವ.

* ಸತ್ತ ಬಳಿಕಾ ಜೀವ । ವೆತ್ತ ಹೋಹುದನರಿಯ ।
ರತ್ತ ಪರಲೋಕವೆಂಬವರ ತಲೆಯುಲಿ ।
ಪಿತ್ತವೇರಿಹುದು! ಸರ್ವಜ್ಞ ॥ ೨೯೩ ॥

---

1. G. S. ಚಂಚಲದ 2. P. ಮಿಂಚೆಂದು 3. A. ಬೆಂದ 4. A.C. ಅಂದಂದಿಗುಂಡು

* ಸತ್ತು ಹುಟ್ಟುವರೆಂಬ ಮಿಥ್ಯದಾ ನುಡಿಯೇಕೆ ।
ಬಿತ್ತಿದರೆ ಬೀಜ ಬೆಳೆವಂತೆ ವೃಕ್ಷತಾ ।
ಸತ್ತು ಹುಟ್ಟುವದೆ? ಸರ್ವಜ್ಞ ॥ ೨೯೪ ॥

### ಜ್ಞಾನಿಯು ಸ್ವರೂಪ ಲಕ್ಷಣ.

#### ನಿತ್ಯಾನಿತ್ಯ ವಿವೇಕ.

† ಆತುಮನ ಬಣ್ಣವನು ಮಾತಿನ ಅಗಾಧವನು ।
ಜಾತಿಯು ನೆಲೆಯನರಿದು ತಾ ಪರಮನಾ- ।
ದಾತನೇ ಜ್ಞಾನಿ ಸರ್ವಜ್ಞ ॥ ೨೯೫ ॥

† ನೆರೆಯುಂಡ ಊಟವದು ಮರಳಿತಾನುಳಿವುದೇ ।
ಸ್ಥಿರವಸ್ಥಿರಗಳ ಮಹಿಮೆಯನರಿದಾತ ।
ವರಜ್ಞಾನಿ ಕಾಣೋ ಸರ್ವಜ್ಞ ॥ ೨೯೬ ॥

#### ಜ್ಞಾನಿಗೆ ಬಂಧನವಿಲ್ಲ.

† ತರಣಿಗೆತಿಮಿರದಾ । ವರಣತಾನಂಟುವದೆ।
ವರಜ್ಞಾನವುಳ್ಳ ಮನುಜಗೆ ಸಂಸಾರ ।
ತಿರುಗಿ ತಾನಹುದೆ ಸರ್ವಜ್ಞ ॥ ೨೯೭ ॥

* ಮುತ್ತು ನೀರೊಳು ಪುಟ್ಟಿ ಮತ್ತೆ ನೀರಪ್ಪುದೇ ।
ಸತ್ಯವನರಿದ ಜ್ಞಾನಿ ಸಂಸಾರವ ।
ಮತ್ತೆ ಹೊದ್ದುವನೆ? ಸರ್ವಜ್ಞ ॥ ೨೯೮ ॥

* ತಿಳಿಯ ಕಾಸಿದ ತುಪ್ಪ। ವಳಿದು ಹಾಲಪ್ಪುದೇ ।
ಕಳೆಬೆಳಗರಿದ ಶಿವಯೋಗಿ ಸಂಸಾರ- ।
ದೊಳಗೆ ಸಿಲುಕುವನೆ? ಸರ್ವಜ್ಞ ॥ ೨೯೯ ॥

* ಹುಟ್ಟದಿಹ ತಾಯಿಯೊಳು ಹುಟ್ಟಿದನು ಮಗನೊಬ್ಬ! ।
ಹುಟ್ಟಿಸಿದ ತಾಯ ತಾಕೊಂದು, ನೆರೆಸತ್ತು ।
ಹುಟ್ಟದೆ ಹೋದ! ಸರ್ವಜ್ಞ ॥ ೨೦೦ ॥

* ಗಗನಕ್ಕೆ ಹೊಗೆಹೋಗಿ ಮಿಗೆ ಕೆಳಗೆ ಬಪ್ಪುದೇ ।
ಅಗಣಿತಫಲವ ಸವಿದನು ಸಂಸಾರ- ।
ದಘವ ಹೊದ್ದುವನೆ ಸರ್ವಜ್ಞ ॥ ೨೦೧ ॥

* ಓಡು ಮಣ್ಣಿಲಿ ಹುಟ್ಟಿ ಕೂಡುವದೆ ಜಾತಿಯನು ।
ರೂಢಿಗೀಶ್ವರನ ಬೆರೆದನು ಸಂಸಾರ ।
ಕೂಡಿ ಹೋಗುವನೆ ಸರ್ವಜ್ಞ ॥ ೨೦೨ ॥

† ಪರುಷಕ್ಕೆ ಲೋಹದಾ ಕರಡಿಗೆಯು ತಾನಹುದೆ ।
ಹರಭಕ್ತನಾದ ಯೋಗಿಗೆ ಸಂಸಾರಾ- ।
ವರಣವುಂಟಹುದೆ ಸರ್ವಜ್ಞ ॥ ೨೦೩ ॥

* ಆನೆ ಮುಕುರದೊಳಡಗಿ ಭಾನು ಸರಸಿ[1]ಯೊಳಡಗಿ[2] ।
ಆನೆನ್ನ ಗುರುವಿನೊಳಡಗಿ ಸಂಸಾರ ।
ತಾನದೆತ್ತಣದು ಸರ್ವಜ್ಞ ॥ ೨೦೪ ॥

* ಇಂದ್ರಿಯವ ತೊರೆದಾತ ವಂದ್ಯನಹ ಜಗಕೆಲ್ಲ ।
ಬಿಂದುವಿನ ಭೇದವರಿದ ಮಹಾತ್ಮನು ।
ಬೆಂದನುಲಿಯಂತೆ! ಸರ್ವಜ್ಞ ॥ ೨೦೫ ॥

---

1. O. ಶರಧಿ 1, & 2. P. ಭಾನುವೊಳು ಶಶಿ

ಜ್ಞಾನಿಗೆ ಮಾಯವಿಲ್ಲ.

* ತನ್ನ ತಾನರಿದಂಗೆ ಮುನ್ನ ಹೊದ್ದದು ಮಾಯೆ ।
ಉನ್ನತವಪ್ಪ ಗಜವೇರಿ ಬಪ್ಪವನ ।
ಕುನ್ನಿ ಕಚ್ಚುವದೆ ಸರ್ವಜ್ಞ ॥ ೩೦೬ ॥

* ಬೇಡನಿಕ್ಕಿದಡುಂಬ ಕೂಡನಾಂಜಾತಿಯನು ।
ಬೀಡು ಮಾಣಿಕವು[1] ಸರಿಯೆಂಬ ಯೋಗಿಯ ।
ಕಾಡುವಳೆ ಮಾಯೆ ಸರ್ವಜ್ಞ ॥ ೩೦೭ ॥

* ಜ್ಞಾನಿ ಸಂಸಾರದೊಳು ತಾನಿರಲು ತಿಳಿದಿಹನು ।
ಭಾನು ಮೋಡದಲಿ[2] ಹೊಳೆವಂತೆ ಸದಮಲ- ।
ಸ್ಥಾನದೊಳಿಹನು ಸರ್ವಜ್ಞ ॥ ೩೦೮ ॥

ಜ್ಞಾನಿಗೆ ಪಾಪವಿಲ್ಲ.

* ಆತುಮನ ಜೋತಿಯನು ಪ್ರೀತಿಯಲಿ ಅರಿದಂಗೆ ।
ಸೂತಕವಿಲ್ಲ ಭಯವಿಲ್ಲ ಪಂಚಮಹಾ ।
ಪಾತಕಗಳಿಲ್ಲ ಸರ್ವಜ್ಞ ॥ ೩೦೯ ॥

ಜ್ಞಾನಿಗೆ ಚಿಂತೆಯಿಲ್ಲ.

* ಜಾತಿಸೂತಕವಳಿದು ಮಾತಿನಾಗುಣ ತಿಳಿದು ।
ಆತುಮನ ನಿಜವನರಿದು ನಿಂದಾತನಿ- ।
ಗೇತರದು ಚಿಂತೆ ಸರ್ವಜ್ಞ ॥ ೩೧೦ ॥

1. D. A. ಕಾಂಚನವು. 2. G. S. ಮಂಡಲದಿ

ಜ್ಞಾನಿಗೆ ಭಯವಿಲ್ಲ.

* ಎಂಜಲವು ಹೊಲೆಯಿಲ್ಲ[1] ಸಂಜೆಬೆಳಗುಗಳಿಲ್ಲ[2] ।
ಅಂಜಿಕೆಯಿಲ್ಲ ಭಯವಿಲ್ಲ ಜ್ಞಾನವೆಂ[3]- ।
ಬಂಜನವಿರಲು[4] ಸರ್ವಜ್ಞ ॥ ೩೧೧ ॥

* ಆನೆ ಮೇಲಿದ್ದವನು ಸೋನ ಕಂಡೋಡುವನೆ ।
ಜ್ಞಾನ ಹೃದಯದಿ ನೆಲಸಿದ ಶಿವಯೋಗಿ ।
ಹೀನಗಂಜುವನೆ ಸರ್ವಜ್ಞ ॥ ೩೧೨ ॥

* ಒಳಗಣಾ ಜ್ಯೋತಿಯಾ ಬೆಳಗನರಿದಾತಂಗೆ ।
ಬೆಳಗಾದುದೇಳು ಬೇಹಾರಕೆಂದೆಂಬ ।
ಕಳವಳವೇಕೆ? ಸರ್ವಜ್ಞ ॥ ೩೧೩ ॥

* ಆನೆ ನೀರಾಟದಲಿ ಮೀನಕಂಡಂಜುವದೆ? ।
ಹೀನಮಾನವರ ಬಿರುನುಡಿಗೆ ತತ್ವದ ।
ಜ್ಞಾನಿಯಂಜುವನೆ? ಸರ್ವಜ್ಞ ॥ ೩೧೪ ॥

ನಿರ್ದ್ವಂದ್ವಿ.

* ಯೋಗಿಗೆ ಹೊಲೆಯಿಲ್ಲ ಸಾಗರಕೆ ನೆಲೆಯಿಲ್ಲ ।
ಯೋಗವಟ್ಟಿಗೆಗೆ ಮೊಳವಿಲ್ಲ ಜ್ಞಾನಿಗೆ ।
ಆಗುಹೋಗಿಲ್ಲ ಸರ್ವಜ್ಞ ॥ ೩೧೫ ॥

ತೀರ್ಥಯಾತ್ರೆ ಅನವಶ್ಯ.

* ವಾರಣಾಸಿಗೆ ಹೋಹ ಕಾರಣವದೇನಯ್ಯ ।
ತಾರಣ[5] ಪುರುಷನೊಳಗಿರಲು ಅಲೆವುದಕೆ ।
ಕಾರಣವ ಹೇಳು[6] ಸರ್ವಜ್ಞ ॥ ೩೧೬ ॥

---

1. P. ಅಲ್ಲ F. ಎಲ್ಲಿ? 2. P. ಸಂಜೆಗತ್ತಲೆಯುಲ್ಲ 3 & 4 G. S. ಶಿವಕೃಪೆಸಂಜಾತನಿರಲು
5 & 6 F. ಕಾರಣಾತ್ಮನು ಕರದೊಳಗಿರುತಿರಲು । ದೂರವೇಕಯ್ಯ?

ಹತ್ತಿರದಲ್ಲಿಯೇ ಇರುವದು.

* ಸತ್ಯವೆಂಬುದು ತಾನು[1] ಹಿತ್ತಲದ ಗಿಡನೋಡ[2]।
ಮತ್ತೆಲ್ಲಿ ನೋಡಿಯರಸದೆ ತಾನಿರ್ದ।
ಹತ್ತಿಲೇ ನೋಡ! ಸರ್ವಜ್ಞ ॥ ೩೧೭ ॥

* ಇಲ್ಲಿಲ್ಲವೆಂಬುದನು ಇಲ್ಲಿಯೇ ಅರಸುವದು!।
ಇಲ್ಲಿಲ್ಲದಿಲ್ಲವೆಂದರಿದಡದು ಜಗ-।
ವೆಲ್ಲದೊಳಗಿಕ್ಕು ಸರ್ವಜ್ಞ ॥ ೩೧೮ ॥

ಬ್ರಹ್ಮಜ್ಞಾನ ಸ್ವರೂಪಲಕ್ಷಣ.

ನಿರಭಿಮಾನಿ.

† ಶ್ವಾನನಾನೆಯ ಬೊಗಳ। ಲಾನೆ ತಾ ಬೊಗಳುವದೆ।
ಜ್ಞಾನಿಯು ಶ್ವಾನನಂತೆ ತಾ ಬೊಗಳಲಭಿ-।
ಮಾನವವಗಿಹುದೆ ಸರ್ವಜ್ಞ ॥ ೩೧೯ ॥

* ಬಲ್ಲೆನೆಂದೆಂಬುವವ। ರೆಲ್ಲರೂ ಹಿರಿಯರೇ?।
ಸೊಲ್ಲಿನಾ[3] ಭೇದವರಿದಡೆ ಕಿರಿಯತಾ[4]।
ನೆಲ್ಲರಿಗೆ ಹಿರಿಯ ಸರ್ವಜ್ಞ ॥ ೩೨೦ ॥

* ಬಲ್ಲೆನೆಂಬುವ ಮಾತು ಎಲ್ಲವೂ ಹುಸಿಕಾಣೊ![5]।
ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರ-।
ಬಲ್ಲವನೆ ಬಲ್ಲ ಸರ್ವಜ್ಞ ॥ ೩೨೧ ॥

---

1 & 2 A. ತತ್ವವೆಂಬುದುತನ್ನ ಹತ್ತಿಲಿಹುದು ನೋಡ! 3. W. K. ಸೊಲ್ಲಿಸಿ 4. C. ಕಿರಿಯಾತ
5. W. ಕಾಣ-ಬಲ್ಲರೆ

ನಿರಹಂಕಾರಿ.

* ಅರಿದೆನೆಂಬುವಗೊಂದು ಕುರುಹುಂಟು ಬೊಮ್ಮವನು ।
ಅರಿದಿಹೆನೆಂಬ ಅರಿವತಾನರಿದಡಾ ।
ತೆರನಿಲ್ಲಬೊಮ್ಮ ಸರ್ವಜ್ಞ ॥ ೩೨೨ ॥

† ಬೊಮ್ಮತಾನೆಂಬುವದು। ಸುಮ್ಮನೇ ಬಹುದಲ್ಲ ।
ಹಮ್ಮಿನ ಪಥವನಳಿದರೆ ಪರಬೊಮ್ಮ ।
ಗಮ್ಮನೇ ಅಕ್ಕು ಸರ್ವಜ್ಞ ॥ ೩೨೩ ॥

* ಬೊಮ್ಮವನು ಅರಿದಿಹರೆ ಸುಮ್ಮನೇ ಇರಬೇಕು ।
ಬೊಮ್ಮವನರಿದು ಉಸುರಿದರೆ ಕಳಹೋಗಿ ।
ಕೆಮ್ಮಿದಂತಕ್ಕು ಸರ್ವಜ್ಞ ॥ ೩೨೪ ॥

* ಸತ್ಯವನು ಅರಿದಿಹರೆ ಸತ್ತಹಾಗಿರಬೇಕು— ।
ಸತ್ಯವನರಿದು ಉಸುರಿದರೆ ಸತ್ತವರಿ ।
ಗೆತ್ತಹಾಗಕ್ಕು ಸರ್ವಜ್ಞ ॥ ೩೨೫ ॥

* ತನ್ನ ನೋಡಲಿ ಎಂದು ಕನ್ನಡಿಯು ಕರೆವುದೇ ।
ತನ್ನಲಿ ಜ್ಞಾನವುದಿಸಿದ ಮಹಾತ್ಮನು ।
ಕನ್ನಡಿಯಂತೆ ಸರ್ವಜ್ಞ ॥ ೩೨೬ ॥

* ಸತ್ತಹಾಗಿರು ಎಂಬು। ದೆತ್ತಣದ ಬಯ್ಗಳವು ।
ಕತ್ತೆ ಮಾನವರು ಅರಿಯರು; ಇದು ಮಹಾ ।
ತತ್ವದ ಮಾತು! ಸರ್ವಜ್ಞ ॥ ೩೨೭ ॥

1. V. ಉದಿಸಿದನು ಲೋಕಕ್ಕೆ

ಹರಿಹರ ಬ್ರಹ್ಮರಿಗೂ ಅಹಂಕಾರ.

* ಅರಿವನರಿದಡೆಜೀವ ನೆರೆಸದಾಶಿವನಕ್ಕು ।
ಅರುವಿನಾತೆರನಮರೆದಡೆ ಹರಿಬೊಮ್ಮ- ।
ರಿರವಿನಂತಕ್ಕು ಸರ್ವಜ್ಞ ॥ ೩೨೮ ॥

† ಅರಿವನರಿಯದೆ ಜೀವ ಪರಬೊಮ್ಮವನರಿಯದು ।
ಅರಿವಿನಾ ಅರಿವ ಹರಿಹರ ಬೊಮ್ಮರೂ ।
ಅರಿಯರೇಕಯ್ಯ? ಸರ್ವಜ್ಞ ॥ ೩೨೯ ॥

ಬ್ರಹ್ಮಜ್ಞನಿಗೆ ವಾದವಿಲ್ಲ.

* ವೇದಕ್ಕೆ ಬೆಲೆಯಿಲ್ಲ ಭೇದಕ್ಕೆ ಹೊಲಬಿಲ್ಲ ।
ಸಾಧಕೆಗೆ ಆವ ಭಯವಿಲ್ಲ ಜ್ಞಾನಿಗೆ ।
ವಾದವೇ ಇಲ್ಲ ಸರ್ವಜ್ಞ ॥ ೩೩೦ ॥

ಬ್ರಹ್ಮಜ್ಞನಿಗೆ ಭೇದವಿಲ್ಲ.

† ತಾನೊಂದನೆಯ್ದಿದನು ಏನೊಂದು ಪಿಡಿದಿರನು; ।
ತನ್ನಂತೆ ಪರರ ಕಾಂಬನು; ಜಗವೆಲ್ಲ ।
ತಾನಾದ ಬಳಿಕ! ಸರ್ವಜ್ಞ ॥ ೩೩೧ ॥

ಬ್ರಹ್ಮಜ್ಞನಿಗೆ ಜಗಳವಿಲ್ಲ.

* ಅದ್ವಯಿತ ತಾನಾಗಿ ಯುದ್ಧವಿನ್ನಾರೊಡನೆ ।
ಬುದ್ಧಿಯಿಂ ತನ್ನನರಿದಂಗೆ ಲೋಕದ ।
ಗುದ್ದಾಟವಿಲ್ಲ ಸರ್ವಜ್ಞ ॥ ೩೩೨ ॥

ಬ್ರಹ್ಮಜ್ಞನಿಗೆ ಜಾತಿಯಿಲ್ಲ.

† ಕೋತಿಗೆ ಗುಣವಿಲ್ಲ ಮಾತಿಗೆ ಕೊನೆಯಿಲ್ಲ ।
ಸೋತು ಹೋದವಗೆ ಸುಖವಿಲ್ಲ; ಅರಿದಗೆ ।
ಜಾತಿಯೇ ಇಲ್ಲ; ಸರ್ವಜ್ಞ ॥ ೩೩೩ ॥

## ಬ್ರಹ್ಮಜ್ಞಾನ ವರ್ತನ.

### ಸಂಸಾರ ಧಿಕ್ಕಾರಿ.

* ಜಾರೆಯಾ ಶಿಸುವಳಲು ಆರೈಸಿ ಪತಿ ಕರೆಯೆ ।
ಜಾರೆಯುದ ಕಂಡು ನಗುವಂತೆ ಜ್ಞಾನಿ ಸಂ— ।
ಸಾರಿಯ[1] ನಗುವ ಸರ್ವಜ್ಞ ॥ ೩೩೪

* ಮೂಲ ವಸ್ತುವನರಿದು ಲೀಲೆಯೊಳು ಆಡುತಿಹ ।
ಶೂಲಿಯ ಶರಣ, ಸತಿಯುರನು, ಹೇತಿರುವ ।
ಹೇಲೆಂದು ಅರಿವ ಸರ್ವಜ್ಞ ॥ ೩೩೫

* ಸುಂದರಾಂಗನೆ ಬಂದು ಮುಂದೆ ತಾ ನಿಂದಿರಲು ।
ಸಂದರಿವನರಿದ ಜ್ಞಾನಿಯು ಎಲುವಿನ ।
ಹಂದರವ ಕಾಂಬ ಸರ್ವಜ್ಞ ॥ ೩೩೬

* ಹೇಲು ವೈಗ್ಧತ್ತಿದಾ ಬಾಲನಂತಿರಬೇಕು ।
ಜಾಲದ ಭ್ರಮೆಗೊಳಬೀಳದ ಜ್ಞಾನಿಯು ।
ಶೂಲಿಯಂತಕ್ಕು ಸರ್ವಜ್ಞ ॥ ೩೩೭

### ಖಂಡಿತವಾದಿ.

* ಕೆಪ್ಪರದಲುಂಬುವರು ಒಪ್ಪರದಿ ನಡೆಯುವರು ।
ತಪ್ಪಿದರೆ ಹಲ್ಲ ಕಳಿವರು; ಮಹಾತ್ಮರ ।
ಒಪ್ಪವಂ ನೋಡ! ಸರ್ವಜ್ಞ ॥ ೩೩೮

### ಆತ್ಮತೃಪ್ತ

* ದೊರಕಿದನು ಉಂಡುಂಡು ದೊರಕಿದನು ಉಟ್ಟುಟ್ಟು ॥
ದೊರಕಿದಲಿ ಶಯನಗಯ್ವನು ಲೋಕಕ್ಕೆ ।
ನಿರುತನಾಗಿಕ್ಕು ಸರ್ವಜ್ಞ ॥ ೩೩೯

1, G. S. ಸಂಸಾರಕೆ.

ಸ್ಥಿರಚಿತ್ತಿ

ತಿರಿದರೇ ಕೂಳಕ್ಕು ಕೆರೆದರೇ[1] ಬೋಳಕ್ಕು ।
ಕರೆದರೆ ಅಡ್ಡ[2] ಹೆಸರಕ್ಕು ನಿಜವಿರಲು ।
ಸ್ಥಿರಗೊಳ್ಳಲಕ್ಕು ಸರ್ವಜ್ಞ ॥ ೩೪೦ ॥

ಸಹನಶೀಲನು

ಚಂದನವ ಕರಗಿಸಲು ಬೆಂದು ಪರಿಮಳವಕ್ಕು ।
ಸಂದರಿವನರಿದ ಸತ್ಪುರುಷರೆನಿಪರು ।
ನೊಂದು ಸೈರಿಪರು ಸರ್ವಜ್ಞ ॥ ೩೪೧ ॥

ಇಂದು ನಾಳಿಗೆ ಎಂದು ತಂದು ಕೂಡಿಡಬೇಡ ।
ಬಂದುದನುಂಡು ಸುಖಿಯಾಗಿ ಬೇನೆಯು ।
ಬಂದಾಗ ನರಳು ಸರ್ವಜ್ಞ ॥ ೩೪೨ ॥

ಬಂದೀತು ರೋಗ ನಿನ। ಗೆಂದು ಅಂಜಿಕೆಬೇಡ ।
ಬಂದುದನು ಉಂಡು ಸುಖಿಸುತ ರೋಗ ಬಂ- ।
ದಂದಿಗೆದ್ದೇಳು ಸರ್ವಜ್ಞ ॥ ೩೪೩ ॥

ಹೇಗೆವರ್ತಿಸಿದರೂ ಚಂದ

ನೆತ್ತದಾ ಹಾಸಂಗಿ ಎತ್ತ ಬಿದ್ದರು ದಾಯ ।
ತತ್ವದ ನೆಲೆಯನರಿದಾತನೊಲಿದು ತಾ- ।
ನೆತ್ತಿರ್ದಡೇನು ಸರ್ವಜ್ಞ ॥ ೩೪೪ ॥

ಏನಾದಡೇನಯ್ಯ ತಾನಾಗದಿರುವನಕ ।
ತಾನಾಗಿ ತನ್ನ ನರಿದಿಪ್ಪ ಜ್ಞಾನಿಯು ।
ಏನಾದಡೇನು ಸರ್ವಜ್ಞ ॥ ೩೪೫ ॥

---

1. P. ತೆರೆದರೆ = ಗುಟ್ಟುಬಿಡೆದರೆ 2. P. ದೊಡ್ಡ

### ಆತ್ಮಜ್ಞನೇ ಬ್ರಹ್ಮಜ್ಞನು.

#### ಆತ್ಮಜ್ಞನ ಲಕ್ಷಣ.

* ತನ್ನ ತಾನರಿದಾತ ತನ್ನ ಜ್ಞಾನದೊಳಡಗಿ ।
ತನ್ನ ಬಂಧುಗಳ ನೆರೆದೊರೆದು ಪರಬೊಮ್ಮ- ।
ದುನ್ನತಿಯೊಳಿಹನು ಸರ್ವಜ್ಞ ॥ ೩೪೬ ॥

* ತನ್ನ ತಾನರಿದಂಗೆ ಭಿನ್ನ ಭಾವನೆಯಿಲ್ಲ ।
ತನ್ನವರಿಲ್ಲ ಪರರಿಲ್ಲ ತ್ರೈಭುವನ ।
ತನ್ನೊಳಗಿಹುದು ಸರ್ವಜ್ಞ ॥ ೩೪೭ ॥

#### ಆತ್ಮಜ್ಞಾನದ ಫಲ.

† ತನ್ನ ತಾನರಿದಿಹನು ಸನ್ನುತನಾಗಿಹನು ।
ತನ್ನ ತಾನರಿಯದಿರುವನು ಹಾಳೂರ ।
ಕುನ್ನಿಯಂತಕ್ಕು ಸರ್ವಜ್ಞ ॥ ೩೪೮ ॥

* ಬಿಂದುವು ಬಲಿದಾತ ವಂದ್ಯನಹ ಜಗಕೆಲ್ಲ ।
ಬೆಂದನುಲಿಯಂತೆ ಆದಾತ ಜಗದೊಳ- ।
ಗಿಂದುಧರನಕ್ಕು ಸರ್ವಜ್ಞ ॥ ೩೪೯ ॥

#### ಆತ್ಮಜ್ಞನೇ ಬ್ರಹ್ಮಜ್ಞ.

* ಅರಿವಿನಾ ಇರವ ತಾ । ನರಿಯಲದರಿದಿಹುದು ।
ಅರಿವಿನಅರಿವನರಿವಡಾತನು ತನ್ನ- ।
ನರಿಯುದದನರಿಯು ಸರ್ವಜ್ಞ ॥ ೩೫೦ ॥

† ಚೆನ್ನ ತಾನರಿಯುವಡೆ ಮುನ್ನ ತನ್ನರಿಯುವದು ।
ತನ್ನ ತಾನರಿವ ಪರಿಯೆಂತದೆಂದಡೆ ।
ಅನ್ಯನಿಂದರಿಗು ಸರ್ವಜ್ಞ ॥ ೩೫೧ ॥

† ನಿನ್ನ ನೀನರಿಯುವರೆ ನಿನ್ನಿಂದಲರಿಯುವದು ।
ನಿನ್ನನು ಅರಿಯದಿರುವನಕ ನಿನ್ನ ನೀ- ।
ನನ್ಯನೆಂದರಿಗು ಸರ್ವಜ್ಞ ॥ ೩೫೨ ॥

## ಜ್ಞಾನಾಜ್ಞಾನ ವಿವೇಕ.

### ಅಜ್ಞಾನ ಲಕ್ಷಣ.

॥ ದೃಷ್ಟವೆಲ್ಲವು ತಾನು ನಷ್ಟವೆಂದರಿಯದೆ ।
ಕಷ್ಟ ವಿಷಯದಿ ಇಷ್ಟವಜ್ಞಾನವು ।
ಸ್ಪಷ್ಟ ತಿಳಿಯೆಂದ ಸರ್ವಜ್ಞ ॥ ೩೫೩ ॥

† ನೀರ ಬೊಬ್ಬುಳಿಯಂತೆ ತೋರುತಿಹ ದೇಹದ ।
ಸಾರವರಿಯದೇ ಸುಖಿಪುದಜ್ಞಾನದ ।
ದಾರಿಯುಹುದೆಂದ ಸರ್ವಜ್ಞ ॥ ೩೫೪ ॥

### ಜ್ಞಾನದ ಲಕ್ಷಣ.

* ಅಟ್ಟಡಿಗೆಯೂ ರುಚಿಯು ಹುಟ್ಟು[1]ತಾ ಬಲ್ಲದೇ? ।
ಶ್ರೇಷ್ಠರುಗಳೆಂದು ಎನಬೇಡ! ಅರುಹಿನ ।
ಬಟ್ಟೆ[2]ಬೇರೆಂದ! ಸರ್ವಜ್ಞ ॥ ೩೫೫ ॥

* ಕುರಿಕಬ್ಬಿನೊಳು ಹೊಕ್ಕು ಅರಿವುದೇ ತನಿರಸವ? ।
ಹೊರಗಣ ಸೋಗೆಯುಗಿವಂತೆ ಜ್ಞಾನದ ।
ಕುರುಹು ಬೇರೆಂದ ಸರ್ವಜ್ಞ ॥ ೩೫೬ ॥

1. P. ಹುಟ್ಟು 2. P. ದೃಷ್ಟಿ

* ಹೇಳ ಬಲ್ಲಡೆ ಬೋಳು[1] ಕೇಳ ಬಲ್ಲಡೆ ಬೋಳು।
ಹೇಳಲು ಕೇಳಲರಿಯದಡಂ ಬೋಳು।
ಕಾಳು ಬೋಳೆಂದ! ಸರ್ವಜ್ಞ ॥ ೩೫೭ ॥

* ತನ್ನ ತಾನರಿಯುವದು ತನ್ನ ಬಿಟ್ಟಿರುತಿಹುದು।
ತನ್ನನೊಲ್ಲದರ ತೊರೆದಿಹುದು; ಜ್ಞಾನವು।
ಬಿನ್ನಣವಲ್ಲ! ಸರ್ವಜ್ಞ ॥ ೩೫೮ ॥

ಜ್ಞಾನ್ಯಜ್ಞಾನಿಗಳ ಭೇದ.

* ಜ್ಞಾನಿಗಜ್ಞಾನಿಗೆ ತಾನೊಂದು ಕುರುಹುಂಟು।
ಏನೊಂದನಾತ[2] ನುಡಿದರೆ ಜ್ಞಾನಿಯು।
ಮೌನವಾಗಿಹನು ಸರ್ವಜ್ಞ ॥ ೩೫೯ ॥

† ಕೋಡಗನು ತಾನೊಂದ। ನೇಡಿಸುವದೇ ಸಹಜ।
ಮೂಢಾತ್ಮ ಕೇಡ ನುಡಿದರೆ ಜ್ಞಾನಿ ಮಾ-।
ತಾಡದಿರುತಿಹನು ಸರ್ವಜ್ಞ ॥ ೩೬೦ ॥

* ಜ್ಞಾನವುಳ್ಳವನೊಡಲು ಭಾನುವಿನ ತೆರನಿಹುದು।
ಜ್ಞಾನವಿಲ್ಲದನ ಬರಿಕಾಯ ಹಾಳೂರ[3]।
ಸ್ಥಾನದಂತಕ್ಕು[4] ಸರ್ವಜ್ಞ ॥ ೩೬೧ ॥

ಜ್ಞಾನ್ಯಜ್ಞಾನಿಗಳ ಸಂಗ

* ಬಂದೊಂದು ಹನಿಬಿದ್ದು ನಿಂದಲ್ಲಿ ಮಡುವಕ್ಕು।
ಸಂದಸತ್ಪುರುಷರೊಡನಾಡೆ ಪರಬೊಮ್ಮ।
ಮುಂದೆ ಬಂದಕ್ಕು ಸರ್ವಜ್ಞ ॥ ೩೬೨ ॥

1. C. ಇಲ್ಲಿ ಬಾಳು ಎಂದು ಅಧಿಕ ಪಾಠವಿರುವದು. 2. D. ಏನೊಂದನಾತು.
3&4. K ಅಗಸರ ಬಾನೆಯಂತಕ್ಕು

* ಕೋಟಿಯನು ಕೊಟ್ಟರೂ ಕೂಟಕರ್ಮಿಯಹೊಲ್ಲ ।
ನೋಟದಿ ನಿಜವನರಿವ ಸುಜ್ಞಾನಿಯು ।
ಕೂಟವೇ ಲೇಸು ಸರ್ವಜ್ಞ || ೩೬೩ ||

* ಬಂಧನವ ಮಾಡಿದರು ಸಂದಜ್ಞಾನಿಯೆ ಲೇಸು ।
ಹೊಂದಿ[1] ಸಾಸಿರವ ಕೊಟ್ಟರೂ ಕರ್ಮಿಯ ।
ದಂದುಗವೆ ಬೇಡ ಸರ್ವಜ್ಞ || ೩೬೪ ||

ಮಿಥ್ಯಾಜ್ಞಾನಿ.

* ಮಾತಿನಾಬೊಮ್ಮವೂ ತೂತಾದ ಮಡಿಕೆಯೂ ।
ಪಾತಕನ ನೆರೆಯು[2] ಇವು ಮೂರು ಲೋಕದೊ- ।
ಳೇತಕ್ಕು ಬೇಡ ಸರ್ವಜ್ಞ || ೩೬೫ ||

† ಗುರಿಯು ತಾಗದ ಬಾಣ ನೂರಾರನೆಸದೇನು? ।
ಬರಿ ಮಾತನಾಡಿ ಫಲವೇನು? ನಿಜಗುಣ- ।
ದರಿವು ಇಲ್ಲದಿರೆ! ಸರ್ವಜ್ಞ || ೩೬೬ ||

* ಕರ್ಮಿಗೆ ತತ್ವದಾ ಮರ್ಮದೊರಕೊಂಬುದೇ ।
ಚರ್ಮವ ತಿಂಬ ಶುನಕಂಗೆ ಪಾಯಸದ ।
ಕೂರ್ಮೆಯೇಕಯ್ಯಾ ಸರ್ವಜ್ಞ || ೩೬೭ ||

* ಬೊಮ್ಮವನು ಅರಿದಿಹರೆ ಬಿಮ್ಮಗಿದ್ದಿರಬೇಕು ।
ಸುಮ್ಮನೆ ಬೊಮ್ಮವ ಬೊಗಳಲು ಬರಡಾದ ।
ಎಮ್ಮೆ ಕರೆದಂತೆ ಸರ್ವಜ್ಞ || ೩೬೮ ||

---

1. D. ಒಂದು 2. W. K. ಹೆಸರು.

† ಬ್ರೊಮ್ಮವನು ಅರಿಯದಲೆ ಕರ್ಮವನು ಬಿಟ್ಟಿಹರೆ ।
ಹೆಮ್ಮೆಲಿ ಹೆರನ ಹೊಡೆಯಲು ಹಿಡಿದವನು ।
ಗುಮ್ಮಿಕೊಂಡಂತೆ ಸರ್ವಜ್ಞ ॥ ೩೬೯

* ನೆಟ್ಟನೇ ಅರಿದಿಹರೆ ಬಿಟ್ಟ ಕೈ ಕೂಸಕ್ಕು ।
ಬಿಟ್ಟವರ ಕಂಡು ಬಿಟ್ಟರೆ ಎರಡರಿಂ ।
ಕೆಟ್ಟನೆಂದರಿಗು ಸರ್ವಜ್ಞ ॥ ೩೭೦ ॥

* ಪ್ರಾಣಜಂಗಮನೆಂದು ಕೋಣೆಯೊಳು ತಾನುಂಬ ।
ಜಾಣನಾಭಕ್ತಿ ತನಗೆಂಬ ಮರುಳನ ।
ಕೇಣವನು ನೋಡು ಸರ್ವಜ್ಞ ॥ ೩೭೧ ॥

* ಉಡಿಗೆಯನು ಉಡಬಹುದು ಜಡೆಯಕಟ್ಟಲುಬಹುದು ।
ಬಿಡದೆ ವಿರಕ್ತಿಯೊಳಿರಬಹುದು ಬ್ರೊಮ್ಮವ ।
ಹಿಡಿಯಲಳವಲ್ಲ ಸರ್ವಜ್ಞ ॥ ೩೭೨ ॥

* ವೇದಶಾಸ್ತ್ರಾಗಮವ । ನೋದಿದೊಡೆ ಫಲವೇನು ।
ವೇದಿಸುವ ಚಿತ್ತ ಸಮರಸವಿಲ್ಲದೊಡೆ ।
ಬೂದಿಯಲಿ ಹೋಮ ಸರ್ವಜ್ಞ ॥ ೩೭೩ ॥

† ಕೋಟಿಗೀತವನೋದಿ ಪಾಠಯ್ಸಿ ಫಲವೇನು ।
ಕೂಟಸ್ಥನಲ್ಲದವನೋದು ಗಿಳಿಕಲಿತ ।
ಪಾಠದಂತಕ್ಕು ಸರ್ವಜ್ಞ ॥ ೩೭೪ ॥

† ಪರ್ವತವನೇರಿನ್ನು ಗರ್ವತನಗೇಕಯ್ಯ ।
ಸರ್ವಂತರ್ಯಾಮಿ ಶಿವನಿರೆ, ತನ್ನೊಳಗೆ ।
ಮರ್ಮವಿಹುದೇಕೆ? ಸರ್ವಜ್ಞ ॥ ೩೭೫ ॥

* ಆನೆಗಂಜಿಕೆಯೇಕೆ ಶ್ವಾನಂಗೆ ಸಭೆಯೇಕೆ[1] ।
ದಾನಿಗೆ ದೀನತನವೇಕೆ ಜ್ಞಾನಿಗೆ ।
ಹೀನತನವೇಕೆ[2] ಸರ್ವಜ್ಞ ॥ ೩೭೬ ॥

* ಸಾಲುವೇದಗಳೇಕೆ ಮೂಲಮಂತ್ರಗಳೇಕೆ ।
ಮೇಲುಕೀಳೆಂಬ ನುಡಿಯೇಕೆ? ತತ್ವದ ।
ಕೀಲನರಿದವಗೆ ಸರ್ವಜ್ಞ ॥ ೩೭೭ ॥

* ಬಿಂದುನಾದಗಳೆಂಬ ನಂದನದ ವನವುಂಟು ।
ಇಂದುಧರನೆಂಬ ಕೊಳನುಂಟು; ತಿಳಿನೀರ ।
ಮಿಂದುಂಬರಿಲ್ಲ ಸರ್ವಜ್ಞ ॥ ೩೭೮ ॥

* ಹೇಳಲು ಕೇಳಲು ಬಾಳಲೋಚನಗಳವೆ ।
ತಾಳದಂಡಿಗೆ ಹೊರತಾದ ಹೇಳುವೆಯು ।
ಕೇಳುವನೆ ಹೆಡ್ಡ ಸರ್ವಜ್ಞ ॥ ೩೭೯ ॥

* ಒಮ್ಮನದಿ ಬಿತ್ತಕ್ಕು ಇಮ್ಮನದಿ ಜಳ್ಳಕ್ಕು ।
ಒಮ್ಮನದಿ ಮೋಕ್ಷಪದವಕ್ಕು ಜ್ಞಾನಿತಾ- ।
ನಿಮ್ಮನದಿ ಕೆಡುವ ಸರ್ವಜ್ಞ ॥ ೩೮೦ ॥

* ತತ್ವಮಸಿ ಎಂಬುದರ ಅರ್ಥವನು ಅರಿಯುದಲೆ ।
ತುತ್ತುಸವಿಯೆಂದು[3] ಉಣಗಲಿತ ಶಿವಯೋಗಿ- ।
ಗೆತ್ತಣದು ಮುಕ್ತಿ ಸರ್ವಜ್ಞ ॥ ೩೮೧ ॥

---

1, F. ಸೊಬಗೇಕೆ 2. W. ಹಾನತನ, 3. P. ಸವಿವುದನು,

* ತೂರ ತುದಿಗೊಂಬೆಯ । ನೇರಿದಾ ಶಿವಯೋಗಿ ।
ಬೇರೊಂದು ಬಯಸಿ ಹರಿದರೆ, ಬೆಳಗಾಗಿ ।
ಸೂರೆ ಹೋದಂತೆ; ಸರ್ವಜ್ಞ ॥ ೩೮೨ ॥

* ಅರಿವೆಂಬುದಾತ್ಮಂಗೆ ನೆರೆ ನಿಜದ ಕಾಣಿಕೆಯು ।
ಅರಿದಾತನರಿವ[1] ಮರೆದಡೆ ನಯನವ[2]– ।
ಸಿರಿದು ಕೊಂಡಂತೆ[3] ಸರ್ವಜ್ಞ ॥ ೩೮೩ ॥

* ಎಲ್ಲವನು ಬಲ್ಲಡೇ ಬಲ್ಲೆನೆಂದೆನಬೇಕು ।
ಅಲ್ಲಲ್ಲಿಗೊಂದನರಿದುಲಿಯೆ ಬಲುಮೆಗೆ[4] ।
ಕಲ್ಲು ಹೊತ್ತಂತೆ ಸರ್ವಜ್ಞ ॥ ೩೮೪ ॥

* ಅದ್ವಯಿತಕೋಡಾಡಿ[5] ಇದ್ದುದನು ಹೋಗಾಡಿ ।
ಉದ್ದನ[6] ಮರದ ತುದಿಗೇರಿ ತಲೆಯೂರಿ ।
ಬಿದ್ದು ಸತ್ತಂತೆ ಸರ್ವಜ್ಞ ॥ ೩೮೫ ॥

* ಕಂಬಳಿಯ ಹೊದೆವತ । ನ್ನಿಂಬಿನೊಳಗಿರಬೇಕು ।
ಕಂಬಳಿಯು[7] ಬೆನ್ನಬಿಡದಿರಲು ನರಕದ ।
ಕುಂಭದೊಳಿಹನು ಸರ್ವಜ್ಞ ॥ ೩೮೬ ॥

## ಬಂಧಮೋಕ್ಷ ವಿವೇಕ.

### ಭಕ್ತಿಹೀನತ್ವದಿಂದ ಬಂಧನ.

* ಅಡವಿಯೊಳು ಮೌನದಲಿ ದೃಢತಪದೊಳಿರ್ದುಃಶಿವ– ।
ನಡಿಯ ಪಡೆಯದಲೆ ಮಡಿದಡೆ[8] ಭವಬೆನ್ನು ।
ಬಿಡದೆ ಬಂದಿಹದು ಸರ್ವಜ್ಞ ॥ ೩೮೭ ॥

1. F. ಶಿವನ. 2 & 3. C. ಗಾಣದಿ ಕೈಮುರಿದುಕೊಂಡಂತೆ. A. ಕಾಣದೆ ಕೈವರ ದಂಕ ಅಕ್ಷ್ಯಂ. 4. D. ಬಲುಮೊಗ. 5. G. S. ..ವನು ಆಡಿ. D. ಕಾಡಾಡಿ. 6. D. ಹೊದ್ದ 7. P. ಕಂಬಲದ. 8. F. ನಡೆಯಲ್ಲಿ ಶಿವನ ಮರೆದಡೆ.

* ತನುವೆಂಬ ತನಿಯೆಣ್ಣೆ ನೆನಹೆಂಬ ತಿಳಿದುಪ್ಪ ।
ಘನಜ್ಞಾನಜೋತಿಯಂುರಿಯಲ್ ಜ್ಞಾನದ ।
ನೆನಹಂದೆತ್ತಣದು? ಸರ್ವಜ್ಞ ॥ ೩೮೮ ॥

* ಧ್ಯಾನದಾ ಹೊಸಬತ್ತಿ ಮೌನದಾ ತಿಳಿದುಪ್ಪ ।
ಸ್ವಾನುಭವವೆಂಬ ಬೆಳಗಿನಾ ಜೋತಿಯಂ[1]– ।
ಜ್ಞಾನವಂ ಸುಡುಗು[2] ಸರ್ವಜ್ಞ ॥ ೩೮೯ ॥

॥ ಗೊಬ್ಬರದೊಳಿಹ ಕಿಡಿಯು ಒಬ್ಬರರಿಯದೆ ಹೊತ್ತಿ ।
ಗೊಬ್ಬರವು ಬೂದಿಯಪ್ಪಂದಜ್ಞಾನದ– ।
ಮಬ್ಬೆಲ್ಲ ಕೆಡುಗು ಸರ್ವಜ್ಞ ॥ ೩೯೦ ॥

* ಅರವುಕೂಡಿತು ಪ್ರಾಣ ಕುರುಹು ದೊರೆಯಿತು[3] ಜಾಣ ।
ಹರುವಾಗಿ ಹೋಯ್ತು ಭವನೂಲೆ, ಮುಕ್ತಿಯ ।
ಇರವು ನಿರ್ಭಯವು; ಸರ್ವಜ್ಞ ॥ ೩೯೧ ॥

† ಆತ್ಮಗಂಗೆಯ ಮಿಂದು ಜೋತಿಲಿಂಗವನರಿಯೆ ।
ಪಾತಕವು ಕೋಟಿ ಪರಿವುದು ಆತ ಪರ– ।
ಮಾತುಮನಕ್ಕ ಸರ್ವಜ್ಞ ॥ ೩೯೨ ॥

* ಅಕ್ಕರವು ಲೇಖಕ್ಕೆ[4] ತರ್ಕತಾವಾದಕ್ಕೆ ।
ಮಿಕ್ಕಓದುಗಳು ತಿರುಪೆಗೆ, ಮೋಕ್ಷಕ್ಕೆರ– ।
ಡಕ್ಕರವೆ ಸಾಕು; ಸರ್ವಜ್ಞ ॥ ೩೯೩ ॥

---

1 & 2. C. ಸ್ವಾನುಭವವಿರದ.... ಅಜ್ಞಾನದಿಂ ಕೆಡಗು, 3. G.S. ಬೆರೆಯಿತು.
4. W. K. ಲೆಕ್ಕಕ್ಕೆ.

† ಮಾನವು ಮನುಜಗೆ ಮೌನಶಿವಯೋಗಿಗೆ ।
ಜ್ಞಾನವುಬೇಕು ಹಿರಿಯರಿಗೆ, ಮೋಕ್ಷಕ್ಕೆ ।
ಧ್ಯಾನವೇಬೇಕು! ಸರ್ವಜ್ಞ. ॥ ೩೯೪ ॥

ಪ್ರಬೋಧ.

* ಎಣ್ಣೆಬೆಣ್ಣೆಯರಿಣವು ಅನ್ನವಸ್ತ್ರದರಿಣವು ।
ಹೊನ್ನೆಣ್ಣಿನ ರಿಣವು ತೀರಿದಾಕ್ಷಣದಿ ।
ಮಣ್ಣು ಪಾಲೆಂದ ಸರ್ವಜ್ಞ ॥ ೩೯೫ ॥

* ಸತ್ತು ಹೋದರೆ ನಿನಗೆ । ದೆತ್ತಣದು ಮೋಕ್ಷವೈ ।
ಸತ್ತು ಹೋಗದತಿ ಜೀವಿರಲು ಮೋಕ್ಷದ ।
ಗೊತ್ತು ತಿಳಿಯೆಂದ ಸರ್ವಜ್ಞ ॥ ೩೯೬ ॥

## ೯ ಯೋಗಪದ್ಧತಿ.

ಯೋಗಮಹತ್ವ.

* ಕತ್ತಲೆಯುತಾವಿಂಗೆ ಉತ್ತಮವು ಜ್ಯೋತಿ ತಾ ।
ಮತ್ತೆ ಪ್ರಜ್ವಲಿಸುವಾ ತಾವು ಬೆಳಗಲ- ।
ತ್ಯುತ್ತಮವಕ್ಕು ಸರ್ವಜ್ಞ ॥ ೩೯೭ ॥

† ಯೋನಿಜರು ಯೋಗಿಯನು ಹೀನವೆನ್ನುವದೇನು ।
ಆನಂದಸ್ಥಾನದೊಳಿರಲು ಯೋಗಿಯ ।
ಮಾನ ಘನವಹುದು ಸರ್ವಜ್ಞ ॥ ೩೯೮ ॥

† ನಿಜವಿಜಯ ಬಿಂದುವಿನ ಧ್ವಜಪತಾಕೆಯು ಬಿರುದ ।
ಅಜಹರಿ ನುತಿಸಲರಿಯರಾಮಂತ್ರವನು ।
ನಿಜಯೋಗಿ ಬಲ್ಲ! ಸರ್ವಜ್ಞ ॥ ೩೯೯ ॥

1. A. G. S. ಕಾಳಿಂಗೆ.

ಯೋಗನಿರೂಪಣೆ

* ಯೋಗವನು ಮನಮುಟ್ಟಿ ಭೋಗವನು ತೊನೆದಿಹರೆ ।
ಮಾಗಿಯ ಮಳೆಯು ಸುರಿದಂತೆ ಆ ಯೋಗ- ।
ಸಾಗುತ್ತಲಿಹುದು ಸರ್ವಜ್ಞ ॥ ೪೦೦ ॥

* ದಾಸಿಯಾ[1] ಕೊಡದಂತೆ ಸೂಸುತಿಪ್ಪುದುಯೋಗ ।
ದಾಸಿ ಪರಪುರುಷನಾಶಿಸಿ ನಗಲದು[2] ।
ಬೀಸಿಬಿದ್ದಂತೆ[3] ಸರ್ವಜ್ಞ ॥ ೪೦೧ ॥

ಯೋಗವಿದ್ಯೆ

* ಅಷ್ಟದಳ ಕಮಲದಲಿ ಕಟ್ಟಿ ತಿರುಗುವ ಹಂಸ ।
ಮೆಟ್ಟುವಾದಳದ ನಡುವಿನಲಿರುವದನು ।
ಮುಟ್ಟುವನೆ ಯೋಗಿ! ಸರ್ವಜ್ಞ ॥ ೪೦೨ ॥

† ಅಷ್ಟದಳ ಕಮಲವನು ಮೆಟ್ಟಿಪ್ಪ ಹಂಸತಾ ।
ಮುಟ್ಟಿಪ್ಪ ಗತಿಯ ನರಿಯದಾ ಯೋಗಿಯು ।
ಕೆಟ್ಟನೆಂದರಿಗು ಸರ್ವಜ್ಞ ॥ ೪೦೩ ॥

* ಕಟ್ಟಜಾಡನ ಉಂಕೆ ಮುಟ್ಟುವದು ಮೂರೂರ ।
ಬಟ್ಟೆಯು ನಾಲ್ಕು, ಪದ ಮೂರು, ಅವನೂರು ।
ಬೆಟ್ಟದ ಮೇಲೆ! ಸರ್ವಜ್ಞ ॥ ೪೦೪ ॥

* ಕುಂಡಲಿಯ ಭೇದದಾ ಕಂದನಾಡಿಯ ನಡುವೆ ।
ಮುಂಡಿಸುತಿರ್ಪ ಹಂಸನ ಹತ್ತಿರವೆ ।
ಕಂಡಿಹುದು ಸುಳುವು ಸರ್ವಜ್ಞ ॥ ೪೦೫ ॥

---

1. A. ದೂಸಿಯಾ 2 & 3. P. ದೂಸಿಯು ಅಣಿಗೆ ಕಸನಿರಲು ಕೊಡವೃತಾ । ಸೂಸದಿದ್ಧಂತೆ G. S. ಕೊಡದಾಸೆ ಬಿಟ್ಟಂತೆ.

† ಬೆರಳು ನಾಲ್ಕರ ನಡುವೆ ಎರಳವಾಡುವಹಂಸ ।
ಕೊರಳ ನಾಳದಲಿ ಕಾಣುವದೆ ಯೋಗದ ।
ತಿರುಳು ನೋಡೆಂದ ಪರಮಾರ್ಥ (ಸರ್ವಜ್ಞ) ॥ ೪೦೬ ॥

* ತನ್ನ ನಾಭಿಯ ಕೆಳಗೆ ವಹ್ನಿ ಮಂಡಲವುಂಟು ।
ವಹ್ನಿ ಮಂಡಲದ ಕೆಳಗಣ ನಾಡಿಯಲಿ ।
ತನ್ನ ಕಾಣೆಂದ! ಪರಮಾರ್ಥ (ಸರ್ವಜ್ಞ) ॥ ೪೦೭ ॥

* ನಾದದಾ ಬಳಿವಿಡಿದು ಅಯ್ದಿಸುವ ಪರಮನಾ ।
ಹಾದಿಯ ನರಿದು ಸುಖಿಯಾಗು ಜನುಮದ[1] ।
ಹಾದಿಗೊಳಬೇಡ ಪರಮಾರ್ಥ (ಸರ್ವಜ್ಞ) ॥ ೪೦೮ ॥

### ಯೋಗ್ಯ ಯೋಗಿಯ ಲಕ್ಷಣ.

ಪಾಪರಹಿತನು.

† ಕೋಪಕ್ಕೆ ಯಮರಾಜ ಪಾಪಕ್ಕೆ ಜವರಾಜ ।
ಕೋಪ ಪಾಪಗಳಳಿದಂಗೆ ಯಮನುತಾ ।
ಕೂಪನಾಗಿಹನು ಪರಮಾರ್ಥ (ಸರ್ವಜ್ಞ) ॥ ೪೦೯ ॥

ಸಮಸುಖದುಃಖಿ.

* ಕೋಪವೆಂಬುದು ತಾನು ಪಾಪಕ್ಕೆ ನೆಲಗಟ್ಟು ।
ಆಪತ್ತು ಸುಖವು ಸರಿಯೆಂದು ಪೋಪಗೆ ।
ಪಾಪವೆಲ್ಲಿಹುದು? ಪರಮಾರ್ಥ (ಸರ್ವಜ್ಞ) ॥ ೪೧೦ ॥

ಕ್ರೋಧ ಭೇದಗಳನ್ನರಿದವನು.

* ಕ್ರೋಧದಿಂದಲೆ ಯೋಗಿ ಬಾಧೆಗೊಳಗಾಗುವನು ।
ಸಾಧಿಸಿ ವ್ರತವ ಪಿಡಿದರೆ, ನಿಜವರಿದು, ।
ಭೇದ ಗುಣವಳಿವ ಪರಮಾರ್ಥ (ಸರ್ವಜ್ಞ) ॥ ೪೧೧ ॥

---

1. A. ಬಹುವಾಸದ.

ಕುಲವಿಲ್ಲದವನು.

* ಮೊಲೆಯಿಲ್ಲದಾ ಆವು ತಲೆಯಲ್ಲಿ ಕರೆಯುವುದು ।
ಸಲೆನೆಲೆ[1]ಯರಿದು ಕರೆದುಂಬ ಯೋಗಿಯ ।
ಕುಲನಾಶವೆಂದ ಸರ್ವಜ್ಞ ॥ ೪೧೨ ॥

ಹೊಲೆಯಿಲ್ಲದವನು.

* ಹೊಲೆಯಿಲ್ಲ ಅರಿದಂಗೆ ಬಲವಿಲ್ಲ ಬಡವಂಗೆ ।
ತೊಳೆ ಕಂಭವಿಲ್ಲಗಗನಕ್ಕೆ, ಯೋಗಿಗೆ ।
ಕುಲವೆಂಬುದಿಲ್ಲ! ಸರ್ವಜ್ಞ ॥ ೪೧೩ ॥

† ಮುಟ್ಟಿನಾ ಹೊಲೆಯೊಳಗೆ ಹುಟ್ಟಿಹನು ಶಿವಯೋಗಿ ।
ಮುಟ್ಟದು ಮಲಿನ ವಾರಿಯನು! ಆ ಹೊಲೆಯ ।
ಸುಟ್ಟೊರಸಿ ಕಳೆದ! ಸರ್ವಜ್ಞ ॥ ೪೧೪ ॥

ಆಶಾರಹಿತನು.

† ಆಶೆಯಾ ಬಾವುಗನ ರೋಷದುರಗನ ಕಳೆದು ।
ಮಾಸಿದುದ ಮಡಿಯ ಮಾಡಿದಾಯೋಗಿಯು ।
ಶಾಶ್ವತನಕ್ಕು ಸರ್ವಜ್ಞ ॥ ೪೧೫ ॥

† ಕಂಜದೊಳಗೆ ತೇಜಃ । ಪುಂಜರಂಜಿಸುತಿರಲು ।
ಅಂಜನಸಿದ್ಧ ಶಿವಯೋಗಿ ತಾ ಕುಟಿಲ ।
ಮಂಜರೆಯಕಾದ ಸರ್ವಜ್ಞ ॥ ೪೧೬ ॥

† ರಾಗವಿದ್ದರೆ ಭೋಗ ಭೋಗವಿದ್ದರೆ ರಾಗ ।
ರಾಗದಿ ಸಕಲ ಸಂಪದವು ಜಗದಿವಿ- ।
ರಾಗವೇಯೋಗ ಸರ್ವಜ್ಞ ॥ ೪೧೭ ॥

---

1. G. S. ನೇವು.

ಅಹಂಕಾರ ಬಿಟ್ಟವನು.

† ಹಮ್ಮು ಎಂಬುವಕಿಚ್ಚು ಒಮ್ಮೆಲೇ ನಂದುವದೆ? ।
ಬೊಮ್ಮ ಹರಿಬೆಂದು ಜಗಬೆಂದುದಾಕಿಚ್ಚ ।
ಗುಮ್ಮಹನೆ ಯೋಗಿ ಸರ್ವಜ್ಞ ॥ ೪೧೮ ॥

ರಾಗ ದ್ವೇಷಗಳಿಲ್ಲದವನು.

* ಆಗು ಹೋಗುಗಳಿಲ್ಲ ಮೇಗು ಕೀಳುಗಳಿಲ್ಲ ।
ಭೋಗಗಳಿಲ್ಲ ಮೊದಲಿಲ್ಲ ಯೋಗಿಗೆ ।
ರಾಗದ್ವೇಷಿಲ್ಲ ಸರ್ವಜ್ಞ ॥ ೪೧೯ ॥

* ಕಿಚ್ಚಿಗೆ ತೃಪ್ತಿಲ್ಲ ಮೊಚ್ಚೆಗೆ ಹೊಲೆಯಿಲ್ಲ ।
ಚುಚ್ಚಿ ಕೊಡುವಗೆ ಗತಿಯಿಲ್ಲ, ಯೋಗಿಗೆ ।
ಇಚ್ಛೆಗಳಿಲ್ಲ; ಸರ್ವಜ್ಞ ॥ ೪೨೦ ॥

ಹಸಿವು ಕೊಂದವನು.

* ಹಸಿವು ಕೊಂಡಾಯೋಗಿ ವಸುಧಿಗೇಶ್ವರನಕ್ಕು ।
ಪಶುಪತಿಯಕ್ಕು ಕೈಲಾಸವಾತಂಗೆ ।
ವಶವರ್ತಿಯಕ್ಕು ಸರ್ವಜ್ಞ ॥ ೪೨೧ ॥

ಕೊಲೆ, ಸುಳ್ಳು, ಕಳ್ಳತನ, ಕಾಮ ಬಿಟ್ಟವನು.

* ಹಸಿವ ಕೊಂದಾತಂಗೆ ಪಶುವಧೆಯ ಮಾಡದಗೆ ।
ಹುಸಿ, ಕರ್ಮ, ಕಾಮವಳಿದಗೆ ಇಹಪರದಿ ।
ಶಶಿಧರನೊಲಿವ ಸರ್ವಜ್ಞ ॥ ೪೨೨ ॥

ಸ್ತುತಿ ನಿಂದೆಗಳನ್ನಳಿದವನು.

* ಯತಿಗೇಕೆ ಕೋಪ? ದುರ್ಮತಿಗೇಕೆ ಪರತತ್ವ? ।
ಪತಿವ್ರತೆಗೇಕೆ ಪರನೋಟ? ಯೋಗಿಗೆ ।
ಸ್ತುತಿನಿಂದೆಯೇಕೆ? ಸರ್ವಜ್ಞ ॥ ೪೨೩ ॥

ವೇದ ಹೃದಯುಜ್ಞನು.

† ವೇದವೇ ಮೊಲೆ ನಾಲ್ಕು ನಾದವೇ ನೊರೆವಾಲು ।
ಸಾಧಿಸಿಯುಂಬ ಶಿವಯೋಗಿಗಲ್ಲದೆ ।
ವಾದಿಗಳಿಗುಂಟೆ? ಸರ್ವಜ್ಞ || ೪೨೪ ||

ಜಿತೇಂದ್ರಿಯುನು.

* ಓದಿ ಬೂದಿಯ ಪೂಸಿ ತೇದು ಕಾವಿಯ ಹೊದೆದು ।
ಹೋದಾತ ಯೋಗಿಯೆನಬೇಡ! ಇಂದ್ರಿಯುವ ।
ಕಾದಾತ ಯೋಗಿ! ಸರ್ವಜ್ಞ || ೪೨೫ ||

† ಅಂಬರದೊಳಂಭಾವಿ ತುಂಬಿತುಳುಕುತಲಿಹುದು ।
ಉಂಬರೆದಾರಿ ಸರಲವಿಂದ್ರಿಯುವನರಿ- ।
ದುಂಬುವನೆ ಯೋಗಿ! ಸರ್ವಜ್ಞ || ೪೨೬||

* ಮೂರನ್ನು ಆರನ್ನು ಬೇರಿರ್ದ ಏಳನ್ನು ।
ತೋರಿರ್ದ ಎಂಟ ಹರಿದಡೆ ಶಿವಲೋಕ ।
ಸೂರೆ ಕಾಣಯ್ಯ ಸರ್ವಜ್ಞ || ೪೨೭ ||

* ಮೂಳಿಗೆಯ ಮನೆಯಾಗಿ ಮೇಳ[1]ದ್ಹೆಂಡತಿಯಾಗಿ ।
ಹೋಳಿಗೆ ತುಪ್ಪ ಉಣಲಾಗಿ[2] ಇಂದ್ರಿತ್ವ[3] ।
ತಾಳಿದನೆ ಯೋಗಿ[4] ಸರ್ವಜ್ಞ || ೪೨೮ ||

ಸಮತೆಯುಳ್ಳವನು.

* ಒಡಲು ತಾನಳಿವಲ್ಲಿ ಮಡದಿಯುರು ಮಡಿವಲ್ಲಿ ।
ತಡೆಯೆಡರು ನಿಂದೆ ಬರುವಲ್ಲಿ ಸಮತೆಯು ।
ಬಿಡದಿಹನೆ ಯೋಗಿ ಸರ್ವಜ್ಞ || ೪೨೯ ||

---

1 A, ಸೂಳೆ. 2 F. ವಿರಲಾಗಿ, 3. & 4 ಇಂದ್ರತ್ವ ತಾಳಿದಗೆ ಸರಿಯೇ? C...,ದಾಳಿಕೆಗೆ ಸರಿಯು.

ಬ್ರಹ್ಮಾನುಭವಿ.

† ವೇದ ಕರ್ಪುರಬೂದಿ ಓದೊಂದು ಲೇಪನವು ।
ಪಾದ ವಿವಾದದೊಳಿರಬೇಡ ಪರಮನ ।
ಸ್ವಾದಿಪನೆಯೋಗಿ ಸರ್ವಜ್ಞ ॥ ೪೩೦ ॥

† ಅಂಬುಜದ ನವರಸವ । ನಂಬಿನಲಿ ತಾನರಿದು ।
ನಂಬಿಗೆಯಿಂದಾಶಂಭುವ ನೆರೆಸವಿ- ।
ದುಂಬುವನೆಯೋಗಿ ಸರ್ವಜ್ಞ ॥ ೪೩೧ ॥

† ಆತುಮದ ನೆಲೆಯನ್ನು ಚೇತನದ ಬೊಮ್ಮವನು ।
ಜೋತಿಯಿದ್ದೆಡೆಯ ನೀತಿಯಲಿ ನೆರೆಬಲ್ಲ- ।
ಡಾತನೇ ಯೋಗಿ ಸರ್ವಜ್ಞ ॥ ೪೩೨ ॥

† ಇಪ್ಪತ್ತು ಐಯ್ದುಗಳ ತಪ್ಪದಲೆ ತಿಳಿದು ತಾ ।
ಒಪ್ಪ ಕರ್ಮಗಳ ಬದಿಗೊತ್ತಿ ಬೊಮ್ಮನೊಳ- ।
ಗಿಪ್ಪವನೆಯೋಗಿ ಸರ್ವಜ್ಞ ॥ ೪೩೩ ॥

* ಆತುಮದ ಬಣ್ಣವನು ಮಾತಿನಾ ಭೇದವನು ।
ಆತು ಕೊಂಡರಿತು ಜೋತಿಯೊಳು ನೆರೆಬೆರೆ- ।
ದಾತನೇ ಯೋಗಿ ಸರ್ವಜ್ಞ ॥ ೪೩೪ ॥

† ಹೊಂದಿದಂದಿಗೆ ಕೋಟೆ ಸಂದಿತೆಂದೆನಬೇಕು ।
ಕೊಂದು ಷಡ್ರಿಪುಗಳನುಂಡು ನೆರೆ ನಿಜದಿ ।
ನಿಂದವನೆ ಯೋಗಿ ಸರ್ವಜ್ಞ ॥ ೪೩೫ ॥

ಬಡವ.

† ಮುಂಡೆಬೋಳಿಸಿಕೊಂಡು ತುಂಡುಗಂಬಳಿಹೊದೆದು ।
ಹಿಂಡನಗಲಿದ ಗಜದಂತೆ ಇಪ್ಪವರ ।
ಕಂಡು ನಂಬುವದು ಸರ್ವಜ್ಞ ॥ ೪೩೬ ॥

ಭಿಕ್ಷುಕ.

* ಪಕ್ಷಿಗೆ ಸ್ವರಚಂದ ಕುಕ್ಷಿಗಶನವು ಚಂದ ।
ನಕ್ಷತ್ರಚಂದ ಗಗನಕ್ಕೆ ಯೋಗಿಗೆ ।
ಭಿಕ್ಷವೇ ಚಂದ ಸರ್ವಜ್ಞ ॥ ೪೩೭ ॥

* ಬೇಡುವದು ಭಿಕ್ಷವನು ಮಾಡುವದು ತಪವನ್ನು ।
ಕಾಡದೆ ಪರರನೋಡುವನು[1] ಶಿವನೊಳಗೆ ।
ಕೂಡಬಹುದೆಂದ ಸರ್ವಜ್ಞ ॥ ೪೩೮ ॥

* ಭಿಕ್ಷದಾ ಅನ್ನವದು ಮೋಕ್ಷಕ್ಕೆ ಸಾಧನವು ।
ಕುಕ್ಷಿಗೆ ನರರತಾಕಾಡಿ ಉಂಬನು ।
ಮೋಕ್ಷಕ್ಕೆ ದೂರ ಸರ್ವಜ್ಞ ॥ ೪೩೯ ॥

* ತಿರುಕರಿಲ್ಲದ ಊರು ನರಕಭಾಜನಮಕ್ಕು ।
ತಿರುಕರೆ ಗತಿಯು ಮುಕ್ತಿಗೆ, ಶಿವನೆಂಬ ।
ತಿರುಕತಾ ದೈವ! ಸರ್ವಜ್ಞ ॥ ೪೪೦ ॥

* ಕರದಿ ಕಪ್ಪರವುಂಟು ಹಿರಿದೊಂದು ನಾಡುಂಟು ।
ಹರನೆಂಬ ದೈವ ನಮಗುಂಟು, ತಿರಿವರಿಂ ।
ಸಿರಿವಂತರಾರು? ಸರ್ವಜ್ಞ ॥ ೪೪೧ ॥

1. F. ನಾಡಮಾತುಗಳ ಬಿಟ್ಟವನು. 2, G. S. ತಿರಿದುಣಲು. 3. G. S. ನಮಗಿಂತ.

### ಸಮತ್ವ ವಿಮರ್ಶೆ.

* ಸಾವಿಂಗೆ ಸಮತಿಂಗೆ ಆವುದಂತರವಯ್ಯ? ।
ಸಾವು ತಾ ಸಮತೆಯೊಳಗಲ್ಲ; ಕೋಪವ ।
ಕಾವುದೇ[1] ಸಮತೆ; ಸರ್ವಜ್ಞ ॥ ೪೪೨ ॥

* ವ್ಯಾಪಾರವಳಿದಿಲ್ಲ। ದಾಪರವು ಕಾಣಿಸದು ।
ಪಾಪ ಕರ್ಮಗಳ ನತಿಗಳಿದು ನಿಂದವಗೆ ।
ಕೋಪವೆಲ್ಲಿಯದು ಸರ್ವಜ್ಞ ॥ ೪೪೩ ॥

* ಕಾಸಿಯಾ ನುಡಿಬೇಡ ಕ್ಲೇಶದಲಿ ಕೆಡಬೇಡ ।
ಸಾಸಿರದಜಡೆಯ ಹೊರಬೇಡ ಸಮತೆಯಂ- ।
ಭ್ಯಾಸದೊಳಗಿರಲು ಸರ್ವಜ್ಞ ॥ ೪೪೪ ॥

* ಒಡಲೆಂಬ ಹುತ್ತಕ್ಕೆ ನುಡಿವನಾಲಿಗೆ ಸರ್ಪ ।
ಕಡುರೋಷವೆಂಬ ವಿಷವೇರೆ ಸಮತೆ ಗಾ- ।
ರುಡಿಗನಂತಕ್ಕು ಸರ್ವಜ್ಞ ॥ ೪೪೫ ॥

---

## ೧೦ ಶಿವಯೋಗ ಪದ್ಧತಿ.

---

### ಶಿವಯೋಗಿಯ ಲಕ್ಷಣ.

* ಕುಂಡಲಿಯಕಂಡಾತ ಹೆಂಡತಿಗೆ ಒಲಿಯುವನೆ? ।
ಖಂಡಿತದೊಳಿಪ್ಪ ಶಿವಯೋಗಿ ಮಾಂಸದ ।
ಪಿಂಡಕೊಲಿಯುವನೆ ಸರ್ವಜ್ಞ ॥ ೪೪೬ ॥

---

1, K. ಕಾವುದೇ,

* ಕುಂಡಲಿಯನುಂಡಾತ ಖಂಡೆಯರಿಗೊಲಿವನೆ? ।
ಖಂಡ ಸಕ್ಕರೆಯು[1] ಮೆಲುವಾತ ಮುಗ್ಗಿನಾ ।
ಹಿಂಡಿಗೆರಗುವನೆ? ಸರ್ವಜ್ಞ ॥ ೪೪೭ ॥

* ಆಶೆರೋಷವಬಿಟ್ಟು ಈಶಧ್ಯಾನದೊಳಿರಲು ।
ಮೋಸವಮಾಡಿ ಸತಿಬಂದು ಪಿಡಿದರೆ ।
ಹೇಸಿ, ತೊಲಗುವದು![2] ಸರ್ವಜ್ಞ ॥ ೪೪೮ ॥

* ಎಲೆಯ ಮೆಲುವನೆ ಲೋಭಿ? ಕೊಲ್ಲುವನೆ ಧರ್ಮಿಷ್ಠ? ।
ಸಲಹುವನೆ ಮನೆಯ ತುರುಗಾಹಿ? ಸ್ತ್ರೀಯರಿ- ।
ಗೊಲಿಯುವನೆ ಯೋಗಿ? ಸರ್ವಜ ॥ ೪೪೯ ॥

* ಸಂಗವನು ತೊರೆದಂಗೆ ಅಂಗನೆಯರಿರಲೇಕೆ? ।
ಬಂಗಾರವೇಕೆ? ಬಲವೇಕೆ? ಲೋಕದ ।
ಶೃಂಗಾರವೇಕೆ? ಸರ್ವಜ್ಞ ॥ ೪೫೦ ॥

ಶಿವಯೋಗಿ ಹೇಗಿದ್ದರೂ ಚಂದ.

* ಕಲ್ಲಿನೊಳಗಣ ಕಪ್ಪೆ । ಗೆಲ್ಲಿಯಾ ತಾಯ್ತಂದೆ ।
ಅಲ್ಲಿಯೆ ಮರಣ ಪಡೆವಂದ ಹಂಸತಾ- ।
ನೆಲ್ಲಿರ್ದಡೇನು ಸರ್ವಜ್ಞ ॥ ೪೫೧ ॥

* ಅಂತ್ಯಜಾತಿಯೊಳಿರ್ದ ಮುಂತೆ ತೀರ್ಥದೊಳಿರ್ದ ।
ದಂತಿಯೇರಿದನು, ತಿರಿದುಂಬ,[3] ಶಿವಯೋಗಿ- ।
ಯೆಂತಿರ್ದಡೇನು! ಸರ್ವಜ್ಞ ॥ ೪೫೨ ॥

---

1. F. ಬೆಂಡು ಬತ್ತಾಸ, 2. G. S ತೊಲಗುವನು! 3. F. ದಂತಿಯು ಪ್ರೋಲುತಿರುಗುವ.

* ಅಂತಿರ್ದ ಇಂತಿರ್ದ ಎಂತಿರ್ದನೆನಬೇಡ ।
ಕಂತೆಯ ಹೊದ್ದು ತಿರಿದುಂಬ ಶಿವಯೋಗಿ- ।
ಯೆಂತಿರ್ದಡೇನು! ಸರ್ವಜ್ಞ ॥ ೪೫೩ ॥

† ಅತ್ತಿತ್ತ ಹೋದೊಡಂ ಮತ್ತೆತ್ತಲಿರ್ದೊಡಂ ।
ಸುತ್ತುವ ಮನವ ಕಟ್ಟಿರ್ದ ಶಿವಯೋಗಿ- ।
ಯೆತ್ತಿರ್ದಡೇನು ಸರ್ವಜ್ಞ ॥ ೪೫೪ ॥

* ಜೋಗಯ್ಯನೆನಬೇಡ ಯೋಗಿನಿಂದಿಸಬೇಡ ।
ನಾಗಭೂಷಣನ ಹಳಿದ ದಕ್ಷನತಲೆ ।
ಹೋಗಿಹುದು ನೋಡ ಸರ್ವಜ್ಞ ॥ ೪೫೫ ॥

* ಜಡೆಯುಳ್ಳ ಹಿರಿಯರಿಗೆ ಹೆಡೆಯುಳ್ಳ ಸರ್ಪನಿಗೆ ।
ನಡಗುತ್ತ ನಮಿಸಿ ನಯದಿಂದೆಚ್ಚರನು ।
ಬಿಡದೆ ಕೊಡೆ ಭಕ್ತಿ ಸರ್ವಜ್ಞ ॥ ೪೫೬ ॥

* ಹರಿವಜಲತಾ ಶೈತ್ಯ ಘರೆಯೂನೆ ಕೊಲ್ಲುವದು ।
ಹಿರಿಯರ ಕ್ಷಮೆಗೆ[1] ಮುನಿಸಾರೆ ರಿಪುವನು ।
ಇರಿ[2]ಯದೇ ಬಿಡದು ಸರ್ವಜ್ಞ ॥ ೪೫೭ ॥

ಯೋಗ ವಿಘ್ನ.

* ಕೋಪವೆಂಬುದು ಕೇಳಿ ಪಾಪದ ನೆಲೆಗಟ್ಟು ।
ಕೂಪದೊಳು ನೇಣು ಹರಿದಂತೆ ನರಕದಿ ।
ಕೋಪಿತಾನಿಳಿವ ಸರ್ವಜ್ಞ ॥ ೪೫೮ ॥

1. C. ಮುನಿಸಿ. 2. D. ಅರಿ = ಶತ್ರು.

* ಜಡೆಯ ಕಟ್ಟಲುಬಹುದು ಕಡವಸವನುಡಬಹುದು ।
ಬಿಡದೆ ದೇಗುಲದಲಿರಬಹುದು ಕರಣವ ।
ತಡೆಯುವದೆ ಕಷ್ಟ ಸರ್ವಜ್ಞ ॥ ೪೫೯ ॥

* ಅಡವಿಯನು ಹೊಗಬಹುದು ಮಡದಿಯನು ಬಿಡಬಹುದು ।
ಬಿಡದೆ ಧ್ಯಾನದಿರಬಹುದು; ವಾಸನೆಯು ।
ಕೊಡಹಲಳವಲ್ಲ! ಸರ್ವಜ್ಞ ॥ ೪೬೦ ॥

* ತಪವಮಾಡುವೆನೆಂದು ಗುಹೆಯ ಹೊಕ್ಕಿರಬೇಡ ।
ತಪದಲ್ಲಿ ಕುಪಿತ ಬಿಡದಿರಲಾತಪವು ।
ತಪತಾಪ ಕಂಡ್ಯೆ! ಸರ್ವಜ್ಞ ॥ ೪೬೧ ॥

* ಕಣ್ಣೀರು ಬಪ್ಪುವದು ಹೆಣ್ಣಿದ್ದ ಮನೆಯಲ್ಲಿ ।
ತಣ್ಣಗೆ ಧ್ಯಾನದಿರುತಿಪ್ಪ ಶಿವಯೋಗಿ ।
ಮಣ್ಣಾಗಿ ಹೋಹ ಸರ್ವಜ್ಞ ॥ ೪೬೨ ॥

* ಬೆಣ್ಣೆ ಬೆಂಕಿಯ ನಡುವೆ[1] ತಣ್ಣಗಿರಬಲ್ಲದೆ ।
ಹೆಣ್ಣಿದ್ದ ಮನೆಗೆ ಎಡತಾಕಿ ಶಿವಯೋಗಿ ।
ಮಣ್ಣು ಮಸಿಯಾದ ಸರ್ವಜ್ಞ ॥ ೪೬೩ ॥

* ಚಿತ್ತವೆರಡಾಗದಲೆ ಉತ್ತಮರಿರಬೇಕು ।
ಚಿತ್ತ, ವದನೆಯುರ ಸುಳಿದಿರಲವರ ಮು- ।
ಹತ್ವವೆತ್ತಣದು? ಸರ್ವಜ್ಞ ॥ ೪೬೪ ॥

1. W. K, ಸೆಕೆಗೆ.

† ಕೊಟ್ಟದ್ದು ಉಳಿಯುವದೆ ಕಟ್ಟಿದ್ದು ನಿಲ್ಲುವದೆ ।
ಕೆಟ್ಟವಿಷಯುಗಳ ಹಂಗಳ ಬಿಡದಿರೆ ।
ಕೆಟ್ಟಹುದು ತಪವು ಸರ್ವಜ್ಞ ॥ ೪೬೫ ॥

## ಯೋಗಫಲಗಳು.

### ಸಾರೂಪ್ಯ.

† ಒಂದು ಕಂಭದೊಳಯ್ದು ಗಂಧ ಹಂಸನಕಟ್ಟಿ ।
ಒಂದರೊಳು ಮನವು ಬೆರೆದರೆ ಪರಬೊಮ್ಮ- ।
ವಂದು ತಾನಿರುವ ಸರ್ವಜ್ಞ ॥ ೪೬೬ ॥

* ಇಂದ್ರಿಯವು ಮೂತ್ರವು ಒಂದೆನಾಳದಿಬಕ್ಕು ।
ಒಂದು ಬಿಟ್ಟೊಂದು ತಡೆದರೆ ಪರಬೊಮ್ಮ- ।
ವಂದು ತಾನಕ್ಕು ಸರ್ವಜ್ಞ ॥ ೪೬೭ ॥

† ಬ್ರಹ್ಮರಂಧ್ರದಗೊತ್ತು[1] ಒಮ್ಮೆಲೇ ತಿಳಿಯುದು ।
ಹಮ್ಮಿನಹೊಲೆಯ ಕಳೆದೊಗೆದಯೋಗಿ, ಪರ- ।
ಬೊಮ್ಮ ತಾನಕ್ಕು ಸರ್ವಜ್ಞ ॥ ೪೬೮ ॥

* ಬಿಂದುನಾದವ ನುಂಗಿ ಇಂದುರವಿಯುನು ನುಂಗಿ ।
ಸಂದಿರ್ದ ಮನವ ನಿಜನುಂಗಿದಾ ಯೋಗಿ ।
ಇಂದುಧರನಕ್ಕು ಸರ್ವಜ್ಞ ॥ ೪೬೯ ॥

† ಆಸನದಿ ದೃಢನಾಗಿ ವಾಸನೆಯ ತಾಕಳೆದು ।
ಸೂಸುವ ಮನವ ಬಿಗಿದಿಟ್ಟ ಶಿವಯೋಗಿ ।
ಶಾಶ್ವತನಕ್ಕು ಸರ್ವಜ್ಞ ॥ ೪೭೦ ॥

1 G S ಬ್ರಹ್ಮನಾಳದ ಕಿಚ್ಚು.

* ಇಂದ್ರಿಯದ ಆಶೆಗಳ ಸಾದಿಸುತ ಕೊಂದವನು ।
ಸುಂದರನಕ್ಕು ಸುಖಿಯಕ್ಕು ಲೋಕಕ್ಕೆ ।
ಇಂದುಧರನಕ್ಕು ಸರ್ವಜ್ಞ ॥ ೪೭೧ ॥

† ನಿಟಿಲ ಭ್ರೂಮಧ್ಯದಲಿ ನಿಟಿಲಾಕ್ಷ ಮನೆಮಾಡಿ ।
ಕುಟಿಲ ಕುಂದಕವ ಕೆದರಿದ ಶಿವಯೋಗಿ ।
ನಿಟಿಲಾಕ್ಷನಕ್ಕು ಸರ್ವಜ್ಞ ॥ ೪೭೨ ॥

† ಸೂಸುವಾ ಮನವನ್ನು ಹೇಸದಲೆ ಹರಿದೊಗೆದು ।
ಲೇಸಾಗಿ ಇಪ್ಪ ಶಿವಯೋಗಿ ಗುರುವಿನ ।
ಕೂಸುತಾ ನಿರುವ ಸರ್ವಜ್ಞ ॥ ೪೭೩ ॥

ಸರ್ವಗತ.

• ಖೇಚರದ ಮುದ್ರೆಯನು ಆಚರಿಸಲರಿದಿಹರೆ ।
ಲೋಚನವು ಮೂರು ತನಗಕ್ಕು; ಭೂಚರನು ।
ಖೇಚರನಕ್ಕು; ಸರ್ವಜ್ಞ ॥ ೪೭೪ ॥

ಸರ್ವವಂದ್ಯ.

† ಬೆನ್ನನಳಿಯುರಿದಂಗೆ ಮನ್ನಣೆಯು ಪಿರಿದಕ್ಕು ।
ಉನ್ನತವಕ್ಕು ಪಿರಿಯಕ್ಕು; ಶಂಕರನ ।
ಸನ್ನಿಧಿಯು ಅಕ್ಕು; ಸರ್ವಜ್ಞ ॥ ೪೭೫ ॥

ಕುಬೇರ.

† ಸುಧಿಯ ಸುಧೆಯನು ಸವಿದು ಮುದದಿ ಮಂತ್ರವ ನೆನೆದು ॥
ಉದಯರಾಗದೊಳು ನಿಂದಿರ್ದ ಶಿವಯೋಗಿ ।
ನಿಧಿಪುರುಷಕಾಣೊ ಸರ್ವಜ್ಞ ॥ ೪೭೬ ॥

ಪರಕಾಯ ಪ್ರವೇಶ.

* ನವದ್ವಾರಗಳ ಕಟ್ಟಿ ಶಿವಧ್ಯಾನದೊಳಗಿರಲು।
ನವಖಂಡ ಪೃಥ್ವಿಯೊಳಗಿನ ಮಾತೆಲ್ಲ।
ಕಿವಿಯೊಳಗಿಹುದು! ಸರ್ವಜ್ಞ ॥ ೪೭೭ ॥

ಕೇಡಿಲ್ಲ.

† ಎತ್ತಿತಾ ಪ್ರಾಣವನು ನೆತ್ತಿಯಾ ಕೊನೆವರೆಗೆ।
ಚಿತ್ತದ ಮರ್ಮವರಿದಿಪ್ಪ ಶಿವಯೋಗಿ-।
ಗೆತ್ತಣದು ಕೇಡು ಸರ್ವಜ್ಞ ॥ ೪೭೮ ॥

ಕತ್ತಲೆಯಿಲ್ಲ.

* ಅರ್ತಿಗೆ ಬೆಲೆಯಿಲ್ಲ ಚಿತ್ತಕ್ಕೆ ಹೊಲೆಯಿಲ್ಲ।
ಬತ್ತಲಿದ್ದವಗೆ ಭಯವಿಲ್ಲ; ಯೋಗಿಗೆ।
ಕತ್ತಲೆಯು ಇಲ್ಲ; ಸರ್ವಜ್ಞ ॥ ೪೭೯ ॥

ಸಾವಿಲ್ಲ.

* ಉತ್ತುಂಗ ಮಾಣಿಕದ ಬಿತ್ತು ಮಂಟಪದೊಳಗೆ!।
ನಿತ್ಯನಿರ್ಮಲದ ನಿಜಗಂಡ ಶಿವಯೋಗಿ-।
ಗೆತ್ತಣದು ಸಾವು? ಸರ್ವಜ್ಞ ॥ ೪೮೦ ॥

† ಆವಪೋಮದಲೊಂದು ಆವುಗಣ್ಣಿಯ ಮಾಡಿ।
ಆವು ಮಾಯದ ಕರಕಟ್ಟಿದಾ ಯೋಗಿ।
ಸಾವ ಮೀರಿಹನು ಸರ್ವಜ್ಞ ॥ ೪೮೧ ॥

† ಕುಂಡಲಿಯ ಸರ್ಪವನು ಉಂಡಿರಲು ಬಲ್ಲವಗೆ[1]।
ಮಂಡಲ ಮೂರು ವಶವಕ್ಕು; ಕಾಲಗೆವ[2]।
ಗಂಡನಾಗಿಕ್ಕು[3] ಸರ್ವಜ್ಞ ॥ ೪೮೨ ॥

---

1. V. ಉಂಡಲ್ಲಿಯುಲ್ಲದೆ 2 & 3. F. ತಾಯಿಮನೆ ಕಂಡಂತೆ ಅಕ್ಕು.

ಪುನರ್ಜನ್ಮವಿಲ್ಲ.

* ವೈರಾಗ್ಯ ಬಲದಿ ಸಂ। ಸಾರ ಸಾಗರದೊಳಗೆ।
ಆರಾರು ಧೀರರೀಜುವರೊ ಅವರೆಲ್ಲ।
ಪಾರಾಗಿ ಪಿಗರು! ಸರ್ವಜ್ಞ ॥ ೪೮೩ ॥

* ಬಿಂದು ನಾದಗಳರಿತು ಇಂದ್ರಿಯವನುಡುಗಿಸುತ।
ನಿಂದಿರದ ಮನದ ನಿಜಗಂಡ ಶಿವಯೋಗಿ।
ಮುಂದೆ ಹುಟ್ಟುವನೆ? ಸರ್ವಜ್ಞ ॥ ೪೮೪ ॥

ಯೋಗಭೇದ.

* ಪ್ರಾರಬ್ಧ ಕರ್ಮಕ್ಕೆ ಆರಯಿಕೆ ಮುನ್ನಿಲ್ಲ।
ಹಾರಯ್ಸಿ ಬಯಸಿ ಬಂದುದಕೆ ತಾನಳುಕ-।
ನಾರೂಢಯೋಗಿ ಸರ್ವಜ್ಞ ॥ ೪೮೫ ॥

* ಹರನಿಷ್ಠೆಯಿಲ್ಲದಾ ಪರಮರ್ಷಿ ಮುಖ್ಯನೇ?।
ಹರನಿಷ್ಠೆಯುಳ್ಳ ಶ್ವಪಚನಾದಡೆ ಆತ।
ಪರಮರ್ಷಿಕಾಣೊ! ಸರ್ವಜ್ಞ ॥ ೪೮೬ ॥

† ಯೋಗಿಯಾ ಮನದೆಳವ ಯೋಗಿಯೋ ತಾಬಲ್ಲ।
ಯೋಗಿಯಾಗದಲಿ ಬೆರೆದಡೆ ಅವನಿಜ-।
ಯೋಗಿಯೆಂದರಿಗು ಸರ್ವಜ್ಞ ॥ ೪೮೭ ॥

† ಸಿದ್ಧಾಂತ ಯೋಗದಾ ಸುದ್ದಿಯನು ತಿಳುಹುವೆನು।
ನಿದ್ರೆ, ವಾಸನೆಯು, ಹುಸಿಗಳ ತೊರೆದಿಹನೆ।
ಸಿದ್ಧಾಂತ ಯೋಗಿ ಸರ್ವಜ್ಞ ॥ ೪೮೮ ॥

† ಕುಟಿಲ ಕುಯುಕ್ತಿಗಳ ಸಟೆ, ಒಡುಕು, ನಟನೆಗಳ।
ದಿಟವಾಗಿ ಅಳಿದು ಶಿವನೊಳಗಿರುವನೇ।
ಹಠಯೋಗಿ ಕಾಣೊ! ಸರ್ವಜ್ಞ ॥ ೪೮೯ ॥

* ಅರವಟಿಗೆಯುದಕವನು ಪರರಕೈಯನ್ನವನು[1] ।
ಪರನಿಂದೆ ಹಿಂಸೆ, ಸ್ತ್ರೀಯನು ಬಿಟ್ಟಾತ[2] ।
ವರಯೋಗಿ ಕಾಣೊ[3]! ಸರ್ವಜ್ಞ ॥ ೪೯೦ ॥

### ಮಿಥ್ಯಾಶಿವಯೋಗಿ.

#### ಕಪಟ.

* ಅಸಮ ಪಂಚಾಕ್ಷರಿಯ ಉಸಿರಕೊನೆಯಲ್ಲಿರಿಸಿ ।
ಸಸಿನೆ ಕುಳ್ಳಿರ್ದು ಜಪಿಸುವ ಶಿವಯೋಗಿ ।
ಕಿಸವಾಯಿಯಕ್ಕು ಸರ್ವಜ್ಞ ॥ ೪೯೧ ॥

#### ಅಹಂಕಾರಿ.

† ಬ್ರಹ್ಮನಾಳದಗೊತ್ತು ಒಮ್ಮೆಲೇ ದೊರೆಯದದು ।
ಹಮ್ಮಿನ ಹೊಗೆಯ ನುಂಗಿದಾ ಶಿವಯೋಗಿ ।
ಬೊಮ್ಮನಾಗುವನೆ? ಸರ್ವಜ್ಞ ॥ ೪೯೨ ॥

* ಎಲ್ಲವೂ ತಾನಾಗ ಬಲ್ಲಡದು ಶಿವಯೋಗ ।
ಅಲ್ಲಲ್ಲಿಗಲ್ಲಿ ಕೃತಕವಾಗಲವನಿ- ।
ಗೆಲ್ಲಿಯದು ಯೋಗ ಸರ್ವಜ್ಞ ॥ ೪೯೩ ॥

#### ಅಜ್ಞಾನಿ.

* ಹಂಸನಾ ಡಳದವರ ವಂಶವನು ತಿಳಿಯದೇ ।
ಹಂಸನಾನೆಂದು ತಿರುಗುವಾ ಯೋಗಿಯ ।
ವಂಶವೇ ಮರುಳು! ಸರ್ವಜ್ಞ ॥ ೪೯೪ ॥

* ಹಾಲುಂಬ ಹಂಸವನು ಹೋಲಬಲ್ಲನೆ ಯೋಗಿ! ।
ಮೇಲಣ ಪಥವನರಿಯದಿರೆ ಗಿಳಿಯೋದಿ ।
ಕಾಳುಗೆಟ್ಟಂತೆ; ಸರ್ವಜ್ಞ ॥ ೪೯೫ ॥

---

1 & 2 & 3 F. ಕುರಿಯ ಮಜ್ಜಿಗೆ ಬೆಣ್ಣೆ । ಪರರ ಕೈಸುಣ್ಣ, ಬೆಲೆವೆಣ್ಣು ಇವು ನಾಲ್ಕು । ತೊರೆದವನೆ ಜಾಣ.

* ಸನ್ಯಾಸ ತನಗೆಂಬ ಅನ್ಯಾಯ ನುಡಿಯೇಕೆ ।
ಉನ್ನತ ದೇವರಿರವರಿಯದವನೊಡಲು[1] ।
ಅನ್ಯಾಯದಿರವು[2] ಸರ್ವಜ್ಞ ॥ ೪೯೬ ॥

ಆಶಾಬಂಧಿ

* ವೇಷಗಳ ಧರಿಸೇನು ದೇಶಗಳ ತಿರುಗೇನು ।
ದೋಷಗಳ ಹೇಳಿ ಫಲವೇನು ಮನಸಿನ ।
ಆಶೆ ಬಿಡದನಕ ಸರ್ವಜ್ಞ ॥ ೪೯೭ ॥

* ಕಾಸಿಕಂಚಡಿಯೇಕೆ ಆಸುರದ[3] ಜಡೆಯೇಕೆ ।
ಕೇಶವನು ಕಿತ್ತಿಕೊಳಲೇಕೆ ತ್ರೈಮಲದ[4]
ಆಶೆ ಬಿಡದನಕ ಸರ್ವಜ್ಞ ॥ ೪೯೮ ॥

ವೇಷಧಾರಿ.

* ಆಯದಲಿ ನಿಜದಿನಿಂ । ದಾಯವನು ಅರಿಯದೇ[5] ।
ವಾಯಕ್ಕೆ[6] ಜಪವ ಜಪಿಸುವ ಯೋಗಿಯಾ ।
ಬಾಯನೋಡೆಂದ ಸರ್ವಜ್ಞ ॥ ೪೯೯ ॥

† ಕತ್ತೆಬೂದಿಲಿ ಹೊರಳಿ ಮತ್ತೆ ಯತಿಯಪ್ಪುದೇ[7] ।
ತತ್ವವರಿಯದಲೆ ಭಸಿತವಿಟ್ಟವನ ಶುದ್ಧ– ।
ಕತ್ತೆಯಂತೆಂದ ಸರ್ವಜ್ಞ ॥ ೫೦೦ ॥

* ಅತ್ತಿ ಮರ ತಾ ಕಾಯ ಹೊತ್ತಿರ್ದ ತೆರನಂತೆ ।
ತತ್ವಭೇದವನು ಅರಿಯದೆ ರುದ್ರಾಕ್ಷಿ ।
ಹೊತ್ತು ಫಲವೇನು ಸರ್ವಜ್ಞ ॥ ೫೦೧ ॥

---

1 & 2 W. K. ತನ್ನೊಡಲ ಅನ್ಯಾಯದಿ ಹೊರೆವ. 3 W. K. ಭಾಸುರದ. 4 P. ಮನಸಿನ.
5 W. ... ನಿಜನಿಂದ। ದಾಯಃವಾ ನರಿಯದೇ. 6 W. ಅಯಾಸ. 7 G. S. ಭಕ್ತನಂತಾಗುವದೆ?

* ಜಡೆಯು ಕಟ್ಟದ ಮುನ್ನ ಒಡನೆ ಬಂದುದುಮಾರಿ ।
ಗುಡಿಗುಡಿಸಿ ಹೇನು ಹರಿವಾಗ ಬೋಳಯ್ಯ ।
ಕಡು ನಗುವನಯ್ಯ ಸರ್ವಜ್ಞ ॥ ೫೦೨ ॥

* ಚಿತ್ರಿಯಾ ಮಳೆ ಹನಿದು ಮುತ್ತಾಗಬಲ್ಲದೇ ।
ಚಿತ್ತವಿಲ್ಲದಲಿ ಬೋಳಾದಡಾಯೋಗ ।
ಕತ್ತೆಯಿಂದತ್ತ ಸರ್ವಜ್ಞ ॥ ೫೦೩ ॥

ವಿಷಯಾಸಕ್ತ.

* ತೋರುವಾ ಕುಲಗಿರಿಯ । ನೇರಿತಪದೊಳಗಿರ್ದು ।
ಬೇರೊಂದು ಮನವು ನೆನೆದರೆ[1], ಬೆಳೆದಹೊಲ ।
ಸೂರೆ ಹೋದಂತೆ; ಸರ್ವಜ್ಞ ॥ ೫೦೪ ॥

* ದುಡಕೋಲಿನ ತುದಿಗೆ ಹಿಂಡಿ ಕೈಪವ ಕಟ್ಟಿ ।
ಮುಂಡೆಯರ ಕಂಡು ಬಾಯ್ಬಿಡುವ[2] ಯೋಗಿಯು ।
ಮುಂಡೆ ಬೋಳೇಕೆ? ಸರ್ವಜ್ಞ ॥ ೫೦೫ ॥

* ಸಾಧು ಸಿದ್ಧರು ಎಂದು ತೋದ ಕಾವಿಯು ಹೊದ್ದು ।
ಮೇದಿನಿಯ ಮೇಲೆ ವಿಷಯಕ್ಕೆ ತಿರುಗುವಾ ।
ಮಾದಿಗರ ನೋಡು! ಸರ್ವಜ್ಞ ॥ ೫೦೬ ॥

* ಆಲದಾ ಬಿಳಿಲಂತೆ[3] ಜೋಲು ಜಡೆಗಳ ಬಿಟ್ಟು ।
ನಾಲಿಗೆ ಕೈಪ ಶುದ್ಧಿಲ್ಲ; ಮರಿನಾಯು ।
ಬಾಲದಂತಕ್ಕು ಸರ್ವಜ್ಞ ॥ ೫೦೭ ॥

* ಈಶತ್ವವುಳ್ಳನಕ ಈಶ್ವರನು ತಾನಕ್ಕು ।
ಈಶತ್ವ ಹೋದಡದುದಾರ ಹರಿದು[4]ಮಣಿ ।
ಸೂಸಿದಂತಕ್ಕು ಸರ್ವಜ್ಞ ॥ ೫೦೮ ॥

1 W. K. ಪದವನೆಣಿಸಿದರೆ. 2 W. ಭ್ರಮಿಸುವ. 3 W. ಆಲದ್ಬೆವ್ಮರನಂತೆ. 4 F. ಹಿಂದು

† ನಾಯಕನೆನಿಸಡೆತಂ। ನಾಯವನು ಅರಿಯುವದು !।
ಕಾಯಕದಿಪ್ಪ ನಾಯಕನ ಇಂದ್ರಿಯವು।
ಸಾಯದಿರುವನಕ? ಸರ್ವಜ್ಞ ॥ ೫೦೯ ॥

* ಒಡಲ ದಂಡಿಸಿ ಮುಕ್ತಿ ಪಡೆವೆನೆಂಬುವಹೆಡ್ಡ।
ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ।
ಮಡಿಯುವದೆ ಹೇಳು ! ಸರ್ವಜ್ಞ ॥ ೫೧೦ ॥

† ಹಾಳು ಗುಡಿಯಲಿ ಕುಳಿತು ಜಾಳು ಮಾತುಗಳಾಡಿ।
ಮೇಳಗಳ ಬಿಡದೆ ಶಿವನೆಂಬ ಶಿವಯೋಗಿ ।
ಬಾಳುವನೆ ಹೇಳು ಸರ್ವಜ್ಞ ॥ ೫೧೧ ॥

ಗುಣಹೀನ.

* ಒಡೆಯರೆಂದೆನಲೇಕೆ ತಡೆಯು ಬಾಗಿಲಲೇಕೆ।
ಮೃಡರೂಪ ನೆನಿಸಿ ಕೊಳಲೇಕೆ ಜಂಗಮಕೆ।
ಕಡೆಯಿಲ್ಲದುದಕೆ ಸರ್ವಜ್ಞ ॥ ೫೧೨ ॥

ದುರ್ಗತಿಕ.

† ಹೊಲಿಗಲಸದಾ ಯೋಗಿ ಹೊಲಿಗಲಸದುಳಿವನೇ।
ಹೊಲಿಗಲಸದಿಪ್ಪ ಕಡುಮೂರ್ಖ ಶಿವಯೋಗಿ।
ಹೊಲಿಗಲಿಸಿ ಹೋಹ ಸರ್ವಜ್ಞ ॥ ೫೧೩ ॥

† ಏಕಾಂತದಿ ಕುಳಿತು ಪಿ। ನಾಕಿಯನು ನೆನೆನೆನೆದು।
ಲೋಕದ ನಡೆಯ ನಡೆವಾತ ಭವ ಭವದಿ।
ಸಾಕಾಗಿಹೋಹ[1] ಸರ್ವಜ್ಞ ॥ ೫೧೪ ॥

† ನೆತ್ತಿಯಲಿ ಅಮೃತವ ಹೊತ್ತಿಹುದು ಜಗವೆಲ್ಲ।
ಎತ್ತನೇರೆತ್ತನರಿಸುವ ಶಿವಯೋಗಿ[2]–।
ಗೆತ್ತಣದು ಮುಕ್ತಿ[3] ಸರ್ವಜ್ಞ ॥ ೫೧೫ ॥

---

1 F. ಕೇಕಾಡಿಸಾವ. 2 & 3 F. ತತ್ವವ ಕಾಣಲರಿಯದೆ ಜಗವೆಲ್ಲ। ಸತ್ತುಹೋಗುವದು.

### ಗುಣವಿದ್ದರೆ ವನಬೇಡ.

* ನೆನವಮನದಲಿ ಕಟ್ಟಿ ಮನವಘನದಲಿ ಕಟ್ಟಿ[1] ।
ಮನವನ್ನಪಾನ[2]ಕೆಳಸದ ಯೋಗಿಗೆ।
ವನವಾಸವೇಕೆ ಸರ್ವಜ್ಞ ॥ ೫೧೬ ॥

* ನಿತ್ಯ ನೇಮಗಳೇಕೆ ಮತ್ತೆ ಪೂಜೆಗಳೇಕೆ ।
ನೆತ್ತಿಬೋಳೇಕೆ[3] ಜಡೆಯೇಕೆ ವದನದಿ ।
ಸತ್ಯವುಳ್ಳವಗೆ ಸರ್ವಜ್ಞ ॥ ೫೧೭ ॥

### ಪ್ರಬೋಧ

* ಮುಂಡೆ ಬೋಳಾದವರ ಕಂಡು ನಂಬಲಿಬೇಡ ।
ಖಂಡಿತಮಪ್ಪ ಪರತತ್ವ ವಿಷಯವನು ।
ಕಂಡು ನಂಬುವದು! ಸರ್ವಜ್ಞ ॥ ೫೧೮ ॥

* ಎಲ್ಲ ಆಶೆಯ ಬಿಟ್ಟ । ರಿಲ್ಲಿಯೇ ಕೈಲಾಸ ।
ಎಲ್ಲವ ಬಯಸಿ ಭ್ರಮಿಸಿದಡೆ ನರಕತಾ- ।
ನಿಲ್ಲಿಯೇ ನೋಡ! ಸರ್ವಜ್ಞ ॥ ೫೧೯ ॥

† ಆಶೆಯೆಲ್ಲವ ಬಿಟ್ಟು ರಾಶಿ ಕರ್ಮವ ಸುಟ್ಟು ।
ದೋಷವ ಕಳೆದು ನಿಂದವನು ಆವಗಂ ।
ಲೇಸಾಗಿ ಇರುವ! ಸರ್ವಜ್ಞ ॥ ೫೨೦ ॥



1. W. ಮನವ ಘನದಲಿ ಕಟ್ಟಿ ಘನವ ಮನದಲಿ ಕಟ್ಟಿ. 2 K. ಪಾಪ. F. ವಿಷಯ
3. F. ನೆತ್ತಿಯೊಳು.

Which oft was said but ne'er so well expressed"

—*Pope*

# ೧೧ ದಾನಪದ್ಧತಿ.

## ೧ ದಾನದ ವಿಷಯ.

### ದಾನಿಯೇ ಶ್ರೇಷ್ಠ.

* ಗಾನ ವಿದ್ಯವು ಲೇಸು  ಮಾನವತಿ ಸತಿ[1] ಲೇಸು ।
ಸ್ವಾನುಭವಿಗಳ ಕೆಳೆಲೇಸು ಎಲ್ಲಕ್ಕು ।
ದಾನಿಯೇ ಲೇಸು ಸರ್ವಜ್ಞ ॥ ೫೨೧ ॥

* ಈವಂಗೆ ದೇವಂಗೆ ಆವುದಂತರವಯ್ಯ? ।
ದೇವನು ಜಗಕೆ[2] ಕೊಡುವನು, ಕೈಯ್ಯಾರೆ ।
ಈವನೇ ದೇವ[3]! ಸರ್ವಜ್ಞ ॥ ೫೨೨ ॥

† ದಾನಿಗೂ ದೀನಗೂ ಜ್ಞಾನಿಗೆಜ್ಞಾನಿಗೂ ।
ಮಾನಿಗೂ ಮಾನಹೀನಗೂ ಸಿಂಹಕೆ ।
ಶ್ವಾನಗಂತರವು ಸರ್ವಜ್ಞ ॥ ೫೨೩ ॥

### ದಾನಿಯು ಈ ಲೋಕದವನಲ್ಲ.

* ಇಕ್ಕುವವನೂರಿಗೊಂ । ದೊಕ್ಕಲೆಂದನಬೇಡ ।
ಅಕ್ಷಯ ಪದವ ಪಡೆದು ಕೈಲಾಸದಿಂ-।
ದೊಕ್ಕಲಿರ ಬಂದ ಸರ್ವಜ್ಞ ॥ ೫೨೪ ॥

† ಇಕ್ಕುವವನೆಂದಿಗೊಂ । ದೊಕ್ಕಲೆಂದೆನಬೇಡ ।
ಇಕ್ಕಿ ಎರೆವನು ಇಲ್ಲಿರದೆ ಸ್ವರ್ಗಕೆ ।
ಒಕ್ಕಲಿರಹೋಹ ಸರ್ವಜ್ಞ ॥ ೫೨೫ ॥

---

1 K ಹಿತೆ. V. ಮಾನಿನಿಗೆ ಪತಿ. A. ಮಾನಿಪತಿ. 2 A. C. ದೇವನುದ್ಯೋಗದಿಂ. 3 C. ದಾನಿ.

* ಪರರಿಗುಪಕಾರಗಳ ನೆರೆಮಾಳ್ಪ ಮಾನವನ।
ಪರಶಿವ ಕಳುಹಲವ ಬಂದು ಧರೆಯೊಳಗೆ।
ವರವೀವುತಿಹನು ಸರ್ವಜ್ಞ ॥ ೫೨೬ ॥

ದಾನದ ಪ್ರತಿಫಲ.

* ಅನ್ನವನು ಇಕ್ಕುವದು! ನನ್ನಿಯನು ನುಡಿಯುವದು!।
ತನ್ನಂತೆ ಪರರ ಬಗೆದಡೆ ಕೈಲಾಸ।
ಬಿನ್ನಣವಕ್ಕು! ಸರ್ವಜ್ಞ ॥ ೫೨೭ ॥

* ದಾನದಾ ಫಲದಿಂದ ಭೂನಾಥನಾಗುವನು।
ಭಾನುಮಂಡಲವನೊಡೆದಮಳ ಸ್ವರ್ಗಕೆ।
ತಾನೊಡೆಯನಹನು ಸರ್ವಜ್ಞ ॥ ೫೨೮ ॥

* ಹರಕೊಟ್ಟ ಕಾಲಕ್ಕೆ ಹರನರೂಪಿಗೆ ನೀಡು।
ಹರದೆಯರು ಸುತರು ನೆರೆಸವಿದು ಸುಖಿಸುತ।
ಹರನ ಹರಸುವರು ಸರ್ವಜ್ಞ ॥ ೫೨೯ ॥

* ಸಿರಿಬಂದ ಕಾಲಕ್ಕೆ ಕರೆದು ದಾನವ ಮಾಡು।
ಪರಿಣಾಮವಕ್ಕು ಪದವಕ್ಕು ಕೈಲಾಸ।
ನೆರೆಮನೆಯುಕ್ಕು ಸರ್ವಜ್ಞ ॥ ೫೩೦ ॥

* ಸ್ವಾತಿಯಾ ಹನಿಬಿದ್ದು ಜಾತಿಮುತ್ತಾದಂತೆ।
ಸಾತ್ವಿಕಮಪ್ಪಯತಿಗಿಕ್ಕೆ ಪಂಚಮಹಾ—।
ಪಾತಕವು ಕೆಡುಗು ಸರ್ವಜ್ಞ ॥ ೫೩೧ ॥

* ಸತ್ತಿಗೆಯ ನೆಳಲಡಿಯ ಸುತ್ತಿ ಬರುವನ ಕಂಡು।
ಎತ್ತಣ ಧರ್ಮವೆನಬೇಡ! ಅದು ಮುನ್ನಿ—।
ನುತ್ತಮದ ಫಲವು! ಸರ್ವಜ್ಞ ॥ ೫೩೨ ॥

ದಾನಿಯ ಲಕ್ಷಣ.

* ಹುಟ್ಟುವಾಗೀಧನವ ಮೊಟ್ಟೆಗಟ್ಟಿಳಿದನೇ? ।
ಕಟ್ಟಿಕಡೆಯಲ್ಲಿ ಕೊಂಡೊಯ್ಯನಿದನರಿದು ।
ಕೊಟ್ಟುಂಬ ದಾನಿ! ಸರ್ವಜ್ಞ ॥ ೫೩೩ ॥

* ಬೆಂದುದನು ಬಿತ್ತಿ ಬೆಳೆ। ಮಂದಿರನು ನಾಕಾಣೆ ।
ಬೆಂದುದನು ಬಿತ್ತಿ ಬೆಳೆದುಂಬ ದಾಸೋಹ ।
ಸಿಂಧುಧರನಕ್ಕು ಸರ್ವಜ ॥ ೫೩೪ ॥

* ಅವರೆತಂದವರಟ್ಟು ಅವರಿಕ್ಕಿ ಇವರುಂಣಲು ।
ಅವರೆ ತಿಳಿದುಪ್ಪವೆರೆದಡೆ ಇವರಿಗೆ ।
ಅವರೆ ತಾಯ್ತಂದೆ ಸರ್ವಜ್ಞ ॥ ೫೩೫ ॥

ದಾನಿಯನ್ನೇ ಬೇಡು.

* ನೋಡಿದರೆ ನಾಡೊಳಗೆ ಬೇಡುವದು ಕಡುಪಾಪ[1] ।
ಬೇಡಿದಡೀಯದದು ಪಾಪ; ಕೊಡುವರ ।
ತಡೆವುದೇ ಪಾಪ! ಸರ್ವಜ್ಞ ॥ ೫೩೬ ॥

* ಏನಬೇಡಿದಡೊಬ್ಬ ದಾನಿಯನು ಬೇಡುವದು! ।
ಹೇನನು ತಿಂಬ ಹೀನನ ಬೇಡಲವ[2]–।
ನೇನತಾ ಕೊಡುವ ಸರ್ವಜ್ಞ ॥ ೫೩೭ ॥

* ಬೇಡಿದರೆ ಬೇಡುವದು ಮಾಡುವಾ ಧರ್ಮಿಯನು ।
ಮೂಢ ಮೂರ್ಖರ ಪಿಸುಣಿಗಳ ಪೀಡಿಸಿ ।
ಬೇಡಬೇಡೆಂದ ಸರ್ವಜ್ಞ ॥ ೫೩೮ ॥

---

1 A. ಬೇಡುವದೇ ಕರಕಷ್ಟ, C. ಬೇಡುವದೇತರಕಷ್ಟ? 2 G. S. ದೀನನ ಬೇಡಿ ಬಳಲಿದಡಾದೀನ,

ಏಕೆ ದಾನ ಮಾಡಬೇಕು ?

* ಮರಣವೆಂಬುದು ಸತ್ಯ! ಹರನಾಣೆ! ಹುಸಿಯಲ್ಲ! ।
ತರುಣಿಯರಿಗಿರಿಸೆ ಪರರುಂಬರದರಿಂ ।
ವರದಾನವಿಯ್ಯೊ[1]! ಸರ್ವಜ್ಞ ॥ ೫೩೯ ॥

* ಕೊಟ್ಟದ್ದು ತನಗೆ ಬ । ಯ್ಚಿಟ್ಟದ್ದು ಪರರಿಂಗೆ ।
ಕೊಟ್ಟದ್ದು ಕೆಟ್ಟಿತೆನಬೇಡ! ಮುಂದಕೆ[2] ।
ಕಟ್ಟಿಹುದು[3] ಬುತ್ತಿ! ಸರ್ವಜ್ಞ ॥ ೫೪೦ ॥

* ಕೊಟ್ಟು ಕುದಿಯಲಿಬೇಡ ಕೊಟ್ಟಾಡಿ[4]ಕೊಳಬೇಡ ।
ಕೊಟ್ಟುನಾಕೆಟ್ಟೆನೆನಬೇಡ! ಶಿವನಲ್ಲಿ ।
ಕಟ್ಟಿಹುದು ಬುತ್ತಿ! ಸರ್ವಜ್ಞ ॥ ೫೪೧ ॥

* ಕೊಡುವಾತನೇ ಹರನು ಪಡೆವಾತನೇನರನು ।
ಒಡಲೊಡವೆಗಳು[5] ಕೆಡದು ಹೋಗದ ಮುನ್ನ ।
ಕೊಡುಪಾತ್ರವರಿದು! ಸರ್ವಜ್ಞ ॥ ೫೪೨ ॥

* ಇಕ್ಕಿದಾತನು ಉಂಡು ನಕ್ಕು ಸ್ವರ್ಗಕೆ ಹೋದ ।
ಇಕ್ಕದನು ಹೋದ ನರಕಕ್ಕೆ, ಲೋಕದೊ- ।
ಳಿಕ್ಕಲೇಬೇಕು ಸರ್ವಜ್ಞ ॥ ೫೪೩ ॥

ಹೇಗೆ ದಾನ ಮಾಡಬೇಕು?

* ಯೋಗಿಗೆ ಕುಲವಿಲ್ಲ ಸಾಗರಕೆ ನೆಲೆಯಿಲ್ಲ ।
ಯೋಗವಟ್ಟಿಗೆಗೆ ಸೆರಗಿಲ್ಲ; ಧರ್ಮಕೆ ।
ಆಗು ಹೋಗಿಲ್ಲ ಸರ್ವಜ್ಞ ॥ ೫೪೪ ॥

---

1 G. S. P. ವರದನಾಗಯ್ಯ. 2 & 3 ಅದು ಮುಂದೆ ಕಟ್ಟಿಟ್ಟ. 4 B. ಬಿಟ್ಟಾಡಿ. 5 A. ಒಡಲು; ಒಡವೆಗಳು. G. S. ಭೂತಗಳು.

* ಆಗಬಾ! ಈಗಬಾ! ಹೋಗಿಬಾ! ಎನ್ನದೇ।
ಆಗಲೇ ಕರೆದು ಕೊಡುವನ ಧರ್ಮ ಹೊ-।
ನ್ನಾಗದೇ ಬಿಡದು! ಸರ್ವಜ್ಞ ॥ ೫೪೫ ॥

* ಮೇಲು ಕೀಳೆನಬೇಡ ಶೀಲವನು ಬಿಡಬೇಡ।
ಕಾಲವಕಾಲವೆನಬೇಡ ಧರ್ಮದಾ।
ಕೀಲಬೇರೆಂದ ಸರ್ವಜ್ಞ ॥ ೫೪೬ ॥

* ಕೊಡುವವನ ಧರ್ಮಕ್ಕೆ ಕಡೆಯೇನು ಮೊದಲೇನು ?।
ಎಡತಾಕಿಸಿಕೊಂಡು ಕೊಡುವನ ಧರ್ಮವು।
ಹುಡಿಯು ಮಣ್ಣೆಂದ ಸರ್ವಜ್ಞ ॥ ೫೪೭ ॥

## ದಾನಭೇದ.

### ವಿವಿಧ ದಾನಗಳು.

* ತುಯ್ಯಲೂಟಕೆ[1] ಲೇಸು ಬಯ್ಯದಾ ಸೊಸೆಲೇಸು।
ಅಯ್ಯಬಾರೆಂಬ ಮಗಲೇಸು; ಧರ್ಮವು।
ಕೈಯ್ಯಾರೆ ಲೇಸು! ಸರ್ವಜ್ಞ ॥ ೫೪೮ ॥

* ತಿರಿದು ತಂದಾದರೂ ಕರೆದು ಜಂಗಮಗಿಕ್ಕು।
ಪರಿಣಾಮವಕ್ಕು ಪದವಕ್ಕು ಕೈಲಾಸ।
ನೆರೆಮನೆಯಕ್ಕು ಸರ್ವಜ್ಞ ॥ ೫೪೯ ॥

* ತಿರಿದು ಹರಿದೂ ಕೊರೆದು[2] ಕರೆದು ದಾನವ ಮಾಡು।
ಪರಮನ ಕೃಪೆಯು ನಿನಗಕ್ಕು ಸ್ವರ್ಗವು।
ನೆರೆಮನೆಯಕ್ಕು ಸರ್ವಜ್ಞ ॥ ೫೫೦ ॥

---

1 P. ಕೈಯಲುಂಬುದು, 2 P. ತೊರೆದು,

* ಬೇಡಿ ಕಷ್ಟವ ಮಾಡಿ ಕೂಡಿಸಿದರರ್ಥವನು[1] ।
ರೂಢಿಗೀಶ್ವರನ ಶರಣರ್ಗೆ ನೀಡಿದರೆ ।
ಮಾಡಿದನು ಪುಣ್ಯ! ಸರ್ವಜ್ಞ ॥ ೫೫೧ ॥

* ಸೂಕ್ಷ್ಮವಾದರು ಒಂದು ಭಿಕ್ಷವೀಯಲಿಬೇಕು ।
ಅಕ್ಷಯಪಾತ್ರೆ ತನಗಕ್ಕು ಮೋಕ್ಷವು ।
ತಕ್ಷಣದಲಕ್ಕು ಸರ್ವಜ್ಞ ॥ ೫೫೨ ॥

* ಭಟ್ಟ, ಡೊಂಬರಿಗಿತ್ತು ಕೆಟ್ಟು ಹೋಗಲಿಬೇಡ ।
ಸೃಷ್ಟಿಗೀಶ್ವರನ ಶರಣರ್ಗೆ ಕೊಟ್ಟರೆ ।
ಶ್ರೇಷ್ಠಪದವಕ್ಕು ಸರ್ವಜ್ಞ ॥ ೫೫೩ ॥

* ಅಡುವದವರಕ್ಕಿಯನು[2]! ಕೊಡುವದು ಬಿಡಾರವನು! ।
ಕುಡಿವರೆ ನೀರನೆರೆವುದು! ಇವು ಮೂರು ।
ಬಡವರ ದಾನ ಸರ್ವಜ್ಞ ॥ ೫೫೪ ॥

* ಉತ್ತಮದ ದೇವಾಂಗ ವಸ್ತ್ರವನು ಧರಿಸುವಡೆ ।
ಮುತ್ತೆ[3] ಮಾಣಿಕವನಿಡುವಡೆ[4] ಮಾಡುವದು ।
ನಿತ್ಯದಾನವನು ಸರ್ವಜ್ಞ ॥ ೫೫೫ ॥

* ಆಡದೇ ಕೊಡುವವನು ರೂಢಿಯೊಳಗುತ್ತಮನು ।
ಆಡಿ ಕೊಡುವವನು ಮಧ್ಯಮನಧಮತಾ- ।
ನಾಡಿಕೊಡದವನು ಸರ್ವಜ್ಞ ॥ ೫೫೬ ॥

---

1 G. S. ಅರ್ಥವನು. 2 D. ಅಡುವರೆ ಮಡಿಕೆಯನು. 3 G. S. ಮುತ್ತು. 4 ತೊಡುವರೆ.

* ಬೇಡದಾ ಮುನ್ನೀವ ನಾಡಿನೊಳಗುತ್ತಮನು ।
ಬೇಡಿದಡೀವ ಮಧ್ಯಮನಧಮನುತಾ ।
ಬೇಡಲೀಯದನು ಸರ್ವಜ್ಞ ॥ ೫೫೭ ॥

* ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೆ? ।
ಕೊಡಬೇಡ! ಕೊಡದೆ ಇರಬೇಡ! ಧರ್ಮವ ।
ಬಿಡಬೇಡವೆಂದ ಸರ್ವಜ್ಞ ॥ ೫೫೮ ॥

ಸಮಯೋಚಿತದಾನ.

* ಇಚ್ಛೆಯನು ಅರಿದಿತ್ತ ನುಚ್ಚೊಂದು ಮಾಣಿಕವು ।
ಇಚ್ಛೆಯು ತೀರ್ದ ಬಳಿಕಿತ್ತ ಮಾಣಿಕವು ।
ನುಚ್ಚಿನಿಂದತ್ತ ಸರ್ವಜ್ಞ ॥ ೫೫೯ ॥

* ಪ್ರಸ್ತಾಪವರಿದಿತ್ತ ಎತ್ತೊಂದು ಮದಕರಿಯು ।
ಪ್ರಸ್ತಾಪತೀರ್ದ ಬಳಿಕಿತ್ತ ಮದಕರಿಯು ।
ಕತ್ತೆಗು ಕಷ್ಟ ಸರ್ವಜ್ಞ ॥ ೫೬೦ ॥

* ಆಸೆಯನರಿದಿತ್ತ ವೀಸವೇ ನವಲಕ್ಷ[1] ।
ಆಸೆಯು ತೀರ್ದ ಬಳಿಕಿತ್ತ ನವಲಕ್ಷ ।
ವೀಸದಿಂ ಕಷ್ಟ ಸರ್ವಜ್ಞ ॥ ೫೬೧ ॥

ಸಕಾಮದಾನ.

* ಹಸನಾಗಿ ಬದುಕುವಡೆ ಕುಶಲನೆಂದೆನಿಸುವಡೆ ।
ಪಶುಪತಿಯ ಪದವ ಪಡೆವಡೆ ಹಸಿದರಿ-।
ಗಶನವನಿಕ್ಕು ಸರ್ವಜ್ಞ ॥ ೫೬೨ ॥

---

1 G. S. ಸವಲಕ್ಷ.

* ನಲ್ಲಳನು ಬಯಸುವಡೆ ಬಲ್ಲಿದನು ಎನಿಸುವಡೆ।
ನಿಲ್ಲದೆ ಶಿವನ ಒಲಿಸುವಡೆ ಹಸಿದರಿ-।
ಗಿಲ್ಲೆನ್ನದಿಕ್ಕು ಸರ್ವಜ್ಞ ॥ ೫೬೩ ॥

* ಆನೆಯನು ಏರುವಡೆ ದಾನವನು ಮಾಡುವದು!।
ಭಾನುಮಂಡಲವನಡರುವಡೆ ಹಸಿದರಿಗೆ।
ನೀನೊಲಿದು ಇಕ್ಕು! ಸರ್ವಜ್ಞ ॥ ೫೬೪ ॥

† ಅಂದಳವನೇರುವರೆ ಚಂದದಲಿ ಸುಖಿಸುವರೆ।
ಮಂದಗಮನೆಯರಿರುವರೆ ಹಸಿದರ್ಗೆ।
ಚಂದದಿಂದಿಕ್ಕು ಸರ್ವಜ್ಞ ॥ ೫೬೫ ॥

† ಮಂದಿಯನು ಆಳುವಡೆ ಅಂದಳವನೇರುವಡೆ।
ಸಂದಿಸಿ ಭೋಗ ಪಡೆವಡೆ ದಾನವನು।
ಕುಂದದೇ ಮಾಡು ಸರ್ವಜ್ಞ ॥ ೫೬೬ ॥

† ದೇಶವನು ಆಳುವರೆ ಹಾಸಿಗೆಯುಲೊರಗುವರೆ।
ಈಶನ ಒಲುಮೆ ಪಡೆವರೆ ದಾನವಂ।
ತೋಷದಿಂ[1] ಮಾಡು ಸರ್ವಜ್ಞ ॥ ೫೬೭ ॥

† ದೇಶಾಧಿಪತಿಯಹರೆ ಭೂಷಣಗಳಿಡುವರೆ।
ಸಾಸಿರಬಲೆಯರ ನೆರೆವರೆ ಹಸಿದರ್ಗೆ।
ಬೇಸರಿಯದಿಕ್ಕು[2] ಸರ್ವಜ್ಞ ॥ ೫೬೮ ॥

* ಪಾತಕವ ನೂಕುವಡೆ ಸೂತಕವ ಕಳೆಯುವಡೆ।
ಭೂತೇಶನೊಲುಮೆ ಪಡೆವಡೆ ಹಸಿದರಿಗೆ।
ಕಾತರಿಸದಿಕ್ಕು ಸರ್ವಜ್ಞ ॥ ೫೬೯ ॥

1 P. ಮಾಡದೆ. 2 G. S. ಒಸರಿಸ.

* ಎತ್ತಣದ ಹನಿಬಿದ್ದು ಮುತ್ತಾದ ತೆರನಂತೆ ।
ಉತ್ತಮದ ಗತಿಯ ಪಡೆವಡೆ ಯತಿಗೊಂದು ।
ತುತ್ತನಿಕ್ಕೆಂದ ಸರ್ವಜ್ಞ ॥ ೫೭೦ ॥

* ಸೀಗುರಿಯ, ಚಾಮರದ, ಮೇಗಪ್ಪ ಬೆಳ್ಗೊಡೆಯ, ।
ಭೋಗಹಡಪಿಗರ, ಪಡೆವಡೆ ದಾನವನು ।
ಬೇಗ ಮಾಡುವದು! ಸರ್ವಜ್ಞ ॥ ೫೭೧ ॥

### ನಿಷ್ಫಲದಾನ.

* ಅರಿಯದೀಯುವದಾನ ತೆರೆದು ನೋಡದಕಣ್ಣು ।
ತಿರಿಗಿ ಬಯಸದನ ಶಿವಪೂಜೆ ಶಿವನಿಂದ ।
ಹಿರಿದೆಂದು ಅರಿಗು ಸರ್ವಜ್ಞ ॥ ೫೭೨ ॥

* ಅರಿತು ಮಾಡುವ ದಾನ ತೆರೆದು ನೋಡುವ ಕಣ್ಣು ।
ತಿರಿಗಿ ಬಯಸುವನ ಶಿವಪೂಜೆ ಮದದಾನೆ[1] ।
ಜರಿದು ಬಿದ್ದಂತೆ ಸರ್ವಜ್ಞ ॥ ೫೭೩ ॥

### ದಾನರಹಸ್ಯ.

* ಧರ್ಮದಾ ಕರ್ಮದಾ ಮರ್ಮವನು ನೋಡುವರೆ ।
ಧರ್ಮಿಯಂದಳದಿ ಬರುತಿಹನೆದ ಹೊತ್ತು ।
ಕರ್ಮಿ ಬರುತಿಪ್ಪ! ಸರ್ವಜ್ಞ ॥ ೫೭೪ ॥

† ಪಾಪ ಪುಣ್ಯಗಳೆರಡು ವ್ಯಾಪಿಸಿ ಬೆಂಬಿಡಿದು ।
ಪಾಪ ಮಾಡಿದನ ಹೆಗಲೇರಿ ಕುಲ- ।
ದೀಪ ಬರುತಿಹನು! ಸರ್ವಜ್ಞ ॥ ೫೭೫ ॥

---

1 D. ಮರೆದಾನೆ ಬರಿಯು.

* ಅನ್ನವನು ಇಕ್ಕುವಂ ಅನ್ಯ[1]ಜಾತನೆ ಕುಲಜ।
ಅನ್ನವನಿಕ್ಕದುಂಣುತಿರ್ಪ ಕುಲಜಾತ-।
ನನ್ಯನೆಂದರಿಗು ಸರ್ವಜ್ಞ ॥ ೫೭೬ ॥

* ಅನ್ನವನು ಇಕ್ಕಿ ನೀ ಖಿನ್ನವನು ಪಡಬೇಡ!।
ಭಿನ್ನಭೇದಗಳಿಲ್ಲದೆ ಶಿವ ಜಗವ-।
ನಿನ್ನ ಸಲಹುವನು! ಸರ್ವಜ್ಞ ॥ ೫೭೭ ॥

* ಅರಿತು ಕರ್ಮವ ಬಿಟ್ಟು ಮರೆತು ಧರ್ಮವ ಮಾಡು।
ಪರಮ[2]ಪದವಕ್ಕು, ಶಿವನೊಲಿವ, ಧರೆಯೆಲ್ಲ।
ಎರಗಿರುವದಕ್ಕು; ಸರ್ವಜ್ಞ ॥ ೫೭೮ ॥

## ೨ ಲೋಭತ್ವದ ವಿಷಯ.

### ಲೋಭಿ ಕನಿಷ್ಠ.

* ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ತಾಸಿರಿಸಿ।
ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ।
ಮಣ್ಣು ಕಾಣಯ್ಯ! ಸರ್ವಜ್ಞ ॥ ೫೭೯ ॥

* ಇದ್ದುದನು ಬಿಟ್ಟು ಹೊರ। ಗಿದ್ದುದನು ಬಯಸುತಲೆ।
ಇದ್ದು ಉಣದಿಪ್ಪನ ಬಾಯೊಳು ಕತ್ತೆಯ।
ಲದ್ದಿಯೇ ಬೀಳ್ಗು! ಸರ್ವಜ್ಞ ॥ ೫೮೦ ॥

* ಅನ್ನವನು ಇಕ್ಕುವನು ಉನ್ನತವ ಪಡೆಯುವನು।
ಉನ್ನತವೆಪ್ಪ ಯತಿಗಿಕ್ಕದಾ ಲೋಭಿ।
ಕುನ್ನಿಗು ಕಷ್ಟ ಸರ್ವಜ್ಞ ॥ ೫೮೧ ॥

---

1 A. ಭಿನ್ನ 2 A. ಅರಿವ.

* ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ ।
ಪುಣ್ಯವ ಮಾಡಿ ಉಣಲೊಲ್ಲದವನಿರವು[1]।
ಉಣ್ಣೆಯಿಂ ಕಷ್ಟ ಸರ್ವಜ್ಞ ॥ ೫೮೨ ॥

* ವಿನಯವಿದ್ದಧಿಕರನು ತನುಗೆಟ್ಟ ಬಡವರನು ।
ಘನಹೀನವೆಳಿದು ಕರೆದುಣ್ಣದವನೂಟ ।
ಶುನಕ ತಿಂದಂತೆ ಸರ್ವಜ್ಞ ॥ ೫೮೩ ॥

* ಹೊತ್ತಾರೆ ಬಯ್ಗಿಂಗೆ ಮತ್ತೆ ಬಾ ಎಂದೆನುತ ।
ಹೊತ್ತನೆ ಕೊಂದು ಹುಸಿವನಿಗಿಂದಲು ।
ಸತ್ತಾತ ಲೇಸು ಸರ್ವಜ್ಞ ॥ ೫೮೪ ॥

ಲೋಭತ್ವದ ಫಲ.

* ಸಂಚಯಿಸಿದಾ ಧನವು ಕಂಚು ಕಬ್ಬುನವಕ್ಕು ।
ಹಂಚಕ್ಕು ಹೆರರಿಗುಣಲಕ್ಕು ದಾನದ ।
ಸಂಚು ಬೇರೆಂದ ಸರ್ವಜ್ಞ ॥ ೫೮೫ ॥

* ಭಿಕ್ಷವೆಂದವರಿಗೆ[2] ಭಿಕ್ಷವನು ನೀಡಿದರೆ[3] ।
ಅಕ್ಷಯ ಪದವು ತನಗಕ್ಕು ಇಲ್ಲವೆನೆ ।
ಭಿಕ್ಷುಕನ[4]ಕ್ಕು ಸರ್ವಜ್ಞ ॥ ೫೮೬ ॥

* ತಿರಿದುಂಬುತೊಬ್ಬರನು ಕರೆದುಂಬುದತಿಹಿತವು ।
ಕರೆಯದೊಬ್ಬರನು ಉಣುತಿಪ್ಪನೂಟವು ।
ನರಕದಾ ಊಟ! ಸರ್ವಜ್ಞ ॥ ೫೮೭ ॥

---

1 A. ನೊಡವೆ. 2&3 A. C. ಭಿಕ್ಷ ತಂದಾದೊಡಂ ಭಿಕ್ಷವನಿಡಬೇಕು. 4 W. ಭಿಕ್ಷುವನೆ.

* ಕಟ್ಟೆಯನು ಕಟ್ಟದರೆ ಬಿಟ್ಟಹರು ಕೋಡಿಹನು।
ಕೆಟ್ಟ ಕಕುಲತೆಯ ಮಾಡಿದಡಾ ಕಟ್ಟೆ।
ಕೆಟ್ಟು ಹೋಗಿಹುದು! ಸರ್ವಜ್ಞ ॥ ೫೮೮ ॥

* ಹೆಂಡರು ಮಕ್ಕಳಿಗೆಂದು ದಂಡಿಸದಿರು ದೇಹವ।
ಕಂಡ ವಸ್ತುವನು ಕೊಡದುಣದೆ ಬೈಚಿಡಲು।
ಕಂಡವರಿಗಹುದು! ಸರ್ವಜ್ಞ ॥ ೫೮೯ ॥

* ಬಿದಿರೆ ಅಂದಣವಕ್ಕು ಬಿದಿರೆ ಸತ್ತಿಗೆಯಕ್ಕು।
ಬಿದಿರಿಂದ ಸಕಲ ಪದವಕ್ಕು[1] ಲೋಕದೊಳು।
ಬಿದಿರದವ[2] ಕೆಟ್ಟ ಸರ್ವಜ್ಞ ॥ ೫೯೦ ॥

### ಲೋಭಿಯ ಲಕ್ಷಣ.

* ಮಾನವರ ದುರ್ಗುಣವ। ನೇನೆಂದು ಬಣ್ಣಿಪೆನು!।
ದಾನಗಯ್ಯೆನಲು ಕನಲುವರು, ದಂಡವ।
ಮೌನದೀಯುವರು; ಸರ್ವಜ್ಞ ॥ ೫೯೧ ॥

* ಕೊಡುವರೇ ಗಂಟೆರ್ದು ಎಡೆನೂರುಗಾವುದವೆ?।
ತಡೆಯದಿನ್ನೊಮ್ಮೆ ಬಾರೆಂಬ ಲೋಭಿಯು।
ಕೊಡುವದೇ ಹುಸಿಯು! ಸರ್ವಜ್ಞ ॥ ೫೯೨ ॥

* ದಾನವೆಂದರೆ ತಲೆಯ ಚಾನದಲಿ ಕಡಿದಂತೆ।
ತಾನೊಂದು ತಪ್ಪಮಾಡಿ ನೂರಾರನು।
ಮೌನದಿಂ ಕೊಡುವ ಸರ್ವಜ್ಞ ॥ ೫೯೩ ॥

---

1 A. ಬಿದಿರೆ ತಾ ಕೊಡಗು ಪರಪದವ C. ಫಲ, ಪದವ; 2 W. ಬಿದರದವ = ಬೊಗ್ಗದವ.

† ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ।
ಸುಳ್ಳುಗೊರವರಿಗೆ ಕೊಡುವರು ಧರ್ಮಕ್ಕೆ ।
ಎಳ್ಳಷ್ಟು ಕೊಡರು ಸರ್ವಜ್ಞ ॥ ೫೯೪ ॥

### ಲೋಭಿಯೇ ಕೊಲೆಪಾತಕಿ.

#### ಸ್ವಘಾತಿ.

* ಎರೆಯಲೊಲ್ಲದ ಲೋಭಿ ಕರೆಯಲೊಲ್ಲದ ಆವು ।
ಬರೆಗಾಲು ಪಯಣ ಇವು ಮೂರು ತನ್ನತಾ-।
ನಿರಿದುಕೊಂಡಂತೆ ಸರ್ವಜ್ಞ ॥ ೫೯೫ ॥

#### ಪರಘಾತಿ.

* ಇಲ್ಲವೆಂದರೆ ಆತ[1] ಬಲ್ಲ ಠಾವಿಗೆ ಹೋಹ ।
ಇಲ್ಲವೆನಲೊಲ್ಲ ಕೊಡಲೊಲ್ಲದಾಪಾಪಿ ।
ಕೊಲ್ಲದೇ ಕೊಂದ! ಸರ್ವಜ್ಞ ॥ ೫೯೬ ॥

* ಕಟ್ಟೆದಂತಾಯುಧವು ಅಟ್ಟೆಬಂದಿರಿಯುವದೆ? ।
ಕೊಟ್ಟೆಹೆನೆಂದು ಕೊಡಲೊಲ್ಲದನ ಮಾತು ।
ಅಟ್ಟೆ ಇರಿದಂತೆ! ಸರ್ವಜ್ಞ ॥ ೫೯೭ ॥

* ಕೊಡುವರೆ ಕೈಹಾಳೆ? ಎಡೆಯೇನು ದೂರವೇ? ।
ಎಡೆಯಾಡಿಸಿ[2] ಕೊಡದ ಲೋಭಿಯಾ ಮಾತು ।
ಕೊಡಲಿಯಗಾಯು! ಸರ್ವಜ್ಞ ॥ ೫೯೮ ॥

#### ಲೋಭಿಗೆ ದುರ್ಗತಿ.

* ನಿಂದಿರಿದ ಕರಿಸತ್ತು ಹಂದಿತಾನುಳಿವುದೇ? ।
ಸಂದಿರ್ದದಾನಿ ಬಡವಾಗಿ ಲೋಭಿಗೆ ।
ಇಂದ್ರಪದವಹುದೆ? ಸರ್ವಜ್ಞ ॥ ೫೯೯ ॥

---

1 W. ಎತ್ತ. 2 ಅಡಿಯಾಡಿಸಿ (K. ನಿಘಂಟು ಪುಟ ೩೪, ೪೭೨.) G. S. ಎಡತಾಕಿಸಿ.

† ನೀಡುವರೆ ತುಂಬಿರಲು ನೋಡಿಹೋಹನು ಕೆಟ್ಟ! ।
ಬೇಡಿ ಕೊಡದವನು ಬಲುಕೆಟ್ಟ! ಧರ್ಮವ ।
ಮಾಡದವ ಕೆಟ್ಟ! ಸರ್ವಜ್ಞ ॥ ೬೦೦ ॥

* ಅಟ್ಟುಂಬ ಕಾಲದಲಿ ಕೊಟ್ಟುಂಬುದೊಬ್ಬರಿಗೆ[1] ।
ಕೊಟ್ಟುಂಬುದರಿಯದಧಮಂಗೆ ಹಲತರದ ।
ಮುಟ್ಟಡೆಗಳಕ್ಕು ಸರ್ವಜ್ಞ ॥ ೬೦೧ ॥

* ಕಂಡವರ ದಂಡಿಸುತ ಕೊಂಡವರ ಒಡವೆಗಳ-।
ನುಂಡುಂಡು ಮಲಗಿ ಮಡಿದಡೆ ಅವಗೆ ಯಮ-।
ಗುಂಡ ತಪ್ಪುವದೆ? ಸರ್ವಜ್ಞ ॥ ೬೦೨ ॥

ಪಾಪಿಗಳಿಸಿದ್ದು ಪರರ ಪಾಲು.

* ಉಳ್ಳಲ್ಲಿ ಉಣಲಿಲ್ಲ ಉಳ್ಳಲ್ಲಿ ಉಡಲಿಲ್ಲ ।
ಉಳ್ಳಲ್ಲಿ ದಾನ ಕೊಡದವನ ಒಡವೆಯು ।
ಕಳ್ಳಗೆ! ನೃಪಗೆ! ಸರ್ವಜ್ಞ ॥ ೬೦೩ ॥

* ಬೇವು ಫಲವಾಗಲದು[2] ಸೇವಿಸಲು[3] ಯೋಗ್ಯವೇ ।
ಗಾವಿಲನ ಧನವು ಘನವಾಗಿ ಬಯ್ಚಿಟ್ಟ[4] ।
ಠಾವಿಲೇ ಪೋಕು ಸರ್ವಜ್ಞ ॥ ೬೦೪ ॥

* ಕೊಟ್ಟು ಬಹ[5]ಕಾಲದಲಿ ಕೊಟ್ಟುಣಲಿಕರಿಯದೇ ।
ಹುಟ್ಟಯು ಒಳಗೆ[6] ಜೇನಿಕ್ಕಿ ಪರರಿಂಗೆ ।
ಕೊಟ್ಟು ಹೋದಂತೆ! ಸರ್ವಜ್ಞ ॥ ೬೦೫ ॥

---

1 C. ದೆಲ್ಲರಿಗೆ 2 A, ಹೂವಾದರೆ. 3 ದೇವರಿಗೆ, 4 ಅವಸಾವ. 5 ಕೊಟ್ಟುಂಬ. 6 C. ಅಟ್ಟಯು ಮೇಲೆ,

† ಒಡಲ್ಹಿಡಿದು ಗಳಿಸಿದ ಒಡವೆ ತನ್ನೊಡನಿರಲು ।
ಕೊಡದುಣ್ಣದಿಟ್ಟು ಮಡಿದರಾ ಒಡವೆಯು-।
ನೊಡನೆ ಹೂಳುವರೆ? ಸರ್ವಜ್ಞ ॥ ೬೦೬ ॥

* ಆರಿಗಾದರು ಒಂದು ತಾರವನು ಕೊಡಲೋಭಿ ।
ಮಾರಿಬಂದೆಳೆದು ಕೊಲುವಾಗ ಗಳಿಸಿದು-।
ದಾರಿಗಾಗುವದು? ಸರ್ವಜ್ಞ ॥ ೬೦೭ ॥

ಧರ್ಮವಿಲ್ಲದೆ ಸ್ವರ್ಗವಿಲ್ಲ.

* ಖಂಡಿಸದೆ ಕರಣವನು ದಂಡಿಸದೆ ದೇಹವನು ।
ಉಂಡುಂಡು ಸ್ವರ್ಗಕಯ್ದಲ್ಕೆ ಅದನೇನು ।
ರಂಡೆಯಾಳುವಳೇ? ಸರ್ವಜ್ಞ ॥ ೬೦೮ ॥

* ಕಯ್ಯೆತ್ತಿ ಕೊಡಲಿಲ್ಲ ಮಯ್ಯ ದಂಡಿಸಲಿಲ್ಲ ।
ಅಯ್ಯಗಳೆಲ್ಲ ಹರಿಯಲ್ಕೆ ಕೈಲಾಸ ।
ಕಯ್ಯ ಮಂಚಿಕೆಯೆ? ಸರ್ವಜ್ಞ ॥ ೬೦೯ ॥

† ದಂಡಿಸಿದ ತನುವಿಲ್ಲ[1] ಕೊಂಡಸುವ್ರತವಿಲ್ಲ ।
ಕಂಡ ಕಂಡವರು ಹರಿಯಲ್ಕೆ ಕೈಲಾಸ ।
ರಂಡೆಯುರ ಹೊರಸೆ? ಸರ್ವಜ್ಞ ॥ ೬೧೦ ॥

† ಈಶನಾನೆನಹಿಲ್ಲ ಮಿಾಸಲು ತನುವಿಲ್ಲ ।
ಲೇಸಪ್ಪುದೊಂದು ನುಡಿಯಿಲ್ಲ ಕೈಲಾಸ ।
ವೇಶಿಯಾ ಮನೆಯೆ? ಸರ್ವಜ್ಞ ॥ ೬೧೧ ॥

---

1 F. ಖಂಡಿಸಿದ ಮನವಿಲ್ಲ.

† ಕಂಡು ಕೊಟ್ಟದು ಇಲ್ಲ ದಂಡನೆಯು ಮುನ್ನಿಲ್ಲ ।
ಖಂಡಿತವು ಪುಣ್ಯತನಗೆನಲು ಸ್ವರ್ಗವ ।
ಷಂಡನಾಳುವನೆ? ಸರ್ವಜ್ಞ ॥ ೬೧೨ ॥

* ಕೊಟ್ಟದ್ದು ಮುನ್ನಿಲ್ಲ ಮುಟ್ಟಿದರಿವುಗಳಿಲ್ಲ ।
ಕೆಟ್ಟ ವಿಷಯಗಳ ಬಿಡಲಿಲ್ಲ ಸ್ವರ್ಗದ ।
ಬಟ್ಟೆ ಜೇರೆಂದ! ಸರ್ವಜ್ಞ ॥ ೬೧೩ ॥

ಪ್ರಬೋಧ.

* ಕಾಣಿಯನು ಗಳಿಸದ್ದ[1] ಕಾಣಿಯನು ಈಯುವದು ! ।
ಕೇಣದಿಂ[2] ಗಳಿಸಿ ಕಡೆಯಲಿ ಕೊಡುವೆನೆನೆ[3] ।
ಪ್ರಾಣ ಶಾಶ್ವತವೆ? ಸರ್ವಜ್ಞ ॥ ೬೧೪ ॥

* ಇದ್ದಾಗ ಉಣ್ಣದವ । ನೆದ್ದಾಗ ಉಣ್ಣುವನೆ? ।
ಬಿದ್ದ ದೇಹವನು ಗುದ್ದಿನೊಳಿಡುವಾಗ[4] ।
ಬುದ್ಧಿ ಬಂದಪುದೆ? ಸರ್ವಜ್ಞ ॥ ೬೧೫ ॥

* ಸಿರಿಯಭರವುಳ್ಳಾಗ ಮರೆಯದಿರುವವ ಜಾಣ ।
ಕೊರತೆಯಾದಾಗ ಕೊಡಲೆನಗಿಲ್ಲೆಂದು ।
ಅರಸುವನೆ ಹೆಡ್ಡ! ಸರ್ವಜ್ಞ ॥ ೬೧೬ ॥

* ಅನ್ನದಾನಗಳಿಂದ ಮುನ್ನ ದಾನಗಳಿಲ್ಲ ।
ಅನ್ನಕ್ಕೆ ಮಿಗಿಲು ಇನ್ನಿಲ್ಲ ಜಗದೊಳ ।
ಗನ್ನವೇ ಪ್ರಾಣ! ಸರ್ವಜ್ಞ ॥ ೬೧೭ ॥

---

1 G. S. ಕಾಣಿಯ್ನು ಗಳಿಸಿದ್ದು. 2 ಕ್ಷೀಣಿಸಿ. 3 G. S. ತಪವೆನಲು 4 G. S. ಗೋಳಿಡುವಾಗ.

# ೧೨ ರಾಜನೀತಿಪದ್ಧತಿ.

---

ಸ್ವಾತಂತ್ರ್ಯವೇ ಶ್ರೇಷ್ಠ.

* ತಂತಿ ವಾದ್ಯವು ಲೇಸು ಮಂತ್ರಿಯಾಕೆಳೆ ಲೇಸು ।
ಯಂತ್ರವಾಹಕನ ದಯೆ ಲೇಸು ; ಜಗದಿಸ್ವ-।
ತಂತ್ರವೇ ಲೇಸು ಸರ್ವಜ್ಞ ॥ ೬೧೮ ॥

ಒಡೆಯನಿಲ್ಲದಿದ್ದರೆ ಕೇಡು.

* ಗುರುವು ಇಲ್ಲದ ಮಠವು ಹಿರಿಯರಿಲ್ಲದ ಮನೆಯು ।
ಅರಸಿಲ್ಲದೂರು ಇವು ಮೂರು ನುಲಿಹರಿದ ।
ಹೊರಸಿನಂತಕ್ಕು ಸರ್ವಜ್ಞ ॥ ೬೧೯ ॥

* ನಾಡೆಂಬ ದೇಹಕ್ಕೆ ರೂಢಿಪತಿಯೆ ಪ್ರಾಣ ।
ನಾಡಳಿಯೆ ರೂಢಿಪತಿ ಕೆಡುಗು, ಅರಸಳಿಯೆ ।
ನಾಡೆಲ್ಲ ಕೆಡುಗು; ಸರ್ವಜ್ಞ । ॥ ೬೨೦ ॥

ಗುಣವಿದ್ದರೆ ರಾಜ.

† ಕ್ಷೇಣವನು ಕಳೆಯುವದು ತ್ರಾಣಿಯೆಂದೆನಿಸುವದು ।
ಕ್ಷೋಣಿ ಮಾರ್ಬಲವ ಗೆಲ್ಲುವದು, ಪುಣ್ಯದ ।
ತ್ರಾಣ ಕಾಣಯ್ಯ! ಸರ್ವಜ್ಞ ॥ ೬೨೧ ॥

ರಾಜಾ ಪ್ರತ್ಯಕ್ಷ ದೇವತಾ.

* ಧೊರೆತನವ ಮಾಡುವರು ಕರೆದನ್ನ ನೀಡುವರು ।
ಉರಗಭೂಷಣನ ನೆನೆವರು, ಧರೆಯೊಳಗೆ ।
ನರರಲ್ಲ ನೋಡು! ಸರ್ವಜ್ಞ ॥ ೬೨೨ ॥

### ಮಂತ್ರಿ ಇಲ್ಲದಿದ್ದರೆ ಅತಂತ್ರ.

* ಮಂತ್ರಿಯುಳ್ಳರಾಜ್ಯ । ಯಂತಿರಿಸಿದಂತಕ್ಕು ।
ಮಂತ್ರಿಯಿಲ್ಲದನ ಸಾಮ್ರಾಜ್ಯ ಕೀಲ್ಗಳೆದ[1] ।
ಜಂತ್ರದಂತೆಕ್ಕು ಸರ್ವಜ್ಞ ॥ ೬೨೩ ॥

### ಪ್ರಜೆ ಇದ್ದರೆ ಅರಸು.

* ಮಂದಿಯಿಲ್ಲದ ರಾಜ್ಯ ಕಂದನಿಲ್ಲದ ಭಾಗ್ಯ ।
ಬಂಧುವಿಲ್ಲದ ಮನೆತನ ಜಗದೊಳು ।
ಚಂದ[2]ವಲ್ಲೆಂದ ಸರ್ವಜ್ಞ ॥ ೬೨೪ ॥

### ಯೋಗ್ಯ ರಾಜಲಕ್ಷಣ.

#### ರಣಧೀರ.

* ಊರಿಗೆ ಧೊರೆರೂಪು ನಾರಿಗೆ ಗುಣರೂಪು ।
ಚಾರು ಕೋಕಿಲೆಗೆ ಸ್ವರರೂಪು, ರಾಜಗೆ ।
ಧೀರತ್ವರೂಪು ಸರ್ವಜ್ಞ ॥ ೬೨೫ ॥

* ಕಟುಗರಂಜಿಕೆಯೇಕೆ? ದಿಟಕೆ ಮೂದಲೆಯೇಕೆ? ।
ಮಠಗಂಡ ಮಡದಿ ಗೊಡವೇಕೆ? ಕಲಿಗೆ ಸಂ- ।
ಕಟಗಳಿರಳೇಕೆ? ಸರ್ವಜ್ಞ ॥ ೬೨೬ ॥

† ಹರಗೆ ನಂದಿಯು[3] ಲೇಸು ಮರಣ ಭೂತಕೆ ಲೇಸು ।
ವರ ಯುದ್ಧ ಲೇಸು ಸುಭಟಂಗೆ ರಾಜಗೆ ।
ಕರಧೈರ್ಯ ಲೇಸು ಸರ್ವಜ್ಞ ॥ ೬೨೭ ॥

---

1 A. ಕೀಲುಗಿದ B. ಕಿಗ್ಗಳದ. 2 F. ಗಂಧವಿಲ್ಲೆಂದ. 3 P. ಹಂದಲೆ

* ಬಿದಿರು ಮೆಳೆಗಳುಲೇಸು ಹೊದರು ಗಿಳಿಗಿರೆ[1]ಲೇಸು ।
ಅದರುಗಳು ಲೇಸು ಕಬ್ಬುನಕೆ, ಸುಭಟಗೆ ।
ಕುದುರೆ ಲೇಸೆಂದ ಸರ್ವಜ್ಞ || ೬೨೮ ||

ಸಾವಿಗೆ ಅಂಜದವನು.

* ಜಾತಿ ವೀರರು ಸಾವ[2] ಭೀತಿಗಂಜುಳಿವರೇ[3] ? ।
" ಜಾತಸ್ಯಮರಣಂ ಧ್ರುವ"ವೆಂದಿರುತಿರೆ[4]– ।
ಲೇತಕಂಜುವದು ? ಸರ್ವಜ್ಞ || ೬೨೯ ||

* ಅಮ್ಮನಾಡಿರಿಯುವದು! ಬೊಮ್ಮನಾದಡೆಯೇನು ? ।
ಹಮ್ಮ ನೀ ತಳೆದು ಕೆಡಬೇಡ! ಕಲಿಗೆ ತಾ– ।
ನಿಮ್ಮ ಸಾವುಂಟೆ? ಸರ್ವಜ್ಞ || ೬೩೦ ||

* ಬಲಿಯು ಹರಿದರೆ ಹೊಲ್ಲ ಮೊಲೆಯು ಬಿದ್ದರೆ ಹೊಲ್ಲ ।
ತಲೆ ಹೊಲ್ಲ ಮೂಗು ಹರಿದರೆ, ಕಲಿಗೆ ಮೂ– ।
ದಲಿಯು ನುಡಿಹೊಲ್ಲ; ಸರ್ವಜ್ಞ || ೬೩೧ ||

ಧನುರ್ವಿದ್ಯ ಬಲ್ಲವನು.

* ಕಲಿಯೊಡನೆ ಹೋರುವದು ಗೆಲುವ ಜೂಜಾಡುವದು ।
ಕೊಲುವಡೆ ಅಲಗ ಹಿರಿಯುವದು, ರಣದೊಳಗೆ ।
ಸಲುವದು ನೋಡ! ಸರ್ವಜ್ಞ || ೬೩೨ ||

* ಬಿಲ್ಲಿಲ್ಲದಾಕೆಯ್ದು ಹುಲ್ಲಿಂದ ಕಡುಕಷ್ಟ ।
ಬಿಲ್ಲಿಂದರ್ಜುನರು ರಘುರಾಮ ಜಗದ– ।
ಲೆಲ್ಲ ಗೆಲಿದಿಹರು ಸರ್ವಜ್ಞ || ೬೩೩ ||

---

1 B. ಕದರುಮುಂಡಿಗೆ, 2 & 3 A, C. ಜಾತಿವೀರರು ಸತ್ತು । ಭೀತತಾನುಳಿವನೇ ? 4 A. ಶ್ರುತಿಯಿರೆ.

* ಚೂರಿಯನು ಬಾಳನ್ನು[1] ಶೂರತ್ವದಿಂ ಪಿಡಿದು ।
ಸಾರಿ ರಣದೊಳಗೆ ಸಾಗಲಾ ಚೂರಿಯ-।
ಸೂರೆ ನೋಡೆಂದ ಸರ್ವಜ್ಞ ॥ ೬೩೪ ॥

† ಕತ್ತಿಯನು ಪಿಡಿಯುವಡೆ ಶಕ್ತಿ ತುಂಬಿರಬೇಕು ।
ಶತ್ರುವು ಸುತ್ತಿಮುತ್ತಲು ಕತ್ತಿಯಿಂ ।
ನೆತ್ತಿ ಹೊಯ್ಯೆಂದ ಸರ್ವಜ್ಞ ॥ ೬೩೫ ॥

* ಕತ್ತಿಯನು ಹಿರಿದಿಹರೆ ಯುಕ್ತಿಯೊಂದಿರಬೇಕು ।
ಕುತ್ತಗಳು ಬಿಡದೆ ಬರುತಿರೆ ಕತ್ತಿಯು ।
ನೆತ್ತಿಹೊಯ್ಯೆಂದ! ಸರ್ವಜ್ಞ ॥ ೬೩೬ ॥

ಬೇಟೆ ಬಲ್ಲವನು.

* ಕೋಟೆ ಕದನಕೆ ಲೇಸು ಬೇಟೆಯರಸಿಗೆ ಲೇಸು ।
ನೀಟಾದ ಹೆಣ್ಣು ತರಲೇಸು ಸುಜನರೊಡ-।
ನಾಟವೇ ಲೇಸು ಸರ್ವಜ್ಞ ॥ ೬೩೭ ॥

ತಪ್ಪಿಸಿಕೊಳ್ಳಬಲ್ಲವನು.

* ಓಡುವದು ಒಡಲಿಂಗೆ ಕೇಡಿಲ್ಲದಿರುತಿರಲು ।
ಓಡಿ ತನ್ನೊಡಲು ಕೆಡುವರೆ ರಣದೊಳ ॥
ಗಾಡಿ ಸಾಯುವದು! ಸರ್ವಜ್ಞ ॥ ೬೩೮ ॥

ಕ್ರಮುಸ್ಥಸು.

† ತೊಗರೆಯಾ ತೊಗೆ ಲೇಸು ತಿಗುರಿಗೆ ಮೊಳೆಲೇಸು ।
ತಗರ ಹಿಂಗಾಲ ಸತುಲೇಸು ದೊರೆಗಳಿಗೆ ।
ಬಿಗಿಬಂದು ಲೇಸು ಸರ್ವಜ್ಞ ॥ ೬೩೯ ॥

---

1 P. ಬಾಕನ್ನು.

ಸಲಿಗೆ ಕೊಡದವನು.

* ಅರಿವು ಇರದಿರೆ[1] ಹೊಲ್ಲ ಕರಿಯು[2] ಬೆದರಲು ಹೊಲ್ಲ ।
ಅರಿಯದೂರೊಳಗೆ ಇರಹೊಲ್ಲ ಧೊರೆಗಳಿಗೆ ।
ಸರಸವೇ[3] ಹೊಲ್ಲ ಸರ್ವಜ್ಞ ॥ ೬೪೦ ॥

* ಮರವು ಮಕ್ಕಳಿಗೊಲ್ಲ ಕುರುವು ಕುಂಡೆಗೆ ಹೊಲ್ಲ[4]
ಕುರುಡನ ಕೋಲು ಕಳಹೊಲ್ಲ, ಧೊರೆಗಳಿಗೆ ।
ನೆರೆಮಾತು ಹೊಲ್ಲ; ಸರ್ವಜ್ಞ ॥ ೬೪೧ ॥

ಸತ್ಯಸಂಧ.

* ನೆತ್ತವಿತ್ತಕೆ ಬಲವು ಒತ್ತೆ ಸೂಳೆಗೆ ಬಲವು ।
ಕತ್ತಲೆಯು ಬಲವು ಕಳ್ಳಂಗೆ, ಅರಸಿಗೆ ।
ಸತ್ಯವೇ ಬಲವು; ಸರ್ವಜ್ಞ ॥ ೬೪೨ ॥

ಪಾಪಕ್ಕೆ ಭಯಪಡುವವನು

* ಪರನಾರಿ ಸೋದರನು ವರಶತ್ರುದಲ್ಲಣನು ।
ಕರಪಾಪಭಯಹೊರೆವ, ಗುಣಿಯಹ, ನೃಪಗೆ ।
ಸ್ಥಿರವಿಹಳು ಲಕ್ಷ್ಮಿ, ಸರ್ವಜ್ಞ ॥ ೬೪೩ ॥

ಒಕ್ಕಲುತನಕ್ಕೆ ಆಶ್ರಯ ಕೊಡುವವನು.

† ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ।
ಕಕ್ಕುಲತೆಯಿಂದ ನಡಿಸುವಾ ಅರಸನು ।
ಚಕ್ಕಂದವಿರುವ ಸರ್ವಜ್ಞ ॥ ೬೪೪ ॥

ಒಕ್ಕಲುತನದಿಂದ ರೊಕ್ಕ.

* ಭಂಡಾರ ತುಂಬಿನೀ ಭಂಡಿಯಲಿ ಹೇರುವರೆ ।
ಮಂಡಲವನಾಳಿ ಮೆರೆವರೆ ಒಕ್ಕಲನು ।
ಕೊಂಡಾಡಬೇಕು! ಸರ್ವಜ್ಞ ॥ ೬೪೫ ॥

---

1 G. S. ಅರಿವೆ ಉಟ್ಟರೆ, 2 G. S. ಕುರಿಯು, 3 W. K. ಸರಿಮಾತು, 4 B. ತೆರವು ಹೆಣ್ಣಿಗೆ ಹೊಲ್ಲ,

## ರಾಜರಲ್ಲಿ ಹೇಗೆ ಇರಬೇಕು.

### ಅರಸನ ಚಿತ್ತ ಚಂಚಲ.

† ಚಿತ್ತವರಸಿನ ಕರದ ಚಿತ್ರತಾ ಮಣಿದಂತೆ ।
ಕುತ್ತ ಹೋಗುವದು ಅರಸೊಲಿಯೆ, ಮುನಿದರೆ ।
ಕತ್ತು ಹೋಗುವದು; ಸರ್ವಜ್ಞ ॥ ೬೪೬ ॥

* ಹರಿವ ನೀರೆಳೆವಳ್ಳಿ, ತುರಗ, ಬೈತ್ರವು, ಭಂಡಿ, ।
ಅರಸಿನ ಮನವು, ಬೆಲೆವೆಣ್ಣು ಇವು ಏಳು ।
ತಿರುಹುವವರಿಚ್ಛೆ ಸರ್ವಜ್ಞ ॥ ೬೪೭ ॥

### ಹೇಗೆ ವರ್ತಿಸಬೇಕು.

* ನಚ್ಚಿದಂತರಸಿನಾ ಇಚ್ಛೆಯಂತಿರುವದದು ।
ಒಚ್ಚೊತ್ತು ತಪ್ಪಿ ನಡೆದರೆ ಹೊತ್ತೇರಿ ।
ಕಿಚ್ಚುಕಾದಂತೆ! ಸರ್ವಜ್ಞ ॥ ೬೪೮ ॥

* ಚಿತ್ತವೃತ್ತಿಯನರಿದು ಹತ್ತೆವಿಡಿ[1]ದೋಲಯ್ಸು! ।
ಚಿತ್ತವ ಪಡೆದು ಮದವಾಗೆ, ಮೊಲನಾಯಿ ।
ಹತ್ತಿದಂತಕ್ಕು ; ಸರ್ವಜ್ಞ ॥ ೬೪೯ ॥

### ಅರಸು ಮೆಚ್ಚಿದರೆ ಅರ್ಧ ರಾಜ್ಯ.

* ಅರಸೊಲಿದು ನಡಿಸಿದರೆ; ಸಿರಿಯುಕ್ಕು, ದೆಸೆ[2]ಯುಕ್ಕು, ।
ಕರಿ ತುರಗ ಬಲವು ಪಿರಿದಕ್ಕು ; ಮುನಿದರೆ,
ಕರನಾಶವಕ್ಕು[3] ಸರ್ವಜ್ಞ ॥ ೬೫೦ ॥

* ಅನವರತವ[4]ಗಲದಲೆ ಜನಪತಿಯನೋಲಯ್ಸು ।
ಧನಮುಕ್ಕು ತೇಜಪಿರಿದಕ್ಕು, ವೈರಿಯು ।
ತನಗೆ ಸುಖನಕ್ಕು; ಸರ್ವಜ್ಞ ॥ ೬೫೧ ॥

---

1. C. ಹತ್ತಿರಿದ್ದೋಲಯ್ಸು. 2, C. ಜಸ. 3. A. ಕರಿಯು ನರಿಯುಕ್ಕು. 4, P. ಅನುವರಿತು,

ಮೆಚ್ಚದಿದ್ದರೆ ಮರಣ.

† ಅರಸು ಮುನಿದೂರೊಳಂ । ಕುರಿಸಿರುವದತಿಕಷ್ಟ ।
ಸರಸವಿಲ್ಲದಾ ಠಾಣ್ಯದಿಂ ಬಾಣದ ।
ಬಿರಸು ಲೇಸಂದ! ಸರ್ವಜ್ಞ ॥ ೬೮೨ ॥

ದುಷ್ಟರಿಗೆ ದಿನ.

* ಅರಗು ಕಲ್ಲೂ ಕೂಡಿ ನೆರೆಯಕ್ಕ ಗೆಲುವಂದ ।
ಅರಮನೆಯ ಕಂಡ ಅಧಮರುತ್ತಮರನು ।
ನೆರೆಗೆಲುವರಯ್ಯ ಸರ್ವಜ್ಞ ॥ ೬೮೩ ॥

ಎಚ್ಚರವಿಲ್ಲದಿದ್ದರೆ ಇರಬೇಡ.

* ಮೆಚ್ಚಿದಂತರಸಿನಲಿ ಎಚ್ಚರಿಂದಿರಬೇಕು ।
ಎಚ್ಚರವು ತಪ್ಪಿ ನಡೆದರೆ ಆ ಮೆಚ್ಚು ।
ಕಿಚ್ಚಿನಂತಕ್ಕು! ಸರ್ವಜ್ಞ ॥ ೬೮೪ ॥

* ಅರಸನೋಲಯ್ಸುವರೆ ಕರಭೀತಿ[1]ಬೇಕಯ್ಯ ।
ಅರಸು, ಕರಿ, ಯುರಗನೊಳೆಚ್ಚರಿಲ್ಲದಡೆ ।
ತ್ವರಿತದಿಂ ತೊಲಗು! ಸರ್ವಜ್ಞ ॥ ೬೮೫ ॥

ಮಂತ್ರಿಯುಲ್ಲಿ ಹೇಗೆ ವರ್ತಿಸಬೇಕು.

* ಎಂತರಸು ಒಲಿದರೂ[2] ಮಂತ್ರಿಯಾ ಹಗೆ ಹೊಲ್ಲ; ।
ಎಂತಕ್ಕುಮರಸು ಮುನಿದರೆ? ಆ ಮಂತ್ರಿ ।
ಅಂತಕನಕ್ಕು! ಸರ್ವಜ್ಞ ॥ ೬೮೬ ॥

* ಮಂತ್ರಿಯು ಹಗೆ, ನೃಪನ ಕಾಂತೆಯಾ ಸಮುಗೋಷ್ಟಿ,[3] ।
ಮಂತ್ರವಿಲ್ಲದನ ಒಡನಾಟವಿವು ತನ್ನ ।
ಅಂತ್ಯ ಕಾಲಕ್ಕೆ[4]; ಸರ್ವಜ್ಞ ॥ ೬೮೭ ॥

---

1 C. ನೀತಿ. 2 W. ಎಂತಪ್ಪನಾದರೂ. 3 K. ಸವಿಮಾತು. 4 K. ಮುನ್ನೆ ಕೊಲ್ಲುವವು!

ದೊಡ್ಡವರೊಡನೆ ಕದನಬೇಡ.

* ಬಲ್ಲವರು ಹಾವಸೆಯ ಕಲ್ಲುತಾ ಮೆಟ್ಟುವರೆ? ।
ಬಲ್ಲಿದರೊಡನೆ ಸೆಣಸಿ ಮಾತಾಡಿದ-।
ರಲ್ಲಿಯೇ ಕೇಡು! ಸರ್ವಜ್ಞ ॥ ೬೫೮ ॥

* ಮೇಲರಿಯದಧಿಕರೊಳು[1] ಕಾಳಗವ ತೊಡಗಿದರೆ ।
ಬಾಳುವೆಗೆಟ್ಟು ಬಡವಕ್ಕು, ಬಿಸಲಾದ ।
ಚೇಳಿನಂತಕ್ಕು! ಸರ್ವಜ್ಞ ॥ ೬೫೯ ॥

ಒಲಗದಲ್ಲಿ ಹೇಗೆ ವರ್ತಿಸಬೇಕು.

* ಅರಸನೋಲಗದೊಳಗೆ ಸರಿಸ[2]ವಾಡಲು ಬೇಡ ।
ಸರಸನಿಂದೆಯಲಿ ಇರಬೇಡ! ಓರ್ವರ ।
ಭರವಸವು ಬೇಡ! ಸರ್ವಜ್ಞ ॥ ೬೬೦ ॥

* ಎದ್ದು ಮಾತಾಡದಿರು ಎದ್ದೆದ್ದು ನಿಲ್ಲದಿರು ।
ಇದ್ದ ಮಾನಿಸರ[3] ಜರಿಯದಿರೋಲಗದೊ-।
ಳಿದ್ದಾಗ ನೀನು! ಸರ್ವಜ್ಞ ॥ ೬೬೧ ॥

ಅರಮನೆ.

* ಹುರಿಹುಗಿಲಾಗಿರ್ಪು । ದರಮನೆಗೆ ಕೇಡಯ್ಯ ।
ಹರಿ ಹೊಕ್ಕು ಬಲಿಯ ಕೆಡಿಸಿದನರಮನೆಗೆ ।
ಹುರಿ ಹುಗಿಲು ಹೊಲ್ಲ ಸರ್ವಜ್ಞ ॥ ೬೬೨ ॥

† ಕ್ಷಣಿಕನಾಕೆಳೆ ಹೊಲ್ಲ[4] ಗಣಿಕೆ ಮುದಿಯಳು ಹೊಲ್ಲ ।
ಕಣುಕಟ್ಟು ಹೊಲ್ಲ ಅರಿದರಲಿ, ಅರಮನೆಗೆ ।
ಹೊಣೆಯಾಗ ಹೊಲ್ಲ; ಸರ್ವಜ್ಞ ॥ ೬೬೩ ॥

---

1 G. S. ದಧಮರೊಳು, 2 W. ಸರಸ. 3 W. ಮನುಜರನು. 4 C. ಗಣಿಕನ ನೆರೆಹೊಲ್ಲ.

* ಸುಡುವರೆ ಪಂಜಿಹುದು ಬಡಿವರೆ ಭೇರಿಹುದು ।
ಪೊಡವಿಯಾಳುವರ ಮದುವೆಯ ವೆಚ್ಚಕೊಂ–।
ದಡಿಕೆಲೆಯು ಬೇಡ! ಸರ್ವಜ್ಞ ॥ ೬೬೪ ॥

* ಹಾಡಬಲ್ಲವನೋದು ಕೂಡಿ ತಪ್ಪದನಂತು ।
ಬೇಡಿದನೀವ ದೊರೆಸೇವೆಯಿವು ಮುನ್ನ ।
ಮಾಡಿದರ ಫಲವು! ಸರ್ವಜ್ಞ ॥ ೬೬೫ ॥

ಅಂತಃಪುರ.

* ರೊಟ್ಟೆಯಿಲ್ಲದ ಊಟ ಹೊಟ್ಟೆಗಿಲ್ಲದ ಕೂಟ ।
ಇಟ್ಟೆಯರಿಲ್ಲದರಮನೆಯು ಚಂದನವ ।
ಕುಟ್ಟಿ ಕುಡಿದಂತೆ ಸರ್ವಜ್ಞ ॥ ೬೬೬ ॥

* ಅಜ್ಜಿಯಿಲ್ಲದ ಮನೆಯು ಮಜ್ಜಿಗಿಲ್ಲದ ಊಟ ।
ಕೊಜ್ಜೆಯರಿಲ್ಲದರಮನೆಯಿವು ಮೂರು ।
ಲಜ್ಜೆಗೇಡೆಂದ ಸರ್ವಜ್ಞ ॥ ೬೬೭ ॥

ಅಯೋಗ್ಯ ರಾಜಲಕ್ಷಣ.

ಅಶ್ವಸಾಧನವಿಲ್ಲದವನು.

* ಕುದುರೆಯನ್ನೇರದಾ ಕದನವನು ಜಯಿಸದಾ ।
ಸುದತಿಯರೊಲುಮೆಯರಿಯದಾ ಅರಸನು ।
ಸಿದಿಗೆಯಾ ಹೆಣನು ಸರ್ವಜ್ಞ ॥ ೬೬೮ ॥

* ಕುದುರೆಯಿಲ್ಲದ ಅರಸು ಮಧುರವಿಲ್ಲದ ಹಾಡು ।
ಚದುರೆಯಲ್ಲದಳ ಮನೆವಾರ್ತೆ ಮುದಿಗೂರ[1]–।
ಲೊದರಿ ಸತ್ತಂತೆ[2] ಸರ್ವಜ್ಞ ॥ ೬೬೯ ॥

---

1 & 2 G. S. ಕ್ಷಯರೋಗಿ ಬದುಕಿದಂತಿಹುದು.

### ಅಯೋಗ್ಯ ಕುದುರೆ.

* ಹಸಿವಾದಡುಂಬುದು । ಬ್ಬಸ ಬಂದರೋಡುವದು ।
ಪಸರಿಸಿ ಸಿರಿಯೊಳ್ಮೆರೆಯುವಾ ಕುದುರೆಯು—।
ನೆಸಗಿ ಕಟ್ಟೆಂದ! ಸರ್ವಜ್ಞ ॥ ೬೭೦ ॥

* ಬಯ್ಯೆ ಬೈಲಾಗುವದು । ಹೊಯ್ದರಿರದೋಡುವದು! ।
ಮೆಯ್ದು ಸುಖಿಸುವಾ[1] ಕುದುರೆಯ ವಿಧಿತಾನು ।
ಒಯ್ದರೇ ಲೇಸು! ಸರ್ವಜ್ಞ ॥ ೬೭೧ ॥

* ಮೆಟ್ಟು ಇಲ್ಲದ ಪಾದ ಅಟ್ಟಲೋಡದ ತುರಗ ।
ಕುಟ್ಟಿ ಕೆಡಹದ ಕಲಿತನವು, ಚಂದನವ ।
ಸುಟ್ಟು ಬಡಿದಂತೆ; ಸರ್ವಜ್ಞ ॥ ೬೭೨ ॥

### ಶಸ್ತ್ರವಿದ್ಯೆ ಅರಿಯದವನು.

† ಕತ್ತಿ ಖಂಡುಗ ಭಾರ ಹೊತ್ತು ತಿರುಗಿದಡೇನು ।
ಹೊತ್ತು[2] ಬಂದಾಗ ಹಿರಿಯದಾ ಕತ್ತಿಯು—।
ನೆತ್ತಿ ಮಾರೆಂದ! ಸರ್ವಜ್ಞ ॥ ೬೭೩ ॥

† ಇರಿಯಲರಿಯದೆಸುರಿಗೆ ಧರಿಸಿ ಮೆರೆದಡದೇನು ।
ಅರಿಯು ಬಂದಾಗ ಹಿರಿಯದಾಸುರಿಗೆಯು—।
ನರೆದು ಕುಡಿಯೆಂದ ಸರ್ವಜ್ಞ ॥ ೬೭೪ ॥

* ಕರವೆತ್ತಿ ಮಸೆಯುವನು ಹಿರಿದೊತ್ತಿ ಹಾಕುವನು ।
ಮುರಿದು ಬಂದಾಗ ತರಿಯದಾಕತ್ತಿಯು—।
ನೆರೆದು ಮುಕ್ಕುವನೆ? ಸರ್ವಜ್ಞ ॥ ೬೭೫ ॥

---

1 ಕೈ ಮುಚಿದಲ್ಲಿ ಇರಿಯುವ. 2 ಒತ್ತಿ.

ರಣಹೇಡಿ.

* ಅಟ್ಟಲೋಡದ ತೇಜಿ ಮುಟ್ಟಲಿರಿಯದ ಬಂಟ ।
ಇಟ್ಟೆಡೆಗಿಲ್ಲದಾಳಿದ್ದರಾಕಾರ್ಯ ।
ಕೆಟ್ಟಿತೆಂದರಿಗು[1]! ಸರ್ವಜ್ಞ ॥ ೬೭೬ ॥

* ಕೇಡು ಕೂಡಿದ ಬುದ್ಧಿ । ಯೋಡಲಿರಿಯದ ಕಲಿಯು ।
ಕೂಡುವ ಪಥದಿ ನಾಚುವಾ ಸತಿಯನು ।
ಕಾಡಲಿಕ್ಕೆಂದ; ಸರ್ವಜ್ಞ ॥ ೬೭೭ ॥

* ಬಾಗದಾ ಬಿಲುಕಷ್ಟ ಹೋಗಿ ಬೀಳ್ವದು[2] ಕಷ್ಟ ।
ತ್ಯಾಗ[3]ವಿಲ್ಲದನೃಪ ಕಷ್ಟ, ರಣದೊಳು ।
ಸಾಗುವದೆ ಕಷ್ಟ! ಸರ್ವಜ್ಞ ॥ ೬೭೮ ॥

* ಕಾಗೆಯೆಂಜಲು ಹೊಲ್ಲ ಸೀಗೆ ಮುಳ್ಳಿರಹೊಲ್ಲ ।
ಆಗಲು ಉಲಿವ ಸತಿಹೊಲ್ಲ, ಅಪಜಯದ ।
ಭೋಗವನೇ ಹೊಲ್ಲ; ಸರ್ವಜ್ಞ ॥ ೬೭೯ ॥

* ತಾಗದಾ ಬಿಲು ಹೊಲ್ಲ ಆಗದಾ ಮಗ ಹೊಲ್ಲ ।
ಆಗೀಗಲೆಂಬ ನುಡಿ ಹೊಲ್ಲ, ರಣಕಿದಿ-।
ರಾಗದವ ಹೊಲ್ಲ; ಸರ್ವಜ್ಞ ॥ ೬೮೦ ॥

* ಹುರಿ[4]ಯಾದ ನೂಟಕ್ಕೆ ಹೊರೆಯಾದನವಧರೆಗೆ ।
ಮುರಿದು ಬಂದಿರ್ದ ಕಲಿಯಿರಿಯಲರಿಯದ-।
ನಿರುವದೇಕೆಂದ? ಸರ್ವಜ್ಞ ॥ ೬೮೧ ॥

---

1 A. ಹ.ಟ್ಟಿಕೊಂಡಂತೆ, 2 A. ಹೋಗದ ಬದ್ದಿನ, 3 A. ರಾಗ, 4 A. ಕರಿ, C, ಹರಿ,

* ಕಾಳಗಗಳಿಲ್ಲದಿರ । ಲಾಳಬಯಸುವರವರು ।
ಕಾಳಗವೆಂಬ ಕಾಳ್ಗಿಚ್ಚು ಭರದಿ ಬರ-।
ಲಾಳಲಂಜುವರು! ಸರ್ವಜ್ಞ ॥ ೬೮೨ ॥

* ಕನ್ನಡಿಗನಾ ಕೆಳೆಯು ಮನ್ನೆಯನ ವಿಶ್ವಾಸ! ।
ತನ್ನ ಕೈಯಲಗು ಪರರಿಗೆ ಕೊಟ್ಟರೆ ।
ಬೆನ್ನ ಕೊಟ್ಟಂತೆ! ಸರ್ವಜ್ಞ ॥ ೬೮೩ ॥

ಲೋಭಿ.

* ಮಧುರವಿಲ್ಲದ ಊಟ ಮುದವ ಬೆಳಸದ ಬೇಟ ।
ವಿಧವರಿತು ಕೊಡದ ಅರಸನು[1] ಹುಲಿಯಿಪ್ಪ ।
ಸದನದಂತಕ್ಕು ಸರ್ವಜ್ಞ ॥ ೬೮೪ ॥

* ರಾಗವಿಲ್ಲದ ವಿದ್ಯೆ ಭೋಗವಿಲ್ಲದ ನಿದ್ರೆ ।
ತ್ಯಾಗವಿಲ್ಲದನ ಧೊರೆತನ, ಹಾಳೂರ ।
ಗೂಗೆಯಂತಕ್ಕು; ಸರ್ವಜ್ಞ ॥ ೬೮೫ ॥

ದಯವಿಲ್ಲದವನು.

† ಅನ್ನವನು ನೀಡದೇ ನನ್ನಿಯನು ನುಡಿಯದೇ ।
ಮನ್ನಣೆಯನೀಯದಿರುತಿಪ್ಪ ಅರಸನು ।
ಕುನ್ನಿಯಿಂ ಕಷ್ಟ ಸರ್ವಜ್ಞ ॥ ೬೮೬ ॥

ಯೋಗ್ಯತೆಯರಿಯದವನು.

* ಬಂದವರ ಕರೆಯಿಸನು[2] ನಿಂದವರ ನುಡಿಯಿಸನು ।
ಹಂದಿಯು ಗಜವು ಸರಿಯೆಂಬನೋಲಗವು ।
ಎಂದಿಗೂ ಬೇಡ! ಸರ್ವಜ್ಞ ॥ ೬೮೭ ॥

1 A. ಅರಸಾಳು. 2 W. ಅರಿಯಿಸನು.

* ಬಂದವರ ಕೇಳಿಸನು ನಿಂದವರ ಮನ್ನಿಸನು ।
ಕೊಂಡೆಯನು ಕಲಿಯು ಒಂದೆಂಬ ಅರಸನ
ದಂದುಗವೆ ಬೇಡ ! ಸರ್ವಜ್ಞ ॥ ೬೮೮ ॥

* ಅಂತರವನರಿವಲ್ಲಿ ಎಂತಾದರಿರಲಕ್ಕು ।
ದಂತಿ ಸೂಕರನು ಸರಿಯೆಂಬ ಠಾವಿಲಿ ।
ಎಂತಿರುವದಕ್ಕು ? ಸರ್ವಜ್ಞ ॥ ೬೮೯ ॥

ಅಯೋಗ್ಯ ಓಲಗ.

* ಹೊನ್ನು ಮುನ್ನತವಿಲ್ಲ ಮನ್ನಣೆಯು ಪಿರಿದಿಲ್ಲ ।
ಬಿನ್ನಪವ ಕೇಳದರಸಿನೋಲಗದಿಂದ ।
ಸನ್ಯಾಸ ಲೇಸು ! ಸರ್ವಜ್ಞ ॥ ೬೯೦ ॥

* ಅಪಮಾನದೂಟದಿಂ । ದುಪವಾಸವಿರಲೇಸು ।
ನೃಪನಯ್ದು[1] ಬಡಿವ ಒಡ್ಡೋಲಗದಿಂದ ।
ತಪವು ಲೇಸೆಂದ! ಸರ್ವಜ್ಞ ॥ ೬೯೧ ॥

ಇಂಥಲ್ಲಿ ನಿಲ್ಲಬೇಡ.

* ಮಾಳಿಗೆಯು ಸಡಿಲಿದರೆ[2] ಸೂಳೆ ಹಲ್ಲುದುರಿದರೆ ।
ಆಳುವ ದೊರೆಯು ಹುಸಿ[3]ದರಿದ್ದಲ್ಲಿಂದ ।
ಹೇಳದಲೆ ತೊಲಗು ! ಸರ್ವಜ್ಞ ॥ ೬೯೨ ॥

† ಒಲ್ಲದಾ ಹೆಣ್ಣಿಂದ ಗೆಲ್ಲದಾ ಜೂಜಿಂದ ।
ಸಲ್ಲದೋಲಗದ ಬದುಕಿಂದ ವೈರಿಯು ।
ಕೊಲ್ಲಲೇಸೆಂದ ಸರ್ವಜ್ಞ ॥ ೬೯೩ ॥

---

1 G. S. ನೆದ್ದು. 2 A. ಸ್ಪೋರಿದರೆ. 3 C. ಮುನಿ,

### ದುಷ್ಟ ಅರಸನಿಂದ ನಷ್ಟ.

* ತಪ್ಪು ಸಾಧಿಪ ನೃಪನೊ। ಕಿಪ್ಪವನೆ ಕಡು ಹೆಡ್ಡ।
ಸರ್ಪನುರಿಹೆಡೆಯ ನೆಳಲೆಂದು ಸಾರಿದ।
ಕಪ್ಪೆಯಂತಕ್ಕು! ಸರ್ವಜ್ಞ ॥ ೧೯೪ ॥

* ನುಡಿಯ ಪಾಲಿಸಿ[1] ನುಡಿಯೆ[2] ನುಡಿಯುವದು[3] ಜಗವೆಲ್ಲ।
ನುಡಿದರೆ ಕೆರಳಿ ಕಿಡಿಯುಪ್ಪ ನೃಪನರಿದು[4]।
ನುಡಿಸುವವರಾರು[5]? ಸರ್ವಜ್ಞ ॥ ೧೯೫ ॥

* ಗೆಲ್ಲದಾ ಜೂಜುತಂ। ನೊಲ್ಲದಾ ಬೆಲೆವೆಣ್ಣು।
ಅಲ್ಲದ ಅರಸಿನತಿಕೂಟ ಬಹುಕಾಲ।
ನಿಲ್ಲವೆಂದರಿಗು! ಸರ್ವಜ್ಞ ॥ ೧೯೬ ॥

† ಖುಲ್ಲನಾ ಕಳೆಯುತಂ। ನೊಲ್ಲದಾ ಚಲುವೆಣ್ಣು।
ಅಲ್ಲದಹುದೆಂಬ ಅರಸಿನ ಒಲುಮೆಯು।
ನಿಲ್ಲವು ನೋಡ! ಸರ್ವಜ್ಞ ॥ ೧೯೭ ॥

* ಆನೆತಾ ತುಡುಗಾಗೆ ಜ್ಞಾನಿಮೂರ್ಖನುಮಾಗೆ।
ಭೂನಾಥ ಜಾರನಾದರೆ ಮಾಣಿಪುದು।
ಮಾನವರಿಗೆಳವೆ? ಸರ್ವಜ್ಞ ॥ ೧೯೮ ॥

* ಅಸಗನತಿ ಗರ್ವಿಸಲು ಹಸುಕಾಡಿ ಕರೆಯಲು।
ಉಸುರಿಲ್ಲದರಸು ಪ್ರಭುವಾಗೆ, ಪ್ರಜೆಯೆಲ್ಲ।
ಮುಸಿವಣ್ಣವಕ್ಕು! ಸರ್ವಜ್ಞ ॥ ೧೯೯ ॥

† ನಾಡನಾಳುವ ಅರಸು ರೂಢಿಗೀಶ್ವರನಕ್ಕು।
ಕಾಡುಮಿಗದಂತೆ ಮೊರೆದುರಿಯಲಾನಾಡು।
ಕಾಡಾಗದಿಹುದೆ? ಸರ್ವಜ್ಞ ॥ ೨೦೦ ॥

---

1 & 2, 3 P. ಲಾಲಿಸಿ ನಡೆಯೆ ನಡುಗುವದು. 4 & 5 A ನೃಪನಿದಿರು ನುಡಿಯುವವರಾರು,

* ಕೆಟ್ಟೇತು ಎಂಬ ಭಯ ಬಿಟ್ಟು ತನ್ನನು ಮರೆತು ।
ಪಟ್ಟದಾ[1] ಅರಸನ್ಯಾಯದಿ ನಡೆದರೆ ।
ಸೃಷ್ಟಿಗೇ ಕೇಡು! ಸರ್ವಜ್ಞ ॥ ೨೦೧ ॥

* ಜಾರೆ ಮುಟ್ಟುವರಿಲ್ಲ! ನಾರಿಕೂಪರ್ವಳಿಲ್ಲ[2]! ।
ಆರಯ್ದು ಸಲುಹುವರಸಿಲ್ಲದೂರೊಳಗೆ ।
ಮಾರಿಯಿಹುದೆಂದ! ಸರ್ವಜ್ಞ ॥ ೨೦೨ ॥

* ಅರಸು ಮಡಿದರೆ ಕೇಡು ಬಿರುಸು ಬಡವಗೆ ಕೇಡು ।
ವರುಷವಿಲ್ಲದಿರೆ ಬೆಳೆ[3]ಗೇಡು, ಅವಿಚಾರ- ।
ವರಸಿಂಗೆ ಕೇಡು! ಸರ್ವಜ್ಞ ॥ ೨೦೩ ॥

* ಅರಸು ಕೊಲುವರೆ, ಮಂತ್ರಿ ಕರಸಿ ಕಷ್ಟವ ಕೊಟ್ಟು ।
ಬೆರಸಿ ತಳವಾರ ಬೀಳಲು ಪರಿಹರಿಪ- ।
ರಾರಿನ್ನು ಹೇಳು? ಸರ್ವಜ್ಞ ॥ ೨೦೪ ॥

* ಅರಸರಕ್ಕಸನಂತೆ! ವರಮಂತ್ರಿ ಹುಲಿಯಂತೆ! ।
ಬರೆವಾತ ನಾಡನರಿಯಂತೆ! ಪರಿವಾರ ।
ಗರಗಸದಂತೆ! ಸರ್ವಜ್ಞ ॥ ೨೦೫ ॥

ಪ್ರಬೋಧ.

* ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ, ।
ಅಡಿಗಶ್ವಮೇಧಫಲ; ಸ್ವಾಮಿ ಕಾರ್ಯಕ್ಕೆ ।
ಮಡಿಯಲೇಬೇಕು! ಸರ್ವಜ್ಞ ॥ ೨೦೬ ॥

---

1 C. ಪಟ್ಟಣದ. 2 G. S. ನೀರ ಕೂಪಗಳಿಲ್ಲ. 3 ಧರೆ.

## ೧೩ ಸಂಗಪದ್ಧತಿ.

---

### ಸತ್ಸಂಗವೇ ಶ್ರೇಷ್ಠ.

* ಮೇರುವಿಂಗೆಣೆಯಿಲ್ಲ ಧಾರುಣಿಗೆ ಪಡಿಯಿಲ್ಲ ।
ಕಾರುಣಿಕರಪ್ಪ ಹಿರಿಯರ ಸಂಸರ್ಗ- ।
ವಾರಿಂದಲಧಿಕ ! ಸರ್ವಜ್ಞ ॥ ೭೦೭ ॥

† ಭೃಂಗ ಕೇಳಲು ಚಂದ ಹಂಗ ನೋಡಲು ಚಂದ ।
ಭಂಗವಿಲ್ಲದಾ ನುಡಿಚಂದ ಸಜ್ಜನರ ।
ಸಂಗವೇ ಚಂದ! ಸರ್ವಜ್ಞ ॥ ೭೦೮ ॥

### ಸಜ್ಜನ ಲಕ್ಷಣ.

* ಸತ್ಯವಂತರ ನೀನು ಸತ್ತರೆಂದೆನಬೇಡ ।
ಹೆತ್ತಮ್ಮ ಮಗನ ಕರೆವಂತೆ ನಿನ್ನನವ[1]- ।
ರೆತ್ತಿಕೊಂಬುವರು ! ಸರ್ವಜ್ಞ ॥ ೭೦೯ ॥

* ಹಂದಿ[2] ಹದ್ದಾದವರು ಇಂದು ಧರಣಿಗೆ ಬಂದು ।
ಮಂದಮತಿಯಿಂದ ಜರಿದರೆ ಸುಜನರ್ಗೆ ।
ಕುಂದು ಬಂದಪುದೆ? ಸರ್ವಜ್ಞ ॥ ೭೧೦ ॥

* ಎಲೆಯು ಕೊಳೆತರೆ ಹೊಲ್ಲ; ತೊಲೆಯು ಮುರಿದರೆ ಹೊಲ್ಲ; ।
ಕೊಲೆಹೊಲ್ಲ ಊರ ಜನರೊಳು; ಸುಜನ ಮೂ- ।
ದಲೆಯೊಳಿರಹೊಲ್ಲ; ಸರ್ವಜ್ಞ ॥ ೭೧೧ ॥

---

1 G. S. ಕೈಲಾಸ F. ಕಷ್ಟದಲಿ. 2 F. ಹಿಂದೆ.

* ನಾರಂಗಿಯಾಸಸಿಗೆ ನೀರು ತಂದೆರೆದಿಹರೆ ।
ವಿಾರಿದಮೃತವನೀವಂತೆ ಹಿರಿಯರ ।
ಕಾರುಣ್ಯವೆಂದ! ಸರ್ವಜ್ಞ || ೨೧೨ ||

ಸಜ್ಜನ ಸಂಗವೆ ತೀರ್ಥ.

* ಕಪ್ಪೆಗಳು ವಿಾನುಗಳು ಇಪ್ಪುದದು ತೀರ್ಥವೇ? ।
ತುಪ್ಪ ಓಗರಕೆ ಸಲುವದು, ಸತ್ಪುರುಷ- ।
ರಿಪ್ಪುದೇ ತೀರ್ಥ; ಸರ್ವಜ್ಞ || ೨೧೩ ||

† ಕಪ್ಪೆಗಳು ಸರ್ಪಗಳು ಇಪ್ಪುದದು ತೀರ್ಥವೇ ।
ತುಪ್ಪೋಗರಿಕ್ಕಿ ಸಲಹುವ ಸತ್ಪುರಷ- ।
ನಿಪ್ಪುದೇ ತೀರ್ಥ! ಸರ್ವಜ್ಞ || ೨೧೪ ||

* ಸತ್ಯರಾನುಡಿ[1] ತೀರ್ಥ! ನಿತ್ಯರಾ[2]ನಡೆತೀರ್ಥ! ।
ಉತ್ತಮರ[3] ಸಂಗವದು ತೀರ್ಥ! ಹರಿವಸೀ- ।
ರೆತ್ತಣದು ತೀರ್ಥ? ಸರ್ವಜ್ಞ || ೨೧೫ ||

ಬೈದರೂ ಸಜ್ಜನರೇ ಲೇಸು.

* ಕೈದಿಯುದಾ ಕೂಳಿಂದ ಹದುಳದಂಬಲಿ ಲೇಸು ।
ಹೃದಯಶೂನ್ಯರುಗಳೊಲವಿಂದ ಅರಿದರ ।
ಕದನವೇ ಲೇಸು! ಸರ್ವಜ್ಞ || ೨೧೬ ||

* ಹಣ್ಣು ಹಂಪಲಗಳಲಿ ಡೊಣ್ಣ ಬಾಳೆಯಹಣ್ಣು ।
ಡೊಣ್ಣಿಟು, ಒಳಗೆ ರುಚಿಯುಂಟು, ಸಜ್ಜನರ ।
ಡೊಣ್ಣು ಲೇಸೆಂದ; ಸರ್ವಜ್ಞ || ೨೧೭ ||

1 W. K. ಸದ್ಗುಣ. 2 W. K. ಉತ್ತಮರ A. ಮತ್ತೆ ಜಂಗಮತೀರ್ಥ. 3 W. K. ಸತ್ಯರಾ.

* ಅರಿಕೆ ಹೀನರ ಕೂಡಿ ಮೆರೆದಾಡುವದರಿಂದ ।
ಅರಿಕೆಯುಳ್ಳವರ ಒಡನಾಡಿ ಆವಗಂ ।
ಕೊರಗಿಹುದೆ ಲೇಸು! ಸರ್ವಜ್ಞ ॥ ೭೧೮ ॥

* ಅರಿಯದವರೊಡನಾಡಿ ಸರಿಯಾಳುವದಕಿಂದ[1] ।
ಅರಿಕೆಯುಳ್ಳವರ ಒಡನಾಡಿ ಆಗಲು ।
ಸೆರೆಯಹುದೆ ಲೇಸು! ಸರ್ವಜ್ಞ ॥ ೭೧೯ ॥

* ನಿಂದೆಯನು ನುಡಿದರೂ ಸಂದ ಸಜ್ಜನ ಲೇಸು ।
ಹೊಂದಿ ಸಾಸಿರವ ಕೊಡುತಿರ್ಪ ದುರ್ಜನರ ।
ದಂದುಗವೆ ಬೇಡ! ಸರ್ವಜ್ಞ ॥ ೭೨೦ ॥

ಸಜ್ಜನರನ್ನಗಲಬೇಡ.

* ಅಗಡೆತ್ತು ಕೊಳಹೊಲ್ಲ ನೆಗಡಿ ಮೂಗಿಗೆ ಹೊಲ್ಲ ।
ಪಗಡೆಯಾಡುವನ ಕೆಳೆಹೊಲ್ಲ, ಸಜ್ಜನರ– ।
ನಗಲಿರಲು ಹೊಲ್ಲ; ಸರ್ವಜ್ಞ ॥ ೭೨೧ ॥

† ಕೆಲೆಯು ಕೂತರೆ ಹೊಲ್ಲ ಮೊಲೆಯು ಬಿದ್ದರೆ ಹೊಲ್ಲ ।
ತೊಲೆ ಬಿಡಿದ ಮನೆಯೊಳಿರಹೊಲ್ಲ, ಗುಣಿಗಳ– ।
ಗಲುವದೇ ಹೊಲ್ಲ; ಸರ್ವಜ್ಞ ॥ ೭೨೨ ॥

* ತ್ರಿಕರಣ ಶುದ್ಧರೊಳು ಪ್ರಕೃತಿ ವಿರಹಿತರೊಳು ।
ಮುಕುತಿಗೆಳೆಯಿಸುವ ಜನರೊಳು[2] ಆವಗಂ ।
ಸುಖತನವೆ ಲೇಸು! ಸರ್ವಜ್ಞ ॥ ೭೨೩ ॥

---

1 A. ನೆರೆ. 2 A. C. ಸಕಲದ ಚಕ್ರವರ್ತಿಹರೊಳು

ಸಂಗ ದುಸ್ಸಂಗಭೇದ.

* ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ[1] ।
ದುರ್ಜನರ ಸಂಗದೊಡನಾಟ[2] ಬಚ್ಚಲ- ।
ರೊಜ್ಜನಂ[3]ತಿಹುದು! ಸರ್ವಜ್ಞ ॥ ೭೨೪ ॥

* ಬಲ್ಲವರ ಒಡನಾಡ ಬೆಲ್ಲವನು ಮೆದ್ದಂತೆ ।
ಅಲ್ಲದಹುದೆಂಬ ಅಜ್ಞಾನಿಯೊಡನಾಟ ।
ಕಲ್ಲು ಹಾದಂತೆ! ಸರ್ವಜ್ಞ ॥ ೭೨೫ ॥

† ಸತ್ಯಗಾ ಒಡನಾಟ ಮತ್ತೆ ಸಕ್ಕರಿ ತುಪ್ಪ ।
ಸತ್ಯವಿಲ್ಲದರ ಒಡನಾಟ ಬೇಲಿಯು ।
ಒತ್ತಿಯಂತೆಂದ ಸರ್ವಜ್ಞ ॥ ೭೨೬ ॥

* ಕಲ್ಲುಪ್ಪು ಕರ್ಪುರವು ಸೊಲ್ಲೆರಡು ಧಾತೊಂದು ।
ಖುಲ್ಲನೊಳ್ಳಿದನ ರೂಪೊಂದು! ಗುಣದೊಳ- ।
ಗೆಲ್ಲ[4] ಅಂತರವು! ಸರ್ವಜ್ಞ ॥ ೭೨೭ ॥

* ಮಾನಹೀನರ ಸಂಗ । ವೇನು ಕೊಟ್ಟರು ಬೇಡ ।
ಮಾನವುಳ್ಳವರ ಸಂಗತಾ ಸಕ್ಕರೆ, ।
ಜೇನು, ಸವಿದಂತೆ! ಸರ್ವಜ್ಞ ॥ ೭೨೮ ॥

* ಸಜ್ಜನರು ಸಾಯಲೊಡೆ ನಿರ್ಜರರು[5] ಮರಗುವರು ।
ದೌರ್ಜನ್ಯಕಾರಿ ಸತ್ತರೆ ಹತ್ತಿರ್ದ ।
ಕಜ್ಜಿಹೋದಂತೆ! ಸರ್ವಜ್ಞ ॥ ೭೨೯ ॥

---

1 A. ಕೊಡದಂತೆ. 2 ಕೂಟವಣುಮಾತ್ರ 3 B, ಗೊಜ್ಜಲ A. ಬಜ್ಜರ. 4 B. ಗಲ್ಲಿ, 5 G. S. ಊರ್ಜನರು.

ದುರ್ಜನ ಲಕ್ಷಣ.

* ಉರಗನಾಹಲುನಂಜು ಸುರಿಗೆಯಾ ಮೊನೆನಂಜು ।
ಕರುಣವಿಲ್ಲದನ ನುಡಿನಂಜು ದುರ್ಜನರ ।
ಇರವೆಲ್ಲ ನಂಜು! ಸರ್ವಜ್ಞ ॥ ೭೩೦ ॥

* ಪ್ರತ್ಯಕ್ಷ ಉರಗನಾ ಮಸ್ತಕದ ಹಲುನಂಜು ।
ಮತ್ತೆ ದುರ್ಜನರ ತಲೆಪಾದ ಕಾಯಂದ- ।
ಸುತ್ತೆಲ್ಲ ನಂಜು! ಸರ್ವಜ್ಞ ॥ ೭೩೧ ॥

* ನರಿನಾಯ ಹಲುನಂಜು ಉರಗನಾ ತಲೆನಂಜು ।
ಜಿರಸಿ ತಪ್ಪುವನ ನುಡಿನಂಜು, ದುರುಳರ ।
ಹರುಷವೇ ನಂಜು; ಸರ್ವಜ್ಞ ॥ ೭೩೨ ॥

ದುಸ್ಸಂಗ ಲಕ್ಷಣ.

* ಗಂಧವನು ತೇವಲ್ಲಿ[1] ಒಂದು ನೊಣವನು ಕಾಣೆ ।
ಸಂದಿಸಿ ಮಲವ ಬಿಡುವಲ್ಲಿ ನೊಣ ಮುತ್ತು- ।
ವಂದವನು ನೋಡ! ಸರ್ವಜ್ಞ ॥ ೭೩೩ ॥

* ನಟ್ಟಡವಿಯಾ ಮಳೆಯು, ಕುಷ್ಟ, ಕ್ಷಯ, ಬಡತನವು, ।
ದುಷ್ಟರ ನೆರೆಯು, ಇವು ಅಯ್ದು ಜಗದೊಳು ।
ನಷ್ಟ ಕಾಣಯ್ಯ ಸರ್ವಜ್ಞ ॥ ೭೩೪ ॥

* ಹೊನ್ನಿಲ್ಲದಾ ಬದುಕು ಕನ್ನೆಯಿಲ್ಲದ ಮದುವೆ ।
ಚುನ್ನಪಾಡುವನ ಗೆಳೆತನವಿವು ಮೂರು ।
ಬನ್ನಕಾಣಯ್ಯ! ಸರ್ವಜ್ಞ ॥ ೭೩೫ ॥

* ದಂತಪಂಕ್ತಿಯ ನಡುವೆ ಎಂತಿರ್ಪುದದು ಜಿಹ್ವೆ ।
ಅಂತು ದುರ್ಜನರ ಬಳಸಿನಲಿ ಸಜ್ಜನನು ।
ನಿಂತಿರ್ದ ನೋಡ! ಸರ್ವಜ್ಞ ॥ ೭೩೬ ॥

1 G. S. ತೆಗೆವಲ್ಲಿ.

|| ಕ್ಷೀರವನು ಮಾನವರು ಮಾರುವರು ಮನೆಮನೆಗೆ ।
ಸಾರಾಯಕೆದ್ದು ಹಾರುವರು, ದುರುಳರ ।
ಕುರುಹು ಇಂತೆಂದ; ಸರ್ವಜ್ಞ || ೭೩೭ ||

ಜೊತೆಯಂತೆ ಮತಿ.

* ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು ।
ಒಳ್ಳಿದ ಕಳ್ಳರೊಡನಾಡಿ ಅವಶುದ್ಧ ।
ಕಳ್ಳತಾನಕ್ಕು! ಸರ್ವಜ್ಞ || ೭೩೮ ||

* ಪಂಡಿತರ ಒಡನಾಡಿ ಭಂಡ ಪಂಡಿತನಕ್ಕು ।
ಪಂಡಿತ ಭಂಡರೊಡನಾಡಿ ಅವಶುದ್ಧ ।
ಲಂಡತಾನಕ್ಕು! ಸರ್ವಜ್ಞ || ೭೩೯ ||

* ಕರಿಗೆ ಕರಿ ಕೂಡಿದರೆ ಹಿರಿದು ಸ್ನೇಹಗಳಕ್ಕು ।
ಕರಿಗೆ ಕೇಸರಿಯು ಕೂಡಿದರೆ ಕೆಸರತಂ-।
ದೊರಸಿದಂತಕ್ಕು! ಸರ್ವಜ್ಞ || ೭೪೦ ||

ದುಷ್ಟರ ಕಂಡರೆ ದೂರ.

* ಉಂಡು ಕುಳ್ಳಿರಹೊಲ್ಲ; ಮಂಡೆಯಲಿ ಹೊರಹೊಲ್ಲ; ।
ಕೊಂಡಾಟಹೊಲ್ಲ ಹಗೆಗಳ, ದುರ್ಜನರ ।
ಕಂಡಿರಲುಹೊಲ್ಲ; ಸರ್ವಜ್ಞ || ೭೪೧ ||

* ಸೋಗೆಯಾರಸಹೊಲ್ಲ ಮಾಗಿಯಾ ಚಳಿಹೊಲ್ಲ ।
ಆಗಲು ಉರಿವ[1] ನೆರೆಹೊಲ್ಲ, ದುರ್ಜನರ ।
ಯೋಗವೇ ಹೊಲ್ಲ; ಸರ್ವಜ್ಞ || ೭೪೨ ||

---

1 D. ಉಳಿವ.

* ಹಿಗ್ಗು ಬಡವಗೆ ಹೊಲ್ಲ ಸಿಗ್ಗು ಸೂಳೆಗೆ ಹೊಲ್ಲ ।
ನುಗ್ಗಿಯು ಹೂಗೆ ಮಳೆಹೊಲ್ಲ, ದುರ್ಜನರ ।
ಕಿಗ್ಗಳವೆ ಹೊಲ್ಲ; ಸರ್ವಜ್ಞ ॥ ೭೪೩ ॥

* ನುಚ್ಚುಗೂಳುಣಹೊಲ್ಲ ಹುಚ್ಚು ಹೆಂಡತಿ ಹೊಲ್ಲ ।
ಮುಚ್ಚರಿಸಿ ನುಡಿವ ಮಗಹೊಲ್ಲ, ದುರ್ಜನರ ।
ತುಚ್ಛವೇ ಹೊಲ್ಲ; ಸರ್ವಜ್ಞ ॥ ೭೪೪ ॥

* ತೋಟದಲಿ ಕಳೆಹೊಲ್ಲ ಕೀಟ ಬೆಳಸಿಗೆ ಹೊಲ್ಲ ।
ಬೇಟವು ಹೊಲ್ಲ ಪರಸತಿಯು, ದುರ್ಜನರ ।
ಕೂಟವೇ ಹೊಲ್ಲ; ಸರ್ವಜ್ಞ ॥ ೭೪೫ ॥

* ಹಣ್ಣು ಹಂಪಲದೊಳಗೆ ಕೆಂಪು ಇಟ್ಟೆಯಹಣ್ಣು ।
ಕೆಂಪುಂಟು, ಒಳಗೆ ವಿಷವುಂಟು, ದುರ್ಜನರ ।
ಇಂಪು ಇಂತೆಂದ! ಸರ್ವಜ್ಞ ॥ ೭೪೬ ॥

ದುಷ್ಟರ ಸಹವಾಸಬೇಡ.

* ಬರೆ ಕಂಡು ಕರೆಯದನ ಇರುಕುಳ್ಳಿರೆನ್ನದನ ।
ಸರಸ ಸಜ್ಜನಿಕೆಯಿಲ್ಲದನ ಸುಖತನವ ।
ಬೆರಸಲೇಬೇಡ! ಸರ್ವಜ್ಞ ॥ ೭೪೭ ॥

* ಹಂದಿಯಾದರೆ ಏನು ಅಂದವಿದ್ದರೆ ಸಾಕು ।
ಹೊಂದಿ ಸಾಸಿರವ ಸಂದರೂ ದುರುಳರ ।
ದಂದುಗವೆ ಬೇಡ! ಸರ್ವಜ್ಞ ॥ ೭೪೮ ॥

* ಏನಾದರು ಕೊಟ್ಟು ಜ್ಞಾನಿಯಾ ಕೆಳೆಕೊಳ್ಳು? ।
ಜ್ಞಾನಹೀನನಾ ಕೆಳೆಗೊಂದು ಪಣವನು ।
ನೀನಿತ್ತು ಕಳುಹು! ಸರ್ವಜ್ಞ ॥ ೭೪೯ ॥

॥ ಬೆತ್ತತಾ ಬೊಗ್ಗಿದರು ಮತ್ತೆದ್ದು ಮಾಟುವದು।
ಹೊತ್ತನೆ ನೋಡಿ ಹೊಡೆಯುವಂ ಸಜ್ಜನರು।
ಸತ್ತರೂ ಬೇಡ! ಸರ್ವಜ್ಞ ॥ ೭೫೦ ॥

* ನೀಚರಾ ನೆರೆಯಿಂದ ಈಚಲದ ಮರಲೇಸು।
ಈಚಲೊಂದೆಡೆಗೆ ಉಪಕಾರಿ; ನೀಚನು।
ಈಚಲಿಂ ಕಷ್ಟ! ಸರ್ವಜ್ಞ ॥ ೭೫೧ ॥

॥ ಮರುಳತಾ ಮಳೆಗಂಜಿ ಮರದಡಿಯ ಸಾರಿದರೆ।
ಮರದ ಹನಿಬಿಡದು ಮಳೆನಿಂದು; ದುರುಳರ।
ನೆರಳು ಇಂತೆಂದ! ಸರ್ವಜ್ಞ ॥ ೭೫೨ ॥

* ತೆರೆಡ ಕೆಂಡವ ಮೆಟ್ಟ ಮರಗುವಂತೆರನಂತೆ।
ದುರುಳರ ಕೂಟ ಬರಿಕೂಟ ತನ್ನತಾ।
ನಿರಿದುಕೊಂಡಂತೆ! ಸರ್ವಜ್ಞ ॥ ೭೫೩ ॥

॥ ಕೊತ್ತಿ ಮೀಸಲು ಹಾಲ ಮತ್ತೆ ತಾ ಬಿಡುವದೇ।
ಹೊತ್ತು ಬಂದಾಗ ಸಾಧಿಪರ ಸಂಗವು।
ಕತ್ತೆಗಳಿಗೆಂದ! ಸರ್ವಜ್ಞ ॥ ೭೫೪ ॥

* ಕ್ಷಣಮಾತ್ರವಾದರೂ ಗುಣಿಗಳೊಡನಾಡುವದು!।
ಗುಣಹೀನರಂಗಳ ಒಡನಾಡೆ ದುಕ್ಕತ[1]-।
ಕ್ಷಣದಲ್ಲಿ ಬಹುದು[2]! ಸರ್ವಜ್ಞ ॥ ೭೫೫ ॥

---

1 & 2 A. C. ಬಹು ದುಃಖವಣಲೊಳಿದ್ದಂತೆ.

# ೧೫ ವಿಧಿವಶ ಪದ್ಧತಿ.

## ಸರ್ವರೂ ವಿಧಿವಶರು.

( ದೃಷ್ಟಾಂತ )

ತ್ರಿಮೂರ್ತಿಗಳು.

* ಹರಿಹಂದಿಯಾದಂದು ಹರನು ತಿರಿದುಂಡಂದು ॥
ಹರನಜನ ಶಿರವ ಹರಿದಂದು ಲಿಖಿತವ ।
ಬರೆದವರಾರು? ಸರ್ವಜ್ಞ ॥ ೭೫೬ ॥

† ಹರಿಯು ಕೋಡಗನಾದ ಪರಬೊಮ್ಮಕಾಗ್ಯಾದ ।
ಮೆರೆದಿರ್ದ ಶಿವನು ನರಿಯಾದನಿಂತೆಂದು ।
ಬರೆದಿಟ್ಟರಾರು? ಸರ್ವಜ್ಞ ॥ ೭೫೭ ॥

* ಕರ್ಮದಿಂದವೆ ಹರನು ಚರ್ಮವನು ತಾನುಟ್ಟ ।
ಹೊಮ್ಮರಾಲನು ಅಜನಾದ ಗೋವಿಂದ- ।
ನೆಮ್ಮೆಯನು ಕಾದ! ಸರ್ವಜ್ಞ ॥ ೭೫೮ ॥

* ಕೋಡಗಾದನು ಹರಿಯು ಆಡಾದನಾ ಅಜನು ।
ನೋಡಿದರೆ ಹರನು ನರಿಯಾದನುಳಿದರ ।
ಪಾಡೇನು ಹೇಳು! ಸರ್ವಜ್ಞ ॥ ೭೫೯ ॥

* ಪುಡಿಯಾದನಂಗಜನು ಹಿಡಿವಡೆದ ಹನುಮಂತ ।
ಪೊಡವಿಗೀಶ್ವರನು ತಿರಿದುಂಡನುಳಿದರ ।
ಸಡಗರವೇನು? ಸರ್ವಜ್ಞ ॥ ೭೬೦ ॥

ರಾಮ.

* ಅಕ್ಕರವ ಬರೆದಿಹರೆ ಚೆಕ್ಕು ಬಂದ್ದಿಡಿದಿಹುದು!।
ರಕ್ಕಸನು ಸೀತೆ ಸೆಳೆವಾಗ ರಾಮಶರಿ-।
ದಿಕ್ಕದೇಕಿರ್ದ? ಸರ್ವಜ್ಞ ॥ ೭೬೧ ॥

* ಸೀತೆ ವೈದುದು[1] ಭಂಗ ಸೇತು ಕಟ್ಟಿದು ಭಂಗ।
ಮಾತಿನ ಭಂಗ ರಾಮುಂಗೆ, ರಾವಣನಿ-।
ಗೇತರದು ಭಂಗ? ಸರ್ವಜ್ಞ ॥ ೭೬೨ ॥

* ಅಂಬುತಾಗಿದ ಎರಳೆ ಕೊಂಬೂರಿ ಬೀಳ್ವಂತೆ।
ಇಂಬರಿನ ಸೀತೆ ಕಳೆದಳಲು ರಾಮನ[2]।
ಅಂಬು ಮುರಿದಿತ್ತೆ? ಸರ್ವಜ್ಞ ॥ ೭೬೩ ॥

* ಅಂಬುತಾಗಿದ ಹುಲ್ಲೆ। ಯಿಂಬಿಲ್ಲದಲೆವಂತೆ।
ನಂಬಿದ ಸೀತೆಯಗಲಿ ಶ್ರೀ ರಾಮನು।
ಕುಂಭಿನಿಯೊಳಲೆದ! ಸರ್ವಜ್ಞ ॥ ೭೬೪ ॥

ಸೀತೆ.

* ಹಾಗಿದ್ದೆ, ಹೀಗಿದ್ದೆ, ಹೇಗಿದ್ದೆ! ಎನಬೇಡ!।
ಹೋಗಿರಲು ಸೀತೆ ಸೆರೆಯನು; ಮಿಕ್ಕವರು।
ಹೇಗಿದ್ದರೇನು? ಸರ್ವಜ್ಞ ॥ ೭೬೫ ॥

* ಅಕ್ಕರವ ತೊಡದಿಹುದು ಮುಕ್ಕಣ್ಣಗಳವಲ್ಲ!।
ರಕ್ಕಸ ಸೀತೆ ಒಯ್ವಾಗ ಆರಾರು।
ದಿಕ್ಕಾಗಲಿಲ್ಲ! ಸರ್ವಜ್ಞ ॥ ೭೬೬ ॥

---

1 C. ಹೋದುದು. 2 G. S. ರಘುಜಂಗೆ.

† ಸೇತುವನು ದಾಟಯುವ ಸೀತೆಯನು ವೈದರೂ।
ಸೋತವಗೆ ಭಂಗವಲ್ಲದೆ ಸೀತೆಗೆ।
ಯಾತರದು ಭಂಗ? ಸರ್ವಜ್ಞ ॥ ೨೬೭ ॥

ಹನುಮಂತ.

* ಅಂಕದರ್ಜುನ ಹೇಡಿ ಶಂಕರನು ತಿರಿದುಂಡ।
ಪಂಕಜನಾಭ ದನಗಾಯ್ದನುಳಿದರ।
ಬಿಂಕವೇನೆಂದ? ಸರ್ವಜ್ಞ ॥ ೨೬೮ ॥

* ಸಾಗರವ ದಾಂಟ ಹೊ। ನ್ನಾಗರಕೆ ಹಾರಿದಾ।
ರಾಘವನ ಬಂಟ ಹನುಮಗೆ ಕಚ್ಚುಟಿಯು।
ಹೋಗ[1]ದೇಕೆಂದ? ಸರ್ವಜ್ಞ ॥ ೨೬೯ ॥

* ಭಂಗವಿಲ್ಲದ ಬದುಕು ತಿಂಗಳಿದ್ದರೆ ಸಾಕು।
ಅಂಗಜನಳಿದು ಹನುಮನೋಡಿದನೆಂಬ।
ಭಂಗಹಿಂಗುವದೆ? ಸರ್ವಜ್ಞ ॥ ೨೭೦ ॥

ರಾವಣ.

* ಹತ್ತು ತಲೆಗಳು ಅವಗೆ ಸುತ್ತಲೂ ವಾರಿಧಿಯು।
ಮತ್ತೆ ತ್ರಿಕೂಟ ಗಿರಿದುರ್ಗ, ರಾವಣನಿ-।
ಗೆತ್ತಣದು ಕೇಡು? ಸರ್ವಜ್ಞ ॥ ೨೭೧ ॥

* ಎತ್ತಣಾ ಲಂಕೆಯದು ಎತ್ತಣಾಯೋಧ್ಯೆಯು।
ಹತ್ತಿರ್ದನಾಡಿನೊಳಗಲ್ಲ ರಾವಣನಿ-।
ಗೆತ್ತಣಾ ಸಾವು? ಸರ್ವಜ್ಞ ॥ ೨೭೨ ॥

† ಕಡಲೇಳು ಸುತ್ತಲೂ ನಡುವೆ ಲೋಹದ ಕೋಟೆ।
ಕಡಲಳಿದು ಗಿರಿಯುಪುರ ಸುಡಲು ವಿಧಿಯಿಂದ।
ಬಿಡಿಸಿದವರಾರು? ಸರ್ವಜ್ಞ ॥ ೨೭೩ ॥

---

1 G. S. ನೀಗ.

* ಈರಯ್ದು ತಲೆಯುವಗೆ ಊರು ಒಪ್ಪುವಲಂಕೆ[1] ।
ವಾರಿಧಿಯು ಕಟ್ಟುವಡೆಯಿತು ಬಂಧನಕೆ ।
ಬಾರದವರಾರು? ಸರ್ವಜ್ಞ ॥ ೭೭೪ ॥

* ಒಂದು ಒಂಭತ್ತು ತಲೆ ಸಂದ ತೋಳಿಪ್ಪತ್ತು ।
ಒಂದಾಗಿ ಕೇಡ[2] ಮಾಡಿದವು; ವಿಧಿಕೂಡಿ ।
ಬಂದ ಕಾಲಕ್ಕೆ! ಸರ್ವಜ್ಞ ॥ ೭೭೫ ॥

* ಕೇಡು ಬಹ ಕಾಲಕ್ಕೆ ಕೂಡುವವೆ[3] ಬುದ್ಧಿಗಳು[4] ? ।
ಕೋಡಗನು ಲಂಕೆ ಸುಡುವಾಗ, ರಾವಣ- ।
ನಾಡಕಾದಿಹನೆ? ಸರ್ವಜ್ಞ ॥ ೭೭೬ ॥

† ಕಡಲಿದ್ದು ಸುತ್ತಲೂ ಬಿಡದೆ ಬಂದುದು ಮಾರಿ! ।
ಘುಡಘುಡಿಸಿ ಕಡಿವ ರಕ್ಕಸರ ಪಡೆಯೆಲ್ಲ ।
ಹುಡಿಯಾದುದೇಕೆ? ಸರ್ವಜ್ಞ ॥ ೭೭೭ ॥

ಪಾಂಡವರು.

† ಮಂದರ ಧರನಿಂದ್ರ,[5] ಗಂಡುಗಲಿಗಳು ಪಾಂಡು[6]- ।
ನಂದನರಿರ್ದು ಹೋದನಭಿಮನ್ಯು ವಿಧಿ- ।
ಯಂದವನು ನೋಡ! ಸರ್ವಜ್ಞ ॥ ೭೭೮ ॥

ತಂದೆಯರ್ಜುನ ಭೀಮ ಮಂದರಧರಮಾವ ।
ಮುಂದಿದ್ದು ಅಳಿದನಭಿಮನ್ಯು ವಿಧಿಮಾಡಿ- ।
ದಂದವನು ನೋಡ! ಸರ್ವಜ್ಞ ॥ ೭೭೯ ॥

---

1 C. ಕೂರಂಬು ಕೆತ್ತವೇ? 2 C. ನೆನಸದ A. ಬಯಸದ. 3 & 4 C. ಮೂಡುವವೆ?
ಕೂಡುವದು ದುರ್ಬುದ್ಧಿ. 5 & 6 G. S. ಧರನಿಂದಾ । ನಂದವಾಗಿಹ A. ಗಂಧವಾಹನ,

* ಅಂತಿರ್ದರಿಂತಿರ್ದ । ರೆಂತಿರ್ದರೆಂನಬೇಡ ।
ಕುಂತಿಯ ಸುತರು ತಿರಿದುಣಲು ಮಿಕ್ಕವರು ।
ಎಂತಿರ್ದಡೇನು ಸರ್ವಜ್ಞ ॥ ೭೮೦ ॥

* ಹೆತ್ತಾತನರ್ಜುನನು ಮುತ್ತಯ್ಯ ದೇವೇಂದ್ರ ।
ಮತ್ತೆ ಮಾತುಲನು ಹರಿಯಿರಲಭಿಮನ್ಯು ।
ಸತ್ತನೇಕಯ್ಯ? ಸರ್ವಜ್ಞ ॥ ೭೮೧ ॥

† ಅಯ್ವರನು ಹಡೆದೆಂದು ಒಯ್ಯಾರದಿರೆ ಕುಂತಿ ।
ಅಯ್ವರು ಹೋಗಿ ವಿರಾಟರಾಯನಲಿ ।
ಗಯ್ವರಾಗಿರರೆ? ಸರ್ವಜ್ಞ ॥ ೭೮೨ ॥

ಶೂದ್ರಿಕ.

* ಆಡಗಿರ್ದ ಶೂದ್ರಿಕನ ಹಿಡಿತಂದು ಕೊಲ್ಲಿಸಿತು! ।
ಪೊಡವಿಗೆತ್ಯಧಿಕ ಬಲವಂತ ರಾವಣನ ।
ಕೆಡವಿಹುದು ನೋಡ! ಸರ್ವಜ್ಞ ॥ ೭೮೩ ॥

† ನೋಡಿರಾ ಶೂದ್ರಿಕನ ಆಡಿಸಿದ ಆಟವನು ।
ಓಡಮಾಡುವದು ಅತಿಬಳರ, ವಿಧಿಯ ಮುಂ- ।
ದೋಡುವವರಾರು? ಸರ್ವಜ್ಞ ॥ ೭೮೪ ॥

† ಈ ದೇಶ ಒಲ್ಲೆಂದ । ರಾದೇಶ ಬಿಡದಯ್ಯ! ।
ಆ ದೇಶದಿರ್ದ ಶೂದ್ರಿಕನ ಕಾಂಚಿಯಲಿ ।
ಛೇದಿಸಿತು ವಿಧಿಯು! ಸರ್ವಜ್ಞ ॥ ೭೮೫ ॥

ಎಲ್ಲಿ ಹೋದರೂ ವಿಧಿಬಿಡದು.

† ಗಟ್ಟದಲಿ ಬೆಟ್ಟದಲಿ ಇಟ್ಟೆಡೆಯ ಕಿರುಬಿನಲಿ ।
ಕೆಟ್ಟೋಡಿ ಬಂದೆನೆನಬೇಡ ವಿಧಿಕಾಣ-।
ದೆಷ್ಟದಿಕ್ಕುಂಟೆ[1]? ಸರ್ವಜ್ಞ ॥ ೭೮೬ ॥

† ಕೆಡಕು ಕೂಡುವದೆಂದು ಆಡವಿಗೋಡಲುಬೇಡ ।
ಕಡುಭಯದಿ ಭಂಗಗೊಳಬೇಡ! ವಿಧಿಯರಿಯ-।
ದೆಡವಿಯೊಂದುಂಟೆ? ಸರ್ವಜ್ಞ ॥ ೭೮೭ ॥

* ಎಲ್ಲ ತೀರ್ಥದೊಳಿರಲು ಬಲ್ಲಿದರ ಮೊರೆಹೊಗಲು ।
ಕಲ್ಲು ಮಾಳಿಗೆಯ ಒಳಗಿರಲು ವಿಧಿ ಬಂದು ।
ಕೊಲ್ಲದೇ ಬಿಡದು! ಸರ್ವಜ್ಞ ॥ ೭೮೮ ॥

* ಎಲ್ಲೆಲ್ಲಿ ಕರ್ಮವಿ । ದ್ದಲ್ಲಲ್ಲಿ ನೆರೆಸಾರಿ ।
ನಿಲ್ಲದವರೊಡನೆ ಬರುತಿಪ್ಪ ವಿಧಿಯೆದುರು ।
ನಿಲ್ಲುವವರಾರು? ಸರ್ವಜ್ಞ ॥ ೭೮೯ ॥

† ಹಿಂದೆ ಮಾಡಿದ ಕರ್ಮ। ವೆಂದಿಗೂ ಬೆಂಬಿಡದು ।
ಬಂದ ಭೋಗವು ತಿಂದು ತೀರಲೆಬೇಕು ।
ನೊಂದೆನೆನಬೇಡ! ಸರ್ವಜ್ಞ ॥ ೭೯೦ ॥

* ಆಡುವಾ ಮಕ್ಕಳಿಗೆ ಊಡುವಾ ತಾಯಂತೆ ।
ಮಾಡಿದ ಕರ್ಮ ಬಳಿವಿಡಿದು, ಪಿಡಿತಂದು, ।
ಊಡುತ್ತಲಿಹುದು; ಸರ್ವಜ್ಞ ॥ ೭೯೧ ॥

---

1 C. ಕಾಣ್ಣ ಬಟ್ಟೆಯೊಂದುಂಟೆ?

† ಸುರಿಗೆಗಳು ಸುತ್ತಿರಲಿ ಹರಿಗೆ ಒಡಲೊಳಗಿರಲಿ[1] ।
ಸರಸಿಜೋದ್ಭವನ ಮರೆಯಿರಲಿ ವಿಧಿಯವನ ।
ಇರಿಯದೇ ಬಿಡದು ಸರ್ವಜ್ಞ ॥ ೭೯೨ ॥

* ತಪವ ತಾ ಮಾಡಿರ್ದು ಜಪವ ಬಿಡದೆಣಿಸಿರ್ದು ।
ಉಪವಾಸದಾನದಯದಿರ್ದು ಅಂತಕನ ।
ವಿಪರೀತ ಬಿಡದು! ಸರ್ವಜ್ಞ ॥ ೭೯೩ ॥

* ವಾರಣಾಸಿಯಲಿರಲಿ ವಾರಿಧಿಯ ನಡುವಿರಲಿ ।
ವೀರಭದ್ರನ ನೆರೆಯಿರಲಿ ವಿಧಿಯಾಟ ।
ತೋರದೇ ಬಿಡದು! ಸರ್ವಜ್ಞ ॥ ೭೯೪ ॥

† ಮಾಡಿದಾ ಕರ್ಮ ತಾ | ನೂಡಿದಲ್ಲದೆ ಬಿಡದು! ।
ಕೇಡಿಯ ಕೊಂದ ಮಾಂಡವ್ಯನೆದೆಯಲ್ಲಿ ।
ಮೂಡಿತ್ತು ಶೂಲ! ಸರ್ವಜ್ಞ ॥ ೭೯೫ ॥

ಅದೃಷ್ಟವೆಂದರೆ ಯಾರಿಗೂ ತಿಳಿಯದುದು.

* ಏನಾನು ನೆವದಿಂದ ತಾನೆ ಬಪ್ಪುದು ಸಿರಿಯು! ।
ಕಾನನದೊಳಗೆ ಕರಿಹುಟ್ಟಿ ಪಟ್ಟಕ್ಕೆ ।
ತಾನೆ ಬಂದಂತೆ! ಸರ್ವಜ್ಞ ॥ ೭೯೬ ॥

* ಏನಾನು ನೆವನದಲಿ ತಾನೆ ಪೋಪುದು ಸಿರಿಯು! ।
ಕಾನನದೊಳಗೆ ಕಿಡಿಹುಟ್ಟಿ, ಕಾಡೆಲ್ಲ ।
ತಾನೆಬೆಂದಂತೆ! ಸರ್ವಜ್ಞ ॥ ೭೯೭ ॥

---

1 B. ಹರಿಯು ಕಡಳೊಳಗಿರಲಿ.

† ಬುದ್ಧಿಯೂ ಕರ್ಮಗಳು ತಿದ್ದಲ್ಕೆ ಅಸದಳವು।
ಬುದ್ಧಿ ಬಲಶಾಲಿಯೆನಬೇಡ! ಕರ್ಮವು।
ಗುದ್ದಿಕೊಳ್ಳುವದು! ಸರ್ವಜ್ಞ ॥ ೭೯೮ ॥

ಮೇಲಾಗುವಾಗ ಸರ್ವವೂ ಅನುಕೂಲ.

* ಭೃಂಗ ಹಂಸವು ಅಕ್ಕ ಶೃಂಗಿ ಮಾಣಿಕವಕ್ಕು।
ಹಂಗಳಿದ ಸೀರೆ ಮಡಿಯಕ್ಕು; ಕರ್ಮವು।
ಹಿಂಗುವಾ ದಿನಕೆ! ಸರ್ವಜ್ಞ ॥ ೭೯೯ ॥

* ಇಂಗು ಕರ್ಪುರವಕ್ಕು ಬಿಂಗು ಬಜ್ಜರವಕ್ಕು।
ಅಂಗಳದ ಶಿಲೆಯು ಹೊನ್ನಕ್ಕು[1] ಕರ್ಮವು।
ಹಿಂಗುವಾ ದಿನಕೆ! ಸರ್ವಜ್ಞ ॥ ೮೦೦ ॥

* ಮೂರಿಟ್ಟರಾರಕ್ಕು ಆರು ಹನ್ನೆರಡಕ್ಕು।
ಹೇರುವ ಗೊಡ್ಡು ಹೈನಕ್ಕು ಕರ್ಮತಾ।
ಹಾರುವಾ ದಿನಕೆ! ಸರ್ವಜ್ಞ ॥ ೮೦೧ ॥

* ಭೋಗವಿಲ್ಲದ ದಿನಕೆ ಆಗಿದ್ದ ಧನ ಪೋಕು।
ಭೋಗತನಗಿದ್ದ ದಿನಕೆದ್ದು ಹೋದ ಧನ-।
ವಾಗಲೇ ಬಕ್ಕು! ಸರ್ವಜ್ಞ ॥ ೮೦೨ ॥

† ಒಂದೊಂದು ಕಾಲಕ್ಕೆ ಒಂದೊಂದು[2] ಪರಿಯಕ್ಕು!।
ಹಂದಿಯು ಮರಿಯು ಕರಿಯಕ್ಕು, ಕೋಳಿಯು।
ಕೆಂಬೋತವಕ್ಕು; ಸರ್ವಜ್ಞ ॥ ೮೦೩ ॥

1 A. ಅಂಗಳವೂ ಹೊನ್ನಗಣಿಯುಕ್ಕು. 2 F. ಬಂದೊಂದು.

† ಸಾಗುವಾ ಕಾಲಕ್ಕೆ ಸಾಗರವು ಬಯಲಕ್ಕು ।
ಸಾಗದದಿನಕೆ ಸುರಿದಿರ್ದ ಶಿವನೊಲುಮೆ ।
ಹೋಗಿಕ್ಕು ಕಾಣೊ! ಸರ್ವಜ್ಞ ॥ ೮೦೪ ॥

ಕೇಡುಗಾಲಕ್ಕೆ ಸಹಾಯವಿಲ್ಲ.

† ಬಲಹೋದ ಕಾಲಕ್ಕೆ ನೆಲವೆದ್ದು ಬಡಿಯುವದು ।
ಕುಲ, ಛಲ, ಕಲಹ, ಸಿರಿಯು, ಸಂಗ್ರಾಮವು, ।
ಬಲವಿರುವನಕ! ಸರ್ವಜ್ಞ ॥ ೮೦೫ ॥

† ಸೆಂದವರ ಸುಡುವರು! ಬೆಂದವರ ಬಯ್ಯುವರು! ।
ಬಂಧುಗಳೆದ್ದು ಬಡಿವರು! ವಿಧಿಕೂಡಿ ।
ಬಂದ ಕಾಲಕ್ಕೆ! ಸರ್ವಜ್ಞ ॥ ೮೦೬ ॥

† ಎಂಟಟ್ಟರೆರಡಕ್ಕು! ನೆಂಟರೂ ಹಗೆಯಕ್ಕು! ।
ದಂಟುಗಳೆದ್ದು ಹಾವಕ್ಕು! ಕರ್ಮತಾ— ।
ನಂಟುವಾ ದಿನಕೆ! ಸರ್ವಜ್ಞ ॥ ೮೦೭ ॥

ವಿಧಿಬೈದು ಫಲವಿಲ್ಲ.

† ಮುನ್ನತಾ ಸುಕೃತವ ಚನ್ನಾಗಿ ಮಾಡದಲೆ ।
ಬನ್ನವಬಡುತ ವಿಧಿಬಯ್ಯಲವಳೇನು ।
ಕನ್ನವಿಕ್ಕಿದಳೇ? ಸರ್ವಜ್ಞ ॥ ೮೦೮ ॥

* ಕೊಟ್ಟು ಬಾಳದೆ, ಬಾಯ ಬಿಟ್ಟಲ್ಲಿ ಫಲವೇನು? ।
ಪಟ್ಟದರಸಿನ ಮಗನಿಗೂ ವಿಧಿಯು ತಾ ।
ಬಿಟ್ಟಲ್ಲ ನೋಡ! ಸರ್ವಜ್ಞ ॥ ೮೦೯ ॥

* ಕೊಟ್ಟು ಮುಟ್ಟಲು ಇಲ್ಲ ಇಟ್ಟು ಪೂಜಿಸಲಿಲ್ಲ।
ಶಿಟ್ಟೀಲಿ ಶಿವನ ಬೈದರೆ ಅವತನ್ನ ।
ಜುಟ್ಟು ಕೊಟ್ಟಾನೆ? ಸರ್ವಜ್ಞ ॥ ೮೧೦ ॥

ಬಂದಂತೆ ಹೋಗುವವನೇ ಬಂಟ.

† ಕಂಡದ್ದು ಮರೆಯಾಗಿ ಉಂಡದ್ದು ಬರಿದಾಗಿ।
ಖಂಡಿತದಿ ನಡೆವ ಪುರುಷನು ಮೃತ್ಯುವಿನ।
ಗಂಡನೆಂದರಿಗು। ಸರ್ವಜ್ಞ ॥ ೮೧೧ ॥

* ನಡೆವದನೆ ತಾ ಹಾಸಿ ನಡೆವದನೆ ತಾ ಹೊದೆದು ।
ನಡೆಯುವಪಥದಿ ಅಡಿಯಿಡಲು ವಿಧಿಯು ತಾ ।
ತಡೆಯದೋಡುವದು! ಸರ್ವಜ್ಞ ॥ ೮೧೨ ॥

* ಬಂದುದನೆ ತಾ ಹಾಸಿ ಬಂದುದನೆ ತಾ ಹೊದೆದು ।
ಬಂದುದನೆಲ್ಲ ನುಂಗಿದರೆ[1] ವಿಧಿಕರ್ಮ ।
ನಂದಿ ಹೋಗುವದು ಸರ್ವಜ್ಞ ॥ ೮೧೩ ॥

ಈಶ್ವರೇಚ್ಛೆಯಂತೆ ಇರು.

† ಆನೊಂದು ಮಾಡುವೆನು! ಆನೊಂದು ಹೂಡುವೆನು! ।
ಆನೊಂದು ಮಾಡಲಾನಂದವೆನಲು ಶಿವ ।
ತಾನೊಂದು ಮಾಳ್ಪ! ಸರ್ವಜ್ಞ ॥ ೮೧೪ ॥

* ಅಂತಿಕ್ಕ ಇಂತಿಕ್ಕ ಎಂತಿಕ್ಕ ಎನಬೇಡ! ·
ಚಿಂತಿಸಿ ದೇಹ ಬಡವಕ್ಕೆ; ಶಿವಕೋಪ[2] ।
ದಂತಿಹುದೆ ಲೇಸು! ಸರ್ವಜ್ಞ ॥ ೮೧೫ ॥

1. F. ಬಂದುವರೊಳಗೆ ಇದ್ದರೆ. 2. F ಶಿವಕೋಟಿ

# ೧೫. ಬ್ರಾಹ್ಮಣ ಪದ್ಧತಿ.

## ಬಾಹ್ಯಜ್ಞಾನ ಖಂಡನ.

### ವೇದ.

* ಗಾಯತ್ರಿ ವೇದಕ್ಕೆ ತಾಯೆಂದು ಹೊಗಳಿರಲು ।
ಪಾಯಕ್ಕೆ ದ್ವಿಜರು ಹಲವು ಶಾಖೆಗೆ ತಾವು ।
ಹಾಯುತಿಹರೇಕೆ? ಸರ್ವಜ್ಞ || ೮೧೬ ||

† ವೇದವೇ ಹಿರಿದೆಂದು ವಾದವನು ಮಾಡುವಿರಿ ।
ವೇದದಲೇನು ಅರಿದಿಹುದು? ಅನುಭವಿಯು ।
ವೇದವೇ ವೇದ! ಸರ್ವಜ್ಞ || ೮೧೭ ||

† ಓದುವಾದಗಳಿಂದ ವೇದತಾ ಘನವಹುದೆ? ।
ವೇದ ಹೃದಯವನರಿಯದೆ ದ್ವಿಜರೆಲ್ಲ ।
ಬೂದಿಯಾಗಿಹರು[1]! ಸರ್ವಜ್ಞ || ೮೧೮ ||

* ತೋರಿ ವೇದವಕೊಟ್ಟು ಸಾರಿಹುದು ಜಗವೆಲ್ಲ ।
ವೀರಮಾರ್ತಂಡನೊಡನೋಡಿತಾಪಾಜಿ ।
ಆರಿಂದಲಧಿಕ! ಸರ್ವಜ್ಞ || ೮೧೯ ||

### ಮಹಾಭಾರತ.

* ಹಾದರದ ಕಥೆಯನ್ನು ಸೋದರರ ವಧೆಯನ್ನು ।
ಆದರಿಸಿ ಪುಣ್ಯ ಕಥೆಯೆಂದು ಕೇಳುವರು ।
ಮಾದಿಗರು ನೋಡ! ಸರ್ವಜ್ಞ || ೮೨೦ ||

1. P. ಬೂದಿಯೊಳಿಹರು = ಸನ್ಯಾಸಿಗಳಾಗಿರುವರು.

## ಬಾಹ್ಯಾಚಾರ ಖಂಡನ.

### ಊಟ.

† ಕಾಲದಲಿ ಕಾಲು ತೊಳೆ। ದೇಳೆಂಟು ಮಾಡುವದು!।
ಕಾಲವು ತಪ್ಪಿ ನೂರೆಂಟ ಮಾಡುವದು।
ಹಾಳು[1] ಕಾಣಯ್ಯ ಸರ್ವಜ್ಞ ॥ ೬೨೧ ॥

† ಪಕ್ಷಕ್ಕೊಂದುಪವಾಸ, ಪುಕ್ಕಟೆ ಶ್ರೀ ತುಲಸಿ,।
ಸಿಕ್ಕಿ ಸಿಕ್ಕಿದಲಿ ಹರಿನಾಮ ಭವಭವದಿ[2]।
ಬಿಕ್ಕಿ ಸಾಯುವದು! ಸರ್ವಜ್ಞ ॥ ೬೨೨ ॥

* ತೋರಿರ್ದ ದ್ವಾದಸಿಯ ಮೀರಿಮಾಡಿದ ಕೃತಿಯು।
ಸೇರಿದ ಪುರುಷಕಿರಿಯೆಂದಿನ್ನೊಬ್ಬನ।
ಸಾರಿದವಳಂತೆ! ಸರ್ವಜ್ಞ ॥ ೬೨೩ ॥

* ತೊರೆಯ ಬಲ್ಲಡೆ ಧರ್ಮ ಒರತೆಯಾತೊರೆಯಂತೆ।
ತೊರೆಯಲರಿಯದೆ ತೊರೆದಡಾ ತೊರೆದುಂಬಿ[3]।
ಹರಿದು ಬಂದಂತೆ[4]! ಸರ್ವಜ್ಞ ॥ ೬೨೪ ॥

### ಸ್ನಾನ.

† ಮೊಗದಲಿ ಮಿಾಯುವರು ಮೂಗತಾ ಹಿಡಿದಿಹರು।
ಯೋಗಧ್ಯಾನಗಳನರಿಯರು ಹಾರುವರು।
ಭೋಗಿಯಾಗಿಹರು[5]! ಸರ್ವಜ್ಞ ॥ ೬೨೫ ॥

* ಮಿಂದುಂಬ ಹಾರುವಗೆ ಸಂಧ್ಯಾವಂದನೆಯೇಕೆ[6]?।
ಮಿಂದು ಮೈಲಿಗೆಯನುಡಲೇಕೆ? ಸ್ನಾನದ।
ಸಂದೇಹವೇಕೆ? ಸರ್ವಜ್ಞ ॥ ೬೨೬ ॥

---

1. A. ಕಾಳು C. ಕೂಳುಗೇಡೆಂದ. 2. F. ನರಕದಲಿ. 3 & 4. A. ತೊರೆಯದೆ ತೊರೆಗ ಪರಿದರೆ ಆ ತೊರೆ ಬರುವದೊರೆ ಕಾಣ್ಯೆ. 5 F. ಸೋಗಿಗಿಹರೆಂದ. 6. A. C. ಒಂದು ಧೋತ್ರವ ಸಾಕು.

* ಬೆಂದ ಮನೆಬಾಗಲಿಗೆ ಮುಂದೆ ತೋರಣವೇಕೆ?
ಸಂದ ಶೂದ್ರತಿಯ ಒಡನುಂಬ ಹಾರುವಗೆ।
ಮಿಂದೂಟವೇಕೆ? ಸರ್ವಜ್ಞ ॥ ೮೨೭ ॥

† ಹಂದಿಗಂದಣವೇಕೆ? ಮಂದಮತಿಸುತನೇಕೆ?।
ಕುಂದುಗುಲದವಳ ಹೊಂದಿದ ಹಾರುವಗೆ।
ಗಂಧವೋಲೇಕೆ? ಸರ್ವಜ್ಞ ॥ ೮೨೮ ॥

* ನೀರ ಮುಳುಗಿದ ವಿಪ್ರ ಹಾರುವಡೆ ಸ್ವರ್ಗಕೆ।
ಹಾರುವನಂತೆ ಮುಳುಗಿಪ್ಪ ಕಪ್ಪೆಯು।
ಹಾರದೇಕೆಂದ? ಸರ್ವಜ್ಞ ॥ ೮೨೯ ॥

* ನಿತ್ಯ ನೀರ್ಮುಳುಗುವನು ಹತ್ತಿದಡೆ ಸ್ವರ್ಗವನು।
ಎತ್ತಿ ಜನ್ಮವನು ಜಲದಿಪ್ಪ ಕಪ್ಪೆಯು।
ಹತ್ತದೇಕೆಂದ? ಸರ್ವಜ್ಞ ॥ ೮೩೦ ॥

ಸಂಧ್ಯಾ.

† ಸಂಜೆಯಾ ವಂದನೆಯು ಅಂಜದಲೆ ಮಾಸುವದು!।
ಸಂಜೆಯಂಜಿಕೆಯನೊಡಗೂಡಲಾ ಸಂಜೆ।
ನಂಜಿನಂತಕ್ಕು ಸರ್ವಜ್ಞ ॥ ೮೩೧ ॥

ಗಂಧಾಕ್ಷತೆ

* ಮುಟ್ಟಿ ಶ್ರೀ ಗಂಧವನು ಇಟ್ಟು ತಾ ನೊಸಲೊಳಗೆ।
ನೆಟ್ಟನೆ ಸ್ವರ್ಗ ಪಡೆವಡೆ ಸಾಣೆಕಲ್।
ಕೆಟ್ಟ ಕೇಡೇನು? ಸರ್ವಜ್ಞ ॥ ೮೩೨ ॥

† ಅ[illegible]ಟ್ಟ ಮಟ್ಟೆಯನು ಗಟ್ಟಿಯಾಗಿಯೆ ಬಡಿದು।
ನೆಟ್ಟನೆ ಸ್ವರ್ಗ ಪಡೆವಡೆ ಗುದ್ದೇಡಿ।
ಕಟ್ಟ ಕೇಡೇನು? ಸರ್ವಜ್ಞ || ೮೩೩ ||

† ಸುಟ್ಟ ಬೂದಿಯ ತಂದು ದಟ್ಟವಾಗಿಯೆ ಬಡಿದು।
ಶ್ರೇಷ್ಠಸ್ವರ್ಗವನು ಅಡರುವಡೆ ಕತ್ತೆ ತಾ।
ಕಟ್ಟ ಕೇಡೇನು? ಸರ್ವಜ್ಞ || ೮೩೪ ||

ಯಜ್ಞೋಪವೀತ.

* ಮೂರೆಳೆಯನುಟ್ಟಾತ[1] ಹಾರುವಡೆ ಸ್ವರ್ಗಕ್ಕೆ।
ನೂರೆಂಟು ಎಳೆಯ ಕವುದಿಯ ಹೊದ್ದಾತ।
ಹಾರನೇಕಯ್ಯ ಸರ್ವಜ್ಞ || ೮೩೫ ||

ಬಾಹ್ಯ ಭಕ್ತಿ ಖಂಡನ.

ಕರ್ಮವು ಕೆಸರಲ್ಲ.

* ಹಿಂದು ಕರ್ಮವಮಾಡಿ ಹರಿವ ನೀರೊಳುಮುಳುಗೆ।
ಕರಗುವದೆ ಪಾಪತಾಮುನ್ನ ಮಾಡಿದ್ದು।
ಎರೆಯು ಕಲ್ಲೆಂಟೆ? ಸರ್ವಜ್ಞ || ೮೩೬ ||

* ಮೀಪರೇ ಪೋಪರೇ ಪಾಪವೇನದು ಕೆಸರೆ?।
ಮೀಪರೆ ಮೈಯ ಮಲಪೋಪುದಾ ಪಾಪ।
ಲೇಪವಾಗಿಕ್ಕು! ಸರ್ವಜ್ಞ || ೮೩೭ ||

* ಮಿಂದು ಪೋಪರೆ ಪಾಪ ಮುಂದನಾಕೆಸರಲ್ಲ!।
ಮಿಂದರೆ ಮೈಯ ಮಲಪೋಪುದಾ ಪಾಪ-।
ವೆಂದಿನಂತಿಹುದು! ಸರ್ವಜ್ಞ || ೮೩೮ ||

1. A. ನಿಟ್ಟಾತ, C, ನಿಟ್ಟ್ಯತಾ.

† ಪಾಪಗಳ ಕಳೆದೆಂದು ಸೋಪಾನಗಳನೇರಿ।
ಕೋಪಕರ್ಮಗಳ ಬಿಡದಿರೆ ಅದು ವಜ್ರ- ।
ಲೇಪದಂತಿಹುದು! ಸರ್ವಜ್ಞ ॥ ೭೪೯ ॥

† ವೇದ ಮಂತ್ರವನಂದು ಕಾದತುಪ್ಪದಿ ತೊಳೆಯೆ ।
ಹಾದರದ ಪಾಪ ಹೋಯ್ತೆಂಬ ಹಾರುವನ ।
ವೇದದೇ ವಿಧಿಯು? ಸರ್ವಜ್ಞ ॥ ೭೫೦ ॥

ಯಜ್ಞ.

* ಯಾಗದಾ ನೆವದಿಂದ ತೂಗಿ[1] ತಿಂಬರು ಆಡ।
ಯಾಗದಲೊಂದು ದಿಟವಿರಲು ಹೋತುಗಳ- ।
ಸಾಂಗಲಿಸುವರೇ? ಸರ್ವಜ್ಞ ॥ ೭೫೧ ॥

* ಕನ್ನೆಯಾಡಲು ತಂದು ಬನ್ನಬಡಿಸುತ ಕೊಂದು ।
ಉನ್ನತವ ಪಡೆವ ವಿಪ್ರನಿಂ ಅಗಸರ ।
ಕುನ್ನಿಲೇಸೆಂದ! ಸರ್ವಜ್ಞ ॥ ೭೫೨ ॥

† ಜಪವ ಮಾಡುವ ಜಿಹ್ವೆ । ಯುಪಜಿಹ್ವೆಯಾದಂತೆ! ।
ಜಪಬೇರೆ! ಹಿಂಸೆಯದು ಬೇರೆ! ಅಂತ್ಯದಿ ।
ಜಪವೆತ್ತ ಹೋಯ್ತು? ಸರ್ವಜ್ಞ ॥ ೭೫೩ ॥

† ಆಡತಿಂಬರ್ತಿಯಲಿ ಮಾಡುವರು ಯಜನವನು ।
ತೀಡಿರಿದು ಹೊಲೆಯರೆನಿಸದ[2] ಹಾರುವರ ।
ಕಾಡಲಿಕ್ಕೆಂದ ಸರ್ವಜ್ಞ ॥ ೭೫೪ ॥

---

1, G. S. ಕೂಗಿ. 2 C. ತೀಡಿದರೆ ಹೊಲೆಯರೆನುತಿಪ್ಪ.

† ಕನ್ನೆಯಾಡನು ತಿಂದು ಉನ್ನತನನಡರುವಡೆ ।
ಚನ್ನಾಗಿ ಹೆಣನ ಸವಿದಿಪ್ಪ ಶುನಿಯೇಕೆ ।
ಬನ್ನ ಬಡುತಿಹುದು? ಸರ್ವಜ್ಞ ॥ ೬೪೫ ॥

† ಜನ್ನ ವಿದ್ಯವು ಎಂದು[1] ಕನ್ನೆ[2] ಯಾಡನು ತಿಂದು ।
ಉನ್ನತ ಸ್ವರ್ಗ ಪಡೆವಡೆ, ಹಿಂಡಾಡ ।
ತಿನ್ನವನೇಕುಳಿದ[3]? ಸರ್ವಜ್ಞ ॥ ೬೪೬ ॥

* ಒಂದಾಡ ತಿಂಬಾತ ಹೊಂದಿದಡೆ ಸ್ವರ್ಗವನು ।
ಎಂದೆಂದು ಆಜನ ಕಡಿತಿಂಬ ಕಟಿಗತಾ ।
ನಿಂದ್ರನೇಕಾಗ? ಸರ್ವಜ್ಞ ॥ ೬೪೭ ॥

† ಎಳ್ಳುಗಳ ಮುಳ್ಳುಗಳ ಕುಳ್ಳಿರ್ದು ತಾ ಸುಟ್ಟು ।
ನಿಲ್ಲದೆ ಸ್ವರ್ಗಕೇರಿದಡೆ ಪುರಸುಟ್ಟ ।
ಕಳ್ಳನೇಕೇರ? ಸರ್ವಜ್ಞ ॥ ೬೪೮ ॥

* ಆಡಿನಾ ಆಡಿರಜವ ತೀಡಲಾಗದು ಎಂದು ।
ಆಡನೆ ತಿಂದರಿಹುದಿಂದ್ರ ಪದವೆಂಬ ।
ನಾಡಿಹುದು ನೋಡ! ಸರ್ವಜ್ಞ ॥ ೬೪೯ ॥

† ಬಾಡತಿಂಬಾತಂಗೆ ಆಡೇನು ಆವೇನು ।
ಕೋಡಗವೇನು ನರಿಯೇನು ಮನೆಯಲಿ- ।
ದ್ದೆಡನಾಯಿಯೇನು? ಸರ್ವಜ್ಞ ॥ ೬೫೦ ॥

---

1. W. ಚನ್ನಾದ ಊಟೆಂದು. 2. W. ಕನ್ನೆ. 3. W. ತಿನ್ನುವನೇಕೆ?

† ಆಡತಿಂಬಾತಂಗೆ ಕಾಡಿನಾ ಮಿಕವೇನು ।
ನಾಡಿನಹದ್ದು, ನರಿ, ನಾಯಿ ಮಾಂಸದ ।
ಪಾಡೆಲ್ಲ ಒಂದೆ! ಸರ್ವಜ್ಞ ॥ ೮೫೧ ॥

† ಇಂಗು ತಿಂಬಾತಂಗೆ ಕೊಂಬೇನು ಕೊಳಗೇನು ।
ಸಿಂಗಳಿಕವೇನು ಹಂಗೇನು ಬೇಲಿಯ ।
ಮುಂಗಲಿಯೇನು ಸರ್ವಜ್ಞ ॥ ೮೫೨ ॥

* ಆಡಕೊಂದಾಪಾಪ ಕಾಡದೇ ಬಿಡುವದೇ ।
ನೋಡಿರಾದಕ್ಷನೊಡಲಮೇಲ ಜನತಲೆ ।
ಮೂಡಿರುವದೇಕೆ[1] ಸರ್ವಜ್ಞ ॥ ೮೫೩ ॥

* ಕೊಂದು ತಿನ್ನುವ ಹೊಲೆಯ । ನೆಂದು ನೀನೆನಬೇಡ ।
ನೊಂದ ಜೀವವನು ಅರಿವ ಹಾರುವನಾಡ ।
ಕೊಂದಾದ ಹೊಲೆಯ! ಸರ್ವಜ್ಞ ॥ ೮೫೪ ॥

* ಕೊಂದುತಿಂಬಾಭಾಷೆ ಸಂದಿಹುದು ಹೊಲೆಯರಿಗೆ ।
ಸಂದುದಲ್ಲ[2]ದವತಿನ್ನ! ಹಾರುವನು ।
ಕೊಂದನೇಕಯ್ಯ[3]? ಸರ್ವಜ್ಞ ॥ ೮೫೫ ॥

† ಅಕ್ಕರವನರಿಯದಾ ನಿಷ್ಕರುಣಿತಿನುತಿಹರೆ ।
ಅಕ್ಕರವರಿದು ಅಜನುಂಬ ದ್ವಿಜ ತನ್ನ ।
ಮಕ್ಕಳನೆ ತಿಂದ! ಸರ್ವಜ್ಞ ॥ ೮೫೬ ॥

---

1. A C. ಆಡುತಿಹುದೇಕೆ. 2. F. ಕುಂದವನು. 3. A. ಕೊಂದು ತಿನುತಿಹನು.

* ಕೊಂದು ಮಾಡುವಭಕ್ತಿ । ಯಂದವನು ಆಸೋರೆನೆ ।
ಗಂಧದ ಮರನ ನೆರೆಸುಟ್ಟು ಇದ್ದಿಲನು ।
ತಂದು ಬಡಿದಂತೆ ಸರ್ವಜ್ಞ ॥ ೮೫೭ ॥

* ಕೊಲ್ಲಲಾಗದು ಎಂಬು । ದೆಲ್ಲರಿಗೆ ಸಲ್ಲಿರಲು ।
ಖುಲ್ಲಹಾರುವನು ಸ್ವರ್ಗಕೆ ಬಿಡದಾಡ ।
ಕೊಲ್ಲುತಿಹನೇಕೆ? ಸರ್ವಜ್ಞ ॥ ೮೫೮ ॥

* ಆನಾವ ಜೀವವನು ಹೇವವಿಲ್ಲದೆಕೊಂದು ।
ಸಾವಾಗ ಶಿವನ ನೆನೆದಡೆ ಅವಬಂದು ।
ಕಾವನೇ ಹೇಳು? ಸರ್ವಜ್ಞ ॥ ೮೫೯ ॥

## ಕುಲ ಖಂಡನ.

### ಹೊಲೆಯನು ಯಾರು.

* ಸತ್ತದನು[1] ತಿಂಬಾತ ಎತ್ತಣದ ಹೊಲೆಯನು ।
ಒತ್ತಿ ಜೀವವನು ಕೊರೆಕೊರೆದು ತಿಂಬಾತ- ।
ನುತ್ತಮದ ಹೊಲೆಯ! ಸರ್ವಜ್ಞ ॥ ೮೬೦ ॥

* ಹೊಲೆಯ ಮಾದಿಗರುಂಡು ತೊಲಗಿಟ್ಟ[2] ತೊಗಲುಸಲೆ ।
ಕುಲಜರೆಂಬವರಿಗುಣಲಾಯ್ತು! ಹೊಲೆಯರಾ ।
ಕುಲವಾವುದಯ್ಯ? ಸರ್ವಜ್ಞ ॥ ೮೬೧ ॥

* ಪಕ್ಕಲೆಯ ಸಗ್ಗಲೆಯೊ । ಳಿಕ್ಕಿರ್ದವಾರಿಯನು ।
ಚೊಕ್ಕಟವೆಂದು ಕುಡಿಯುವರು! ಹೊಲೆಯರು ।
ಚಿಕ್ಕವರು ಹೇಗೆ? ಸರ್ವಜ್ಞ ॥ ೮೬೨ ॥

---

1. D. ಸತ್ತದನ. 2. W. K. ತೊಗಲಿಟ್ಟ.

† ಕುಲವಿಲ್ಲ ಯೋಗಿಗೆ. ಛಲವಿಲ್ಲ ಜ್ಞಾನಿಗೆ।
ತೊಲೆಕಂಭವಿಲ್ಲ ಗಗನಕ್ಕೆ, ಸ್ವರ್ಗದಿ।
ಹೊಲೆಗೇರಿಯಿಲ್ಲ; ಸರ್ವಜ್ಞ ॥ ೮೬೩ ॥

* ಎಲುವಿಲ್ಲ ನಾಲಿಗೆಗೆ ಬಲವಿಲ್ಲ ಬಡವಂಗೆ।
ತೊಲೆ ಕಂಭವಿಲ್ಲ ಗಗನಕ್ಕೆ; ದೇವರಲಿ।
ಕುಲಭೇದವಿಲ್ಲ; ಸರ್ವಜ್ಞ ॥ ೮೬೪ ॥

* ನಾದರಿಗೆ ಮಾದರಿಗೆ ಭೇದವೇನಿಲ್ಲಯ್ಯ;।
ಮಾದನು ತಿಂಬ ಸತ್ತುದನು; ನಾದತನ-।
ಗಾದವರತಿಂಬ; ಸರ್ವಜ್ಞ ॥ ೮೬೫ ॥

* ಸತ್ತ ಕತ್ತೆಯ ಹೊತ್ತ। ರೆತ್ತಣಾ ಹೊಲೆಯನು।
ಉತ್ತಮನೆಂದು ಹೆರರೊಡವೆ ಹೊತ್ತರವ।
ನಿತ್ಯವೂ ಹೊಲೆಯ! ಸರ್ವಜ್ಞ ॥ ೮೬೬ ॥

ಹಾರುವಗೆ ಹೆಗ್ಗಳಿಕೆ ಯಾಕೆ?

* ಹೊಲೆಗೇರಿಯಲಿ ಹುಟ್ಟಿ। ದೆಲುವಿನಾ ಮನೆಯಲ್ಲಿ।
ಸಲೆ ಕರ್ಮ ದಾನಿಯೆನಿಸದೆ ಹಾರುವನು।
ಕುಲಕೆ ಹೋರುವನು! ಸರ್ವಜ್ಞ ॥ ೮೬೭ ॥

* ಮುಟ್ಟಾದ ಹೊಲೆಯೊಳಗೆ ಹುಟ್ಟಿಹುದು ಜಗವೆಲ್ಲ।
ಮುಟ್ಟಬೇಡೆಂದು ತೊಲಗುವ ಹಾರುವನು।
ಹುಟ್ಟಿರುವನೆಲ್ಲಿ? ಸರ್ವಜ್ಞ ॥ ೮೬೮ ॥

* ಮುಟ್ಟು ಗಂಡವಳನ್ನು ಮುಟ್ಟಲೊಲ್ಲರು ನೋಡ ।
ಮುಟ್ಟುತಾ ತಡೆದು ಹುಟ್ಟಿದ[1] ದೇಹವನು ।
ಮುಟ್ಟುವರೇಕೆ? ಸರ್ವಜ್ಞ ॥ ೮೧೯ ॥

† ಮಲವು ದೇಹದಿ ಸೋರಿ ಹೊಲಸು ಮಾಂಸದಿನಾರಿ ।
ಹೊಲೆಬಿಲದ ಹೇಯ ದೇಹದಿ ಹಾರುವರು ।
ಕುಲವನೆಣಿಸುವರೆ? ಸರ್ವಜ್ಞ ॥ ೮೨೦ ॥

† ಉತ್ತಮರು ಪಾಲ್ಗಡಲೊ । ಳೆತ್ತಿರಲು ಜನ್ಮವನು ।
ಉತ್ತಮರಧಮರೆನಬೇಡ ಹೊಲೆಯಿಲ್ಲ[2]- ।
ದುತ್ತಮರೆಲ್ಲಿ[3]? ಸರ್ವಜ್ಞ ॥ ೮೨೧ ॥

* ಎಂಜಲೆಂಜಲು ಎಂದು ಅಂಜುವರು ಹಾರುವರು ।
ಎಂಜಲಿಂದಾದ ತನುವಿರಲು ಅದನರಿದು ।
ಅಂಜುತಿಹರೇಕೆ? ಸರ್ವಜ್ಞ ॥ ೮೨೨ ॥

* ಎಲು, ತೊಗಲು, ನರ, ಮಾಂಸ, ಬಲಿದ ಚರ್ಮದಹೊದಿಕೆ, ।
ಹೊಲೆ, ರಕ್ತ, ಶುಕ್ಲದಿಂದಾದ ದೇಹಕೆ ।
ಕುಲವಾವುದಯ್ಯ? ಸರ್ವಜ್ಞ ॥ ೮೨೩ ॥

† ಎಲು, ಕರುಳು, ನರ, ತೊಗಲು! ಬಿಲ[4] ರಂಧ್ರ ಮಾಂಸದೊಳು ।
ಹಲ ತೆರದ ಮಲವು ಸುರಿದಿರಲು, ಕುಲಕಿನ್ನು ।
ಬಲವೆಲ್ಲಿ ಹೇಳು? ಸರ್ವಜ್ಞ ॥ ೮೨೪ ॥

---

1. W. ತನುವಾದ F. ತಾನಾದ 2 & 3 A. ಜಗವುತ್ತ ಬಿಟ್ಟೆಯಾಜೀಜ. 4. F. ಜಲ

‡ ಹಲ್ಲು ಎಲುವೆಂಬುವದ । ನೆಲ್ಲವರು ಬಲ್ಲರು ।
ನಿಲ್ಲದೆ ಎಲುವಿಂದೆಲ್ಲವನಗಿದ ಬಳಿ- ।
ಕೆಲ್ಲಿಹುದು ಶೀಲ? ಸರ್ವಜ್ಞ || ೪೭೫ ||

† ಹಲ್ಲುದುರಿ ರಕುತವ । ದೆಲ್ಲವೂ ಬಾಯೊಳಗೆ ।
ಖುಲ್ಲ ರಕ್ಕಸರು ಮಾನವರಿರೆ ಶೀಲ- ।
ವೆಲ್ಲಿಹುದು ಹೇಳು? ಸರ್ವಜ್ಞ || ೪೭೬ ||

* ಹಸಿವು ತೃಷೆ ನಿದ್ರೆಗಳು ವಿಷಯ ಮೈಥುನ ಬಯಕೆ ।
ಪಶುಪಕ್ಷಿ ನರಗೆ ಸಮನಿರಲು, ಕುಲವೆಂಬ ।
ಘಸಣೆಯೆತ್ತಣದು? ಸರ್ವಜ್ಞ || ೪೭೭ ||

† ಕೊಳಿಂದ ಕುಲ ಬೆಳೆದು ಬಾಳಿಂದ ಬಲಬೆಳೆದು ।
ಕೂಳು ನೀರುಗಳು ಕಳೆದರೆ ಕುಲಗಳ ।
ಕೇಳ ಬೇಡೆಂದ! ಸರ್ವಜ್ಞ || ೪೭೮ ||

ಜಾತಿ ಖಂಡನ.

* ನಡೆಯೊದೊಂದೇ ಭೂಮಿ ಕುಡಿಯೊದೊಂದೇ ನೀರು ।
ಸುಡುವಗ್ನಿಯೊಂದೆ ಇರುತಿರೆ ಕುಲಗೋತ್ರ ।
ನಡುವೆ ಎತ್ತಣದು? ಸರ್ವಜ್ಞ || ೪೭೯ ||

* ಕುಡಿವ ನೀರನು ತಂದು ಅಡಿಗೆ ಮಾಡಿದ ಮೇಲೆ ।
ಒಡನುಣ್ಣಲಾಗದಿಂತೆಂಬ ಮನುಜರ ।
ಒಡನಾಟವೇಕೆ? ಸರ್ವಜ್ಞ || ೪೮೦ ||

* ಅವಯವಗಳೆಲ್ಲರಿಗೆ ಸವಸಾಗಿ ಇರುತಿರಲು ।
ಭವಿ, ಭಕ್ತ, ಶ್ವಪಚ, ಶೂದ್ರರು ಇಂತೆಂಬ ।
ಕವನವೆತ್ತಣದು? ಸರ್ವಜ್ಞ ‖ ೮೮೧ ‖

* ಧಾತು ಏಳನು ಕಲಿತು ಭೂತ ಪಂಚಕವಾಗಿ ।
ಓತು ದೇಹವನು ಧರಿಸಿರ್ದ ಮನುಜರ್ಗೆ ।
ಜಾತಿ ಎತ್ತಣದು? ಸರ್ವಜ್ಞ ‖ ೮೮೨ ‖

ಜಾತನು ಯಾರು?

* ಜಾತಿಹೀನರ ಮನೆಯ ಜೋತಿತಾ ಹೀನವೇ? ।
ಜಾತಿ ವಿಜಾತಿಯೆನಬೇಡ ದೇವನೊಲಿ- ।
ದಾತನೇ ಜಾತ! ಸರ್ವಜ್ಞ ‖ ೮೮೩ ‖

* ಭೂತೇಶಗೆರಗುವನು ಜಾತಿ ಮಾದಿಗನಲ್ಲ ।
ಜಾತಿಯುಲಿ ಹುಟ್ಟಿ ಶಿವನಿಗೆ ಶರಣೆನ್ನ- ।
ದಾತ ಮಾದಿಗನು! ಸರ್ವಜ್ಞ ‖ ೮೮೪ ‖

* ಯಾತರದು ಹೂವೇನು ನಾತರದು ಸಾಲದೇ ।
ಜಾತಿವಿಜಾತಿಯೆನಬೇಡ; ದೇವನೊಲಿ[1]- ।
ದಾತನೇ[2] ಜಾತ! ಸರ್ವಜ್ಞ ‖ ೮೮೫ ‖

* ಹಾರುವರು ಸ್ವರ್ಗದಾ ದಾರಿಯನು ಬಲ್ಲರೇ? ।
ನಾರಿ ಪತಿವ್ರತದಿ ನಡೆದರೆ ಸ್ವರ್ಗದ ।
ದಾರಿದೋರುವಳು! ಸರ್ವಜ್ಞ ‖ ೮೮೬ ‖

---

1 & 2. A. ಶಿವನೊಳಿದ್ದಾತನೇ.

## ಬ್ರಾಹ್ಮಣ ಗುಣದರ್ಶನ.

### ಗುಣ ಪ್ರಶಂಸೆ.

#### ಉತ್ತಮರು.

† ಉತ್ತಮರು ಎಂಬುವರು ಸತ್ಯದಲಿ ನಡೆಯುವರು ।
ಉತ್ತಮರರ್ಥಮರ್ಕೆನಬೇಡ ಅವರೊಂದು ।
ಮುತ್ತಿನಂತಿಹರು! ಸರ್ವಜ್ಞ ॥ ೬೮೭ ॥

* ಮಾತನರಿದಾ ಸುತನು ರೀತಿಯರಿದಾ ಸತಿಯು ।
ನೀತಿಯನರಿದ ವಿಪ್ರನು ಜಗದೊಳು ।
ಜ್ಯೋತಿಯಿದ್ದಂತೆ ಸರ್ವಜ್ಞ ॥ ೬೮೮ ॥

* ಉತ್ತಮದ ವರ್ಣಗಳ। ಸುತ್ತಮವೆನಬೇಡ ।
ಮತ್ತೆ ತನ್ನಂತೆ ಬಗೆವರನೆಲ್ಲರ- ।
ನುತ್ತಮವೆನ್ನು! ಸರ್ವಜ್ಞ ॥ ೬೮೯ ॥

* ದಾರದಿಂದಲಿ ಮುತ್ತು ಹಾರವೆಂದೆನಿಸಿಹುದು ।
ಆರಯ್ದು ನಡೆವ ದ್ವಿಜರುಗಳ ಸಂಸರ್ಗ ।
ವಾರಿಂದಲಧಿಕ! ಸರ್ವಜ್ಞ ॥ ೬೯೦ ॥

#### ವಿದ್ಯಾ ಸಂಪನ್ನರು.

‖ ವಿಪ್ರರಿಂದಲೆ ವಿದ್ಯ ವಿಪ್ರರಿಂದಲೆ ಬುದ್ಧಿ ।
ವಿಪ್ರನಿಜವಿಪ್ರರಿಲ್ಲದಿರೀಜಗವು ।
ಕ್ಷಿಪ್ರದಲಿ ಕೆಡುಗು! ಸರ್ವಜ್ಞ ॥ ೬೯೧ ॥

* ಅರಿತಂಗೆ ಅರ್ವತ್ತು ಮರೆತಂಗೆ ಮೂವತ್ತು ।
ಬರೆವಂಗೆ ರಾಜ್ಯ ಸರಿಪಾಲು! ಹಾರುವನು ।
ಬರಿಯುದೇ ಕೆಟ್ಟ; ಸರ್ವಜ್ಞ ॥ ೬೯೨ ॥

ದ್ವಿಜ ಲಕ್ಷಣ.

† ದ್ವಿಜನೊಮ್ಮೆ ಜನಿಸಿ ತಾ । ನಜನಂತೆ ಜಿಗಿಯುವನು[1] ।
ದ್ವಿಜನೆಲ್ಲರಂತೆ ಮಲಿನನಿರೆ, ಋಜುವಿಂದ ।
ದ್ವಿಜನು ತಾನಹನು[2] ಸರ್ವಜ್ಞ ॥ ೮೯೩ ॥

ಗುಣನಿಂದಾ.

ಕಪಟಿಗಳು.

† ಹಾರುವನೆಂಬುವನು ಹಾರುತ್ತಲಿರುತಿಹನು ।
ಹಾರುವಗೆ ಹೇರ್ವ ದೊರೆದಡೆ ನಿಜಗುಣವ ।
ತೋರದೆಡಗುವನು! ಸರ್ವಜ್ಞ ॥ ೮೯೪ ॥

† ಒಳಗೊಂದು ಕೋರುವನು! ಹೊರಗೊಂದು ತೋರುವನು! ।
ಕೆಳಗೆಂದು ಬೀಳ! ಹಾರುವನ, ಸರ್ಪನ, ।
ಸುಳುವು ಬೇಡೆಂದ! ಸರ್ವಜ್ಞ ॥ ೮೯೫ ॥

* ಬೇಡಂಗೆ ಕೊಡೆಹೊಲ್ಲ ಆಡಿಂಗೆ ಮಳೆಹೊಲ್ಲ ।
ಬೇಡಿ ಉಂಬುವಗೆ ಬರಹೊಲ್ಲ, ದ್ವಿಜನಿಗೆ ।
ಕಾಡುನುಡಿ[3] ಹೊಲ್ಲ ಸರ್ವಜ್ಞ ॥ ೮೯೬ ॥

॥ ಕೆಟ್ಟರೆ ದ್ವಿಜರಿಂದ ಕೆಟ್ಟವರು ಇನ್ನಿಲ್ಲ ।
ಕೆಟ್ಟದನು ಬಿಟ್ಟು ನಡೆದರೆ ಅವರಿಂದ ।
ನೆಟ್ಟನವರಿಲ್ಲ! ಸರ್ವಜ್ಞ ॥ ೮೯೭ ॥

ಸ್ವಾರ್ಥಿಗಳು.

॥ ಕೊಟ್ಟಿಹರೆ ಹಾರುವರು ಕುಟ್ಟುವರು ಅವರಂತೆ ।
ಬಿಟ್ಟರೆ ನೋಡಿ ನುಡಿಸರು! ಹಾರುವರು ।
ನೆಟ್ಟನೆಯುವರೇ? ಸರ್ವಜ್ಞ ॥ ೮೯೮ ॥

---

1. F. ದ್ವಿಜನು ತಾನಭಿಮಾನಿ ಅಜನೆಂದು ಹೋರುವನು D. ಹಾರುವನು ಗಜದಾದ ನಡೆ ...ಹನು. 2. F. ನಿಜ ದ್ವಿಜನಹನು. 3. ನಾಡ ನುಡಿ.

‖ ಕೊಟ್ಟವರ ತಲೆಬೆನ್ನ ತಟ್ಟುವರು ಹಾರುವರು ।
ಕೆಟ್ಟರೆ ಕುಟ್ಟಿ ಕೆಡಹುವರು! ಹಾರುವರ ।
ಬಟ್ಟೆ ಬೇಡೆಂದ! ಸರ್ವಜ್ಞ ‖ ೮೯೯ ‖

† ಅರ್ಥ ಸಿಕ್ಕರೆ ಬಿಡರು ವ್ಯರ್ಥದಿ ಶ್ರಮ ಬಡರ- ।
ನರ್ಥಕ್ಕೆ ಪರರ ನೂಂಕಿಪರು, ವಿಪ್ರರಿಂ ।
ಸ್ವಾರ್ಥರಿನ್ನಿಲ್ಲ ಸರ್ವಜ್ಞ ‖ ೯೦೦ ‖

† ಜ್ಯೋತಿಯಿಲ್ಲದ ಮನೆಯು ರೀತಿಯಿಲ್ಲದ ಸತಿಯು ।
ನೀತಿಯಿಲ್ಲದಾ ವಿಪ್ರನು ಭಿಕ್ಷವ ।
ಪಾತ್ರೆಯೊಡೆದಂತೆ! ಸರ್ವಜ್ಞ ‖ ೯೦೧ ‖

* ಗೊರವನೂ, ಸೂಳೆಯೂ, ಹರದಕ್ಕಸಾಲೆಯೂ, ।
ತಿರಿವನು, ವೈದ್ಯ, ದ್ವಿಜ, ಗಣಿಕೆಯಿನ್ನೊಬ್ಬ- ।
ರಿರವ ಸೈರಿಸರು ಸರ್ವಜ್ಞ ‖ ೯೦೨ ‖

ದುಃಶ್ಶೀಲರು.

* ದ್ವಿಜನಿಂಗೆ ಸಾಮರ್ಥ್ಯ ಭುಜಗಂಗೆ ಕಡುನಿದ್ರೆ ।
ಗಜನಿಂಗೆ ಮದವು ಅತಿಗೂಡೆ ಲೋಕದ ।
ಪ್ರಜೆಯು ಬಾಳುವದೆ? ಸರ್ವಜ್ಞ ‖ ೯೦೩ ‖

* ಹಾರುವರ ನಂಬಿದವ । ರಾರಾರು ಉಳಿದಿಹರು? ।
ಹಾರುವರನಂಬಿ ಕೆಟ್ಟರು ಭೂಪರಿ- ।
ನ್ನಾರು ನಂಬುವರು? ಸರ್ವಜ್ಞ ‖ ೯೦೪ ‖

---

1 & 2. F. ಮನೆಗೊಳು ಜ್ಯೋತಿಯಿದ್ದಂತೆ.

‖ ಹಾರುವರು ಎಂಬುವರು ಸರಿಹರು ಗಗನಕ್ಕೆ ।
ಹಾರುವರ ಮೀರಿದವರಿಲ್ಲ ಅವರೊಡನೆ ।
ಹೋರಬೇಡೆಂದ! ಸರ್ವಜ್ಞ ‖ ೯೦೩ ‖

* ಬಂಡುಣಿಗಳಂತಿಹರು ಭಂಡನೆರೆಯಾಡುವರು ।
ಕಂಡುದನರಿದು ನುಡಿಯರು, ಹಾರುವರು ।
ಭಂಡರೆಂದರಿಗು! ಸರ್ವಜ್ಞ ‖ ೯೦೬ ‖

* ಕೆಟ್ಟ ಹಾಲಿಂದ ಹುಳಿ । ಯಿಟ್ಟರ್ದ ತಿಳಿಲೇಸು ।
ಕೆಟ್ಟ ಹಾರುವನ ಬದುಕಿಂದ ಹೊಲೆಯನು ।
ನೆಟ್ಟನೇಲೇಸು ಸರ್ವಜ್ಞ ‖ ೯೦೭ ‖

* ಅಕ್ಕರವ ಕಲಿತಾತ ಒಕ್ಕಲನು ತಿನಗಲಿತ ।
ಲೆಕ್ಕವ ಕಲಿತ ಕರಣಿಕನು ನರಕದಲಿ ।
ಹೊಕ್ಕಾಡಕಲಿತ! ಸರ್ವಜ್ಞ ‖ ೯೦೮ ‖

‖ ಹೆಂಡಕ್ಕೆ ಹೊಲೆಯುಸು, ಕಂಡಕ್ಕೆ ಕಟುಗನು, ।
ದಂಡಕ್ಕೆ ಕೃಷಿಕ, ಹಾರುವನು ತಂದು ತಾ ।
ಪಿಂಡಕ್ಕೆ ಇಡುವ; ಸರ್ವಜ್ಞ ‖ ೯೦೯ ‖

‖ ಹಾರುವನುಪಕಾರಿ ಹಾರುವನಪಕಾರಿ ।
ಹಾರುವತೋರ್ವ ಬಹುದಾರಿ ಮುನಿದರೆ ।
ಹಾರುವನೆ ಮಾರಿ ಸರ್ವಜ್ಞ ‖ ೯೧೦ ‖

† ಹಾರುವರು ಎಂಬುವರು ಹಾರುವರು ನರಕಕ್ಕೆ ।
ಸಾರತರ ನಿಜವನರಿಯರು ಸ್ವರ್ಗದ ।
ದಾರಿಯುವರ್ಗಹುದೆ? ಸರ್ವಜ್ಞ ॥ ೯೧೧ ॥

† ಬ್ರಹ್ಮಸೂ ದೇವಸೂ ಮಾನಿಸನು ಹೊಕ್ಕಿಹರೆ ।
ಹೆಮ್ಮಗನು ಸತ್ತು ತಾಸತ್ತು ಮನೆಯೆಲ್ಲ ।
ನಿರ್ಮೂಲವಕ್ಕು ! ಸರ್ವಜ್ಞ ॥ ೯೧೨ ॥

ಹೊಲೆಯರಿಗೂ ಕಡೆ.

* ಮಾದಿಗನ ಕಮ್ಮಿಯನ ಭೇದವೆರಡೊಂದಯ್ಯ ।
ಮಾದಿಗನೊಮ್ಮೆ ಉಪಕಾರಿ, ಕಮ್ಮಿತನ- ।
ಗಾದವರ ಕೊಲುವ! ಸರ್ವಜ್ಞ ॥ ೯೧೩ ॥

* ಕಮ್ಮಿಯನ ಚೇಳಿನಾ ಹೊಮ್ಮರಡು ಒಂದಯ್ಯ ।
ನೆಮ್ಮಿದರೆ ಚೇಳು ಹೊಡೆವುದು; ಕಮ್ಮಿತಾ- ।
ನೆಮ್ಮದೆ ಹೊಡೆವ! ಸರ್ವಜ್ಞ ॥ ೯೧೪ ॥

ಅಮ್ಮನಿಗೆ ಬಳಿಯುಲ್ಲ ಎಮ್ಮೆಗೆ ಚಳಿಯಿಲ್ಲ ।
ಉಮ್ಮಳಿಸಿದಾಗ ಮಳೆಯಿಲ್ಲ ನನ್ನಿಯು ।
ಕಮ್ಮಿಯಲಿಲ್ಲ ಸರ್ವಜ್ಞ ॥ ೯೧೫ ॥

* ಜೋಗಯ್ಯ ಕಮ್ಮಿಯೊಳ । ಗಾಗದದು ವಿಶ್ವಾಸ ।
ತಾಗುವಾ ತಗರು ಬರಲೋಡಿ ಬಾವಿಯ ।
ತೂಗುಹಿಡಿದಂತೆ ಸರ್ವಜ್ಞ ॥ ೯೧೬ ॥

# ೧೬. ಜೈನ ಪದ್ಧತಿ.

### ಜೈನಮತ ಪ್ರಶಂಸೆ.

* ಸೃಷ್ಟಿಯುಲಿ ಜಿನಧರ್ಮ ಪಟ್ಟಗಟ್ಟಿರುತಿಹುದು ।
ಕೆಟ್ಟರೆ ಕೆಡುಗು ಜಗವೆಲ್ಲ ತಲೆಹೋದ ।
ಅಟ್ಟೆಯುಂತಕ್ಕು! ಸರ್ವಜ್ಞ ॥ ೯೧೭ ॥

* ಕೊಲುವ ಧರ್ಮವನೊಯ್ದು[1] ಒಲೆಯೊಳಗೆ ಇಕ್ಕುವಾ ।
ಕೊಲಲಾಗದೆಂಬ ಜೈನನ ಮತವೆನ್ನ ।
ತಲೆಯ ಮೇಲಿರಲಿ! ಸರ್ವಜ್ಞ ॥ ೯೧೮ ॥

### ಜೈನಮತವು ಮತ್ತೆ ಹುಟ್ಟಿದ್ದು

* ಆದಿಯುಲಿ ಜಿನನಿಲ್ಲ ವೇದದಲಿ ಹುಸಿಯಿಲ್ಲ ।
ವಾದದಿಂದಾದ ಧನವಿಲ್ಲ, ಸ್ವರ್ಗದಲಿ ।
ಮಾದಿಗರು ಇಲ್ಲ ಸರ್ವಜ್ಞ ॥ ೯೧೯ ॥

### ಜೈನರು ಸುಳ್ಳಾಡಲಾಗದು.

* ಮುತ್ತು ಮುದಿಕೆಗೆ ಏಕೆ[2] ತೊತ್ತೇಕೆ ಗುರುಗಳಿಗೆ ।
ಬತ್ತಿದ ಕೆರೆಗೆ ಮಿಗವೇಕೆ[3] ಶ್ರವಣರಿಗೆ ।
ಮಿಥ್ಯತನವೇಕೆ? ಸರ್ವಜ್ಞ ॥ ೯೨೦ ॥

* ಮೊಸರು ಇಲ್ಲದ ಊಟ, ಪಸರವಿಲ್ಲದ ಕಟಕ, ।
ಹಸನವಿಲ್ಲದಳರತಿಕೂಟ ಜಿನನಬಾಯ್ ।
ಕಿಸುಕುಳದಂತೆ ಸರ್ವಜ್ಞ ॥ ೯೨೧ ॥

* ಉಪ್ಪು ಸಪ್ಪನೆಯುಕ್ಕು ಕಪ್ಪುರವು ಕರಿದಕ್ಕು ।
ಸರ್ಪನಿಗೆ ಬಾಲವೆರಡಕ್ಕು ಶ್ರವಣರು ।
ತಪ್ಪಾಡಿದಂದು! ಸರ್ವಜ್ಞ ॥ ೯೨೨ ॥

---

1. A. ನೊಂದು. 2. G, S. ಮುತ್ತು ಮೂಗುತಿಯೇಕೆ ತೊತ್ತಹರೆ ಗುರುಗಳಿಗೆ.
3. W. ಕೆರಿಗೇಕೆ.

### ಬಾಹ್ಯಾಚಾರ ವ್ಯರ್ಥ.

* ಹೆರೆಗಳೆದ ಉರಗನಾ ಗರಳತಾ ತಪ್ಪುವದೆ ।
ಪರತತ್ವ ಬೋಧೆಯರಿಯದ ಶ್ರವಣರು ।
ಸಿರಿಯ ತೊರೆದೇನು? ಸರ್ವಜ್ಞ ॥ ೯೨೩ ॥

† ಆಚಾರ ವಿಹುದೆಂದು ಲೋಚಗುಂಡಿಗೆವಿಡಿದು ।
ಭೂಚರದಿ ಸತ್ತ ನವಿಲಗರಿ[1] ಪಿಡಿವುದು ।
ನೀಚವೆನಿಸಿರದೆ ಸರ್ವಜ್ಞ ॥ ೯೨೪ ॥

* ಬೊಟ್ಟು ತಾಗಿಸಿ ಬೊಟ್ಟೆ[2] । ನಿಟ್ಟು ಒಪ್ಪುವ ಜೈನ ।
ನೆಟ್ಟನೆ ಸ್ವರ್ಗ ಪಡೆವಡೆ ಸಾಣೆಕಲ್ ।
ಕೆಟ್ಟಕೇಡೇನು? ಸರ್ವಜ್ಞ ॥ ೯೨೫ ॥

### ಅಹಿಂಸಾ ವಾದ ನಿರ್ಣಯ.

* ಕೊಲ್ಲದಿಪ್ಪಾಧರ್ಮ । ವೆಲ್ಲರಿಗೆ ಸಮ್ಮತವು ।
ಅಲ್ಲದಸುವಿಾರಿ ಕೊಲುವನು ನರಕಕ್ಕೆ ।
ನಿಲ್ಲದೆ ಹೋಹ! ಸರ್ವಜ್ಞ ॥ ೯೨೬ ॥

* ಹೇನು ಕೂರಿಗಳನ್ನು ತಾನಾಗಿ ಜಿನಕೊಲ್ಲ ।
ಸ್ಥಾನ ಪಲ್ಲಟವ ಮಾಡಿದಡಾ ಮೇಲೆ ।
ಏನಾದುದರಿಯ! ಸರ್ವಜ್ಞ ॥ ೯೨೭ ॥

* ಎಂತು ಪ್ರಾಣಿಯ ಕೊಲ್ಲ । ದಂತುಂಟು ಜಿನಧರ್ಮ ।
ಜಂತು ಬಸುರಲ್ಲಿ ಸತ್ತರೆ ಆ ಜೀವಿ- ।
ಯಂತಾದ ಶ್ರವಣ! ಸರ್ವಜ್ಞ ॥ ೯೨೮ ॥

---

1. C. ಭೂಚರದಿ ಸುತ್ತಿ ನಗರವ. 2. G. S. ಬಟ್ಟೆ ತಾವಾಗಿಯೆ = ದಿಗಂಬರರಾಗಿ.

* ಎಂತು ಜೀವಿಯ ಕೊಲ್ಲ। ದಂತಿಹುದು ಜಿನಧರ್ಮ।
ಜಂತುಗಳಹೆತ್ತು[1] ಮರಳಿಯುವನು ಸಲುಹಿ- ।
ದಂತವನೆ ಜೈನ! ಸರ್ವಜ್ಞ ॥ ೯೨೯ ॥

† ಜೀವಿ ಜೀವಿಯತಿಂದು ಜೀವಿಪುದು ಜಗವೆಲ್ಲ ।
ಜೀವದಿಂ ಹೊರಗೆ ತಿಂಬರ ನಾಕಾಣೆ ।
ಜೀವವೀ ಜಗವು! ಸರ್ವಜ್ಞ ॥ ೯೩೦ ॥

† ಚರಜೀವವನು ತಿಂದು ಚರಿಸುವದು ಜಗವರ್ಧ ।
ಚರಿಸದ ಜೀವಿಗಳತಿಂದು ಜಗವರ್ಧ ।
ಚರಿಸುವದು ನೋಡ! ಸರ್ವಜ್ಞ ॥ ೯೩೧ ॥

† ಎಂತು ತಪಸಿಗಳಂತೆ ನಿಂತಫಲಜೀವಿಗಳ ।
ಜಂತುವಲ್ಲೆಂದು ಜಿನತಿಂದು ಮತ್ತದನು ।
ಸಂತೆಯೊಳಿಡುವ! ಸರ್ವಜ್ಞ ॥ ೯೩೨ ॥

† ಒಂದು ಜೀವವನೊಂದು ತಿಂದು ಉಳಿದಿಹಜಗದೊ- ।
ಳೆಂದು ಕೊಲಲಾಗದಿಂತೆಂಬ ಜಿನಧರ್ಮ ।
ನಿಂದಿಹುದು ಹೇಗೆ? ಸರ್ವಜ್ಞ ॥ ೯೩೩ ॥

ಜೀವಿ ಜೀವವತಿಂದು ಜೀವಿಗಳ ಹುಟ್ಟಿಸಿರೆ ।
ಸಾವು ಎಲ್ಲಿಹುದು? ಸ್ವಾರ್ಥವೆ ಜಗದೊಳಗೆ ।
ಸಾವೆಂದು ತಿಳಿಯೊ! ಸರ್ವಜ್ಞ ॥ ೯೩೪ ॥

---

1. A. ಹೇತು. C. ಹೊತ್ತು.

# ೧೭. ಮೂರ್ಖರ ಪದ್ಧತಿ.

---

ಮೂರ್ಖನ ಲಕ್ಷಣ.

* ಮೂರ್ಖಂಗೆ ಬುದ್ಧಿಯನು ನೂರ್ಕಾಲಪೇಳಿದರೆ ।
ಬೋರ್ಕಲ್ಲಮೇಲೆ ಮಳೆಗರೆದರಾಕಲ್ಲು[1] ।
ನೀರ್ಕೊಳ್ಳಲಹುದೆ?[2] ಸರ್ವಜ್ಞ ॥ ೯೩೫ ॥

ಮೂರ್ಖನ ಸಂಗಡ ವಾದಿಸಬೇಡ.

* ಆರುಬೆಟ್ಟವನೊಬ್ಬ[3] ಹಾರಬಹುದೆಂದರೆ ।
ಹಾರಬಹುದೆಂದು ಎನಬೇಕು ಮೂರ್ಖನ ।
ಹೋರಾಟಸಲ್ಲ ಸರ್ವಜ್ಞ ॥ ೯೩೬ ॥

† ಮೂರು ಗಾವುದವನ್ನು ಹಂರಬಹುದೆಂದರೆ ।
ಹಾರಬಹುದೆಂದು ಎನಬೇಕು ಮೂರ್ಖನೊಡ- ।
ಹೋರಬೇಡೆಂದ ಸರ್ವಜ್ಞ ॥ ೯೩೭ ॥

* ಒಲೆಗುಂಡನೊಬ್ಬನೇ ಮೆಲಬಹುದೆಂದರೆ ।
ಮೆಲಬಹುದೆಂಬುವನು ಜಾಣ ಮೂರ್ಖನ ।
ಗೆಲಲಾಗದಯ್ಯ! ಸರ್ವಜ್ಞ ॥ ೯೩೮ ॥

† ಮೊಲನಾಯ ಬೆನ್ನಟ್ಟೆ ಗೆಲಬಹುದೆಂದರೆ ।
ಗೆಲಬಹುದೆಂದು ಎನಬೇಕು ಮೂರ್ಖನಲಿ ।
ಛಲವು ಬೇಡೆಂದ ಸರ್ವಜ್ಞ ॥ ೯೩೯ ॥

* ನೆಲವನ್ನು ಮುಗಿಲನ್ನು ಹೊಲಿವರುಂಟೆಂದರೆ ।
ಹೊಲಿವರು ಹೊಲಿವರೆನಬೇಕು ಮೂರ್ಖನಲಿ ।
ಕಲಹವೇ ಬೇಡ ಸರ್ವಜ್ಞ ॥ ೯೪೦ ॥

---

1 & 2. A. ಗೋರ್ಕಲ್ಲ ಹಾಲೊಳು ನೆನೆಯಿಕ್ಕಲಾಕಲ್ಲು । ಹೀರ್ಕೊಂಬುದುಂಟೆ? W. ನೀರ್ಕುಡಿಲಹುದೆ? 3. C. ಆರು ಮಾರನು ಒಬ್ಬ.

* ಬೆಟ್ಟವನು ಕೊಂಡೊಬ್ಬ । ನಿಟ್ಟಹನು ಎಂದರೆ ।
ಇಟ್ಟಹನೆಂದು ಎನಬೇಕು ಮೂರ್ಖನ ।
ಬಟ್ಟೆ ಬೇಡೆಂದ! ಸರ್ವಜ್ಞ ॥ ೯೪೧ ॥

* ಹೊಳೆಯನೀರೊಬ್ಬನೇ ಅಳೆಯಬಹುದೆಂದರೆ ।
ಅಳೆಯಬಹುದೆಂದು ಎನಬೇಕು ಮೂರ್ಖನ ।
ಕಳೆಯಲಳವಲ್ಲ! ಸರ್ವಜ್ಞ ॥ ೯೪೨ ॥

* ಒಂದನ್ನು ಎರಡೆಂಬ ಹಂದಿ ಹೆಬ್ಬುಲಿ ಎಂಬ ।
ನಿಂದ ದೇಗುಲವ ಮರನೆಂಬ[1] ಮೂರ್ಖನು ।
ಅಂದಂತೆ ಅನ್ನಿ! ಸರ್ವಜ್ಞ ॥ ೯೪೩ ॥

ಮೂರ್ಖರ ಸ್ನೇಹಬೇಡ.

* ಅಳಹೊಲ್ಲ ಆಡಿನಾ ಕೆಳೆಹೊಲ್ಲ ಕೋಡಗನ ।
ಅಳುಕೋಪ ಹಿಪರೊಳು ಹೊಲ್ಲ ಮೂರ್ಖನ ।
ಗೆಳೆತನವೆ ಹೊಲ್ಲ! ಸರ್ವಜ್ಞ ॥ ೯೪೪ ॥

---

## ೧೯. ಕಾಲಜ್ಞಾನ ಪದ್ಧತಿ.

---

ಬಸವ ಸ್ತುತಿ.

* ಬಸವನೆನಗೆ ನಿರೂ । ಪಿಸಿದ ಕಾಲಜ್ಞಾನ ।
ಭಸಿತವಿಟ್ಟು ಮರ್ತ್ಯರಿರವನು ನಾ ನಿಮ್ಮ ।
ಸಿಸುವಾಗಿ ಪೇಳ್ವೆ ಸರ್ವಜ್ಞ ॥ ೯೪೫ ॥

ಒಪ್ಪ ಭಸಿತವನಿಟ್ಟು ಕರ್ಪುರ ವೀಳ್ಯವ ಕೊಟ್ಟು ।
ಕಪ್ಪುಗೊರಳನ ಕರುಣದಿ ಇದನರಿದು ।
ಒಪ್ಪಿ ಹೇಳಿದೆನು ಸರ್ವಜ್ಞ ॥ ೯೪೬ ॥

1. G. S. ಗಂಧದ ಮರವ ಕೊರಡೆಂಬ.

* ನಂಬಿಹೇಳುವೆ ಬಸವ। ನಿಂಬಿನಾ ಮಹಿಮೆಯನು![1] ।
ಶಂಭುವಿನ ಕರುಣ ನಿಮಗುಂಟು ನಾನಿಮ್ಮ ।
ನಂಬಿ ಹೇಳಿದೆನು! ಸರ್ವಜ್ಞ ॥ ೯೪೭ ॥

ವೀರಬಸವಂತನಾಗಮನ.

* ವೀರಬಸವಂತನು ಧೀರ ಬಿಜ್ಜಳ ತಾನು ।
ಮಾರಿ ಕಲಿದೇವಿ ನಡೆದಾನು ಅವನೊಡನೆ ।
ಹೋರುವವರಿಲ್ಲ ಸರ್ವಜ್ಞ ॥ ೯೪೮ ॥

* ಮಳಿಗಳನು ಕುಡಿದಾನು ಬೆಳೆಗಳನು ಮುಕ್ಕ್ಯಾನು ।
ಬಳಗಗಳನೆಲ್ಲ ಮುರಿದಾನು ಜಗದೊಳ- ।
ಗುಳಿವವರಿಲ್ಲ ಸರ್ವಜ್ಞ ॥ ೯೪೯ ॥

* ಇಂದು ರಾಮವತಾರ ಸಂದುದಿನ್ನಾಸಿರದ ।
ಮುಂದೆ ಬರುವನು ವೀರ ಬಸವಂತನು ।
ಕುಂದದಿಳೆಗೆಂದ ಸರ್ವಜ್ಞ ॥ ೯೫೦ ॥

ಬಸವಣ್ಣನವರ ಪುನರಾಗಮನ.

* ಆಗಮಗಳಳಿದಾವು ಗೂಗೆಮರಕಿಳಿದಾವು ।
ಕಾಗೆಗಳೆದ್ದು ಬಡಿದಾವು ಧೊರೆಗಳು ।
ಮೂಗರಾದಂದು ಸರ್ವಜ್ಞ ॥ ೯೫೧ ॥

* ಚಲ್ಲಿಯಾ ಬಿಲ್ಲಿವರು ಸಲ್ಲಿಸಿ ಎಲ್ಲವನು ।
ಕಲ್ಯಾಣದರಸು ಬಸವಣ್ಣ ಬರುವಾಗ ।
ಅಲ್ಲಿ ಚಲ್ಲಾಟ ಸರ್ವಜ್ಞ ॥ ೯೫೨ ॥

1. ಈ ಪದ್ಧತಿಯು ಆರಂಭದ ಮೂರು ವಚನಗಳು ಅವನ ಕಾಲಜ್ಞಾನ ಗ್ರಂಥದಿಂದ ಸೇರಿವೆ.

* ಸಣ್ಣನೆಯುನಾಮುದಾ ನುಣ್ಣನೆಯ ಮುಡಿಗಳ।
ಅಣ್ಣಗಳೆಲ್ಲ ಮಡಿಯುಲು ಚನ್ನಬಸ-।
ವಣ್ಣನು ಬರುವ ಸರ್ವಜ್ಞ ॥ ೯೫೩ ॥

* ಇರಿವೆತ್ತು[1] ಮಡಿದಲ್ಲಿ ಕೆರೆಕಟ್ಟೆ ಒಡೆದೀತು।
ಬರನಟ್ಟೆ ಬಡಿದು ಜಗಮುಡಿಯೆ ಶರಣನು।
ಬರುವದಕೆ ಕುರುಹು! ಸರ್ವಜ್ಞ ॥ ೯೫೪ ॥

* ಧಾರುಣಿಯು ನಡುಗುವದು! ಮೇರು ಅಲ್ಲಾಡುವದು!।
ವಾರಿನಿಧಿಬತ್ತಿ ಬಯಲಹುದು! ಶಿವಭಕ್ತಿ-।
ಯೇರದಿಹುದಂದು! ಸರ್ವಜ್ಞ ॥ ೯೫೫ ॥

* ಒತ್ತಿದಾ ಜಗಳಕ್ಕೆ ಸುತ್ತ ಮುತ್ತಿಗೆಯಾಗಿ।
ತೊತ್ತಳ ತುಳಿದು ಕೊಲುವಾಗ ಉಳುವೆಯ।
ಕರ್ತ ಬಂದಾನು ಸರ್ವಜ್ಞ ॥ ೯೫೬ ॥

* ಹರನ ಗಿರಿಗುಡಿಗಳಲಿ ಸುರೆ, ಮಾಂಸ, ಮಾರೀತು।
ಶರಣರ್ಗೆ ಹರಣ ಕಿರಿದಾಗಿ ಜಗದಲ್ಲಿ।
ಹರದಾಳಿ ನೋಡ! ಸರ್ವಜ್ಞ ॥ ೯೫೭ ॥

* ನಂದಿಯಾ ದುರ್ಗವನು ಅಂದದಲಿ ತೆಗೆದಾರು।
ಅಂದದಲಿ ತೆಗೆದ ಆರನೆಯ ವರುಷಕ್ಕೆ।
ಬಂದಾನು ಶರಣ! ಸರ್ವಜ್ಞ ॥ ೯೫೮ ॥

1 P. ಇರಿವೆದ್ದು

* ಮಾಧವನ ಪುರದಲ್ಲಿ ಕಾದು ಲಗ್ಗೆಯ ಹೂಡಿ।
ಮಾಧವನ ಪಡೆಯು ಸದೆಬಡೆದು ಕಲ್ಯಾಣ– ।
ಹಾದಿ ಹಿಡಿದಾನು ಸರ್ವಜ್ಞ ॥ ೯೫೯ ॥

* ಇಕ್ಕೇರಿ ಸೀಮೆಯಾ ಲೆಕ್ಕವನು ಹೇಳುವೆನು।
ಇಕ್ಕೇರಿಯಳಿದ ದಶವರುಷದಂತ್ಯಕ್ಕೆ ।
ಮುಕ್ಕಣ್ಣ ಬರುವ! ಸರ್ವಜ್ಞ ॥ ೯೬೦ ॥

* ಪೇಟೆಯಾ ಬಸ್ತಿಯನು ಆಟದಲಿ ಒಡೆದಾರು.।
ಆಟದಲೊಡೆದ ಆರನೆಯ ವರುಷಕ್ಕೆ ।
ನೀಟಾಗಿ ಬರುವ ಸರ್ವಜ್ಞ ॥ ೯೬೧ ॥

* ಬಸವ ಪೀಠವು ಎದ್ದು ಒಸೆದು ಸಾಣ್ಯವು ಹುಟ್ಟಿ।
ಬಸವನ ಮುದ್ರೆ ಮೆರೆದಾವು! ಧರೆಯುವಗೆ।
ವಶವಾಗದಿಹುದೆ? ಸರ್ವಜ್ಞ ॥ ೯೬೨ ॥

* ವೀರಶರಭನ ಹೊಡೆದು ಈರೈದು ವರುಷಕ್ಕೆ।
ಧೀರ ನರಸಿಂಹ ನೆಲಸಲು ಬಸವಣ್ಣ ।
ಸಾರಿ[1] ಬಂದಾನು ಸರ್ವಜ್ಞ ॥ ೯೬೩ ॥

* ಎಂದು ಬಂದಾನೆಂದು ಸಂದೇಹಗೊಳಬೇಡ ।
ತಂದೆ ಕಂದನ ಕೊಂದ ಕಡೆ.ಬೇಸಿಗೆಯ।
ಮುಂದೆ ಬಂದಾನು ಸರ್ವಜ್ಞ ॥ ೯೬೪ ॥

---

1 F. ಹಾರಿ

ವಿಜಯನಗರದ ವಿನಾಶ.

* ಅರೆದಾರು ಮೊರೆದಾರು ಉರಿದಾರು ಜಗದೊಳಗೆ ।
ಕುರಿಗಳ ತಲೆಯು ತರಿದಂತೆ ರಕ್ತವ ।
ಸುರಿದಾರು ನೋಡ! ಸರ್ವಜ್ಞ ॥ ೯೬೫ ॥

† ಹೆಣ್ಣಿನದೆಸೆಯಿಂದೆ । ರಣ್ಯದಿ ನಡೆತಂದು ।
ಹಣ್ಣಿತು ಜಗಳ ಪಶ್ಚಿಮದ ಮಂತ್ರಿಗ- ।
ಳಣ್ಣ ಬಂದಾನು ಸರ್ವಜ್ಞ ॥ ೯೬೬ ॥

* ಆನೆಗುಂದಿಯ ಅರಸ । ನಾನೆ ಕುದುರೆಯ ಕಟ್ಟ ।
ಮಾನ ಮನ್ನೆಯರು ಮಡಿಯಲು ನಗರವ ।
ಖಾನರಾಳ್ಯಾರು ಸರ್ವಜ್ಞ ॥ ೯೬೭ ॥

* ಹೆತ್ತ ತಂದೆಯಕೊಂದು । ನೃತ್ತದಿ ವಿರುಪಾಕ್ಷ ।
ಬತ್ತಲೆ ಹೆಣ್ಣಿಗೊಳಗಾಗೆ ರಾಜ್ಯವು ।
ಕತ್ತಲಾದೀತು ಸರ್ವಜ್ಞ ॥ ೯೬೮ ॥

* ಕಲ್ಲುಕೋಟೆಯುಲೊಬ್ಬ ಬಲ್ಲಿದ ಕೆರೆಕಟ್ಟ ।
ಗೊಲ್ಲಗೊಲ್ಲರಿಗೆ ಜಗಳೆದ್ದು ಜಗದಲಿ ।
ತಲ್ಲಣವೆಂದ ಸರ್ವಜ್ಞ ॥ ೯೬೯ ॥

* ಅಚ್ಯುತನು ಪಟ್ಟಕ್ಕೆ ನಿಶ್ಚಯಿಸಿನಿಂದಲ್ಲಿ ।
ಕಿಚ್ಚಿನ ಬೇಗೆಯೊರೆದಂತೆ ಜಗವೆಲ್ಲ ।
ಹುಚ್ಚೆದ್ದು ಹೋಯ್ತು ಸರ್ವಜ್ಞ ॥ ೯೭೦ ॥

* ಚೆಂದಿರಕ್ಕನಗಂಡ ಬಂದು ತಾನರಸಾಗಿ।
ಹಿಂದುಳಿದನೊತ್ತಿ ಸಂಧಾನದೊಳಿಪ್ಪ-।
ತ್ರೊಂದನಾಳುವನು! ಸರ್ವಜ್ಞ ॥ ೯೭೧ ॥

* ಚೆಂದಿರಕ್ಕನಗಂಡ ಬಂದು ನಿಂದಿರಲಾಗಿ।
ಮುಂದೆ ಅರವತ್ತು ವರುಷಕೆ ರಾಜ್ಯದ।
ಸಂಧಾನನೆಂದ! ಸರ್ವಜ್ಞ ॥ ೯೭೨ ॥

* ಹರಿಯ ಹತ್ತವತಾರ ಮರೆದವೆಂದೆನಬೇಕು।
ಕುರುಹಿನ ಕೃಷ್ಣನವತಾರ ಹನ್ನೊಂದ-।
ಕ್ಕರಿದಾದುದೆಂದ! ಸರ್ವಜ್ಞ ॥ ೯೭೩ ॥

* ಚಕ್ರಪಾಣಿಯ ದಂಡು ಸೊಕ್ಕೇರಿ ಬರುವಾಗ।
ರಕ್ಕಸರು ಕರಿಯನೊಡಗೂಡಿ ಧೊರೆಯುನು।
ತಿಕ್ಕಿಬಿಟ್ಟಾರು! ಸರ್ವಜ್ಞ ॥ ೯೭೪ ॥

* ಪಶುವನಂದಿಯು ಕಡಿದು ಬಿಸುಮಿಲ್ಲಗಳ ಮಾಡಿ।
ಹಸುಕೋಳಿ ಕುರಿಯ ಕಡಿಯಲು ಹಂಪೆಯಲಿ।
ಕಿಸುಕುಳವಾಯ್ತು ಸರ್ವಜ್ಞ ॥ ೯೭೫ ॥

* ಕುರುಬಕುಲದೊಳಗೊಬ್ಬ ಧರಿಣಿಪಾಲಕ ಹುಟ್ಟಿ।
ಉರವಣಿಸಿ ಕದನ ಹಣ್ಣಲು ಹಂಪೆಯಲಿ।
ಕರಿಯ ನಟ್ಟಿಹರು ಸರ್ವಜ್ಞ ॥ ೯೭೬ ॥

† ಅಶ್ವಪತಿ ಗಜಪತಿ ವಿಶ್ವನುತ ಹಂಪೆಯಲಿ।
ದುಸ್ಮಾನರೊಡನೆ ಹೊಡದಾಡಿ ನರಪತಿಗೆ।
ಸ್ಮಶಾನವೆಂದ ಸರ್ವಜ್ಞ ॥ ೯೭೭ ॥

* ನರರ ಬಲಿಗಳಕೊಟ್ಟು ಕುರಿಕೋಣಗಳಕಡಿದು ।
ಸರಬರ ಭಂಡಾರವನೊಡೆದು ಸರುವರ।
ಶಿರಗಳರಿದಾರು ಸರ್ವಜ್ಞ ॥ ೯೭೮ ॥

* ಸುತ್ತಯೋಜನದೊಳಗೆ ಸತ್ತಹೆಣಗಳ ಸುತ್ತು।
ಮುತ್ತಿದ್ದ ಹದ್ದು ಕಾಗೆಗಳ ರಾಶಿ ಕ-।
ಣ್ತೆತ್ತಿನೋಡೆಂದ! ಸರ್ವಜ್ಞ ॥ ೯೭೯ ॥

ಇತರ ಕಾಲಜ್ಞಾನಗಳು.

* ಸೂಳೆಯಲಿ ಮಗಹುಟ್ಟೆ ಆಳುವನು ಮುನಿಪುರುವ।
ಕಾಳಗವಿಲ್ಲದವಮಡಿಯೆ ಪುರವೆಲ್ಲ।
ಕೋಳು ಹೋದೀತು ಸರ್ವಜ್ಞ ॥ ೯೮೦ ॥

* ಉತ್ತರದ ದಿಕ್ಕಿನಲಿ ಹತ್ತೀತು ಹೆಬ್ಬೇಗೆ।
ಸುತ್ತ ವರಕೊಂಡು ಬರುವಾಗ ಜಗವೆಲ್ಲ।
ಕತ್ತಲಾದೀತು! ಸರ್ವಜ್ಞ ॥ ೯೮೧ ॥

* ಚಂದ್ರಸೂರ್ಯರ ಗ್ರಹಣ ಒಂದೇ ಮಾಸದಿಬಂದು।
ತಂದೆಯು ಕಂದನಿರಿದಂದು ಲೋಕಕ್ಕೆ।
ಬಂದೀತು ಪ್ರಳಯ! ಸರ್ವಜ್ಞ ॥ ೯೮೨ ॥

* ಪಾತಾಳ ಗಂಗೆಯನು ಓತು[1] ಚಿಪ್ಪಿಲಿನೊಗೆದು ।
ಭೂತಳವೆಲ್ಲ ಉರಿದೆದ್ದು ಮುಂದೊಬ್ಬ ।
ದಾತ ಹುಟ್ಟುವನು! ಸರ್ವಜ್ಞ ॥ ೯೮೩ ॥

* ಪಟ್ಟವಿಲ್ಲದ ಶಿಶುವು ಸೃಷ್ಟಿಯನಾಳೀತು ।
ಪಟ್ಟದರಸುಗಳು ಅಳಿಯುಲು ಜಗದೆವನ ।
ಪಟ್ಟಕಾಣಯ್ಯ ಸರ್ವಜ್ಞ ॥ ೯೮೪ ॥

* ನಂದಿವಾಹನನಲ್ಲಿ ಸಂದೇಹವಿಹುದೇಕೆ ।
ನಂದನದಲೊಂದು ಕರಿಹುಟ್ಟಿ ಶರಣರು ।
ಬಂದುದಕೆ ಕುರುಹು! ಸರ್ವಜ್ಞ ॥ ೯೮೫ ॥

* ಸೂಳೆಯಾ ಮಗನೊಬ್ಬ ಆಳುವನು ರಾಜ್ಯವನು ।
ಮೇಳದೊಳಿಪ್ಪ[2] ನಾರಿ ಮಾತನು ಕೇಳಿ ।
ಕೋಳು ಹೋದಾನು! ಸರ್ವಜ್ಞ ॥ ೯೮೬ ॥

* ಎತ್ತು ಹೇರುವನಿಂದ ತೊತ್ತಿನಾ ಮಗನಿಂದ ।
ಮುತ್ತು ಮಾರುವನ ದೆಸೆಯಿಂದ ಜಗಕೆಲ್ಲ ।
ಕುತ್ತು ಕಾಣಯ್ಯ! ಸರ್ವಜ್ಞ ॥ ೯೮೭ ॥

* ನರಸಿಂಹನವತಾರ ಹೊಲಸೆದ್ದು ಹೋದೀತು ।
ಅರಸುಗಳೆಲ್ಲ ಮತಿಗೆಟ್ಟು ಆ ರಾಜ್ಯ ।
ಸೆರೆಸೂರೆ ಕಾಣೊ! ಸರ್ವಜ್ಞ ॥ ೯೮೮ ॥

1. B. ತೂತು. 2. F. ಒಬ್ಬ.

* ಸಿಡಿಲು ಬಳಗದಕೋಟೆ ಘುಡಘುಡಿಸಿ ರಚ್ಚೆದ್ದು।
ಕಡೆಯು ಗಡಿ ಮಡಿದ ಮರುದಿನ ಕರ್ನಾಟ।
ಹುಡಿ ಹುಡಿಯೆಂದ! ಸರ್ವಜ್ಞ ॥ ೯೮೯ ॥

* ಬಂಟನಾ ತಮ್ಮನಾ। ಅಳಿಯುಗೂ ಮಾವಗೂ।
ಗಂಟಕ್ಕಿ ಜಗಳ ಹಣ್ಣಲು ಜಗಕೆಲ್ಲ।
ಕಂಟಕವೆಂದ ಸರ್ವಜ್ಞ ॥ ೯೯೦ ॥

* ನಂದಿಯಾ ಹೆಸರಿನವ। ನೊಂದು ರಾಜ್ಯವನಾಳಿ।
ಬಂಧನ ಪಟ್ಟು ಭಯಪಟ್ಟು ನೀರಿನೊಳು।
ಸಂದು ಹೋದಾನು ಸರ್ವಜ್ಞ ॥ ೯೯೧ ॥

† ಕಂದನ ಸೆರೆವಿಡಿದು ಬಂದಾನು ಪಟ್ಟಕ್ಕೆ।
ನಿಂದು ರಾಜ್ಯವನಾಳುತ ಭೋಗ[1]ದಾ-।
ನಂದದೊಳಿಹನು ಸರ್ವಜ್ಞ ॥ ೯೯೨ ॥

† ಕುಲವಿಲ್ಲದವನೊಬ್ಬ ಮಲೆನಾಡಿನೊಳು ಹುಟ್ಟಿ।
ಸಲಿದಂಡು ತಂದು ಮುರಿದಿಕ್ಕಿದಾ ಮೇಲೆ।
ನೆಲೆಗೆ ನಿಂದಾನು ಸರ್ವಜ್ಞ ॥ ೯೯೩ ॥

* ಕಂಠೀವೀರನ ಪಟವು ಉಂಟಾದ ಕಾಲಕ್ಕೆ।
ಕಂಟಕವಡರಿ ಕಡೆಯಲ್ಲಿ ಜಗದಲ್ಲಿ।
ತಂಟೆಯಾದೀತು ಸರ್ವಜ್ಞ ॥ ೯೯೪ ॥

---

1. F. ಯೋಗ.

* ಗೂಡು ಮೂರರ ಹಕ್ಕಿ ಗೂಡೇರಿ ಕಲೆ[1]ದಾವು ।
ಕಾಡು ಕಲ್ಲುಗಳು ಮೊರೆದಾವು ಕೆನ್ನೀರ ।
ಕೋಡಿ ಹರಿದಾವು ಸರ್ವಜ್ಞ ॥ ೯೯೫ ॥

* ಪಿಡಿದವನು ಕಲ್ಲಿನಾ ಪಡೆಯೊಳಗೆ ಹೊಕ್ಕುತಾ ।
ಕಡೆಗಾಲವೆನಗೆ ಬಂತೆಂದು ಕಪ್ಪವ ।
ಕೊಡುವದೊಳಿತೆಂದ! ಸರ್ವಜ್ಞ ॥ ೯೯೬ ॥

* ಭೂತನಾ ಊರುಬರಿ ಮಾತೀಲಿ ಹೋದೀತು ।
ಮಾತಿನಲಿ ಹೋದ ಮರುದಿನ ಅದಕೊಬ್ಬ ।
ದಾತ ಹುಟ್ಟುವನು! ಸರ್ವಜ್ಞ ॥ ೯೯೭ ॥

* ಕುಂಬಾರ ಹೊಟ್ಟೆಯಲಿ ಪಿಂಜಾರ ಹುಟ್ಟುವನು ।
ಕುಂಭಿ ಕುಂಭಿಗಳನಳಿಯುತ ಕುಂಭಿನಿಯೊ– ।
ಳಿಂಬುಗೊಂಡಾನು ಸರ್ವಜ್ಞ ॥ ೯೯೮ ॥

* ಮುತ್ತೊಡೆದು ಹತ್ತಿರಲು ಮತ್ತಾನೆ ಸತ್ತಿರಲು ।
ಹುತ್ತವನೇರಿ ನರಿಕೂಗೆ ಜಗಕೆಲ್ಲ ।
ಕುತ್ತುನೋಡೆಂದ! ಸರ್ವಜ್ಞ ॥ ೯೯೯ ॥

* ಸಿಂಗಳದ ದೇಶದಿಂ। ದಂಗನೆಯು ಬಂದಾಳು ।
ಕಂಗಳು ಕುರುಡು, ಕಿವಿಮೂರು, ಅವಳಂಗ– ।
ಸಂಗವೇ ಭಂಗ! ಸರ್ವಜ್ಞ ॥ ೧೦೦೦ ॥

1. F. ಕಳೆ.

ವಿವಿಧ ಪಟ್ಟಣಗಳ ನಾಶನ.

† ಆಂಗ್ಲದೇಶದಿಂಪಾ। ರಂಗೇರು ಬಂದು ಶ್ರೀ–।
ರಂಗ ಪಟ್ಟಣವ ತೆಗೆದೆಲ್ಲ ಜಗವನು।
ಭಂಗ ಪಡಿಸುವರು! ಸರ್ವಜ್ಞ ॥ ೧೦೦೧ ॥

† ಚನ್ನಪಟ್ಟಣವನೀ ತಣ್ಣಗೆಂದೆನಬೇಡ।
ಚಿಣ್ಣೆಯಿಂಕೋಲು ಚಿಮ್ಮಿದಂತಾ ಪಟ್ಣ।
ನುಣ್ಣಗಾಗುವದು! ಸರ್ವಜ್ಞ ॥ ೧೦೦೨ ॥

* ತಾರಣ ಸಂವತ್ಸರದಿ ಕಾರಣಗಳಾದಾವು।
ನಾರಣಾಸಿಯಲಿ ಗುಡಿಗಟ್ಟಿ ಬೇಲೂರು।
ತೋರಣದಿ ತುಂಬ! ಸರ್ವಜ್ಞ ॥ ೧೦೦೩ ॥

* ಸುತ್ತಕೋಟೆಯುಮೇಲೆ ಮತ್ತೆ ಕೋಟೆಯು ಹಿಡಿಸಿ।
ಮುತ್ತಯ್ದೆ ಮಗನು ಅಳಿದಾನು ಬಿದರೂರು।
ಎತ್ತಿ ಹೋದೀತು ಸರ್ವಜ್ಞ ॥ ೧೦೦೪ ॥

† ಬೊಮ್ಮನಾಗಿರಿಯಲ್ಲಿ ಹೆಮ್ಮಗನು ತಂದೆಯೂ।
ಹಮ್ಮಿನವರನ್ನು ಮುರಿಯಲು ಮಲೆನಾಡು।
ನಿರ್ಮೂಲವಕ್ಕು ಸರ್ವಜ್ಞ ॥ ೧೦೦೫ ॥

* ರಂಗಪಟ್ಟಣದೊಳಗೆ ರಂಗಭಕ್ತನು ಹುಟ್ಟಿ।
ರಂಗನಪೂಜೆ ಭಂಗವಾಗಲು ಪಟ್ಣ।
ಮಂಗನಾದೀತು ಸರ್ವಜ್ಞ ॥ ೧೦೦೬ ॥

† ಆನೆಗನ ಹಳ್ಳಿಯಲಿ ವಾನರನ ಪೆಸರವಗೆ ।
ಖಾನ ಖಾನರನು ಕೆಡಹುತ ಪಟ್ಟಣಕೆ ।
ತಾನೆ ಬಂದಾನು ಸವಜ್ಞ ॥ ೧೦೦೭ ॥

† ಚೋಳದಾ ದೇಶದಿಂ ಬೋಳರು ಬಂದಾರು ।
ಮೇಳಯ್ಸಿ ಅರಸನೊಡಗೂಡಿ ಬಸ್ತಿಯ ।
ಹಾಳು ಮಾಡುವರು! ಸರ್ವಜ್ಞ ॥ ೧೦೦೮ ॥

* ಕಾವೇರಿ ಮಧುರೆಯಲಿ ದೇವರಾ ಸಭೆಗೂಡಿ ।
ಶಿವಕಂದ ಶುದ್ಧಭಾವದ ಬಸವಂತ ।
ದೇವನು ಬರುವ! ಸರ್ವಜ್ಞ ॥ ೧೦೦೯ ॥

* ದಕ್ಷಿಣದ ಅರಸರು ಸೊಕ್ಕಿನಾ ತುರಕರು ।
ಸಿಕ್ಕಿ ಸಿಕ್ಕಿಳಿದು ಜಗವೆಲ್ಲ ವಶವಹುದು ।
ಮುಕ್ಕಣ್ಣಗೆಂದ ಸರ್ವಜ್ಞ ॥ ೧೦೧೦ ॥

ಆಂಗ್ಲೇಯರು.

† ಹೆಂಗಸರ ಹೋಲುವಾ ಮಂಗನ ತಲೆಯವರು ।
ಸಂಗಮಕೆ ಬಂದು ನಿಂದಿರುತ ರಾಜ್ಯವನು ।
ನುಂಗಿ ಬಿಟ್ಟಾರು ಸರ್ವಜ್ಞ ॥ ೧೦೧೧ ॥

† ಮಂಗ ಮುಖಿಗಳು ಶ್ರೀ। ರಂಗಕ್ಕೆ ಅಯ್ತಂದು ।
ಭಂಗವ ಪಡಿಸಿ ತೆಗೆದಾರು ಉತ್ತರದಿ ।
ಸಂಗವಾದಾರು ಸರ್ವಜ್ಞ ॥ ೧೦೧೨ ॥

† ರಂಗನಾ ಪಟ್ಟಣಕೆ ಹೆಂಗಸರ ಹೋಲುವಾ ।
ಮಂಗನ ಮುಖದ ಪುಣ್ಯಾತ್ಮರಯ್ತಂದು ।
ಸಿಂಗನಳಿದಾರು ಸರ್ವಜ್ಞ ॥ ೧೦೧೩ ॥

† ಕಾಲು ಕುಪ್ಪಸದವರು ಮೇಲೆ ಟೊಪ್ಪಿಗೆಯುವರು ।
ಬಾಲೆಯರ ಮುಖದ ಕಪಿಗಳು ಶ್ರೀರಂಗ ।
ನಾಳಹೋದಾರು ಸರ್ವಜ್ಞ ॥ ೧೦೧೪ ॥

ರೈಲು.

† ಪಂಚಲೋಹದ ಕಂಬಿ ಮುಂಚೆ ಭೂಮಿಗೆ ಹಾಸಿ ।
ಕಂಚಿನ ರಥವ ನಡಿಸ್ಯಾರು ಅದರೋಟ ।
ಮಿಂಚು ಹೊಡೆದಂತೆ ಸರ್ವಜ್ಞ ॥ ೧೦೧೫ ॥

ತಂತಿ.

† ಅಲ್ಲಿಗಲ್ಲಿಗೆ ಕಲ್ಲು ಕಲ್ಲಿನಾ ಕಡೆ ತಂತಿ ।
ಬಲ್ಲಿದರ ರಥವು ಹೊಗೆಯುತ ಬರಲದರ ।
ಸೊಲ್ಲು ಕೇಳೆಂದ! ಸರ್ವಜ್ಞ ॥ ೧೦೧೬ ॥

ಉಗಿಬಂಡಿ.

† ಎತ್ತು ಇಲ್ಲದ ಬಂಡಿ ಒತ್ತೊತ್ತಿ ನಡಿಸುವರು ।
ಸುತ್ತಲೂ ರಾಜ್ಯವಾಳುವರು ಕಡೆಯಲಿ ।
ಮೃತ್ಯು ಹೊಂದುವರು! ಸರ್ವಜ್ಞ ॥ ೧೦೧೭ ॥

## ೧೯. ಲೇಸು ಪದ್ಧತಿ.

---

* ಹಂಗಿನ ಹಾಲಿನಿಂ । ದಂಬಲಿಯ ತಿಳಿಲೇಸು ।
ಭಂಗಬಟ್ಟುಂಬ ಬಿಸಿಯಿಂದ ತಿರಿವರ ।
ಸಂಗವೇ ಲೇಸು ಸರ್ವಜ್ಞ ॥ ೧೦೧೮ ॥

* ಜಾಜಿಯಾ ಹೂ ಲೇಸು । ತೇಜಿವಾಹನಲೇಸು ।
ರಾಜಮಂದಿರದೊಳಿರಲೇಸು ತಪ್ಪುಗಳ ।
ಮಾಜುವದೆ ಲೇಸು ಸರ್ವಜ್ಞ ॥ ೧೦೧೯ ॥

* ಸುಟ್ಟ ಬಿಳಸಿಯು ಲೇಸು ಅಟ್ಟಬೋನವು ಲೇಸು ।
ಕಟ್ಟಾಣಿ ಸತಿಯು ಇರಲೇಸು ನಡುವಿಗೆ ।
ದಟ್ಟಿಲೇಸೆಂದ ಸರ್ವಜ್ಞ ॥ ೧೦೨೦ ॥

* ಹಸಿಯು ಅಲ್ಲವು ಲೇಸು ಬಿಸಿಯು ಪಳಿದೆಯು ಲೇಸು ।
ಹುಸಿಲೇಸು ಕಳ್ಳ ಹೆಣ್ಣಿಗೆ ಬಯ್ಗಿನಾ ।
ಬಿಸಿಲು ಲೇಸೆಂದ ಸರ್ವಜ್ಞ ॥ ೧೦೨೧ ॥

* ಉದ್ದಿನಾ ಒಡೆಲೇಸು ಬುದ್ಧಿಯಾ ನುಡಿಲೇಸು ।
ಬಿದ್ದೊಡವೆ ಕಯ್ಗೆ ಬರಲೇಸು ಶಿಶುವಿಗೆ ।
ಮುದ್ದಾಟಲೇಸು ಸರ್ವಜ್ಞ ॥ ೧೦೨೨ ॥

* ಅಳಿಲೇಸು ಗೊಲ್ಲಂಗೆ ಮಳಿಲೇಸು ಕಳ್ಳಂಗೆ ।
ಬಲೆಲೇಸು ಮೀನು ಹಿಡಿವಗೆ, ಕುರುಡಂಗೆ ।
ಸುಳಿದಾಟಲೇಸು ಸರ್ವಜ್ಞ ॥ ೧೦೨೩ ॥

* ಅಕ್ಕಿಯೋಗರ ಲೇಸು ಮೆಕ್ಕಿಹಿಂಡಿಯು ಲೇಸು[1] ।
ಮಕ್ಕಳನು ಹೆರುವ ಸತಿಲೇಸು ಜಗಕೆಲ್ಲ ।
ರೊಕ್ಕಲೇಸೆಂದ ಸರ್ವಜ್ಞ ॥ ೧೦೨೪ ॥

* ಮಜ್ಜಿಗೂಟಕೆ ಲೇಸು ಮಜ್ಜನಕೆ ಮಡಿಲೇಸು[2] ।
ಕಜ್ಜಾಯ ತುಪ್ಪ ಉಣಲೇಸು ಮನೆಗೊಬ್ಬ ।
ಅಜ್ಜಲೇಸೆಂದ ಸರ್ವಜ್ಞ ॥ ೧೦೨೫ ॥

† ಹಸಿದರಂಬಲಿ ಲೇಸು ಬಿಸಿಲಲ್ಲಿ ಕೊಡೆಲೇಸು ।
ಬಸುರಿನ ಸೊಸೆಯು ಇರಲೇಸು[3] ಸಭೆಗೊಬ್ಬ ।
ರಸಿಕನೇ ಲೇಸು ಸರ್ವಜ್ಞ ॥ ೧೦೨೬ ॥

† ಹುತ್ತ ಹಾವಿಗೆಲೇಸು ಮುತ್ತು ಕೊರಳಿಗೆ ಲೇಸು ।
ಕತ್ತೆಯ ಹೇರು ತರಲೇಸು ತುಪ್ಪದಾ ।
ತುತ್ತುಲೇಸೆಂದ ಸರ್ವಜ್ಞ ॥ ೧೦೨೭ ॥

* ಒಸುರುವಾ ತೊರೆಲೇಸು ಹಸನಾದ ಕೆರೆಲೇಸು ।
ಪಸರವಿರುವವನ ನೆರೆಲೇಸು ಸಾಗರವು ।
ವಸುಧಿಗೆಲೇಸು ಸರ್ವಜ್ಞ ॥ ೧೦೨೮ ॥

* ಜಾಣೆಯಾ ನುಡಿಲೇಸು ವೀಣೆಯಾಸ್ವರಲೇಸು ।
ಮಾಣದೆ ವದನ ಶುಚಿಲೇಸು ಕೂರ್ಪವರ[4] ।
ಕಾಣುವದೆಲೇಸು ಸರ್ವಜ್ಞ ॥ ೧೦೨೯ ॥

---

1. ಶಕ್ಕರ ಕಳಿ. 2. F. ಸಜ್ಜೆ ಲಿಂಗಕೆ ಲೇಸು 3. G, S. ಒಸುರಿನಿಂಬಂದ ಮಗ ಲೇಸು. V, ಹೆಸರಿಗೆ ಬಂದ ಮಗಲೇಸು. 4. D. ಕುರಿತವರ.

† ಹರಳು ಉಂಗುರಲೇಸು ಹುರಳಿ ಕುದುರೆಗೆಲೇಸು ।
ಮರಳು ನೆಲ ತೆಂಗಿರಲೇಸು ಸ್ತ್ರೀಯರಿಗೆ ।
ಕುರುಳು ಲೇಸೆಂದ ಸರ್ವಜ್ಞ ॥ ೧೦೩೦ ॥

* ಹರಕು ಹೋಳಿಗೆಲೇಸು ಮುರಕ ಹಪ್ಪಳಲೇಸು ।
ಕುರು ಕುರು ಕಡಲೆ ಬಲುಲೇಸು ಪಾಯಸದ ।
ಸುರುಕು ಲೇಸೆಂದ ಸರ್ವಜ್ಞ ॥ ೧೦೩೧ ॥

† ಕರಿಕೆ ಕುದುರೆಗೆಲೇಸು ಮುರುಕು ಹೆಣ್ಣಿಗೆಲೇಸು ।
ಅರಿಕೆಯುಳ್ಳವರ ಕೆಳೆ ಲೇಸು ಪಶುವಿಗೆ ।
ಗೊರಸು ಲೇಸೆಂದ ಸರ್ವಜ್ಞ ॥ ೧೦೩೨ ॥

† ಕಾಸು ವೆಚ್ಚಕೆಲೇಸು ದೋಸೆ ಹಾಲಿಗೆ ಲೇಸು ।
ಕೂಸಿಗೆ ತಾಯಿಯಿರಲೇಸು ಹರೆಯದಗೆ ।
ಮೀಸೆ ಲೇಸೆಂದ ಸರ್ವಜ್ಞ ॥ ೧೦೩೩ ॥

* ಗಿಡ್ಡ ಹೆಂಡತಿಲೇಸು ಮಡ್ಡಿ ಕುದುರೆಗೆ ಲೇಸು ।
ಬಡ್ಡಿಯ ಸಾಲ ಕೊಡಲೇಸು ಹಿರಿಯರಿಗೆ ।
ಗಡ್ಡಲೇಸೆಂದ ಸರ್ವಜ್ಞ ॥ ೧೦೩೪ ॥

* ಮಂಜಿನಿಂ ಮಳೆಲೇಸು ಪಂಜು ಇರುಳಲಿ ಲೇಸು ।
ಪಂಜರವು ಲೇಸು ಅರಗಿಳಗೆ ಜಾಡಂಗೆ ।
ಗಂಜಿಲೇಸೆಂದ ಸರ್ವಜ್ಞ ॥ ೧೦೩೫ ॥

* ಗಾಜು ನೋಟಕೆಲೇಸು ತೇಜಿ ಏರಲುಲೇಸು ।
ರಾಜಾಂಗ ವಸ್ತ್ರ ಉಡಲೇಸು ಊಟಕ್ಕೆ ।
ರಾಜಾನ್ನಲೇಸು ಸರ್ವಜ್ಞ ॥ ೧೦೩೬ ॥

† ಜ್ಞಾನಿಗೆ ಗುಣಲೇಸು ಮಾನಿನಿಗೆ ಪತಿಲೇಸು ।
ಸ್ವಾನುಭವಿಗಳ ನುಡಿಲೇಸು ಎಲ್ಲಕು ನಿ- ।
ಧಾನಿಯೇ ಲೇಸು ಸರ್ವಜ್ಞ ॥ ೧೦೩೭ ॥

* ತುಪ್ಪ ಬಿಗರಲೇಸು ಉಪ್ಪರಿಗೆ ಮನೆಲೇಸು ।
ಅಪ್ಪಬಾರೆಂಬ ಮಗಲೇಸು ಊರಲಿ ।
ಚಿಪ್ಪಿಗನುಲೇಸು ಸರ್ವಜ್ಞ ॥ ೧೦೩೮ ॥

† ಕಂಚಿಯಾ ಫಲಲೇಸು ಮಿಂಚು ಮುಗಿಲಿಗೆಲೇಸು ।
ಕೆಂಚನ ಸತಿಯು ಇರಲೇಸು ಊರಿಗೆ ।
ಪಂಚಾಳಲೇಸು ಸರ್ವಜ್ಞ ॥ ೧೦೩೯ ॥

† ಎಮ್ಮೆ ಹೈನವು ಲೇಸು ಕಮ್ಮನಾಂಬ್ರವುಲೇಸು ।
ಸುಮ್ಮನೆ ಒಡವೆ ಬರಲೇಸು ಊರಿಗೆ ।
ಕಮ್ಮಾರಲೇಸು ಸರ್ವಜ್ಞ ॥ ೧೦೪೦ ॥

† ಹಡಗು ಗಾಳಿಗೆಲೇಸು ಗುಡುಗು ಮಳೆಬರಲೇಸು ।
ಒಡಹುಟ್ಟಿದವರು ಇರಲೇಸು ಊರಿಗೆ ।
ಬಡಿಗಲೇಸೆಂದ ಸರ್ವಜ್ಞ ॥ ೧೦೪೧ ॥

† ಅಂಬು ಬಿಲ್ಲಿಗೆ ಲೇಸು ಇಂಬು ಕೋಣೆಗೆಲೇಸು ।
ಸಂಬಾರಲೇಸು ಸಾರಿಗೆ ಊರಿಗೆ ।
ಕುಂಬಾರಲೇಸು ಸರ್ವಜ್ಞ ॥ ೧೦೪೨ ॥

* ಅಗಸೆ ಊರಿಗೆಲೇಸು ಸೊಗಸು ಬಾಳುವೆಲೇಸು ।
ಬೊಗಸೆಯುಳ್ಳವರ ಗೆಣೆಲೇಸು ಊರಿಗೆ ।
ಅಗಸಲೇಸೆಂದ ಸರ್ವಜ್ಞ ॥ ೧೦೪೩ ॥

† ಜಾಣ ಜಾಣಗೆಲೇಸು ಕೋಣ ಕೋಣಗೆ ಲೇಸು ।
ನಾಣ್ಯವು ಲೇಸು ಜನರಿಗೆ ಊರಿಂಗೆ ।
ಗಾಣಿಗನುಲೇಸು ಸರ್ವಜ್ಞ ॥ ೧೦೪೪ ॥

† ಅಕ್ಕಿಬೋನವು ಲೇಸು ಚಿಕ್ಕ ಸೆರೆಬಿಡಲೇಸು ।
ಹಕ್ಕಿಗಳೊಳಗೆ ಗಿಳಿಲೇಸು ಊರಿಗೊ- ।
ಬ್ಬಕ್ಕ ಸಾಲೆಂದ ಸರ್ವಜ್ಞ ॥ ೧೦೪೫ ॥

## ೨೦. ನಿಂದಾಪದ್ಧತಿ.

* ಕಣಿಕ ನೆನೆದರೆ ಹೊಲ್ಲ; ಕುಣಿಕೆ ಹರಿದರೆ ಹೊಲ್ಲ; ।
ಕಣುಕಟ್ಟು ಹೊಲ್ಲ ಅರಿದರಲಿ; ಚಿಕ್ಕೆಗ- ।
ಳೆಣಿಸುವದೆ ಹೊಲ್ಲ ಸರ್ವಜ್ಞ ॥ ೧೦೪೬ ॥

* ಹರಳುಹಾದಿಗೆ ಹೊಲ್ಲ ಮರುಳ ಮನೆಯೊಳು ಹೊಲ್ಲ; ।
ಇರುಳೊಳು ಪಯಣ ಬರಹೊಲ್ಲ ಆಗದಲಿ ।
ಸರಸವೇ ಹೊಲ್ಲ ಸರ್ವಜ್ಞ ॥ ೧೦೪೭ ॥

ಉಪ್ಪಿಲ್ಲದುಣಹೊಲ್ಲ; ಮುಪ್ಪು, ಬಡತನ ಹೊಲ್ಲ; ।
ತಪ್ಪನು ನುಡಿವ ಸತಿಹೊಲ್ಲ; ಒಪ್ಪಿರಲು ।
ತಪ್ಪುವದೆ ಹೊಲ್ಲ ಸರ್ವಜ್ಞ ॥ ೧೦೪೮ ॥

ಸಂತೆಯಾ ಮನೆಹೊಲ್ಲ ಚಿಂತೆಯಾತನು ಹೊಲ್ಲ ।
ಎಂತೊಲ್ಲದನಳ ರತಿಹೊಲ್ಲ ಬಾಳುವರಿ- ।
ಗಂತಕನೆ ಹೊಲ್ಲ ಸರ್ವಜ್ಞ ॥ ೧೦೪೯ ॥

ಸನ್ತೆಸಾಲಕೆ ಹೊಲ್ಲ ಕೊನ್ತಡೊಂಕಲು ಹೊಲ್ಲ ।
ಬೊನ್ತೆಹಚ್ಚಡವ ಹೊದೆಹೊಲ್ಲ ಆಗಲು ।
ಚಿನ್ತೆಯೇ ಹೊಲ್ಲ ಸರ್ವಜ್ಞ ॥ ೧೦೫೦ ॥

ನೋಟಿತ್ತ ಕೊಳಹೊಲ್ಲ ನೋಟಬೇಟವು ಹೊಲ್ಲ ।
ತಾಟಗಿತ್ತಿಯ ನೆರೆಹೊಲ್ಲ ಕಜ್ಜಿಯು ।
ಕಾಟವೇ ಹೊಲ್ಲ ಸರ್ವಜ್ಞ ॥ ೧೦೫೧ ॥

ವಿಸಹೊಲ್ಲ ಇಟ್ಟಿಯಾ ಕುಸಿಹೊಲ್ಲ ಕಟ್ಟಡದ ।
ಹುಸಿಹೊಲ್ಲ ಕೂರ್ಪರಿಡೆಯುಲಿ ಬೆಳಗಿನಾ ।
ಬಿಸಿಲು ಹೊಲ್ಲೆಂದ ಸರ್ವಜ್ಞ ॥ ೧೦೫ ॥

ಹೆಂದೆ ಭಟರೊಳು ಹೊಲ್ಲ ನಿಂದೆಯಾ ನುಡಿಹೊಲ್ಲ; ।
ಕುಂದುಗುಲದವಳ ತರಹೊಲ್ಲ ಉರಿಯೊಳು ।
ನಿಂದಿರಲು ಹೊಲ್ಲ ಸರ್ವಜ್ಞ ॥ ೧೦೫೩ ॥

† ಬರಕೆ ಬುತ್ತಿಯು ಹೊಲ್ಲ ನೆರಕಿಯಾ ಮನೆಹೊಲ್ಲ ।
ಕರೆ ಕರೆ ಕೊಳು ತಿನ ಹೊಲ್ಲ ಕಜ್ಜಿಯು ।
ಕೆರಕೊಳ್ಳ ಹೊಲ್ಲ ಸರ್ವಜ್ಞ ॥ ೧೦೫೪ ॥

* ಹುತ್ತ ಹಿತ್ತಲು ಹೊಲ್ಲ ಬೆತ್ತ ಭೂತಕೆ ಹೊಲ್ಲ ।
ಒತ್ತೆಗೊಂಬಳಿಗೆ ತುರಿಹೊಲ್ಲ ಒಣಕೂಳ ।
ತುತ್ತು ತಾಹೊಲ್ಲ ಸರ್ವಜ್ಞ ॥ ೧೦೫೫ ॥

† ಬಿತ್ತದಾ ಹೊಲಹೊಲ್ಲ ಮೆತ್ತದಾ ಮನೆಹೊಲ್ಲ ।
ಚಿತ್ತ ಬಂದತ್ತ ತಿರುಗುವ ಮಗಹೊಲ್ಲ ।
ಬತ್ತಲಿರಹೊಲ್ಲ ಸರ್ವಜ್ಞ ॥ ೧೦೫೬ ॥

† ಪೀಠ ಮೂಢಗೆ ಹೊಲ್ಲ ಕೀಟ ನಿದ್ರೆಗೆ ಹೊಲ್ಲ ।
ತೀಟಯೇ ಹೊಲ್ಲ ಕಜ್ಜಿಯು, ದುರ್ಜನರ ।
ಕಾಟವೇ ಹೊಲ್ಲ ಸರ್ವಜ್ಞ ॥ ೧೦೫೭ ॥

---

## ೨೧ ನೀತಿ ಪದ್ಧತಿ.

---

### ಧರ್ಮನೀತಿ.

#### ಪಾಪಪುಣ್ಯ.

* ಪುಣ್ಯಪಾಪಗಳೆಂಬ ತಿಣ್ಣ ಭೇದಗಳಿಂದ ।
ತಣ್ಣಗೆ ಜಗವು ನಡೆದಿಹುದಲ್ಲದಡೆ ।
ನುಣ್ಣಗಾಗಿಹುದು! ಸರ್ವಜ್ಞ ॥ ೧೦೫೮ ॥

* ಮುನ್ನ ಮಾಡಿದ ಪಾಪ  ಹೊನ್ನಿನಿಂ ಪೋಪುದೇ ।
ಹೊನ್ನಿನ ಪುಣ್ಯವದು ಬೇರೆ ಪಾಪತಾ ।
ಮುನ್ನಿನಂತಿಹುದು! ಸರ್ವಜ್ಞ || ೧೦೫೯ ||

† ಕಿರಿಯಂದಿನಾ ಪಾಪ  ನೆರೆ ಬಂದು ಹೋದೀತೆ? ।
ಅರಿವಿಗೆ ಹಿರಿದು ಕಿರಿದಿಲ್ಲ ಇದನು ನೀ- ।
ಸರಿದು ನೋಡೆಂದ ಸರ್ವಜ್ಞ || ೧೦೬೦ ||

† ಹಿಂದೆ ಪಾಪವ ಮಾಡಿ  ಮುಂದೆ ಪುಣ್ಯವು ಹೇಗೆ? ।
ಹಿಂದು ಮುಂದರಿದೆ ನಡೆದರೆ ನರಕದಿ ।
ಬೆಂದು ಸಾಯುವದು! ಸರ್ವಜ್ಞ || ೧೦೬೧ ||

* ಹರೆಯಲ್ಲಿನಾ ಪಾಪ  ಕೆರೆಯಲ್ಲಿ ಪೋಪುದೇ ।
ವರೆಗಲ್ಲಿನಂತೆ ವಿಧಿಯಿರಲು ನೀತಿಯು ।
ಇರವು ಬೇರೆಂದ ಸರ್ವಜ್ಞ || ೧೦೬೨ ||

* ಅರಿದೆ ಮಾಡಿದ ಪಾಪ  ಅರಿತರದು ತನಗೊಳಿತು ।
ಅರಿತರಿತು ಮಾಡಿ ಮರೆತರೆ ತನ್ನತಾ- ।
ನಿರಿದು ಕೊಂಡಂತೆ ಸರ್ವಜ್ಞ || ೧೦೬೩ ||

| ಅರಿತು ಮಾಡಿದ ಪಾಪ  ಮರೆತರದು ಪೋಪುದೇ ।
ಮರೆತರೆ ಮರವ ಬಿಡಿಸುವದು ಕೊರತೆಯಿದ- ।
ನರಿತು ನೋಡೆಂದ ಸರ್ವಜ್ಞ || ೧೦೬೪ ||

† ಪುಣ್ಯತನಗುಳ್ಳನಕ ಮನ್ನಣೆಯು ಪಿರಿದಕ್ಕು।
ಹಣ್ಣಿದ ಕಾರ್ಯ ಫಲವಕ್ಕು ಹಿಡಿದಿರ್ದ।
ಮಣ್ಣು ಶೊನ್ನಕ್ಕು ಸರ್ವಜ್ಞ ॥ ೧೦೬೫ ॥

॥ ತೋಡಿರ್ದ ಭಾವಿಗೆ| ಕೂಡಿರ್ದ ಜಲಸಾಕ್ಷಿ।
ಮಾಡಿದ್ದಕೆಲ್ಲ ಮನಸಾಕ್ಷಿ ಸರ್ವಕು।
ಮೃಡನೆ ತಾ ಸಾಕ್ಷಿ ಸರ್ವಜ್ಞ ॥ ೧೦೬೬ ॥

ಸತ್ಯ.

† ಸತ್ಯನುಡಿದತ್ತರೂ ಸುತನೊಬ್ಬ ಸತ್ತರೂ।
ಸತ್ಯವ ಬಿಡದ ಹರಿಶ್ಚಂದ್ರ ಜಗದೊಳು।
ಸ್ತುತ್ಯನಾಗಿಹನು! ಸರ್ವಜ್ಞ ॥ ೧೦೬೭ ॥

† ಸತ್ಯವೆಂಬುದು ತಾನು ನಿತ್ಯದಲಿ ಮೆರೆದಿಹುದು।
ಮಿಥ್ಯಸತ್ಯವನು ಜರೆದರೂ ಇಹಪರದಿ।
ಸತ್ಯಕ್ಕೆ ಜಯವು! ಸರ್ವಜ್ಞ ॥ ೧೦೬೮ ॥

* ಸತ್ಯರಿಗೆ ಧರೆಯೆಲ್ಲ ಮಸ್ತಕದಿ ಎರಗುವದು।
ಹೆತ್ತ ತಾಯ್ಮಗನ ಕರೆವಂತೆ ಶಿವನವರ-।
ನೆತ್ತಿಕೊಂಬುವನು! ಸರ್ವಜ್ಞ ॥ ೧೦೬೯ ॥

* ಕುಂದನಳಿದವ ದೈವ ಬಂಧ ಕಳೆದವ ದೈವ।
ನೊಂದು ತಾ ನೋಯಿಸದವ ದೈವ ಹುಸಿಯುದ-।
ನಿಂದು ಧರನೆಂದ! ಸರ್ವಜ್ಞ ॥ ೧೦೭೦ ॥

ಸುಳ್ಳು.

* ಹುಸಿವ ನಿಂದಯ್ಯುನ್ನರು । ಪಶುವ ಕೊಂದವ ಲೇಸು ।
ಶಿಸುವಧೆಯ ಮಾಡಿದರೆ ಲೇಸು ಮರೆಯಲಿ- ।
ದ್ದೆಸೆದರೂ ಲೇಸು ಸರ್ವಜ್ಞ ॥ ೧೦೭೧ ॥

* ಹಾಲುಳ್ಳ ಹಸು ಲೇಸು ಶೀಲುಳ್ಳ ಶಿಸುಲೇಸು ।
ಬಾಲೆ ಸಜ್ಜನೆಯು ಬಲುಲೇಸು ಹುಸಿಯದ ।
ನಾಲಿಗೆಯೆ ಲೇಸು ಸರ್ವಜ್ಞ ॥ ೧೦೭೨ ॥

* ಆಡಿ ಹುಸಿಯಲು ಹೊಲ್ಲ ಕೂಡಿ ತಪ್ಪಲು ಹೊಲ್ಲ ।
ಕಾಡುವನೆಂಟ ಬರಹೊಲ್ಲ ಸಟೆಯತಾ- ।
ನಾಡುವನೆ ಹೊಲ್ಲ ಸರ್ವಜ್ಞ ॥ ೧೦೭೩ ॥

* ಕಾಲು ಮುರಿದರೆ ಹೊಲ್ಲ ಬಾಲೆ ಮುದುಕಗೆ ಹೊಲ್ಲ ।
ನಾಲಿಗೆಯಲೆರಡು ನುಡಿಹೊಲ್ಲ, ಸಮರದಿ ।
ಸೋಲುವದೆ ಹೊಲ್ಲ ಸರ್ವಜ್ಞ ॥ ೧೦೭೪ ॥

* ದಿಟವೆ ಪುಣ್ಯದ ಪುಂಜ ಸಟೆಯೆ ಪಾಪದ ಬೀಜ ।
ಕುಟಿಲ ವಂಚನೆಗೆ ಪೋಗದೆ ನಿಜದಿ ಪಿಡಿ[1] ।
ಘಟವೆನೆಚ್ಚರದಿ[2] ಸರ್ವಜ್ಞ ॥ ೧೦೭೫ ॥

* ಹುಸಿಯ ಪೇಳ್ವದರಿಂದ ಹಸಿದು ಸಾವುದು ಲೇಸು ।
ಹುಸಿದು ಮೆರೆಯುವನ ಬದುಕಿಂದ ಹಂದಿಯ ।
ಇಸಿಯು ಲೇಸೆಂದ ಸರ್ವಜ್ಞ ॥ ೧೦೭೬ ॥

---

1 & 2. A. ಕುಟಿಲ ಕುಮಂತ್ರ ನರಕದ ಹಾದಿಯಿದು । ನೋಡಿನಡೆಯೆಂದ.

† ಹುಸಿವಾತ ದೇಗುಲದ ದೆಸೆಯತ್ತ ಮುಂತಾಗಿ।
ನೊಸಲಿತ್ತಿ ಕರವ ಮುಗಿದರೆ ಇಷ್ಟುದ್ದ।
ಹುಸಿವನೆಂದರಿಗು ಸರ್ವಜ್ಞ ॥ ೧೦೭೭ ॥

ಕಳ್ಳತನ

† ಕಷ್ಟಗಳು ಓಡಿಬರ। ಲಿಷ್ಟಕ್ಕೆ ಭಯವೇಕೆ।
ಶಿಷ್ಟಂಗೆ ತೊದಲು ನುಡಿಯೇಕೆ ಕಳ್ಳಂಗೆ।
ದಟ್ಟಡಿಯದೇಕೆ ಸರ್ವಜ್ಞ ॥ ೧೦೭೮ ॥

† ನಿದ್ದೆಯಲಿ ಬುದ್ಧಿಲ್ಲ ಭದ್ರೆಗೆ ತಾಯಿಲ್ಲ।
ಕದ್ದುಕೊಂಬಗೆ ಬದುಕಿಲ್ಲ ಮರಣಕ್ಕೆ।
ಮದ್ದುಗಳಿಲ್ಲ ಸರ್ವಜ್ಞ ॥ ೧೦೭೯ ॥

* ಕೆಂಪಿನಾ ದಾಸಾಳ ಕೆಂಪುಂಟು, ಕಂಪಿಲ್ಲ;।
ಕೆಂಪಿನವರಲ್ಲಿ ಗುಣವಿಲ್ಲ; ಕಳ್ಳತಾ।
ಕೆಂಪಿರ್ದಡೇನು? ಸರ್ವಜ್ಞ ॥ ೧೦೮೦ ॥

* ಒಳ್ಳೆಯನು ಇರದೂರು ಕಳ್ಳನೊಡನಾಟವೂ।
ಸುಳ್ಳನ ಮಾತು ಇವು ಮೂರು ಕೆಸರೊಳಗೆ।
ಮುಳ್ಳುತುಳಿದಂತೆ ಸರ್ವಜ್ಞ ॥ ೧೦೮೧ ॥

† ಕಳ್ಳತನ ಕಪಟವು ಸುಳ್ಳಿನಾ ಮೂಲವು।
ಕಳ್ಳ, ಕೈಗಳ್ಳ, ವೈಗಳ್ಳನೊಮ್ಮೆ ತಾ।
ಹಳ್ಳಕಾಣುವನು! ಸರ್ವಜ್ಞ ॥ ೧೦೮೨ ॥

ಅನ್ಯಾಯ.

* ನ್ಯಾಯದಲಿ ನಡೆದು ಅ । ನ್ಯಾಯವು ಬಂದಿಹುದು ।
ನಾಯಿಗಳಾರು ಇರುವನಕ ನರರೊಂದು ।
ನಾಯಿ ಹಿಂಡೆಂದ! ಸರ್ವಜ್ಞ || ೧೦೪೩ ||

ಜೀವ ಹಿಂಸೆ.

* ತಾಯ ಮುಂದಣ ಸಿಸುವ ತಾಯನಗಲಿಸಿ ಕೊಲ್ಲ ।
ಸಾಯಲದರಮ್ಮನ ಕೊಲುವನು ತನ್ನಯ ।
ತಾಯಕೊಂದಂತೆ! ಸರ್ವಜ್ಞ || ೧೦೪೪ ||

* ಕೊಂದು ತಿನ್ನುವ ಕಂದ ಕೊಂದನೆಂದೆನಬೇಡ ।
ನೊಂದಂತೆ ನೋವನರಿಯದ ನರನಂದು ।
ಕೊಂದಿಹುದೆ ನಿಜವು! ಸರ್ವಜ್ಞ || ೧೦೪೫ ||

ನರ ಹತ್ಯ.

† ನರಹತ್ಯವೆಂಬುವದು ನರಕದಾ ನಡುಮನೆಯು ।
ಗುರು, ಶಿಶು, ನರನ ಹತ್ಯವ ಮಾಡಿದನ ।
ಇರವು ರೌರವವು ಸರ್ವಜ್ಞ || ೧೦೪೬ ||

ಕಲಹ.

† ಬಲವಂತರಾದವರು ಕಲಹದಿಂ ಕೆಟ್ಟಿಹರು ।
ಬಲವಂತ ಬಲಿಯು, ದುರ್ಯೋಧನಾದಿಗಳು ।
ಛಲದಲುಳಿದಿಹರೆ, ಸರ್ವಜ್ಞ || ೧೦೪೭ ||

ಹಾದರ.

* ಅಂದು ಕಾಮನ ಹರನು ಕೊಂದನೆಂಬುದು ಹುಸಿಯು ।
ಇಂದು ವದನೆಯರ ಕಡೆಗಣ್ಣ ನೋಟದಿ ।
ನಿಂದಿಹನು ಸ್ಮರನು ಸರ್ವಜ್ಞ || ೧೦೪೮ ||

* ಮುಟ್ಟದಂತಿರಬೇಕು ಮುಟ್ಟದಲೆ ಇರಬೇಕು ।
ಮುಟ್ಟಿಯೂ ಮುಟ್ಟದಿರಬೇಕು ಪರಸ್ತ್ರೀಯ ।
ಮುಟ್ಟದವ ಕೆಟ್ಟ ಸರ್ವಜ್ಞ ॥ ೧೦೮೯ ॥

* ಮುಟ್ಟದಲೆ ಇರಬೇಕು ಮುಟ್ಟನೋಡಲು ಬೇಕು ।
ಮುಟ್ಟದರೆ ಮುಟ್ಟು ಸತಿಯನು ಪರಸ್ತ್ರೀಯ ।
ಮುಟ್ಟಲೇ ಬೇಡ ಸರ್ವಜ್ಞ ॥ ೧೦೯೦ ॥

† ಪರಸ್ತ್ರೀಯ ಗಮನದಿ ಪರಲೋಕವದು ಹಾನಿ ।
ಸಿರಿತಗ್ಗಿ ತಲೆಯು ತೊಲಗಿತು ರಾವಣಗೆ ।
ನರಲೋಕದಲ್ಲಿ ಸರ್ವಜ್ಞ ॥ ೧೦೯೧ ॥

† ಒಂದು ಒಂಭತ್ತುತಲೆ ಸಂದ ತೋಳಿಪ್ಪತ್ತು ।
ಬಂಧುಗಳನೆಲ್ಲ ಕೆಡಿಸಿತು ಪತಿವ್ರತೆಯ ।
ತಂದ ಕಾರಣದಿ ಸರ್ವಜ್ಞ ॥ ೧೦೯೨ ॥

† ಈರೈದು ತಲೆವುಳ್ಳ ಧೀರರಾವಣ ಮಡಿದ ।
ವೀರ ಕೀಚಕನುಗಡ ಸತ್ತ ಪರಸತಿಯ ।
ದಾರಿ ಬೇಡೆಂದ! ಸರ್ವಜ್ಞ ॥ ೧೦೯೩ ॥

† ಅಗಲೇಳು ಸಾಸಿರವು ಮುಗಿಲು ಮುಟ್ಟುವ ಕೋಟೆ ।
ಹಗಲಿದ್ದು ಹತ್ತುತಲೆಯಾತ ಪರಸತಿಯ ।
ನೆಗೆದು ತಾ ಕೆಟ್ಟ ಸರ್ವಜ್ಞ ॥ ೧೦೯೪ ॥

ಎಂಟೆರಡು ತಲೆಯುಳ್ಳ ಬಂಟರಾವಣಕೆಟ್ಟ ।
ತುಂಟಕೀಚಕನು ಹೊರಹೊಂಟ ಪರಸತಿಯ ।
ನಂಟು[1] ಬೇಡೆಂದ ಸರ್ವಜ್ಞ ॥ ೧೦೯೫ ॥

ಸುರಪ ಹಂಸನು ಶಶಿಯು ಕರಕರದ ರಾವಣನು ।
ವರಕೀಚಕಾದಿ ಬಲಯುತರು ಕೆಟ್ಟರು ।
ಪರಸತಿಯ ಪಿಡಿದು ಸರ್ವಜ್ಞ ॥ ೧೦೯೬ ॥

ನಾರಿಯನು ಜಾರೆಯನು ಸಾರಿದರೆ ನೆರೆಕೇಡು ।
ನಾರಿಯಿಂಕೆಟ್ಟ ದಶಕಂಠ ಪಾಂಡವರು ।
ಜಾರೆಯಿಂ ಕೆಡರೆ? ಸರ್ವಜ್ಞ ॥ ೧೦೯೭ ॥

ಹಸ್ತದಲಿ ಭೀಮಬಲ ಕುಸ್ತಿಯಲಿ ಕಾಮಬಲ[1] ।
ಅಸ್ತಿಮುರಿದಿರಲು ಕೀಚಕನ, ಪರಸತಿಯ ।
ಪ್ರಸ್ತವೇ ಬೇಡ! ಸರ್ವಜ್ಞ ॥ ೧೦೯೮ ॥

ಕರಸವೆಗ್ಗಳ ಹೊಲ್ಲ ಹೊರಸು ಕಿಗ್ಗಳ ಹೊಲ್ಲ ।
ಅರಸಾಳು ಮನೆಗೆ ಬರಹೊಲ್ಲ ಪರಸತಿಯ ।
ಸರಸವೇ ಹೊಲ್ಲ ಸರ್ವಜ್ಞ ॥ ೧೦೯೯ ॥

ತೊಬ್ಬಿನಲಿ ಕೊಬ್ಬದಿರು ಉಬ್ಬಿ ನೀ ಬೀಳದಿರು ।
ಬ್ಬರಲಿ ಬಾಳ ಬಂದಲ್ಲಿ ಪರಸತಿಯ ।
ಬ್ಬ ಬೇಡೆಂದ ಸರ್ವಜ್ಞ ॥ ೧೧೦೦ ॥

1. F. ನಂಟ 1. C. ಸಿಂಹಬಲ.

|| ತುರುಕನಾ[1] ನೆರೆಹೊಲ್ಲ ಹರದನಾ ಕೆಳೆಹೊಲ್ಲ।
ತಿರಿಗೂಳನಟ್ಟು ಉಣಹೊಲ್ಲ ಪರಸ್ತ್ರೀಯು।
ಸರಸುವದೆ[2] ಹೊಲ್ಲ ಸರ್ವಜ್ಞ || ೧೧೦೧

* ಒಡಲ ಹಿಡಿದಾಡದಿರು ನುಡಿಯ ಹೋಗಾಡದಿರು।
ನಡೆಯೊಳೆಚ್ಚರವ ಬಿಡದಿರು ಪರಸತಿಯ।
ಕಡೆಗೆ ನೋಡದಿರು ಸರ್ವಜ್ಞ || ೧೧೦೨

† ಬೇಡಕಾಯದೆ ಕೆಟ್ಟ ಜೇಡನೆಯ್ಯದೆ ಕೆಟ್ಟ।
ನೋಡದೆ ಕೆಟ್ಟ ಕೃಷಿಕನು, ಸತಿಯ ಬಿ-।
ಟ್ಟಾಡಿದವ ಕೆಟ್ಟ! ಸರ್ವಜ್ಞ || ೧೧೦೩

† ಕೊಟ್ಟು ಮರುಗಲು ಬೇಡ ಬಿಟ್ಟು ಹಿಡಿಯಲುಬೇಡ।
ಕೆಟ್ಟ ನಡೆಯುವಳ ನೆರೆಬೇಡ, ಪರಸತಿಯ।
ಮುಟ್ಟಬೇಡೆಂದ ಸರ್ವಜ್ಞ || ೧೧೦೪

* ಜಾರತ್ವವೆಂಬುವದು ಕ್ಷೀರ ಸಕ್ಕರೆಯಂತೆ।
ಊರಲ್ಲಿ ಒಬ್ಬರರಿತರೆ ಬೇವಿನ।
ಸಾರದಂತಿಹುದು ಸರ್ವಜ್ಞ || ೧೧೦೫

* ಹಾವರವು ಮುಚ್ಚಿದರೆ ಕಾದಾರಿದಮೃತವು।
ಹೋದುದನೊಬ್ಬರರಿದರೆ ಕಬ್ಬುನವ।
ಕಾದು ಎಳೆದಂತೆ ಸರ್ವಜ್ಞ || ೧೧೦೬

1. F. ತುರುಚಿಯಾ. 2. F. ಕರಸುವದೆ.

ಪುರುಷ ಕಂಡರೆ ಕೊಲುವ ಅರಸು ದಂಡವ ಕೊಂಬ।
ನರರು ಸುರರೆಲ್ಲ ಮುನಿವರು ಅಂತ್ಯಕ್ಕೆ।
ನರಕ ಪರಸತಿಯು ಸರ್ವಜ್ಞ ॥ ೧೧೦೭ ॥

ಎಡವಿ ಬೊಟ್ಟೊಡೆದರೂ ಕೆಡೆಬೀಳಲಿರಿದರೂ।
ನಡು ಬೆನ್ನಿನಲಗು ಮುರಿದರೂ ಹಾದರದ।
ಕಡುಹು ಬಿಡದೆಂದ! ಸರ್ವಜ್ಞ ॥ ೧೧೦೮ ॥

ಹಣವೆಲ್ಲ ಹೋದರೂ ಹೆಣಬೀಳ ಹೊಡೆದರೂ।
ಮೊಣಕಾಲಗಣಿಕೆ ಮುರಿದರೂ ಹಾದರದ।
ಕುಣಿತ ಬಿಡರೆಂದ! ಸರ್ವಜ್ಞ ॥ ೧೧೦೯ ॥

ಪಾತಿವ್ರತ್ಯ.

ಹಣಗುಣದಿ ಬಲವುಳ್ಳ ರಣಧೀರ ರಾವಣನ।
ತೃಣವೆಂದು ಬಗೆದ ಪತಿವ್ರತೆ ಸೀತೆಗೆ।
ಎಣೆಯಾರು ಹೇಳು[1] ಸರ್ವಜ್ಞ ॥ ೧೧೧೦ ॥

ಮಾಳಿಗೆಯು ಮನೆಲೇಸು ಗೂಳಿರಿವ ಪಶುಲೇಸು।
ಈಳೆಯ ಹಿತ್ತಲಿರಲೇಸು ಪತಿವ್ರತೆಯು।
ಬಾಳು ಲೇಸೆಂದ ಸರ್ವಜ್ಞ ॥ ೧೧೧೧ ॥

ಮುದಕರು ಮೂಲೆಗೆ.

ಮುತ್ತು ನೀರಲಿ ಹುಟ್ಟಿ ಹತ್ತು ಸಾವಿರ ಹಡಗು।
ಹತ್ತು ಚಿಪ್ಪೊಂದು ಹಣವಿಲ್ಲ ತಾಯ್ತಂದೆ।
ಎತ್ತಣವರೆಂದ ಸರ್ವಜ್ಞ ॥ ೧೧೧೨ ॥

1. A. ಅನುವಾಯೇಕೆಂದ.

ಹಿರಿಯರ ಸನ್ಮಾನ.

† ತಂದೆತಾಯಿಗಳ ಘನ ದಿಂದ ವಂದಿಸುವಂಗೆ ।
ಬಂದ ಕುತ್ತಗಳು ಬಯಲಾಗಿ ಸ್ವರ್ಗವು ।
ಮುಂದೆ ಬಂದಕ್ಕು ಸರ್ವಜ್ಞ ॥ ೧೧೧೩ ॥

* ಗುರುಗಳಿಗೆ ಹಿರಿಯರಿಗೆ ಶಿರಬಾಗಿ ಎರಗಿದರೆ ।
ನರಸುರರೊಲಿದು ಕಿರಿಸುರಿದು ಕೈಲಾಸ ।
ಕರತಲಾಮಲಕ! ಸರ್ವಜ್ಞ ॥ ೧೧೧೪ ॥

* ಅವರಿಂದರವನು ತಾ । ನವರಂತೆ ಆಗುವನು ।
ಅವರೆನ್ನದವನು ಜಗದೊಳು ಬೆಂದಿರ್ದ ।
ಅವರೆಯಂತಕ್ಕು ಸರ್ವಜ್ಞ ॥ ೧೧೧೫ ॥

* ಈಶ್ವತವಿಲ್ಲದೇ ನೀ । ನೀಶನೆಂತಾದಿ ।
ಈಶನ ಈಶ ನೆನಬೇಡ ಜಗದಿವಾ– ।
ನೇಶನೇ ಈಶ ಸರ್ವಜ್ಞ ॥ ೧೧೧೬ ॥

* ತೆಂಗಿಗೆ ಹಿರಿಯರಿಗೆ[1] ಹಂಗು ಮಾಡಲಿಬೇಕು ।
ತೆಂಗಿನ ಬುಡಕೆ ನೀರೆರೆಯೆ ಕಡೆಯಲಿ[2] ।
ಹಿಂಗದೀವಂತೆ ಸರ್ವಜ್ಞ ॥ ೧೧೧೭ ॥

ಪರನಿಂದೆ.

* ರಾಗಯೋಗಿಗೆ ಹೊಲ್ಲ ಭೋಗರೋಗಿಗೆ ಹೊಲ್ಲ ।
ಓಗರ ಎಣ್ಣೆ ಉಣಹೊಲ್ಲ ಪರನಿಂದೆ ।
ಆಗಲೂ ಹೊಲ್ಲ ಸರ್ವಜ್ಞ ॥ ೧೧೧೮ ॥

1. K. ದೇವರಿಂಗೆ. 2. A. ತುದಿಯಲಿ.

ಲೋಭ.

* ನುಡಿಸುವದಸತ್ಯವನು ಕೆಡಿಸುವದು ಧರ್ಮವನು।
ಹಿಡಿಸುವದು ಕಟ್ಟೆ ಒಡಲನು ಲೋಭದ।
ಗಡಣ ತಾನಯ್ಯ! ಸರ್ವಜ್ಞ ॥ ೧೧೯ ॥

† ಒಡಹುಟ್ಟಿದವ ಭಾಗ। ದೊಡವೆಯನು ಕೇಳಿದರೆ।
ಕೊಡದೆ ಕದನದಲಿ[1] ಮಡಿದಡೆ ಅದನು ಸುಡು—।
ಗಾಡಿಗೊಯ್ಯುವನೆ? ಸರ್ವಜ್ಞ ॥ ೧೧೨೦ ॥

* ಲೋಭದಿಂ ಕೌರವನು ಲಾಭವನು ಪಡೆದಿಹನೆ।
ನಾಭಿಯಿಂ ಕೆಳಗೆ ಎರಡೂರ ಕೊಂಬಾಗ।
ಲಾಭ ಬಂದಿಹುದೆ ಸರ್ವಜ್ಞ ॥ ೧೧೨೧ ॥

† ಆಶೆಯತಿ ಕೇಡೆಂದು ಹೇಸಿ, ನಾಚುತಲಿಕ್ಕು!।
ಆಶೆಯ ಬಿಡದೆ, ಅಭಿಮಾನಕ್ಹೋರಿದರೆ।
ಘಾಸಿಯಾಗಿಕ್ಕು! ಸರ್ವಜ್ಞ ॥ ೧೧೨೨ ॥

ಗರ್ವ.

* ಉದ್ದುರುಟು ಮಾತಾಡಿ ಇದ್ದುದನು ಹೋಗಾಡಿ।
ಉದ್ದನ ಮರದ ತುದಿಗೇರಿ ಕೈಜಾರಿ।
ಬಿದ್ದು ಸತ್ತಂತೆ ಸರ್ವಜ್ಞ ॥ ೧೧೨೩ ॥

* ಅಂಧಕನು ನಿಂದಿರಲು ಮುಂದೆ ಬಪ್ಪರಕಾಣ।
ಬಂದರೆ ಬಾರೆಂದೆನದಿರ್ಪ ಗರ್ವಿಯು।
ದಂದುಗವೆ ಬೇಡ ಸರ್ವಜ್ಞ ॥ ೧೧೨೪ ॥

1. G. S. ಬದವೆ. ಕನದೇದು.

ವೈರ.

* ಜಾತಿ ಜಾತಿಗೆ ವೈರ ನೀತಿ ಮೂರ್ಖಗೆ ವೈರ ।
ಪಾತಕವು ವೈರ ಸುಜನರ್ಗೆ ಅರಿದರಿ– ।
ಗೇತರದು ವೈರ ಸರ್ವಜ್ಞ ॥ ೧೧೨೫ ॥

ನೀತಿಯನೆಲೆ.

† ನೀತ ದೇಶದ ಮಧ್ಯ ನೀತಿಯಾ ಮನೆಯಿಹುದು; ।
ಪಾತಕರಿಗಹುದು ಸೆರೆಮನೆ; ಅರಮನೆ ಪು– ।
ನೀತರಿಗೆಂದ ಸರ್ವಜ್ಞ ॥ ೧೧೨೬ ॥

ವ್ಯವಹಾರ ನೀತಿ.

ದುಡ್ಡೇ ದೊಡ್ಡಪ್ಪ.

* ಧನಕನಕ ವುಳ್ಳನಕ ದಿನಕರನಂತಕ್ಕು ।
ಧನಕನಕ ಹೋದ ಮರುದಿನ ಹಾಳೂರ ।
ಶುನಕನಂತಕ್ಕು ಸರ್ವಜ್ಞ ॥ ೧೧೨೭ ॥

† ಎರಡುಹಣವುಳ್ಳನಕ ಗರುಡನಂತಿರುತಿಕ್ಕು ।
ಎರಡು ಹಣ ಮುಗಿದ ಮರುದಿನ ಮುದಿನಾಯ[1] ।
ತರಡಿನಂತಕ್ಕು[2] ಸರ್ವಜ್ಞ ॥ ೧೧೨೮ ॥

† ನಾಲ್ಕು ಹಣವುಳ್ಳನಕ ಪಾಲ್ಕಿಯಲಿ ಮೆರೆದಿಕ್ಕು ।
ನಾಲ್ಕು ಹಣ ಹೋದ ಮರುದಿನ ಕೋಳದಲಿ ।
ಸಿಲ್ಕಿದಂತಕ್ಕು ಸರ್ವಜ್ಞ ॥ ೧೧೨೯ ॥

† ಎಂಟು ಹಣವುಳ್ಳನಕ ಬಂಟನಂತಿರು ತಿಕ್ಕು[3] ।
ಎಂಟು ಹಣ ಹೋದ ಮರುದಿನ ಹುಳುತಿಂದ[4] ।
ದಂಟಿನಂತಕ್ಕು[5] ಸರ್ವಜ್ಞ ॥ ೧೧೩೦ ॥

1 & 2. G. S. ಅರೆ ಬೆಂದ ಕೊರಡಿನಂತಕ್ಕು. 3. A. ನೆಂಟರು ನೆರೆಯುಕ್ಕು.
4, & 5. A. C. ಹಾಳುಮನೆ ಹೆಂಡೆಯಂತಕ್ಕು.

† ಸಿರಿಯಣ್ಣನುಳ್ಳನಕ ಹಿರಿಯಣ್ಣ ನೆನಸಿಪ್ಪ ।
ಸಿರಿಯಣ್ಣ ಹೋದ ಮರುದಿನ ಹಿರಿಯಣ್ಣ[1] ।
ನರಿ[2]ಯಣ್ಣನೆಂದ ಸರ್ವಜ್ಞ ॥ ೧೧೩೧ ॥

† ಮಡದಿ ಮಕ್ಕಳ ಮಮತೆ ಒಡಲೊಡವೆಯಿರುವನಕ ।
ಒಡಲೊಡವೆ ಹೋದ ಮರುದಿನ ಅವರೆಲ್ಲ ।
ಕಡೆಗೆ ಸಾರುವರು ಸರ್ವಜ್ಞ ॥ ೧೧೩೨ ॥

ಅಪಕಾರಕ್ಕೆ ಉಪಕಾರ.

* ಮುನಿವಂಗೆ ಮುನಿಯದಿರು ಕನಿವಂಗೆ ಕನಿಯದಿರು ।
ಮನಸಿಜಾರಿಯನು ಮರೆಯದಿರು ಶಿವಕೃಪೆ ।
ಘನಕೆ ಘನವಕ್ಕು ಸರ್ವಜ್ಞ ॥ ೧೧೩೩ ॥

* ಮುನಿವರನು ನೆನೆಯುತಿರು ವಿನಯದಲಿ ನಡೆಯುತಿರು ।
ವನಿತೆಯರ ಬಲಿಗೆ ಸಿಲುಕದಿರು ಬಾಳಿಕೆಯು ।
ಮನ ಘನವು ಅಕ್ಕು ಸರ್ವಜ್ಞ ॥ ೧೧೩೪ ॥

* ಆರಯ್ದು ನುಡಿವವನು ಆರಯ್ದು ನಡೆವವನು ।
ಆರಯ್ದು ಪದವನಿಡುವವನು ಲೋಕಕ್ಕೆ ।
ಆರಾಧ್ಯನಕ್ಕು ಸರ್ವಜ್ಞ ॥ ೧೧೩೫ ॥

* ಕೇಡನೊಬ್ಬಗೆ ಬಗೆದು ಕೇಡು ತಪ್ಪದು ತನಗೆ ।
ನೋಡಿ ಕೆಂಡವನು ಹಿಡಿದೊಗೆದು ನೋವನು ।
ಬೇಡಿ ಬಗೆದಂತೆ! ಸರ್ವಜ್ಞ ॥ ೧೧೩೬ ॥

1. A. ಕರಿಯಣ್ಣ. 2. A. ಕಿರಿ

ಕಂಡದ್ದಾಡಿದರೆ ಕೆಂಡ.

* ಕಂಡುದನು ಆಡೆ ಭೂ। ಮಂಡಲವು ಮುನಿಯುವದು।
ಕೊಂಡಾಡುತಿಚ್ಛೆ ನುಡಿದರೆ ಜಗವೆಲ್ಲ।
ಮುಂಡಾಡುತಿಹುದು ಸರ್ವಜ್ಞ ॥ ೧೧೩೭ ॥

† ಕಂಡುದನು ನುಡಿದಿಹರೆ ಕೆಂಡವಾಗುವದೇಕೆ?।
ಮಂಡಲದೊಳಗೆ ಜಾರದಿಹ ಮನುಜರನು।
ಕಂಡದ್ದು ಉಂಟೆ? ಸರ್ವಜ್ಞ ॥ ೧೧೩೮ ॥

* ಕಂಡಂತೆ ಹೇಳಿದರೆ ಕೆಂಡವುರಿಯುವದು ಭೂ-।
ಮಂಡಲದೊಳಗೆ ಕಂಡಿತವನಾಡುವರ।
ಕಂಡಿಹುದೆ ಕಷ್ಟ ಸರ್ವಜ್ಞ ॥ ೧೧೩೯ ॥

† ಭಂಡಗಳ ನುಡಿಯುವಾ ದಿಂಡೆಯನ ಹಿಡತಂದು।
ಖಂಡಿಸಿರೆಂದರವನೊಡನೆ ಹಿಂಡೆಲ್ಲ।
ಕೆಂಡವಾಗುವದು! ಸರ್ವಜ್ಞ ॥ ೧೧೪೦ ॥

* ಮೆಚ್ಚಿಸುವಡೊಲಿದವರ ಇಚ್ಛೆಯನೆ ನುಡಿಯುವದು!।
ತುಚ್ಛದಿಂದಾರ ನುಡಿದರೆ ಅವನಿರವು।
ಬಿಚ್ಚು[1]ವಂತಕ್ಕು! ಸರ್ವಜ್ಞ ॥ ೧೧೪೧ ॥

ಯಾರನ್ನೂ ನಂಬಬೇಡ.

* ಎಂತಿರಲು ಪರರನೀ ಮುಂತೆ ನಂಬಲು ಬೇಡ।
ಕುಂತಿ ಹೆಮ್ಮಗನ ಕೊಲಿಸಿದಳು ಮಾನವರ।
ನೆಂತು ನಂಬುವದು ಸರ್ವಜ್ಞ ॥ ೧೧೪೨ ॥

1. F. ಬಿಚ್ಚು.

* ಆರಾರ ನಂಬುವಡೆ ಆರಯ್ದು ನಂಬುವದು ।
ನಾರಣನಿಂದ ಬಲಿಕೆಟ್ಟ ವಿಕ್ಕವರ- ।
ನಾರು ನಂಬುವರು ಸರ್ವಜ್ಞ ॥ ೧೧೪೩ ॥

ಪರರ ತಪ್ಪು ಪರ್ವತ.

॥ ತನ್ನದೋಷವನೂರ ಬೆನ್ನ ಹಿಂದಿಟ್ಟುತಾ।
ನನ್ಯನೊಂದಕ್ಕೆ ಹುಲಿಯಪ್ಪ ಮಾನವನು ।
ಕುನ್ನಿಯಲ್ಲೇನು? ಸರ್ವಜ್ಞ ॥ ೧೧೪೪ ॥

ಪರೋಪಕಾರಿಗೆ ಪುನರ್ಜನ್ಮವಿಲ್ಲ.

† ಹೊಟ್ಟೆಗುಣ ಕೊಟ್ಟವಗೆ ಸಿಟ್ಟನೆರೆ ಬಿಟ್ಟವಗೆ ।
ಬಟ್ಟೆಯು ಮುಳ್ಳ ಸುಟ್ಟವಗೆ ಬಹು ಭಯದ ।
ಹುಟ್ಟು ತಾನಿಲ್ಲ ಸರ್ವಜ್ಞ ॥ ೧೧೪೫ ॥

ಮನುಷ್ಯರಿಗೆ ಭಯಪಡಬೇಡ.

* ನಿಶ್ಚಯವ ಬಿಡದೊಬ್ಬ । ರಿಚ್ಛೆಯಲಿ ನುಡಿಯದಿರು ।
ನೆಚ್ಚಿ[1]ಒಂದೂರೊಳಿರದಿರು ಶಿವನಿನ್ನ ।
ಇಚ್ಛೆಯೊಳಿಹನು ಸರ್ವಜ್ಞ ॥ ೧೧೪೬ ॥

ಕೇಳಿದರೆ ಬುದ್ಧಿಹೇಳು.

* ಹೇಳಿದರೆ ಕೇಳುವನ ಕೀಳವದು ಕರಲೇಸು।
ಹೇಳಿದರೆ ಕೇಳದಿರುವನ ಉಪ್ಪರಿಗೆ।
ಕೀಳಗೂ ಕಷ್ಟ ಸರ್ವಜ್ಞ ॥ ೧೧೪೭ ॥

† ಕೇಳುವವರಿದ್ದರೇ ಹೇಳುವದು ಬುದ್ಧಿಯನು ।
ಕೋಳದಲಿ ಬಿದ್ದು ನರಳುವಗೆ ಬುದ್ಧಿಯ ।
ಹೇಳಿ ಫಲವೇನು ಸರ್ವಜ್ಞ ॥ ೧೧೪೮ ॥

---

1. C. ನೆಚ್ಚಿ.

ಉತ್ತಮರು ಕೆಟ್ಟರೆ ಕಷ್ಟ

* ಉತ್ತರೆಯು ಬರೆತಿಹರೆ ಹೆತ್ತತಾಯ್ತೊರೆದಿಹರೆ ।
ಸತ್ಯವು ತಪ್ಪಿ ನಡೆದರೆ ಲೋಕತಾ– ।
ನೆತ್ತ ಸೇರುವದು ಸರ್ವಜ್ಞ || ೧೧೪೯ ||

† ತತ್ವಮಸಿ ಹುಸಿದಿಹರೆ ಮುತ್ತೊಡೆದು ಬೆಸೆದಿಹರೆ ।
ಉತ್ತಮರು ಕೇಡು ಕಲಿಸಿದರೆ ಲೋಕತಾ– ।
ನ್ನೆತ್ತ ಸೇರುವದು ಸರ್ವಜ್ಞ || ೧೧೫೦ ||

* ಸತ್ಯರೂ ಹುಸಿಯುವಡೆ ಒತ್ತಿ ಹರಿದಡೆ ಶರಧಿ ।
ಉತ್ತಮರು ತಪ್ಪಿ ನಡೆದರೆ ಲೋಕವಿ– ।
ನ್ನೆತ್ತ ಸಾರುವದು? ಸರ್ವಜ್ಞ || ೧೧೫೧ ||

ಪಕ್ಷಪಾತ.

† ಉಳ್ಳವನು ನುಡಿದಿಹರೆ ಒಳ್ಳಿತೆಂದೆನ್ನುವರು ।
ಇಲ್ಲದಾಬಡವ ನುಡಿದರೆ ಬಾಯೊಳಗೆ[1] ।
ಹಳ್ಳು ಕಡಿದಂತೆ ಸರ್ವಜ್ಞ || ೧೧೫೨ ||

* ಇಲ್ಲದವನಹುದಾಡೆ ಬಲ್ಲಂತೆ ಬೊಗಳುವರು ।
ಬಲ್ಲಿದನಲ್ಲದನಾಡಿದರೆಲ್ಲರು ।
ಬೆಲ್ಲವೆಂಬುವರು ಸರ್ವಜ್ಞ || ೧೧೫೩ ||

† ಬಡವನಿದ್ದುದನಾಡೆ ಕಡೆಗೆ ಪೋಗೆಂಬುವರು ।
ಒಡವೆಯುಳ್ಳವರು ಸುಡುಗಾಡ ನುಡಿದರೂ ।
ಪೊಡವಿಯೊಳಧಿಕ! ಸರ್ವಜ್ಞ || ೧೧೫೪ ||

1. F. ತುಪ್ಪಿಗೆ.

* ಬಲ್ಲಿದನು ನುಡಿದಿಹರೆ ಬೆಲ್ಲವನು ಮೆದ್ದಂತೆ ।
ಇಲ್ಲದಾ ಬಡವ ನುಡಿದರೆ ಬಾಯಿಂದ ।
ಜೊಲ್ಲು ಬಿದ್ದಂತೆ ಸರ್ವಜ್ಞ ॥ ೧೧೫೫ ॥

* ಬಡವನೊಳ್ಳೆಯ ಮಾತ ನುಡಿದರಲ್ಲೆಂಬುವರು ।
ಪೊಡವೀಶ ಜಳ್ಳ ಜೊಲ್ಲೊಡನೆ ನುಡಿದರೆ ।
ಕಡು ಮೆಚ್ಚುತಿಹರು! ಸರ್ವಜ್ಞ ॥ ೧೧೫೬ ॥

* ಮಡಿಯನುಟ್ಟವರನು ನುಡಿಸುವರು ವಿನಯದಲಿ ।
ಒಡಹುಟ್ಟಿದವರು ಅರುವೆಯನುಟ್ಟಿರಲು ।
ನುಡಿಸ ನಾಚುವರು ಸರ್ವಜ್ಞ ॥ ೧೧೫೭ ॥

ಕರ್ಮದ ಮರ್ಮ.

† ತಪ್ಪು ಮಾಡಿದ ಮನುಜ । ಗೊಪ್ಪುವದು ಸಂಕೋಲೆ ।
ತಪ್ಪು ಮಾಡದಲೆ ಸೆರೆಯು ಸಂಕೋಲೆಗಳು ।
ಒಪ್ಪವನೆ ಪಾಪಿ! ಸರ್ವಜ್ಞ ॥ ೧೧೫೮ ॥

* ತಪ್ಪು ಮಾಡಿದವಂಗೆ ಒಪ್ಪುವದು ಸಂಕೋಲೆ ।
ತಪ್ಪಿಲ್ಲದಿಪ್ಪ ಶರಣಂಗೆ ಸಂಕೋಲೆ ।
ಒಪ್ಪುವದದೇಕೆ? ಸರ್ವಜ್ಞ ॥ ೧೧೫೯ ॥

ವಿವಿಧ ವಿಷಯಗಳು.

ಹೆಣ್ಣು.

* ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನು ।
ಕಣ್ಣೀಲಿ ಕಂಡು ಮನದಲಿ ಬಯಸದಿಹ ।
ಅಣ್ಣಗಳಾರು ಸರ್ವಜ್ಞ ॥ ೧೧೬೦

* ಯತಿಯು ತಪಗಳುಕೆಡುಗು ಪತಿಯು ಪ್ರೀತಿಯುಕೆಡಗು ।
ಸ್ಥಿತಿವಂತರುಗಳ ಮತಿ ಕೆಡಗು ರತಿದೇವಿ ।
ಶ್ರುತಿಯು ಕೇಳಿದರೆ ಸರ್ವಜ್ಞ ॥ ೧೧೬೧ ॥

* ವಚನದೊಳಗೆಲ್ಲವರು ಶುಚಿವೀರ ಸಾಧುಗಳು ।
ಕುಚಹೇಮಶಸ್ತ್ರ ಸೋಂಕಲು ಲೋಕದೊಳ- ।
ಗಚಲದವರಾರು? ಸರ್ವಜ್ಞ ॥ ೧೧೬೨ ॥

* ಎಲ್ಲರೂ ಹಿರಿಯವರು[1]! ಬಲ್ಲ ಗುರುವರುಗಳು! ।
ನಲ್ಲಳು ಮುಂದೆ ಸುಳಿದರೆ ಲೋಕದೊಳ- ।
ಗೊಲ್ಲದವರಾರು? ಸರ್ವಜ್ಞ ॥ ೧೧೬೩ ॥

ಹೊನ್ನು.

* ಯತಿಗಳಿಗೆ ಮತಿಗೆಡಗು ಸತಿಯು ಪತಿವ್ರತ[2] ಕೆಡಗು ।
ಮತಿವಂತರೆದ್ದು ಭ್ರಮೆಗೊಳಗು ಹೊನ್ನೆಂಬ ।
ಶ್ರುತಿಯು ಕೇಳಿದರೆ ಸರ್ವಜ್ಞ ॥ ೧೧೬೪ ॥

* ಚೆಲುವನಾದಡದೇನು ಬಲವಂತನೆನಿಸೇನು ।
ಕುಲವೀರನಾಗಿ ಫಲವೇನು ಮಹಲಕ್ಷ್ಮಿ ।
ತೊಲಗಿ ಹೋಗಿರಲು ಸರ್ವಜ್ಞ ॥ ೧೧೬೫ ॥

† ಲೋಕಕ್ಕವಶ್ಯತಾ । ನೇಕಾಕಿ ಹೊಂಬೇರು ।
ನಾಕಕಡುಬೇರು ಪುಣ್ಯದಿಂದಲ್ಲದೊಡೆ ।
ಪಾತಕದ ಬೇರು ಸರ್ವಜ್ಞ ॥ ೧೧೬೬ ॥

1. F. ಎಲ್ಲಿಯೂ ಹಿರಿಯರು? 2. W. ಸತಿಗ ಪಜನ.

ಮಣ್ಣು.

* ಹೆಣ್ಣಿಗೂ ಮಣ್ಣಿಗೂ ಉಣ್ಣದುರಿಯಲುಬೇಡ ।
ಹೆಣ್ಣಿಂದ ಕೆಟ್ಟ ದಶಕಂಠ ಕೌರವನು ।
ಮಣ್ಣಿಂದ ಕೆಡನೆ? ಸರ್ವಜ್ಞ ॥ ೧೧೬೭ ॥

† ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ ।
ಹೆಣ್ಣನೆರೆ ಬಿಟ್ಟರವ ದೈವ ಜಗಕೆ ಮು– ।
ಕ್ಕಣ್ಣನೇ ದೈವ ಸರ್ವಜ್ಞ ॥ ೧೧೬೮ ॥

ಕಣ್ಣು.

* ಕಣ್ಣಿನಿಂದಲೆ ಪುಣ್ಯ ಕಣ್ಣಿನಿಂದಲೆ ಪಾಪ ।
ಕಣ್ಣಿನಿಂದಿಹವು ಪರವಕ್ಕು ಲೋಕಕ್ಕೆ ।
ಕಣ್ಣೆ ಕಾರಣವು ಸರ್ವಜ್ಞ ॥ ೧೧೬೯ ॥

* ಕಣ್ಣು ಸಣ್ಣದು ಆಗಿ ಹಣ್ಣದಿಹುದೊಂದಿಲ್ಲ ।
ತಣ್ಣಗಿಹ ಮನವನುರಿಸುವದಿದನು ಕೊಂ– ।
ದಣ್ಣಗಳಾರು? ಸರ್ವಜ್ಞ ॥ ೧೧೭೦ ॥

* ಕಣ್ಣು ನಾಲಿಗೆ ಮನವು ತನ್ನದೆಂದೆನಬೇಡ ।
ಅನ್ಯರು ಕೊಂದರೆನಬೇಡ ಇವು ಮೂರು ।
ತನ್ನ ಕೊಲ್ಲುವವು ಸರ್ವಜ್ಞ ॥ ೧೧೭೧ ॥

ನಾಲಿಗೆ.

‖ ಮೆಟ್ಟರಿಯೆ ಜೀವತಾ ತಟ್ಟನೇ ಹೋಗಿಹುದು ।
ಕೆಟ್ಟ ನಾಲಿಗೆಯಲಿರಿದರೆ ಕಾದುನೀ– ।
ರಟ್ಟೆಹೋದಂತೆ? ಸರ್ವಜ್ಞ ॥ ೧೧೭೨ ॥

* ಗಂಹರವ ಹೊಕ್ಕಿರ್ದು ಸಿಂಹಗಳನಿರಿಯುವದು ।
ಸಂಹರವ ಮಾಡಿ ತರಿಯುವದು ದುರ್ಜನರ ।
ಜಿಂಹ್ವೆ ಕಾಣಯ್ಯ ಸರ್ವಜ್ಞ ॥ ೧೧೭೩ ॥

॥ ಕತ್ತಿಲಾದರು ಘಾಯ ಮತ್ತಿರದೆ ಮಾಯುವದು; ।
ಸುತ್ತಲಾಡುತಿಹ ಜಿಹ್ವೆಯ ಘಾಯವು ।
ಸತ್ತು ಮಾಯುವದೇ? ಸರ್ವಜ್ಞ ॥ ೧೧೭೪ ॥

ನಾಮಕರಣ.

* ಬಂಧು ಬಳಗವುಕೂಡಿ ಹೊಂದಿ ಜೋಗಳಪಾಡಿ ।
ಹಿಂದೆ ಸತ್ತವರ ಹೆಸರಿಟ್ಟು ಗುಗ್ಗರಿಯ ।
ತಿಂದು ತೂಗುವರು! ಸರ್ವಜ್ಞ ॥ ೧೧೭೫ ॥

ಮಾನವಸ್ಥಿತಿತ್ರಯ.

* ಕ್ರೀಡೆಯಲಿ ಬಾಲತ್ವ, ಪ್ರೌಢಿಯಲಿ ತರುಣತ್ವ ।
ಗಾಢ ಚಿಂತೆಯಲಿ ವೃದ್ಧತ್ವದಿಂ ಸುಡು– ।
ಗಾಡಿಗೆಡೆಯುಹುದು ಸರ್ವಜ್ಞ ॥ ೧೧೭೬ ॥

ಮರಣ.

* ಮೃತ್ಯು ದೇವತೆಯೆತ್ತಿ ಹೊತ್ತು ತಾನಾಡಿಸುತ ।
ತುತ್ತು ಇದ್ದಲ್ಲಿ ವೈದುಣಿಸಿ ಕಡೆಯಲ್ಲಿ
ಹೊತ್ತು ಚಲ್ಲುವಳು ! ಸರ್ವಜ್ಞ ॥ ೧೧೭೭ ॥

ಅಫೀಮು.

† ಮದ್ದ ಮೆದ್ದುವನು ಪ್ರ। ಬುದ್ಧನೆಂದೆನಬೇಡ ।
ಮುದ್ದು ಸಂಕಟನನೆಬ್ಬಿಸಲು ಹೆಡಕತ್ತ ।
ಗುದ್ದಿಕೊಳುತಿಹನು! ಸರ್ವಜ್ಞ ॥ ೧೧೭೮ ॥

ಸಾರಾಯಿ.

† ಸುರೆಯ ಸೇವಿಸುವವನ ಸುರಿಗೆಯನು ಪಿಡಿದವನ।
ಧೊರೆಯ ಒಲುಮೆಗೆ ಹೆಣಗುವನ ಕಾಯವು।
ಸೊರಗಿ[1] ಸಾಯುವದು! ಸರ್ವಜ್ಞ ॥ ೧೧೭೯ ॥

* ಸುರೆಯ ಸೇವಿಸುವಂಗೆ ಸಿರಿಗರ್ವ ಪಿಡಿದಂಗೆ।
ಧೊರೆಯಲ್ಲಿ ತೇಜ ಪಡೆದಂಗೆ ಶಿರವಿಹುದು।
ಸ್ಥಿರವಲ್ಲ ನೋಡ! ಸರ್ವಜ್ಞ ॥ ೧೧೮೦ ॥

† ಸುರೆಯ ಹಿರಿದುಂಡವಗೆ ಉರಿಯ ಮೇಲ್ದುಡುಕುವಗೆ।
ಹರಿಯುವ ಹಾವ, ಪರನಾರಿ ಪಿಡಿದಂಗೆ।
ಮರಣ ಕಾಣಯ್ಯ! ಸರ್ವಜ್ಞ ॥ ೧೧೮೧ ॥

* ಮಧ್ಯ ಪಾನವಮಾಡಿ ಇದ್ದುದೆಲ್ಲವ ನೀಡಿ।
ಬಿದ್ದು ಬರುವವನ ಸದ್ದಡಗಿ ಸಂತಾನ-।
ವೆದ್ದು ಹೋಗುವದು! ಸರ್ವಜ್ಞ ॥ ೧೧೮೨ ॥

ಭಂಗಿ.

† ಅಂಗಿ ಅರಿವೆಯ ಮಾರಿ ಭಂಗಿಯನು ತಾ ನುಂಗಿ।
ಮಂಗನಂದದಿ ಕುಣಿವನು ಭವ ಭವದಿ।
ಭಂಗಗೊಳ್ಳುವನು ಸರ್ವಜ್ಞ ॥ ೧೧೮೩ ॥

† ಭಂಗಿಯನು ಸೇದುವನ ಭಂಗವನೇನೆಂಬೆ।
ಭಂಗಿಯ ಗುಂಗು ತಲೆಗೇರೆ ಆಡುವಾ[2]।
ಮಂಗನಂತಿರುವ! ಸರ್ವಜ್ಞ ॥ ೧೧೮೪ ॥

1. F. ಕೊರಗಿ. 2. G. S. ಚಿತ್ರರದ ಬಿಂಗಿನಂತಿಹನು.

ತಂಬಾಕ.

* ಹೊಗೆಯ ತಿಂಬುವದೊಂದು ಸುಗುಣವೆಂದೆನಬೇಡ ।
ಹೊಗೆಯ ಕುಡಿದೆಲೆಯನಗಿವ ಬಾಯ್ನಿಂದಿಯ ।
ಲಗಳೆಯಂತಿಹುದು! ಸರ್ವಜ್ಞ ॥ ೧೧೮೫ ॥

ತಾಂಬೂಲ.

* ಗಾಳಿ ಧೂಳಿಯ ದಿನಕೆ ಮಾಳಿಗೆಯ ಮನೆಲೇಸು ।
ಹೋಳಿಗೆ ತುಪ್ಪ ಉಣಲೇಸು ಬಾಯಿಗೆ ।
ವಿಳ್ಯವೇ ಲೇಸು ಸರ್ವಜ್ಞ ॥ ೧೧೮೬ ॥

* ವೀಳ್ಯವಿಲ್ಲದ ಬಾಯಿ ಕೂಳು ಇಲ್ಲದ ನಾಯಿ ।
ಬಾಳೆಗಳಿಲ್ಲದೆಲೆದೋಟ ಪಾತರದ ।
ಮೇಳ ಮುರಿದಂತೆ ಸರ್ವಜ್ಞ ॥ ೧೧೮೭ ॥

* ಅಡಿಕೆ ಹಾಕದ ಬಾಯಿ ಕಡುಕವಿಕ್ಕದ ಕಿವಿಯು ।
ಒಡಕಿರಲು ಮನೆಯು ನಿಲುಕದ ಫಲಕೆ ಸರಿ ।
ಮಿಡುಕಿ ಸತ್ತಂತೆ ಸರ್ವಜ್ಞ ॥ ೧೧೮೮ ॥

† ಕಾಜು ಇಲ್ಲದ ವೀಳ್ಯ ಕೂಚನರಿಯದ ಪಾಳ್ಯ ।
ಯೋಚನೆಯರದ ಮನೆವಾರ್ತೆ ಸತಿಕೂಟ ।
ನಾಚಿ ಬಿಟ್ಟಂತೆ ಸರ್ವಜ್ಞ ॥ ೧೧೮೯ ॥

* ಎಲೆಯ ಮೆಲ್ಲದ ಬಾಯಿ ತಲೆಯಿಲ್ಲದಾ ಮುಂಡ[2]! ।
ಎಲೆಮೆದ್ದು ಬರಲು ಬೀದಿಯಲಿ ಈರಯ್ದು ।
ತಲೆಯ ನಂತಕ್ಕು ಸರ್ವಜ್ಞ ॥ ೧೧೯೦ ॥

1. F. ಅಡಕಿರದ. 2. G. S. ತಲೆಹೋದ ಹೆಣದಂತೆ.

### ನೆತ್ತ.

† ನೆತ್ತವೂ ಕುತ್ತವೂ ಹತ್ತಿದೊಡೆ ಅಳವಿಲ್ಲ ।
ಕುತ್ತದಿಂ ದೇಹ ಬಡವಕ್ಕು ನೆತ್ತದಿ ।
ಅತ್ತಲೇ[1] ಅಕ್ಕು ಸರ್ವಜ್ಞ || ೧೧೯೧ ||

† ಆಡಿ ನಳಕೆಟ್ಟ, ಮ । ತ್ತಾಡಿ ಧರ್ಮಜ ಕೆಟ್ಟ ।
ಕೂಡಿದ[2]ನಾಲ್ವರ್ತಿರಿದುಂಡರ್ನೆತ್ತವ- ।
ನಾಡಬೇಡೆಂದ ! ಸರ್ವಜ್ಞ || ೧೧೯೨ ||

† ಆಡುವವರಿದ್ದಂತೆ ನೋಡಹೋದವ ಕೆಟ್ಟ ।
ಬೇಡುವವಕೆಟ್ಟ ನೆತ್ತವನಾಡುವನ ।
ಕೂಡಿದವಕೆಟ್ಟ ಸರ್ವಜ್ಞ || ೧೧೯೩ ||

† ನೆತ್ತತಾ ಒಳಿತೆಂದು ನಿತ್ಯವಾಡಲು ಬೇಡ ।
ನೆತ್ತದಿಂ ಕುತ್ತ ಮುತ್ತಲು ಸುತ್ತೆಲ್ಲ[3] ।
ಕತ್ತಲಾಗಿಹುದು ! ಸರ್ವಜ್ಞ || ೧೧೯೪ ||

### ಹೇವ.

† ಜಾವಕ್ಕೆ ಬದುಕುವರೆ ಹೇವಕ್ಕೆ ಬದುಕುವದು ! ।
ರಾವಣ ಸತ್ತನೆನಬೇಡ ರಾಮುಂಗೆ ।
ಹೇವ ಬಿಟ್ಟಿಹುದೆ? ಸರ್ವಜ್ಞ || ೧೧೯೫ ||

† ಬಲವಂತ ನಾನೆಂದು ಬಲಿದು ಹೋರಲು ಬೇಡ ।
ಬಲವಂತ ವಾಲಿ ಶ್ರೀರಾಮನೊಡನಾಡಿ ।
ಛಲದಿಂದ ಕೆಟ್ಟ ! ಸರ್ವಜ್ಞ || ೧೧೯೬ ||

---

1. C. ಐತ್ತಲೆ. 2. A. ನೋಡಿದ. 3. F. ಮುತ್ತಲ್ಲ.

### ಲಂಚ.

* ಸೊಡರು ಲಂಚವಕೊಂಡು ಕೊಡುವದೊಪ್ಪಚಿ[1]ಬೆಳಗ ।
ಪೊಡವಿಗೆ ಸೂರ್ಯ ಬೆಳಗೀವೊಲ್ಲಂಚವ ।
ಹಿಡಿಯದವ ಧರ್ಮಿ ! ಸರ್ವಜ್ಞ ॥ ೧೧೯೭ ॥

### ವಿದ್ಯೆ.

† ವಿದ್ಯಕ್ಕೆ ಕಡೆಯಿಲ್ಲ ಬುದ್ಧಿಗೆ ಬೆಲೆಯಿಲ್ಲ ।
ಛಿದ್ರಿಸುವವಗೆ ಗತಿಯಿಲ್ಲ ಮರಣಕ್ಕೆ ।
ಮದ್ದುಗಳಿಲ್ಲ ಸರ್ವಜ್ಞ ॥ ೧೧೯೮ ॥

* ವಿದ್ಯವುಳ್ಳನ ಮುಖವು ಮುದ್ದು ಬರುವಂತಿಕ್ಕು ।
ವಿದ್ಯವಿಲ್ಲದನ ಬರಿಮುಖವು ಹಾಳೂರ ।
ಹದ್ದಿನಂತಕ್ಕು ಸರ್ವಜ್ಞ ॥ ೧೧೯೯ ॥

† ಬುದ್ಧಿವಂತರ ಕೂಟ । ವೆದ್ದು ಹಾರುವ ಹದ್ದು ।
ಬುದ್ಧಿಯಿಲ್ಲದರ ನೆರೆಕೂಟ ಕೊರಳೊಳು[2] ।
ಗುದ್ದಿಯಿದ್ದಂತೆ ಸರ್ವಜ್ಞ ॥ ೧೨೦೦ ॥

‖ ಒಡಲಡಗಿದಾ ವಿದ್ಯೆ ನಡೆದೊಡನೆ ಬರುತಿಹುದು ।
ಒಡಹುಟ್ಟಿದವರು, ಕಳ್ಳರು, ನೃಪರದನು ।
ಪಡೆಯರೆಂದರಿಗು ! ಸರ್ವಜ್ಞ ॥ ೧೨೦೧ ॥

† ವಿದ್ಯವೇ ತಾಯ್ತಂದೆ ಬುದ್ಧಿಯೇ ಸೋದರನು ।
ಅಧ್ಯಾನಕಾದರವ ನೆಂಟ, ಸುಖದಿ ತಾ- ।
ನಿದ್ದುದೇ ರಾಜ್ಯ ಸರ್ವಜ್ಞ ॥ ೧೨೦೨ ॥

---

1. W. ಜೊಚ್ಚತ. 2. D. ಅಡಿಗೆ.

† ಇದ್ದಲ್ಲಿ ಸಲುವ ಹೋ । ಗಿದ್ದಲ್ಲಿಯೂ ಸಲುವ ।
ವಿದ್ಯವ ಬಲ್ಲ ಬಡವನು ಗಿರಿಯ ಮೇ- ।
ಲಿದ್ದರೂ ಸಲುವ ಸರ್ವಜ್ಞ ॥ ೧೨೦೩ ॥

ಉದ್ಯೋಗ.

* ಉದ್ಯೋಗವುಳ್ಳವನ ಹೊದ್ದುವದು ಸಿರಿಬಂದು ।
ಉದ್ಯೋಗವಿಲ್ಲದಿರುವನಾಕರದೊಳ- ।
ಗಿದ್ದುದು ಪೋಕ್ಕು ಸರ್ವಜ್ಞ ॥ ೧೨೦೪ ॥

* ಉದ್ಯೋಗವಿದ್ದವನು ಬಿದ್ದಲ್ಲಿ ಬಿದ್ದಿರನು ।
ಹದ್ದು ನೆವನವನು ಈಡಾಡಿ ಹಾವ ಕೊಂ- ।
ಡೆದ್ದು ಹೋದಂತೆ! ಸರ್ವಜ್ಞ ॥ ೧೨೦೫ ॥

* ಆಲಸಿಕೆಯಲಿರುವಂಗೆ ಕಲಸಲಂಬಲಿಯಿಲ್ಲ ।
ಕೆಲಸಕ್ಕೆ ಆಲಸದಿರುವಂಗೆ ಬೇರಿಂದ ।
ಹಲಸು ಕಾತಂತೆ! ಸರ್ವಜ್ಞ ॥ ೧೨೦೬ ॥

ಸಾಧನೆ.

* ಬೆರೆವಂಗೆ ಭೋಗವೂ ಮೊರೆವಂಗೆ ರಾಗವೂ ।
ಬರೆವಂಗೆ ಓದು ಬರುವಂತೆ ಸಾಧಿಪಗೆ ।
ಬಾರದಿಹುದುಂಟೆ? ಸರ್ವಜ್ಞ ॥ ೧೨೦೭ ॥

ಗಾಯನ.

* ಅರ್ಥವಿಲ್ಲದ ಹಾಡು ವ್ಯರ್ಥ ಸಾಸಿರವಿದ್ದು ।
ಅರ್ತಿಯಿಂ ಕತ್ತೆಯುರಚಿದಡರಲ್ಲಿ ।
ಅರ್ಥವುಂಟೆಂದ! ಸರ್ವಜ್ಞ ॥ ೧೨೦೮ ॥

* ಪ್ರಾಸವಿಲ್ಲದೆ ಪದವ ತಾಸು ಹಾಡಿದರೇನು? ।
ಸಾಸುವೆ ಎಣ್ಣೆ ಹದಮಾಡಿ ಕಣ್ಣಿಗೆ ।
ಹೂಸಿಕೊಂಡಂತೆ! ಸರ್ವಜ್ಞ ॥ ೧೨೦೯ ॥

* ಆಯೆಂದು ಅಳುಗೂಸ ಜೋಯೆಂದು ತೂಗಿದರೆ ।
ತಾಯ ಹಂಬಲವ ಮರಸುವದು ಸಿಸುಗಾನ- ।
ದಾಯತವನೋಡ! ಸರ್ವಜ್ಞ ॥ ೧೨೧೦ ॥

ಓದು.

† ಓದಿದಾ ಓದು ತಾ ಮೇದ ಕಬ್ಬಿನ ಸಿಪ್ಪೆ ।
ಓದಿನಾ ಒಡಲನರಿದಡೆ ಸಿಪ್ಪೆ ಕ- ।
ಬ್ಬಾದಂತೆ ಕಾಣೊ! ಸರ್ವಜ್ಞ ॥ ೧೨೧೧ ॥

ಸಮಯೋಚಿತ ಮಾತು.

* ತಿಂದು ಗಾದೆಯಮೇಲೆ ಬಂದು ಗುರು ಬೀಳ್ವಂತೆ ।
ಬಂದ ಪ್ರಸ್ತಾಪಕ್ಕೊದಗಿದರಾಮಾತ- ।
ನೊಂದೆನ್ನಬಹುದೆ? ಸರ್ವಜ್ಞ ॥ ೧೨೧೨ ॥

* ಪ್ರಸ್ತಾಪಕ್ಕೊದಗಿದಾ ಕತ್ತೆ ಮದಕರಿಯಂತೆ ।
ಪ್ರಸ್ತಾಪ ತೀರ್ದ ಮರುದಿನ ಮದಕರಿಯು ।
ಕತ್ತೆಯಂತಕ್ಕು ಸರ್ವಜ್ಞ ॥ ೧೨೧೩ ॥

† ಪ್ರಸ್ತಕ್ಕೆ ನುಡಿದಿಹರೆ ಬೆಸ್ತಂತೆ ಇರಬೇಕು ।
ಪ್ರಸ್ತವ ತಪ್ಪಿ ನುಡಿದರೆ ನಡು ಬೆನ್ನ ।
ಅಸ್ತಿ ಮುರಿದಂತೆ ಸರ್ವಜ್ಞ ॥ ೧೨೧೪ ॥

* ಪ್ರಸ್ತವ ನುಡಿಯೆ ಪ್ರ । ಶಸ್ತವಾಗಿರಬೇಕು ।
ಪ್ರಸ್ತವ ತಪ್ಪಿ ನುಡಿದರೆ ದೇವಾಂಗದ ।
ದುಸ್ತು ಬಿದ್ದಂತೆ ! ಸರ್ವಜ್ಞ ॥ ೧೨೧೫ ॥

† ಪ್ರಸ್ತಕಿಲ್ಲದ ಮಾತು ಹತ್ತು ಸಾವಿರ ವ್ಯರ್ಥ ।
ಕತ್ತೆ ಕೂಗಿದರೆ ಫಲವುಂಟು ಬರಿಮಾತು ।
ಕತ್ತೆಗು ಕಷ್ಟ ಸರ್ವಜ್ಞ ॥ ೧೨೧೬ ॥

* ಹೊಲಬನರಿಯದ ಮಾತು ತಲೆಬೇನೆ[1]ಯೆದ್ದಂತೆ ।
ಹೊಲಬರಿತು ಒಂದು ನುಡಿದರೆ ಅದು ದಿವ್ಯ ।
ಫಲ ಪಕ್ವದಂತೆ ! ಸರ್ವಜ್ಞ ॥ ೧೨೧೭ ॥

ಮಾತಿನ ಮರ್ಮ.

* ಮಾತು ಮಾತಿಗೆ ತಕ್ಕ ಮಾತು ಕೋಟಿಗಳುಂಟು ।
ಮಾತಾಡಿ ಮನಕೆ ಮುನಿಸಕ್ಕು ಮಾತೀಲಿ ।
ಸೋತವನೆ ಜಾಣ ! ಸರ್ವಜ್ಞ ॥ ೧೨೧೮ ॥

† ಮಾತಿನಿಂ ನಗೆನುಡಿಯು ! ಮಾತಿನಿಂ ಹಗೆ ಕೊಲೆಯು ! ।
ಮಾತಿನಿಂ ಸರ್ವ ಸಂಪದವು ! ಲೋಕಕ್ಕೆ ।
ಮಾತೆ ಮಾಣಿಕವು ! ಸರ್ವಜ್ಞ ॥ ೧೨೧೯ ॥

* ಮಾತ ಬಲ್ಲಾತಂಗೆ ಯಾತವು ಸುರಿದಂತೆ ।
ಮಾತಾಡಲರಿಯದಾತಂಗೆ ಬರಿ ಯಾತ ।
ನೇತಾಡಿದಂತೆ ಸರ್ವಜ್ಞ ॥ ೧೨೨೦ ॥

1. W. K. ತಲೆಬಾಗಿ.

* ಮಾತು ಬಲ್ಲಹ ತಾನು ಸೋತು ಹೋಹುದು ಲೇಸು।
ಮಾತಿಗೆ ಮಾತು ಮಥಿಸಲ್ಕೆ ವಿಧಿ ಬಂದು।
ಆತುಕೊಂಡಿಹುದು! ಸರ್ವಜ್ಞ ॥ ೧೨೨೧ ॥

* ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ।
ರಸಿಕನಲ್ಲದನ ಬರಿಮಾತು ಕಿವಿಯೊಳ್ಕ-।
[1]ರ್ದಸಿಯು ಬಡಿದಂತೆ ಸರ್ವಜ್ಞ ॥ ೧೨೨೨ ॥

† ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ।
ಹೊತ್ತಾಗಿ ನುಡಿದ ಮಾತು ಕೈಜಾರಿದ।
ಮುತ್ತಿನಂತಿಹುದು ಸರ್ವಜ್ಞ ॥ ೧೨೨೩ ॥

* ಕಾದ ಕಬ್ಬುನವು ತಾ ಹೊಯ್ದೊಡನೆ ಕೂಡುವದು।
ಹೋದಲ್ಲಿ ಮಾತ ಮರೆದರೆ ಕಬ್ಬುನವು।
ಕಾದಾರಿದಂತೆ! ಸರ್ವಜ್ಞ ॥ ೧೨೨೪ ॥

* ಮಾತು ಬಲ್ಲಾತಂಗೆ ಮತ್ತೊಂದು[2] ಮಾಣಿಕವು।
ಮಾತನು ಅರಿಯದಧಮಂಗೆ ಮಾಣಿಕವು।
ತೂತು ಬಿದ್ದಂತೆ! ಸರ್ವಜ್ಞ ॥ ೧೨೨೫ ॥

† ಮಾತು ಮಾಣಿಕಮುತ್ತು ಮಾತು ತಾ ಸದರವು।
ಮಾತಾಡಿದಂತೆ ನಡೆದಾತ ಜಗವನು।
ಕೂತಲ್ಲಿ ಆಳ್ವ ಸರ್ವಜ್ಞ ॥ ೧೨೨೬ ॥

---

1. C. ಕೂರಸಿ. 2. Ac. ಮುತ್ತೊಂದು.

* ಮಾತಿಂಗೆ ಮಾತುಗಳು ಹಿತು[1] ಸಾಸಿರವುಂಟು ।
ಮಾತಾಡಿದಂತೆ ನಡೆದರೆ ಕೈಲಾಸ- ।
ಕ್ಕಾತನೇ ಒಡೆಯು ಸರ್ವಜ್ಞ ॥ ೧೨೨೭ ॥

ನಗೆ.

* ಕತ್ತಿಯರಚಿದಡಲ್ಲಿ ತೊತ್ತು ಹಾಡಿದಡಲ್ಲಿ ।
ಮತ್ತೆ ಕುಲರಸಿಕನಿರುವಲ್ಲಿ ಕಡುನಗೆಯು ।
ಹುತ್ತು ಕಾಣಯ್ಯ ! ಸರ್ವಜ್ಞ ॥ ೧೨೨೮ ॥

ದೇಸಾಯು.

† ಕೋಟಿ ವಿದ್ಯಗಳಲ್ಲಿ ಮೇಟಿ ವಿದ್ಯವೆ ಮೇಲು ।
ಮೇಟಿಯಿಂ ರಾಟ ನಡೆದುದಲ್ಲದೆ ದೇಶ- ।
ದಾಟವೇ ಕೆಡುಗು ! ಸರ್ವಜ್ಞ ॥ ೧೨೨೯ ॥

* ಎತ್ತಿಮ್ಮ ಹೂಡುವದು ಉತ್ತೊಮ್ಮ ಹರಗುವದು ।
ಬಿತ್ತೊಮ್ಮ ಹರಗಿ ಕಳೆದೆಗೆದಾ ಬೆಳೆಯು ತ[2]- ।
ನ್ನೆತ್ತರವಹುದು[3] ! ಸರ್ವಜ್ಞ ॥ ೧೨೩೦ ॥

* ಉತ್ತೊಮ್ಮ ಹರಗದೇ ಬಿತ್ತೊಮ್ಮ ನೋಡದೇ ।
ಹೊತ್ತೇರಿ ಹೊಲಕೆ ಹೋದರೆ ಅವ ತನ್ನ ।
ನೆತ್ತರವ ಸುಡುವ ! ಸರ್ವಜ್ಞ ॥ ೧೨೩೧ ॥

† ನೆಲ್ಲೆತ್ತು ಭಂಡಿ ಬಲ । ವಿಲ್ಲದಾ ಆರಂಬ ।
ಕಲ್ಲು ಕಳೆಗಳನು ಬಿಟ್ಟವ ಹೊಲದೊಳು ।
ಹುಲ್ಲನೇ ಬೆಳೆವ ! ಸರ್ವಜ್ಞ ॥ ೧೨೩೨ ॥

---

1. F. ಅತು. 2-3. C. ಬೆಳೆದೊಡೆ ಛತ್ರದ ವೊತ್ತ.

† ಹರಗದಾ ಎತ್ತಾಗಿ ಬರಡಾದ ಹಯಿನಾಗಿ ।
ಹರಟೆ ಹೊಡೆಯುವ ಮಗನಾಗಿ ಹೊಲದಲ್ಲಿ ।
ಕರಡ ಬೆಳೆದಿಹುದು ! ಸರ್ವಜ್ಞ ॥ ೧೨೩೩ ॥

* ದಂಡು ಇಲ್ಲದ ಅರಸು ಕೊಂಡವಿಲ್ಲದ ಹೋಮ ।
ಬಂಡಿಯಿಲ್ಲದನ ಬೇಸಾಯ ತಲೆಹೋದ ।
ಮುಂಡದಂತಿಕ್ಕು ! ಸರ್ವಜ್ಞ ॥ ೧೨೩೪ ॥

* ಹದಬೆದೆಯಲಾರಂಬ ಕದನದಲಿ ಕೂರಂಬ ।
ನದಿಯ ಹಾಯುವಲಿ ಹರುಗೋಲ ಮರೆದಾತ ।
ವಿಧಿಯ ಬೈದೇನು ! ಸರ್ವಜ್ಞ ॥ ೧೨೩೫ ॥

* ಬೆಕ್ಕು ಮನೆಯೊಳು ಲೇಸು ಮುಕ್ಕು ಕಲ್ಲಿಗೆ ಲೇಸು ।
ನಕ್ಕು ನಗಿಸುವಾ ನುಡಿ ಲೇಸು ಊರಿಗೆ ।
ಒಕ್ಕಲಿಗ ಲೇಸು ಸರ್ವಜ್ಞ ॥ ೧೨೩೬ ॥

ಹೈನ.

* ತುರುಕರುವು ಇರದೂರು ನರಕ ಭಾಜನಮಕ್ಕು ।
ತುರುಕರುಂಟಾದರುಣಲುಂಟು ಜಗಕೆಲ್ಲ ।
ತುರುಕರುವೆ ದೈವ ! ಸರ್ವಜ್ಞ ॥ ೧೨೩೭ ॥

ಬೇಸಿಗೆ

* ಕಾಲದೊಳು ಮಳೆಗಾಲ ಮಾಲೆಯೊಳು ಮಲ್ಲಿಗೆಯು ।
ಕಾಲವಾರರಲಿ ಕಡುಚಲುವ ಬೇಸಿಗೆಯು ।
ಕಾಲವೇ ಲೇಸು ಸರ್ವಜ್ಞ ॥ ೧೨೩೮ ॥

† ಬಾಲೆ ಬೋಳಿಯು ಹೊಲ್ಲ ಮಾಲೆ ಕೋಲಣಿ ಹೊಲ್ಲ ।
ಕಾಲವಾರೆಸೆಸದೊಳಗೆಲ್ಲ ಬೇಸಿಗೆಯ ।
ಕಾಲನೇ ಹೊಲ್ಲ ಸರ್ವಜ್ಞ ॥ ೧೨೩೮ ॥

ಬಡವ.

* ತುಂಬಿದಾ ಕೆರೆ ಬಾವಿ ತುಂಬಿದಂತಿರುವದೇ ? ।
ನಂಬಿರಬೇಡ ಲಕ್ಷ್ಮಿಯನು ಬಡತನವು ।
ಬೆಂಬಿಡದೆ ಬಹುದು ಸರ್ವಜ್ಞ ॥ ೧೨೩೯ ॥

* ಉದ್ದ ಮೊಲೆಗಳು ಹೊಲ್ಲ ಇದ್ದೂರ ಹಗೆ ಹೊಲ್ಲ ।
ತಿದ್ದದಾ ಹೋರಿ ಉಳಹೊಲ್ಲ ಬಡವಗೆ ।
ಬಿದ್ದ ನಡು ಹೊಲ್ಲ ಸರ್ವಜ್ಞ ॥ ೧೨೪೦ ॥

† ಶೀತದಲಿ ಹಿಮ ಹೊಲ್ಲ ಕೀತಿರುವ ವ್ರಣಹೊಲ್ಲ ।
ಪಾತಕನು ನೆರೆಯಲಿರಹೊಲ್ಲ ಬಡವನು ।
ಕೂತಿರಲು ಹೊಲ್ಲ ಸರ್ವಜ್ಞ ॥ ೧೨೪೧ ॥

† ಅಡಿಗಡಿಕೆಯು ಹೊಲ್ಲ ಗೋಡೆ ಬಿರಿಯಲು ಹೊಲ್ಲ ।
ಒಡಕಿನ ಮನೆಯೊಳಿರ ಹೊಲ್ಲ ಬಡವಂಗೆ ।
ಸಿಡುಕುತಾ ಹೊಲ್ಲ ಸರ್ವಜ್ಞ ॥ ೧೨೪೨ ॥

* ಅಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ ।
ಕೋಡಗನ ಕೈಯ್ಯ ಬಳೆಯೇಕೆ ಬಡವಗೆ ।
ನಾಡ ಮಾತೇಕೆ ? ಸರ್ವಜ್ಞ ॥ ೧೨೪೩ ॥

* ಆಡಿ ಅಳುಪಲು ಹೊಲ್ಲ ಕೂಡಿ ತಪ್ಪಲು ಹೊಲ್ಲ।
ಕಾಡುವ ನೆಂಟ ಬರ ಹೊಲ್ಲ; ಧನಹೀನ-।
ನಾಡುವದೆ ಹೊಲ್ಲ ಸರ್ವಜ್ಞ ॥ ೧೨೪೪ ॥

* ಕಳ್ಳ ನಾರಿಗೆ ಹೊಲ್ಲ ಮುಳ್ಳು ಕಾಲಿಗೆ ಹೊಲ್ಲ।
ಕೊಳ್ಳಿಯು ಬೆಳಕಿನೊಳುಣಹೊಲ್ಲ ಬಡವನು।
ಸುಳ್ಳಾಡ ಹೊಲ್ಲ ಸರ್ವಜ್ಞ ॥ ೧೨೪೫ ॥

† ಉದ್ದು ಮದ್ದಿಗೆ ಹೊಲ್ಲ ನಿದ್ದೆ ಯೋಗಿಗೆ ಹೊಲ್ಲ
ಬಿದ್ದಿರಲು ಹೊಲ್ಲ ಉದ್ಯೋಗಿ ಬಡವಗೆ।
ಗುದ್ಯಾಟ ಹೊಲ್ಲ ಸರ್ವಜ್ಞ ॥ ೧೨೪೬ ॥

† ಸಾಲ ಬಡವಗೆ ಹೊಲ್ಲ ಸೋಲು ಜೂಜಿಗೆ ಹೊಲ್ಲ।
ಬಾಲರು ಬೆನ್ನಿಲಿರ ಹೊಲ್ಲ ಬಡವಂಗೆ।
ಪಿಲಗವು ಹೊಲ್ಲ ಸರ್ವಜ್ಞ ॥ ೧೨೪೭ ॥

• ಇದ್ದಿಲೂ ಬಡವನೂ ಬಿದ್ದಲ್ಲಿ ಬಹುಕಷ್ಟ।
ಇದ್ದಿಲೊಂದೆಡೆಗೆ ಉಪಕಾರಿ ಬಡವನು।
ಇದ್ದಲ್ಲಿ ಕಷ್ಟ ಸರ್ವಜ್ಞ ॥ ೧೨೪೮ ॥

* ಬಡವ ಬಟ್ಟೆಯ ಹೋಗ। ಲೊಡನೆ ಸಂಗಡವೇಕೆ।
ಬಡತನವೆಂಬ ಹುಲಿಗೂಡಿ ಬರುವಾಗ।
ನುಡಿಸುವವರಿಲ್ಲ ಸರ್ವಜ್ಞ ॥ ೧೨೪೯ ॥

ತುರಕ.

† ತುಪ್ಪಾದ ತುರುಕನ ಒಪ್ಪಾದ ಹಾರುವನ।
ಸಪ್ಪಗೆ ಇಪ್ಪ ಜೇಡನಾ ಮಾತಿಗೆ।
ಒಪ್ಪ ಬೇಡೆಂದ! ಸರ್ವಜ್ಞ ॥ ೧೨೫೦ ॥

† ತುರಕನಾ ನೆರೆ ಹೊಲ್ಲ ಹರುಕನಾ ಕೆಳೆ ಹೊಲ್ಲ।
ಮುರುಕ ಮಾಡುವಳ ನುಡಿ ಹೊಲ್ಲ ಮಗುವಿಗೆ।
ಕರಕನ್ನ ಹೊಲ್ಲ ಸರ್ವಜ್ಞ ॥ ೧೨೫೧ ॥

† ರೊಟ್ಟಿಯನು ತಿಂಬುವರು ಭೇಟಿಯಿತ್ತೆನ್ನುವರು।
ಅಟ್ಟೆಂಬ ಹುಟ್ಟ ಪಲ್ಲೆಂಬ,[1] ತುರುಕನ।
ನಿಷ್ಠುರವೆ ಬೇಡ ಸರ್ವಜ್ಞ ॥ ೧೨೫೨ ॥

ತೆಲಗ

† ಅಡಿಕೆಯನು ಪೋಕೆಂಬ ಮಡಿಕೆಯನು ಕುಂಡೆಂಬ।
ಒಡವೆಯನಿಟ್ಟು ಜೂಜೆಂಬ ತೆಲುಗನ।
ನುಡಿಯು ಬೇಡೆಂದ ಸರ್ವಜ್ಞ ॥ ೧೨೫೩ ॥

† ಅಕ್ಕಿಯನು ಬಿಯೆಂಬ ಬೆಕ್ಕನ್ನು ಪಿಲ್ಲೆಂಬ।
ಚೊಕ್ಕಟದ ತೇಜಿ ಗುರ್ರೆಂಬ ತೆಲುಗನ।
ಸೊಕ್ಕ ನೋಡೆಂದ! ಸರ್ವಜ್ಞ ॥ ೧೨೫೪ ॥

† ಅಸುರ ಸ್ತ್ರೀಕಪಿಗೆ ಮಾ। ನುಷರಾಗಿ ಜನಿಸಿದರು।
ದಶಶಿರನ ವೈರಿ ಕರೆದಿಟ್ಟ ತೆಲುಗರ।
ಹೆಸರೆಲ್ಲರರಿಗು ಸರ್ವಜ್ಞ ॥ ೧೨೫೫ ॥

---

1. F. ಡೋವೆಂಬ D. ಅಲ್ಲೆಂಬ

ತಿಗುಳ (ತಮಿಳ).

† ಅಂಡೆಯುಲಿ ಕರೆಯುವರು ಕುಂಡೆಯಲಿ ಹೊರುತಿಹರು ।
ಗಂಡನುಳ್ಳಾಕೆಯುವಳೆಂಬ[1] ತಿಗುಳರ ।
ಗುಂಡಿಗಿಕ್ಕೆಂದ ಸರ್ವಜ್ಞ ॥ ೧೨೫೬ ॥

† ಕಾಯಿಗೇ ಕರಿಯೆಂಬ ಕೋಳಿಗೇ ಚೋರೆಂಬ ।
ಮಾಯದ ಮಕ್ಕಳುಡು ಎಂಬ ತಿಗುಳರಾ ।
ಬಾಯಿಗೆ ಬಡಿಯೋ! ಸರ್ವಜ್ಞ ॥ ೧೨೫೭ ॥

* ಕಾಳಕೂಟದ ವಿಷವು ಚೇಳು ನಂಬಿದ ಹಗೆಯು[2] ।
ಹಾಳೂರ ಚುರಚಿ, ನಸುಗುನ್ನಿ, ತಿಗುಳರ ।
ಗಾಳಿ ಬೇಡೆಂದ ಸರ್ವಜ್ಞ ॥ ೧೨೫೮ ॥

* ತಿಗುಳ ಜನಗೆಣೆಯಿಂದ ಬೊಗಳುವಾ ಶುನಿಲೇಸು ।
ಮುಗುಳಿಯು ಮರದ ನೆರಳಿಂದ ನುಂಗುವ ।
ನೆಗಳು ಲೇಸೆಂದ! ಸರ್ವಜ್ಞ ॥ ೧೨೫೯ ॥

ತೊತ್ತು.

* ಮುತ್ತು ಮುದಿಕೆಗೆ ಏಕೆ ಮತ್ತೆ ಕುರುಳುಗಳೇಕೆ ।
ಕತ್ತಲೆಯೊಳಗೆ ಮಡಿಯೇಕೆ ನಿಡುಗೇಶ ।
ತೊತ್ತಿಗೇಕೆಂದ? ಸರ್ವಜ್ಞ ॥ ೧೨೬೦ ॥

† ಹರಳು ಕಾಲಿಗೆ ಹೊಲ್ಲ ಹುರುಳಿ ಕತ್ತೆಗೆ ಹೊಲ್ಲ[3] ।
ಇರುಳೊಳು ಪಯಣ ಬರಹೊಲ್ಲ ತೊತ್ತಿಗೆ ।
ಕುರುಳು ತಾ ಹೊಲ್ಲ ಸರ್ವಜ್ಞ ॥ ೧೨೬೧ ॥

---

1. D. ಗಂಡನಿರುವಾಗ ಬಳಿ ಒಡೆವ. 2. Ac. ಚೇಳು ತುಂಬಿದ ಹಗೆಯು.
3. Gs. ಕುರುಡು ಹುಲಿಯೊಳು ಹೊಲ್ಲ.

* ಮುತ್ತು ಮೂಗುತಿಯೇಕೆ ಮತ್ತೆ ಕುರುಳುಗಳೇಕೆ ।
ಕತ್ತೆಯಾ ಕೊಳೆಗೆ ಮಡಿಯೇಕೆ ಧೊರೆತನ ।
ತೊತ್ತಿಗೇಕೆಂದ ಸರ್ವಜ್ಞ ॥ ೧೨೬೨ ॥

ಸಾಲಗಾರ

* ಸಾಲವನು ತರುವಾಗ ಹಾಲುಬೋನುಂಡಂತೆ ।
ಸಾಲಿಗನು ಬಂದು ಕೇಳಿದರೆ ಕುಂಡೆಗೆ ।
ಚೇಳು ಕಡಿದಂತೆ! ಸರ್ವಜ್ಞ ॥ ೧೨೬೩ ॥

* ಸಾಲವನು ಕೊಂಬಾಗ ಹಾಲು ಹಣ್ಣುಂಡಂತೆ ।
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ।
ಕೀಲು ಮುರಿದಂತೆ! ಸರ್ವಜ್ಞ ॥ ೧೨೬೪ ॥

* ಬೆಂದಿರಲು ಸಾಲವನು ತಂದು ತಿಂಬುದು ಸುಖವು ।
ತಂದಂತೆ ಹಿಂದೆ ಈವಾಗ ಹೇರಿಟ್ಟ ।
ಬಂದು ಬಡಿದಂತೆ! ಸರ್ವಜ್ಞ ॥ ೧೨೬೫ ॥

† ನೂರು ಹಣ ಕೊಡುವನಕ ಮೀರಿ ವಿನಯದಲಿಪ್ಪ ।
ನೂರರೊಳ್ಮೂರು ಕೇಳಿದರೆ ಸಾಲಿಗನು ।
ತೂರುವನು ಮಣ್ಣ! ಸರ್ವಜ್ಞ ॥ ೧೨೬೬ ॥

† ಕೊಂಬುವನು ಸಾಲವನು ಉಂಬುವನು ಲೇಸಾಗಿ ।
ಬೆಂಬಲವಿಡಿದು ಬಂದರೆ ದೇಗುಲದ ।
ಕಂಭದಂತಿಹನು ಸರ್ವಜ್ಞ ॥ ೧೨೬೭ ॥

I. W. ಹಾಲೋಗರುಂಡಂತೆ

† ಬೋರಾಡಿ ಸಾಲವನು ಹಾರಾಡಿ ಒಯ್ಯುವನು।
ಈರಾಡಿ ಬಂದು ಕೇಳಿದರೆ ಸಾಲಿಗನು।
ಚೀರಾಡಿ ಕೊಡನು ಸರ್ವಜ್ಞ ॥ ೧೨೬೮ ॥

* ಬೆಂಡಿರದೆ ಮುಳುಗಿದರು ಗುಂಡೆದ್ದು ತೇಲಿದರು।
ಬಂಡಿಯು ನೊಗವು ಚಿಗಿತರು ಸಾಲಿಗನು।
ಕೊಂಡದ್ದು ಕೊಡನು! ಸರ್ವಜ್ಞ ॥ ೧೨೬೯ ॥

* ಇತ್ತದನು ಈಯದನ ಮೃತ್ಯುವೊಯ್ಯದೆ ಬಿಡದು।
ಹತ್ತಿರ್ದ ಲಕ್ಷ್ಮಿ ತೊಲಗಿ ಹುಟ್ಟುವನವನ।
ತೊತ್ತಾಗಿ ಮುಂದೆ! ಸರ್ವಜ್ಞ ॥ ೧೨೭೦ ॥

* ಒಳ್ಳೆಯಾ ಮಾತಿಂಗೆ ಉಳ್ಳೊಡವೆ ಬಿಡೆನೆಂದು।
ಬೊಳ್ಳಿಟ್ಟು ಬೊಗಳಿ ಹುಸಿದು ಸಾಲವ ನುಂಗಿ।
ಇಲ್ಲೆನ್ನುತಿಹನು ಸರ್ವಜ್ಞ। ॥ ೧೨೭೧ ॥

* ಕಡ ತಂದೆನಲ್ಲದೇ ಹಿಡಿಕಳವ ಕದ್ದೆನೇ।
ತಡವಲು ಬೈದು ತೆಗೆದಾನು ಸಾಲಿಗನು।
ನಡುವೆ ಜಗಳವನು ಸರ್ವಜ್ಞ ॥ ೧೨೭೨ ॥

† ತೆಡಗೊಂಡೆನಲ್ಲದೇ ಹಿಡಿಯೆನಾಕದ್ದೆನೇ।
ತೊಡಗಲು ಬೈದು ಕಳುಹುವ, ಸಾಲಿಗನು।
ಕೊಡುವದೆ ಕಷ್ಟ! ಸರ್ವಜ್ಞ ॥ ೧೨೭೩ ॥

† ಇದ್ದೂರ ಸಾಲ ಹೇ। ಗಿದ್ದರೂ ಕೊಳಬೇಡ ।
ಇದ್ದುದನು ಸೆಳೆದು ಸಾಲಕೊಟ್ಟವನೊದ್ದು ।
ಗುದ್ದಿ ಕೇಳುವನು ! ಸರ್ವಜ್ಞ ॥ ೧೨೭೪ ॥

* ಬೇರೂರ ಸಾಲವನು ನೂರನಾದರು ಕೊಳ್ಳು ।
ಮೂರಾರು ವರುಷಕವ ಬಂದ ದಾರಿಯಲಿ ।
ಸಾರಿ ಹೋಗುವನು ! ಸರ್ವಜ್ಞ ॥ ೧೨೭೫ ॥

* ಗಡ್ಡವಿಲ್ಲದ ಮೋರೆ ದುಡ್ಡು ಇಲ್ಲದ ಚೀಲ ।
ಬಡ್ಡಿಯ ಸಾಲ ತೆರುವನಾ ಬಾಳುವೆಯು ।
ಅಡ್ಡಕ್ಕು ಬೇಡ ! ಸರ್ವಜ್ಞ ॥ ೧೨೭೬ ॥

† ಬೇರವನು ಕೊಟ್ಟಣ್ಣ ಹೋರ್‍ಯಾನು ಚೀರ್‍ಯಾನು ।
ಮೀರಿದರೆ ಕಲ್ಲ ಹೊರಿಸ್ಯಾನು ಕೇಶವ ।
ಗೀರಿಕೊಂಡಾನೆ ಸರ್ವಜ ॥ ೧೨೭೭ ॥

† ಉದ್ದರಿಯ ಕೊಟ್ಟಾತ ಹದ್ದಾದ ಹಾವಾದ ।
ಎದ್ದೆದ್ದು ಬರುವ ನಾಯಾದ ಮೈಲಾರ ।
ಗೊಗ್ಗಯ್ಯನಾದ ! ಸರ್ವಜ್ಞ ॥ ೧೨೭೮ ॥

* ಇಲ್ಲದಿಹ ಕಾಲಕ್ಕೆ ಹೊಲ್ಲನವ ಜನರಿಂಗೆ ।
ಅಲ್ಲದ ಗುಣದ ಅರಸಿಂಗೆ, ಸಾಲಕ್ಕೆ ।
ಕಲ್ಲೆದೆಯು ಬೇಕು ಸರ್ವಜ್ಞ ॥ ೧೨೭೯ ॥

* ನಂಬಿಕೆಯುವುಳ್ಳನಕ ಕೊಂಬುವದು ಸಾಲವನು।
ನಂಬಿಗೆಗೆಟ್ಟ ಬಳಿಕ ಬೆಂದಾವಿಗೆಯು[1]।
ಕುಂಭದಂತಿಹನು! ಸರ್ವಜ್ಞ ॥ ೧೨೮೦ ॥

* ಹಾಲು ಬೋನವು ಲೇಸು ಮಾಲೆ ಕೊರಳಿಗೆ[2] ಲೇಸು।
ಸಾಲವಿಲ್ಲದ ಮನೆ ಲೇಸು ಬಾಲಕರ।
ಲೀಲೆ ಲೇಸೆಂದ! ಸರ್ವಜ್ಞ ॥ ೧೨೮೧ ॥

## ಅಕ್ಕಸಾಲಿಗ.

* ಅಕ್ಕಸಾಲೆಯನೂರಿ। ಗೊಕ್ಕಲೆಂದೆನಬೇಡ।
ಚಿಕ್ಕ ಬಂದಿಲಿಯ ಹಿಡಿವಂತೆ ಊರಿಗೆ।
ರಕ್ಕಸನರಿಗು! ಸರ್ವಜ್ಞ ॥ ೧೨೮೨ ॥

* ಹಣವಿಗೊಂದೀಸವಿ। ಪ್ರಣಕ್ಕೊಂದು ಬೇಳೆಯ।
ತ್ರಿಣಯನ ಮುಕುಟವಾದರಕ್ಕಸಾಲಿ।
ಟೊಣೆಯದೇ ಬಿಡನು ಸರ್ವಜ್ಞ ॥ ೧೨೮೩ ॥

* ಕಡುಗಾಸಿ[3] ಚಿಮ್ಮಾಡಿ ಕುಡಿಮುಗುಚಿ ಕತ್ತರಿಸಿ।
ಪೊಡೆವೆಡೆಗಳೊಳಗೆ ಪಿಡಿಸಿದನು ಸವಳಿಸಿ।
ಪಡೆವ ಪ್ರತಿವೆರಸಿ! ಸರ್ವಜ್ಞ ॥ ೧೨೮೪ ॥

* ನೆವದೊಳೆಡೆಯಾಡಿಸುತ ತವೆಪಖನ ನುಡಿಯಿಸುತ[4]।
ಕವಿದಿರಲು ಒಗೆದ ಚಿನ್ನವ ಪ್ರತಿವೆರಸಿ।
ತವಕದಲಿ ತೆಗೆವ ಸರ್ವಜ್ಞ ॥ ೧೨೮೫ ॥

---

1. C. ಬೆಂದಡವಿಯು. 2. Gs. ಬಾಲೆ ಸಂಜೆಗೆ. 3. Gs. ಕಡಿಮಾಡಿ.
, Gs. ಅವಸರವ ನಡೆಯಿಸುತ.

* ಬೂದಿಯೊಳು ಹುದುಗಿಸುತ ವೇದಿಸಿ ಮರೆಮಾಡಿ ।
ಕಾದಿರ್ದ ಚಿನ್ನದೊಳು ಬೆರಸಿ, ಒರೆಹಚ್ಚಿ ।
ಊದುತಾ ಟೊಣೆವ! ಸರ್ವಜ್ಞ ॥ ೧೨೮೭ ॥

† ತೆಗೆದತ್ತಲಿಳಿಯುವದು ಮಿಗೆಯೊತ್ತಲಿರುಕಿಹುದು[1] ।
ಬಗೆಯ ರಸತುಂಬ ಬಹು ಸಂಚನದ ತ್ರಾಸ ।
ನೆಗಹಲೇ ಬೇಡ ಸರ್ವಜ್ಞ ॥ ೧೨೮೮ ॥

* ಅಕ್ಕಸಾಲೆಯ ಮಗುವು ಚಿಕ್ಕದೆಂದೆನಬೇಡ ।
ಚಿಕ್ಕಟು ವ್ಯೆಯ ಕಡಿವಂತೆ ತಮ್ಮೃಟವ– ।
ನಿಕ್ಕುತಲೆ ಕಳವ ಸರ್ವಜ್ಞ ॥ ೧೨೮೯ ॥

* ಸಂಚಕವನೀಯದಲೆ ಲಂಚಕರ ಹೊಗಿಸದಲೆ ।
ಅಂಚಿತವನೊದರಿ ಕಳುಹಿದರಕಸಾಲೆ ।
ವಂಚಿಸಲಿಕರಿಯ! ಸರ್ವಜ್ಞ ॥ ೧೨೯೦ ॥

ಬಡಿಗ.

† ಅಡ್ಡ ಬಡ್ಡಿಯು[2] ಹೊಲ್ಲ ಗಿಡ್ಡ ಬಾಗಿಲು ಹೊಲ್ಲ ।
ಹೆಡ್ಡರೊಡನಾಟಕರಹೊಲ್ಲ ಬಡಿಗ ತಾ ।
ರೊಡ್ಡನಿರ ಹೊಲ್ಲ ಸರ್ವಜ್ಞ ॥ ೧೨೯೧ ॥

ಬಣಜಿಗ.

* ಹಣಜಿ ಭತ್ತವು ಅಲ್ಲ ಅಣಬೆ ಸತ್ತಿಗೆಯಲ್ಲ ।
ಕಣಕದ ಕಲ್ಲು ಮಣಿಯಲ್ಲ ಬಣಜಿಗ ।
ಗುಣವಂತನಲ್ಲ[3] ಸರ್ವಜ್ಞ ॥ ೧೨೯೨ ॥

1 C. ಮಿಗಲಿತ್ತರಿಸುವದು 2 G. ಬೊಡ್ಡಿ. 3 C. ಕಣಕಟ್ಟು ಬಲ್ಲ.

* ಎಳ್ಳು ಗಾಣಿಗ ಬಲ್ಲ ಸುಳ್ಳು ಸಿಂಪಿಗ ಬಲ್ಲ ।
ಕಳ್ಳರನು ಬಲ್ಲ ತಳವಾರ, ಬಣಜಿಗ- ।
ನೆಲ್ಲವನು ಬಲ್ಲ! ಸರ್ವಜ್ಞ ॥ ೧೨೯೩ ॥

ಹರದ.

* ಕಟ್ಟಾಸೆ ಭಾವಿಂಗೆ ಕೊಟ್ಟಾಸೆ ಸೂಳೆಗೆ ।
ಹೊಟ್ಟೆಯು ಆಶೆ ಬಡವಂಗೆ; ಹರದಂಗೆ ।
ಪಟ್ಟಣದಾಶೆ; ಸರ್ವಜ್ಞ ॥ ೧೨೯೪ ॥

† ಮೆಟ್ಟಾಸೆ ಕಾಲಿಗೆ ಹೊಟ್ಟಾಸೆ ಆವಿಂಗೆ ।
ಬೆಟ್ಟಗಳಾಸೆ ಮೃಗಗಳಿಗೆ; ಹರದಂಗೆ ।
ಇಟ್ಟೆಡೆಗಳಾಸೆ; ಸರ್ವಜ್ಞ ॥ ೧೨೯೫ ॥

* ಕೊಂಬು ಹೋರಿಗೆ ಲೇಸು ತುಂಬು ಕೇರಿಗೆ ಲೇಸು ।
ಕುಂಬಾರ ಲೇಸು ಊರಿಗೆ ಹರದಂಗೆ ।
ಸಂಬುಗೆಯೆ ಲೇಸು ಸರ್ವಜ್ಞ ॥ ೧೨೯೬ ॥

* ಹರದನಾ ಮಾತನ್ನು ಹಿರಿದು ನಂಬಲು ಬೇಡ ।
ಗರಗಸದೊಡನೆ ಮರಹೋರಿ ತನ್ನ ತಾ- ।
ಸಿರಿದುಕೊಂಡಂತೆ ಸರ್ವಜ್ಞ ॥ ೧೨೯೭ ॥

ಪಂಚಾಳ.

† ಪಂಚಾಳರಯ್ವರೂ ವಂಚನೆಗೆ ಗುರುಗಳು ।
ಕಿಂಚಿತ್ತು ನಂಬಿ ಕೆಡಬೇಡ! ತಿಗುಣಿಯ ।
ಮಂಚದಂತಿಹರು! ಸರ್ವಜ್ಞ ॥ ೧೨೯೮ ॥

* ಕಳ್ಳನೂ ಒಳ್ಳಿದನು ಎಲ್ಲ ಜಾತಿಯೊಳಿಹರು ।
ಕಳ್ಳನೊಂದೆಡೆಗೆ ಉಪಕಾರಿ, ಪಂಚಾಳ- ।
ನೆಲ್ಲರಲಿ ಕಳ್ಳ! ಸರ್ವಜ್ಞ ॥ ೧೨೯೯ ॥

ಜಾಲಗಾರ.

* ಸಾಲಿಗನಲಿ ಅಕ್ಕ । ಸಾಲೆಯುಲಿ ನಂಬಿಕೆಯು ।
ಜಾಲಗಾರನಲಿ ದಯೆ ಧರ್ಮ, ಮುನ್ನಾವ ।
ಕಾಲದಲಿ ಇಲ್ಲ ಸರ್ವಜ್ಞ ॥ ೧೩೦೦ ॥

ಹಟಗಾರ.

* ಮಠಪತಿಗೆ ಭಕ್ತಿಲ್ಲ ಕಟುಗಂಗೆ ಮುಕ್ತಿಲ್ಲ ।
ಪಟವೆಂಬುದಕ್ಕೆ ನೆರಳಿಲ್ಲ ಹಟಗಾರ ।
ಕುಟಿಲನೆಂದರಿಗು! ಸರ್ವಜ್ಞ ॥ ೧೩೦೧ ॥

ಹೇಡಿ

† ಹೆಂಡತಿಗೆ ಅಂಜುವಾ ಗಂಡಸಾನೇನೆಂಬೆ ।
ಹಿಂಡು ಕೋಳಿಗಳ ಮುರಿತಿಂಬ ನರಿ, ನಾಯು ।
ಕಂಡೋಡಿದಂತೆ; ಸರ್ವಜ್ಞ ॥ ೧೩೦೨ ॥

ಗಾಜುಗಾರ.

† ಉಣ್ಣದಲೆ ಉರಿಯುವರು ಮಣ್ಣಿನಲಿ ಮೆರೆಯುವರು ।
ಬಣ್ಣಗಳ ಬೆರಸಿ ಕರೆಯುವರು ಗಾಜುಗಾ- ।
ರಣ್ಣಗಳು ನೋಡ! ಸರ್ವಜ್ಞ ॥ ೧೩೦೩ ॥

* ಓಜನೊಕ್ಕಲು ಅಲ್ಲ ಹೂಜೆ ಭಾಂಡದೊಳಲ್ಲ ।
ಗಾಜೊಂದು ಲೋಹದೊಳಗಲ್ಲ! ಅಂಬಲಿಯು ।
ಭೋಜನದೊಳಲ್ಲ ಸರ್ವಜ ॥ ೧೩೦೪ ॥

ಗಾಣಿಗ.

* ಗಾಣಿಗನ ಒಡನಾಟ ಕೋಣನಾ ಜೇಸಾಯ ।
ಕ್ಷೀಣಿಸುವ ಕುತ್ತ, ಸಮರ, ಕ್ಷಾಮಗಳಲಿ ।
ಪ್ರಾಣಗಾಸೆಂದ ಸರ್ವಜ್ಞ ॥ ೧೩೦೫ ॥

* ಗಾಣಿಗನು ಈಶ್ವರನ ಕಾಣನೆಂಬದು ಸಹಜ ।
ಏಣಾಂಕಧರನು ಧರೆಗಿಳಿಯುಲವನಿಂದ ।
ಗಾಣವಾಡಿಸುವ! ಸರ್ವಜ್ಞ ॥ ೧೩೦೬ ॥

ಬೇಡ.

* ಬೇಡಂಗೆ ಶುಚಿಯಿಲ್ಲ ಬೋಡಂಗೆ ರುಚಿಯಿಲ್ಲ ।
ಕೂಡಿಲ್ಲದಂಗೆ ಸುತರಿಲ್ಲ ಜಾಡನು ।
ಮೂಢಾತ್ಮನಲ್ಲ ಸರ್ವಜ್ಞ ॥ ೧೩೦೭ ॥

* ಅಗ್ಗ ಬಡವಗೆ ಲೇಸು ಬುಗ್ಗೆಯುಗಸಗೆ ಲೇಸು[1] ।
ತಗ್ಗಿನ ಗದ್ದೆ ಉಳಲೇಸು ಜೇಡಂಗೆ ।
ಮಗ್ಗ ಲೇಸೆಂದ ಸರ್ವಜ್ಞ ॥ ೧೩೦೮ ॥

ಬೇಡತಿ

† ಬೇಡಗಡವಿಯ ಚಿಂತೆ ಆಡಿಂಗೆ ಮಳೆ ಚಿಂತೆ ।
ನೋಡುವ ಚಿಂತೆ ಕಂಗಳಗೆ[2] ಹೆಳವಗೆ- ।
ದ್ದಾಡುವ ಚಿಂತೆ ಸರ್ವಜ್ಞ ॥ ೧೩೦೯ ॥

* ಆಡಿ ಮರುಗಲು ಹೊಲ್ಲ ಕೂಡಿ ಕಾಡಲು ಹೊಲ್ಲ ।
ಬೇಡನ ನಂಟು ತರವಲ್ಲ ಅವನ ಕುರಿ- ।
ತಾಡುವದೆ ಹೊಲ್ಲ ಸರ್ವಜ್ಞ ॥ ೧೩೧೦ ॥

1. F. ಹುಗ್ಗಿ ತುಪ್ಪಳ ಲೇಸು, 2 F. ನೋಡದ ಚಿಂತೆ ನವಿಲಿಂಗೆ,

* ಬೇಡನೊಳ್ಳಿದನೆಂದು ಆಡದಿರು ಸಭೆಯೊಳಗೆ।
ಬೇಡ ಬೇಡಿದನು ಕೊಡದಿರೆ ಬಯ್ಗಿಗೆ।
ಗೋಡೆಯನೊಡೆವ! ಸರ್ವಜ್ಞ ॥ ೧೩೧೧ ॥

† ಬೇಡನಾ ಕೆಳೆಯಿಂದ ಕೇಡು ತಪ್ಪದೆ ಬಹುದು।
ನೋಡಿ ನಂಬಿದರೆ ಕಡೆಗವ ಕೇಡನು।
ಮಾಡದೇ ಬಿಡನು! ಸರ್ವಜ್ಞ ॥ ೧೩೧೨ ॥

* ಗಾಡ[1]ನಿಲ್ಲದ ಬಿಲ್ಲು[2] ಕೋಡಿಯಿಲ್ಲದ ಕೆರೆಯು।
ಬೇಟಂಗೆ ಮಾಡಿದುಪಕಾರ ಕಡೆಯಲಿ।
ಕೇಡು ಕಾಣಯ್ಯ ಸರ್ವಜ್ಞ ॥ ೧೩೧೩ ॥

ಬೆಸ್ತ.

* ಕಿರಿಮೀನು ಹಿರಿಮೀನು ಕೊರೆಕೊರೆದು ತಿಂಬಾತ-।
ನಿರುವವನೊಬ್ಬ ಮಗಸಾಯೆ ನೋವಿನ।
ತರವ ತಾನರಿವ ಸರ್ವಜ್ಞ ॥ ೧೩೧೪ ॥

ಕಟಕ.

* ಕೋಳಿಗಳ ಹಂದಿಗಳ ಮೋಳದಲಿ ತಾ ಸಾಕಿ।
ಏಳುತಲೆ ಕರೆದು ಬಡಿತಿಂಬ ಪಾಪಿಗಳ।
ಬಾಳೆಲ್ಲ ನರಕ ಸರ್ವಜ್ಞ ॥ ೧೩೧೫ ॥

ಡೊಂಬ.

* ಕತ್ತಿಗೆ ಕೋಡಿಲ್ಲ ತೊತ್ತಿಗೆ ಗುಣವಿಲ್ಲ।
ಹತ್ತಿಯಾ ಹೋಟೆ ಗಿಳಿಯಿಲ್ಲ ಡೊಂಬಗೆ।
ವೃತ್ತಿಯೇ ಇಲ್ಲ ಸರ್ವಜ್ಞ ॥ ೧೩೧೬ ॥

---

1 D. ಹೂಡೆ. 1 & 2 Gs. ಗೂಡು ಇಲ್ಲದ ಮರ್ರಿಯು.

ಸುಂಕಿಗ.

† ಸುಂಕದಾ ಅಣ್ಣಗಳ ಬಿಂಕವನು ಏನೆಂಬೆ ।
ಸುಂಕಕ್ಕೆ ಸಟೆಯು ನೆರೆಯಾಡಿ ಕಡೆಯಲಿ ।
ಟೊಂಕ ಮುರಿದಿಹುದು! ಸರ್ವಜ ॥ ೧೩೧೭ ॥

* ಸೀತೆಯಿಂ ಹೆಣ್ಣಿಲ್ಲ ಸೂತನಿಂದಾಳಿಲ್ಲ ।
ಮಾತೀಲಿ ಸೋತಗಿದಿರಿಲ್ಲ ಶೂದ್ರಗೆ ।
ಭೀತಿಯೇ ಇಲ್ಲ ಸರ್ವಜ್ಞ ॥ ೧೩೧೮ ॥

* ಗಡಿಯನಾಡಿನ ಸುಂಕ, ತಡಿಯಲಂಬಿಗ ಕೂಲಿ, ।
ಮಡದಿಯರೊತ್ತೆ, ಒಳಲಂಚ, ಇವು ನಾಲ್ಕು ।
ಅಡಿಯಿಟ್ಟಡಿಯಿಲ್ಲ; ಸರ್ವಜ್ಞ ॥ ೧೩೧೯ ॥

ಕೊಂಡೆಯ.

* ಭಂಡೆಯಾ ನಡೆ ಚಂದ ಮಿಂಡಿಯಾ ನುಡಿ ಚಂದ ।
ಕೊಂಡೆಯನು ಚಂದ ಅರಸಿಂಗೆ ಜಾರೆಗೆ ।
ಮಿಂಡನೇ ಚಂದ ಸರ್ವಜ್ಞ ॥ ೧೩೨೦ ॥

* ಭಂಡಿಯಚ್ಚಿಗೆ ಭಾರ ಮಿಂಡಿ ಮುದುಕಗೆ ಭಾರ ।
ಗುಂಡುಗಳು ಭಾರ ಚೈತ್ರಕ್ಕೆ, ಲೋಕಕ್ಕೆ ।
ಕೊಂಡೆಯನೆ ಭಾರ ಸರ್ವಜ್ಞ ॥ ೧೩೨೧ ॥

* ಬೋಳದಳೆಯಲು ಹೊಲ್ಲ ಕೀಳಿನೊಳು ಇರಹೊಲ್ಲ ।
ಹೇಳದೌತನಕೆ ಬರಹೊಲ್ಲ ಕೊಂಡೆಯನ ।
ಗಾಳಿಯೇ ಹೊಲ್ಲ ಸರ್ವಜ್ಞ ॥ ೧೩೨೨ ॥

* ನೆಗ್ಗಿಲಾನೆಗೆ ಹೊಲ್ಲ ಸಿಗ್ಗು ಸೂಳೆಗೆ ಹೊಲ್ಲ ।
ಸುಗ್ಗಿಯು ಮೇಲೆ ಮಳೆ ಹೊಲ್ಲ ಕೊಂಡೆಯನ ।
ಕಿಗ್ಗಳವೆ ಹೊಲ್ಲ ಸರ್ವಜ್ಞ ॥ ೧೩೨೩ ॥

* ತೊತ್ತಿನಲಿ ಗುಣವಿಲ್ಲ ಕತ್ತೆಗೆ ಕೋಡಿಲ್ಲ ।
ಬತ್ತಲಿದ್ದವಗೆ ಭಯವಿಲ್ಲ ಕೊಂಡೆಯರೊ- ।
ಳುತ್ತಮರೆ ಇಲ್ಲ ಸರ್ವಜ್ಞ ॥ ೧೩೨೪ ॥

ಕುಟಿಲಗಿತ್ತಿ.

* ಹನುಮನಿಂ ಲಂಕೆ ಫ । ಲ್ಗುಣನಿಂದ ಕಾಂಡವನ ।
ತ್ರಿಣಯನಿಂ ತ್ರಿಪುರ ಕೆಟ್ಟಂತೆ ಜಗವು ಕುಂ- ।
ಟಣಿಯಿಂದ ಕಡಗು ಸರ್ವಜ್ಞ ॥ ೧೩೨೫ ॥

ಜ್ಞಾನೋಕ್ತಿ.

* ಮುರಿದ ಹೊಂಬೆಸೆಯುವಡೆ ಕಿರಿದೊಂದು ರಜ ಬೇಕು ।
ಮುರಿದ ಕಾರ್ಯವನು ಬೆಸೆವಡೆ ಮತ್ತೊಂದ- ।
ನರಿದವರು ಬೇಕು ಸರ್ವಜ್ಞ ॥ ೧೩೨೬ ॥

* ಅರಿತವರ ಮುಂದೆ ತಂ । ನರಿವನ್ನು ಮೆರೆಯುವದು ! ।
ಅರಿಯದರ ಮುಂದೆ ಮೆರೆದರೆ ಹೊನ್ನಂಬ[1] ।
ತೊರೆಯುಲಿಚ್ಚಂತೆ[2] ಸರ್ವಜ್ಞ ॥ ೧೩೨೭ ॥

ಜ್ಞಾನಿಯುಜ್ಞಾನೆಂದು ಹೀನ ಜರಿದಡದೇನು ।
ಶ್ವಾನನು ಬೊಗಳುತಿರಲಾನೆಯದನೊಂದು ।
ಗಾನವೆಂದಂತೆ ಸರ್ವಜ್ಞ ॥ ೧೩೨೮ ॥

1 & 2 Gs. ಕರ್ಪುರವ ಉರಿಯುಲಿಚ್ಚಂತೆ.

* ಸಪ್ಪನ್ನ ಉಣ ಹೊಲ್ಲ ಮುಪ್ಪು ಬಡವಗೆ ಹೊಲ್ಲ ।
ತಪ್ಪಿನಲಿ ಸಿಲುಕಿ ಇರಹೊಲ್ಲ ಜಾರೆಯು- ।
ನಪ್ಪುವದೆ ಹೊಲ್ಲ ಸರ್ವಜ್ಞ ॥ ೧೩೨೯ ॥

• ಕೋಡಗನ ಒಡನಾಡಿ ಕೇಡಕ್ಕು ಸಂಸಾರ ।
ಕಾಡಾಡಿ ಕೆಂಪು ಮಾಣಿಕವ ಕಲ್ಲೆಂದು ।
ಈಡಾಡಿದಂತೆ ! ಸರ್ವಜ್ಞ ॥ ೧೩೩೦ ॥

* ಕಟ್ಟಾಳು ತಾನಾಗಿ ಬಟ್ಟೆಯಲಿ ಸೆರವೇಕೆ ।
ಸೆಟ್ಟಿಗೆ ತೊದಲು ನುಡಿಯೇಕೆ ಬಲ್ಲಿದಗೆ ।
ನಿಷ್ಠುರವು ಏಕೆ ಸರ್ವಜ್ಞ ॥ ೧೩೩೧ ॥

† ಬಗೆಯ ಭೋಗಗಳಿರಲು ನಗುತಿಹರು ಸತಿಸುತರು ।
ನಗ ಹೋಗಿ ಹೊಗೆಯು ಬರಲವರು ಅಡವಿಯ- ।
ಲೆಲ್ಲೊಗೆದು ಬರುತಿಹರು ಸರ್ವಜ್ಞ ॥ ೧೩೩೨ ॥

‖ ಸುಟ್ಟೋಲೆಯು ಬಿಡದೆ ತಾ। ನಟ್ಟಮೇಲುರಿದಂತೆ ।
ಕೊಟ್ಟ ಮೇಲುರಿವನಳಿಯನೆಂಬೀ ಮಾತು ।
ಕಟ್ಟಿ ಇಟ್ಟಂತೆ ಸರ್ವಜ್ಞ ॥ ೧೩೩೩ ॥

‖ ಅಂಡೆಬಾಯಿಯನೊಬ್ಬ ಕಂಡು ಮುಚ್ಚಲು ಬಹುದು ।
ಮುಂಡೆಗಳ ಬಾಯಿ ಮುಚ್ಚಲು ಸಲ್ಲವಿದು ।
ಕಂಡಿತವು ನೋಡ ಸರ್ವಜ್ಞ ॥ ೧೩೩೪ ॥

* ಅತಿಆಶೆ ಮಾಡುವನು ಗತಿಗೇಡಿಯಾಗುವನು ।
ಅತಿ ಆಶೆಯಿಂದ ಮತಿ ಕೆಡುಗು, ರತಿಯಿಂದ ।
ಸತಿ ಸುತರು ಕೆಡುಗು ಸರ್ವಜ್ಞ ॥ ೧೩೩೫ ॥

† ಅತ್ತೆ ಮಾಡಿದ ತಪ್ಪು ಗೊತ್ತಿಲ್ಲದಡಗಿಹುದು ।
ತೊತ್ತದನು ಮಾಡಿದರೆ ಕ್ಷಣದಿ ಸುತ್ತಲು ।
ಗೊತ್ತಿಹುದು ನೋಡ ! ಸರ್ವಜ್ಞ ॥ ೧೩೩೬ ॥

† ಅರಿಯೆನೆಂದೆಂಬುವದು ಅರಸು ಕೆಲಸವು ನೋಡ ।
ಅರಿದೆನೆಂದಿಹನು ಧೊರೆಗಳ ಆಳೆಂದು ।
ಮರೆಯುಬೇಡೆಂದ ! ಸರ್ವಜ್ಞ ॥ ೧೩೩೭ ॥

† ಅಲ್ಲಪ್ಪನೂರಲ್ಲಿ ಬಲ್ಲಪ್ಪನಲ್ಲಪ್ಪ ।
ಬಲ್ಲಪ್ಪನಿಪ್ಪ ಊರಲ್ಲಿ ಅಲ್ಲಪ್ಪ ।
ಬಲ್ಲಪ್ಪನಪ್ಪ ಸರ್ವಜ್ಞ ॥ ೧೩೩೮ ॥

* ವ್ಯಸನದಲೀದೇಹವು ಮಸಣವನು ಕಾಣುವದು ।
ವ್ಯಸನವನುಬಿಟ್ಟು ಹಸನಾಗಿ ದುಡಿದರೆ ।
ಅಶನ ವಸನಗಳು ಸರ್ವಜ್ಞ ॥ ೧೩೩೯ ॥

* ಗೀತ ವಿದ್ಯವ ಕಲಿತ ಜಾತರಾ ಒಲುಮೆಯುನು ।
ರೀತಿಯಲಿ ಅರಿಯದಿರುವರು ಪಾತಕರ ।
ಮಾತಿನಿಂ ಕೆಡುಗು ಸರ್ವಜ್ಞ ॥ ೧೩೪೦ ॥

† ಮನೆಯು ಬೆಂದರೆಸುಟ್ಟ ಮನುಜತಾ ಬೆಯ್ಯುವನೆ।
ಮನೆಯುವರೆಲ್ಲ ಬೆಂದರೂ ತಣ್ಣಗಿಹ।
ಮನವೇ ನಿಜ ಮನೆಯು ಸರ್ವಜ್ಞ ॥ ೧೩೪೧ ॥

* ಎಲ್ಲವರು ಬಯ್ದರೂ ಕಲ್ಲು ಕೊಂಡೊಗೆದರೂ।
ಅಲ್ಲದ ಮಾತು ನುಡಿದರೂ ಶಿವನಲ್ಲಿ।
ತಲ್ಲಣವು ಬೇಡ ಸರ್ವಜ್ಞ ॥ ೧೩೪೨ ॥

* ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ।
ಬಲ್ಲಿದರಿದ್ದು ಬಲವಿಲ್ಲ ಸಾಹಿತ್ಯ।
ವೆಲ್ಲರಿಗೆ ಇಲ್ಲ ಸರ್ವಜ್ಞ ॥ ೧೩೪೩ ॥

* ಉರಗನ ಮುಖದಿಸಿ। ಕ್ಕಿರುತಿಪ್ಪ ಕಪ್ಪೆತಾ-।
ಎರಗುವ ನೊಣಕೆ-ಹರಿದಂತೆ ಸಂಸಾರ-।
ದಿರವು ಕಾಣಯ್ಯ ಸರ್ವಜ್ಞ ॥ ೧೩೪೪ ॥

* ಮುಟ್ಟಿದೆಡರಿಗೆ ಅಭಯ ಕೊಟ್ಟಾತ ದಾತಾರ,
ಕೆಟ್ಟ ಕಾರ್ಯವನು ತಿದ್ದಿದರವನೊಂದು।
ನೆಟ್ಟನೇ ದೈವ ಸರ್ವಜ್ಞ ॥ ೧೩೪೫ ॥

* ಸಿದ್ಧರಿಗೆ ಯೋಗವನು, ಬುದ್ಧಿವಂತಗೆ ಮತಿಯ,।
ಬಿದ್ದ ಅಡವಿಯ ಕಿಚ್ಚನು, ಮುಳ್ಳು ಮೊನೆ,।
ತಿದ್ದುವವರಾರು? ಸರ್ವಜ್ಞ ॥ ೧೩೪೬ ॥

* ಆಡದೇ ಮಾಡುವನು ರೂಢಿಯೊಳಗುತ್ತಮನು ।
ಆಡಿ ಮಾಡುವನು ಮಧ್ಯಮನಧಮ ತಾ-।
ನಾಡಿ ಮಾಡದನು ಸರ್ವಜ್ಞ ॥ ೧೩೪೭ ॥

ಚತುರೋಕ್ತಿ.

* ಒಂದಕ್ಕೆ ಎಣೆಯಿಲ್ಲ ಸಂದಿಲ್ಲಎರಡಕ್ಕೆ ।
ಮುಂದೆ ಮೂರಕ್ಕೆ ಎಡೆಯಿಲ್ಲ ನಾಲ್ಕಕ್ಕೆ ।
ಹಿಂದು ಮುಂದಿಲ್ಲ ಸರ್ವಜ್ಞ ॥ ೧೩೪೮ ॥

* ಆಸೆ ಇಲ್ಲದೆ ದೋಸೆ ಮೀಸೆ ಇಲ್ಲದ ಮೋರೆ ।
ಬಾಸಿಂಗ ಹರಿದ ಮದುವೆಯು, ಇವು ಮೂರು ।
ಹೇಸಿ ಕಾಣಯ್ಯ; ಸರ್ವಜ್ಞ ॥ ೧೩೪೯ ॥

* ನಟ್ಟಡವಿಯಾ ಮಳೆಯು ದುಷ್ಟರಾ ಗೆಳೆತನವು ।
ಕಷ್ಟೆಯಾವದಳ ತಲೆಬೇನೆ ಇವು ಮೂರು ।
ಕೆಟ್ಟರೇ ಲೇಸು ಸರ್ವಜ್ಞ ॥ ೧೩೫೦ ॥

* ಪುಷ್ಪವಿಲ್ಲದ ಪೂಜೆ ಅಶ್ವವಿಲ್ಲದ ಅರಸು ।
ಒಪ್ಪಲೊಲ್ಲದಳ ನಗೆನುಡಿಯಿವು ಮೂರು ।
ಚಪ್ಪೆ ಕಾಣಯ್ಯ ಸರ್ವಜ್ಞ ॥ ೧೩೫೧ ॥

* ಅಚ್ಚು ಇಲ್ಲದ ಭಂಡಿ, ಮೆಚ್ಚು ಇಲ್ಲದ ಧೊರೆಯು ।
ರಚ್ಚೆಯಲಿಹನ ಸವಿಮಾತು ಎಂದಿಗೂ ।
ನೆಚ್ಚ ಬೇಡೆಂದ ಸರ್ವಜ್ಞ ॥ ೧೩೫೨ ॥

* ಒಕ್ಕಲಿಲ್ಲದ ಊರು ಮಕ್ಕಳಿಲ್ಲದ ಮನೆಯು ।
ಲೆಕ್ಕವಿಲ್ಲದವನ ಬೇಹಾರ ಇವು ಮೂರು ।
ದುಕ್ಕ ಕಾಣಯ್ಯ ಸರ್ವಜ್ಞ ॥ ೧೩೫೩ ॥

* ಒಕ್ಕರುಡುಗಿದ ಕಣಿಕ ಮಕ್ಕಳ್ಹಡೆದಾ ಸೂಳೆ ।
ಅಕ್ಕರವ ಕಲಿತ ಹೊಲೆಯನು ಇವು ಮೂರು ।
ಚೊಕ್ಕಟವಲ್ಲ ಸರ್ವಜ್ಞ ॥ ೧೩೫೪ ॥

* ಒಕ್ಕಲಿಗನೋದಲ್ಲ ಚಿಕ್ಕ ಹೆಬ್ಬುಲಿಯಲ್ಲ ।
ಎಕ್ಕೆಯ ಗಿಡವು ಬನವಲ್ಲ, ಇವು ಮೂರು ।
ಲೆಕ್ಕದೊಳಗಲ್ಲ; ಸರ್ವಜ್ಞ ॥ ೧೩೫೫ ॥

* ಕತ್ತೆಯೇರಲು ಹೊಲ್ಲ ತೊತ್ತು ಸಂಗವು ಹೊಲ್ಲ ।
ಬತ್ತಲೆ ಜಲವ ಹೊಗಹೊಲ್ಲ ಇವು ಮೂರ- ।
ಲತ್ಯಂತ ಹೊಲ್ಲ ಸರ್ವಜ್ಞ ॥ ೧೩೫೬ ॥

* ಉಪ್ಪಿಲ್ಲದೂಟಕ, । ಜೊಪ್ಪವಿಲ್ಲದ ನಾರಿ ।
ತೊಪ್ಪಲು ನೀರು, ಕೊನೆಗಬ್ಬು, ಇವು ನಾಲ್ಕು
ಚಪ್ಪೆ ಕಾಣಯ್ಯ ಸರ್ವಜ್ಞ ॥ ೧೩೫೭ ॥

* ಒಲೆಯು ಮೇಲಣ ಹಾಲು, ಚಲದಂಕದತಿ ಪಂಥ, ।
ಲಲನೆಯರೊಲುಮೆ, ಹಳುದಾರಿ, ಇವು ನಾಲ್ಕು ।
ಕೊಲಗಿದರೆ ಇಲ್ಲ ಸರ್ವಜ್ಞ ॥ ೧೩೫೮ ॥

* ಮಾತಿನಾ ಮಾಲೆಯೂ,[1] ತೂತಾದ ಮಡಿಕೆಯೂ, ।
ಹಾತೆಯು, ಹುಲ್ಲು[2]ಸರವೆಯು, ಇವು ನಾಲ್ಕು ।
ಯೇತಕ್ಕು ಬೇಡ ಸರ್ವಜ್ಞ ॥ ೧೩೫೯ ॥

* ಹೊಲೆಯಗಿತ್ತಾ ಸಾಲ, ಒಲೆಯ ಮೇಲಿನ ಹಾಲು ।
ಲಲನೆಯರೊಲುಮೆ, ಹುಲುಗಿಚ್ಚು, ಇವು ನಾಲ್ಕು ।
ನಿಲಲಿಲ್ಲವಯ್ಯ ಸರ್ವಜ್ಞ ॥ ೧೩೬೦ ॥

* ಕಕ್ಕೆ ಬಿಕ್ಕೆಯ ಕಾಯಿ, ಮಕ್ಕಳಿಲ್ಲದ ಪ್ರೌಢೆ, ।
ಒಕ್ಕಲಿಗನೋದು, ಕುರಿಬೆಣ್ಣೆ, ಇವು ಅಯ್ದು ।
ಲೆಕ್ಕದೊಳಗಲ್ಲ ಸರ್ವಜ್ಞ ॥ ೧೩೬೧ ॥

* ಸುಂಕಿಗನು, ಹುಲಿ, ಹಾವು,' ಬಿಂಕದಾ ಬೆಲೆವೆಣ್ಣು ।
ಕಂಕಿಯು, ಸುಂಕ, ನಸುಗುನ್ನಿ, ಇವು ಏಳು ।
ಸೊಂಕಿದರೆ ಬಿಡವು ಸರ್ವಜ್ಞ ॥ ೧೩೬೨ ॥

* ಬೆಂಕಿಯಲಿ ದಯವಿಲ್ಲ ಮಂಕನಲಿ ಮತಿಯಿಲ್ಲ ।
ಶಂಕಿನಾಧ್ವನಿಗೆ ಪ್ರತಿಯಿಲ್ಲ ಸ್ವರ್ಗದಿ ।
ಸುಂಕವೇ ಇಲ್ಲ ಸರ್ವಜ್ಞ ॥ ೧೩೬೩ ॥

---

1 D ಮುಳ್ಳ. 2 A ಹಾತೆಯು ಹುಳುವು W. ಪಾತಕನ ನೆರೆಹವು.

* ಜಾಣಂಗೆ ಮುನಿಸಿಲ್ಲ ಕೋಣಂಗೆ ಮತಿಯಿಲ್ಲ।
ಕಾಣದಂಧಕಗೆ ಹಗಲಿಲ್ಲ ಸಿಂಹಕೆ।
ಕೇಣವೇ ಇಲ್ಲ ಸರ್ವಜ್ಞ ॥ ೧೩೬೪ ॥

* ಮಗಳ ಮಕ್ಕಳು ಹೊಲ್ಲ ಹಗೆಯವರ ಗೆಣೆಹೊಲ್ಲ।
ಜಗಳವಾಡುವಳ ನೆರೆಹೊಲ್ಲ ಮೂಗಿಗೆ।
ನೆಗಡಿಯೇ ಹೊಲ್ಲ ಸರ್ವಜ್ಞ ॥ ೧೩೬೫ ॥

* ಹಾಸು ಇಲ್ಲದ ನಿದ್ರೆ ಪೂಸು ಇಲ್ಲದ ಮೋಹ।
ಭಾಷೆಯರಿಯದಳ ಗೆಳೆತನ ಮೋಟಗೈ।
ಬೀಸಿಕರೆದಂತೆ ಸರ್ವಜ್ಞ ॥ ೧೩೬೬ ॥

* ಮುದಿಯೆತ್ತಿನಾರಂಬ ಮುದಿಸೂಳೆಯಾ ಕೂಟ।
ಬೆದರುವ ಪಯಣ ತಲೆಹೊರೆ ತನ್ನತಾ-।
ನೊದೆದು ಕೊಂಡಂತೆ ಸರ್ವಜ್ಞ ॥ ೧೩೬೭ ॥

* ಅಬ್ಬೆಗರುಷಣವೇಕೆ ಕಬ್ಬೇಕೆ ಬೋಡಂಗೆ।
ನಿಬ್ಬಣವೇಕೆ ಕುರುಡಂಗೆ ವನದೊಳಗೆ।
ಹೆಬ್ಬುಲಿಯದೇಕೆ ಸರ್ವಜ್ಞ ॥ ೧೩೬೮ ॥

* ಆನೆಗಂದಳವೇಕೆ ಸೋನಂಗೆ ಸೊಬಗೇಕೆ।
ಗಾಣವಾಡುವಗೆ ಮುಡಿಯೇಕೆ ಮರುಳಗೆ।
ಆನಂದವೇಕೆ ಸರ್ವಜ್ಞ ॥ ೧೩೬೯ ॥

* ಅಪ್ಪ ಹಾಕಿದ ಗಿಡವು ಒಪ್ಪುತ್ತಲಿರುತಿರಲು।
ತಪ್ಪಿಲ್ಲವೆಂದು ಅದನೇರಿ ಮಗನುರ್ಲಿ-।
ಗೊಪ್ಪಿಕೊಳ್ಳುವನೆ? ಸರ್ವಜ್ಞ ॥ ೧೩೭೦ ॥

† ವೀರತನ, ವಿತರಣವು, ಸಾರಗನ ಚಪಲತೆಯು, ।
ಚಾರುತರರೂಪು, ಚದುರತನವೆಲ್ಲರಿಗೆ ।
ಹೋರಿದರೆ ಬಹುದೆ?. ಸರ್ವಜ್ಞ ॥ ೧೩೭೧ ॥

* ಸೊಡರು, ಸುಲಿಗೆಯು, ಆಳು,[1] ಪಡೆದುಂಬ[2] ಸೂಳೆಯೂ, ।
ತುಡುಗುಣಿ, ನಾಯಿ, ಅಳಿಯನು,[3] ಅರಸಾಳು, ।
ಒಡತನವರಿಯರು ಸರ್ವಜ್ಞ ॥ ೧೩೭೨ ॥

† ಬಂಧನದಲಿರುವವನು ಹಂದಿಯಂತಿರುತಿಹನು; ।
ಬಂಧು ವಿಲ್ಲದನು, ಬಡವನು, ದೇಶಿಗನು, ।
ಎಂದಳಿದರೇನು? ಸರ್ವಜ್ಞ ॥ ೧೩೭೩ ॥

* ಕೆರೆಯುದಲಿ ಬರುವವನ ಬರೆಯುದಲಿ ಓದುವನ ।
ಬರೆಗಾಲಿನಿಂದ ನಡೆವನ ಕರತಂದು ।
ಕೆರದಿ ಹೊಡೆಯೆಂದ ಸರ್ವಜ್ಞ ॥ ೧೩೭೪ ॥

---

1 W. ಸುಲಿಗೆಯ ಆಳು, A C. ಸಾಲದ ಆಳು. 2 C. ಕಳಿಗಳದ 3 C. ಮಡದಿ, ದ್ವಿಜ
ಜಸುಳ

* ವಿದ್ಯನೀಯದ ತಂದೆ, ಬುದ್ಧಿ ಕೊಡದಾ ಗುರುವು, ।
ಬಿದ್ದಿರಲು ಬಂದು ನೋಡದ ತಾಯಿಯು, ।
ಶುದ್ಧ ವೈರಿಗಳು! ಸರ್ವಜ್ಞ ॥ ೧೩೭೫ ॥

* ಅಳಿಯೂರ ತಳವಾರ ಕಳೆಯುಳ್ಳ ಸೂಳೆಯೂ ।
ಹೊಳಲ ಸುಂಕಿಗ, ಹಳೆಸಾಯಿ, ಯಾಚಕನು ।
ತೊಲಗುವವರಲ್ಲ ಸರ್ವಜ್ಞ ॥ ೧೩೭೬ ॥

* ಕರಿಗೆಕೇಸರಿವೈರಿ ದುರಿತಕ್ಕೆ ಹರವೈರಿ ।
ಉರವಣಿಸಿ ಬರುವ ಸಂಸಾರ ದುಃಖಕೆ ।
ಪರಿಣಾಮ ವೈರಿ ಸರ್ವಜ್ಞ ॥ ೧೩೭೭ ॥

† ಗೀತವಾದ್ಯವು ನೃತ್ಯ ಹಿತವರ ಒಲುಮೆಯೂ ।
ಪ್ರೀತಿಯ ನುಡಿಯು ಒಳಮಾತು ಹೆಗ್ಗಡೆಯ ।
ಮಾತಿನಿಂ ಕೆಡಗು! ಸರ್ವಜ್ಞ ॥ ೧೩೭೮ ॥

* ಮುತ್ತುರಗು, ಇಂಗು, ಮಧು, ಕಸ್ತುರಿಯು, ಇವು ಜನ್ಮ
ವೆತ್ತಿದ ಠಾವು[2] ಅತಿಕಷ್ಟ ಜಗದೊಳಿದು ।
ಉತ್ತಮರ ನೆಲೆಯು, ಸರ್ವಜ್ಞ ॥ ೧೩೭೯ ॥

* ಆಳು, ಸೂಳೆಯು, ನಾಯಿ, ಕೋಳಿ ಜೋಯಿಸ, ವೈದ್ಯ,
ಗೂಳಿಯು, ತಗರು, ಪ್ರತಿರೂಪ ಕಂಡರೆ ।
ಕಾಳಗವೆಂದ! ಸರ್ವಜ್ಞ ॥ ೧೩೮೦ ॥

---

1 A D. ತೊಳಲವೇಡವಿಲ್ಲ, B. ತೊಳಲುವವರಲ್ಲ, 2 D. [illegible].

* ನಲ್ಲ, ಒಲ್ಲೀ ಒಲ್ಲ; ನೆಲ್ಲಕ್ಕಿ ಬೋನೊಲ್ಲ; ।
ಅಲ್ಲವನೊಲ್ಲ; ಮೊಸರೊಲ್ಲ; ಯಾಕೊಲ್ಲ ? ।
ಇಲ್ಲದಕೆ ಒಲ್ಲ! ಸರ್ವಜ್ಞ ॥ ೧೩೮೧ ॥

ಅನುಪಮ ಪದಾರ್ಥಗಳು.

† ಮೇರುವಿಂಗೆಣೆಯಿಲ್ಲ ಧಾರುಣಿಗೆ ಸರಿಯಿಲ್ಲ ।
ತಾರಕನಿಂದ ಹಿತರಿಲ್ಲ ದೇವರು ।
ಬೇರೊಬ್ಬನಿಲ್ಲ! ಸರ್ವಜ್ಞ ॥ ೧೩೮೨ ॥

* ಪರಮಾತ್ಮಗೆಣೆಯಿಲ್ಲಂ । ಬರಕೆ ನಿಚ್ಚಣಿಯಿಲ್ಲ ।
ಹೊರಗಾದ[1] ಮೇಲೆ ಭಯವಿಲ್ಲ; ಮರ್ತ್ಯದೊ- ।
ಳಿರುವವರಿಲ್ಲ ಸರ್ವಜ್ಞ! ॥ ೧೩೮೩ ॥

† ಲಿಂಗದಿಂ ಘನವಿಲ್ಲ ಗಂಗೆಗಿಂ ಶುಚಿಯಿಲ್ಲ ।
ಕಂಗಳಿಂದಧಿಕ ಹಿತರಿಲ್ಲ ಭಕ್ತನು ।
ಜಂಗಮನಿಂದಿಲ್ಲ ಸರ್ವಜ್ಞ ॥ ೧೩೮೪ ॥

* ರಾಮನಾಮವೆನಾಮ ಸೋಮಶಂಕರ ಗುರುವು ।
ಆಮಹಾರುದ್ರ ಆಧಿದೈವ ಜಗದೊಳು ।
ಭೀಮನೇ ಭಕ್ತ ಸರ್ವಜ್ಞ ॥ ೧೩೮೫ ॥

* ಸತ್ಯಕ್ಕೆ ಸರಿಯಿಲ್ಲ ಮಿಥ್ಯಕ್ಕೆ ನೆಲೆಯಿಲ್ಲ[2] ।
ಹೆತ್ತಮ್ಮನಿಂದ ಹಿತರಿಲ್ಲ ನರರೊಳು ।
ನಿತ್ಯರೇ ಇಲ್ಲ ಸರ್ವಜ್ಞ ॥ ೧೩೮೬ ॥

1. Ac. ಹರಿಗಾದ. 2. A ಹೊಲಬಿಲ್ಲ. C ಬಲವಿಲ್ಲ.

* ರಾತ್ರಿಯೊಳು ಶಿವರಾತ್ರಿ ಜಾತ್ರೆಯೊಳು ಶ್ರೀಶೈಲ ।
ಕ್ಷೇತ್ರದೊಳಧಿಕ ಶ್ರೀಕಾಶಿ, ಶಿವತತ್ವ ।
ಸ್ತೋತ್ರದೊಳಧಿಕ! ಸರ್ವಜ್ಞ ॥ ೧೩೮೭ ॥

ಅನುಭವೋಕ್ತಿ.

* ಏರುವಾ ಕುದುರೆಯನು ಹೇರುವಾ ಎತ್ತನ್ನು ।
ಬೇರೂರಲಿದ್ದ ಸತಿಯನು ಬೇರೊಬ್ಬ- ।
ರೇರದೇ ಬಿಡರು ಸರ್ವಜ್ಞ ॥ ೧೩೮೮ ॥

† ಸೇರಿದಾ ಹೊಲವನ್ನು ಹೋರುವಾ ಮಗನನ್ನು
ಚಾರು ಮೈನೆರೆದ ಮಗಳನು ಪರರಲಿ ।
ಬೀರುವನೆ ಹೆಡ್ಡ ಸರ್ವಜ್ಞ ॥ ೧೩೮೯ ॥

* ಹಲ್ಲಮೇಲಿನ ಕೆಂಪು, ಕಲ್ಲಮೇಲಿನಹಂಸೆ,
ಮಲ್ಲಿಗೆಯುರಳತನಿಗಂಪು; ಹೊಸಮೋಹ ।
ನಿಲ್ಲವು ನೋಡ! ಸರ್ವಜ್ಞ! ॥ ೧೩೯೦ ॥

* ದಿನಪತಿಗೆ ಎಣೆಯಿಲ್ಲ ಧನಪತಿಗೆ ಸ್ಥಿರವಿಲ್ಲ।
ಅನುಭವಿಗೆ ಜೀರೆ ಮತವಿಲ್ಲ; ಅರಿದಗೆ[1] ।
ಮುನಿವವರಿಲ್ಲ[2] ಸರ್ವಜ್ಞ ॥ ೧೩೯೧ ॥

† ಕಾಯಕವು ಉಳ್ಳನಕ ನಾಯಕನು ಎನಿಸಿಪ್ಪ ।
ಕಾಯಕವು ತೀರ್ದ ಮರುದಿನ ಸುಡುಗಾಡ ।
ನಾಯಕನೆನಿಪ ಸರ್ವಜ್ಞ ॥ ೧೩೯೨ ॥

1 & 2 Gs. ಲೋಕದಸುಮತನೆ ಸಲ್ಲ.

* ಸತ್ತವರಿಗತ್ತು ಬೇ । ಸತ್ತವರು ಉಳಿವರೇ ।
ಹತ್ತೆಂಟುಕಾಲದೆಡನಕ್ಕ ಬಳಿಕೆಲ್ಲ- ।
ರತ್ತಲೇ ಅಕ್ಕ ಸರ್ವಜ್ಞ ॥ ೧೩೯೩ ॥

* ಕೂಡಿ ತಪ್ಪಲು ಬೇಡ ಓಡಿ ಸಿಕ್ಕಲು ಬೇಡ ।
ಆಡಿ ತಪ್ಪಿದರೆ ಇರಬೇಡ; ದುರಳರ ।
ಕೂಡಬೇಡೆಂದ! ಸರ್ವಜ್ಞ ॥ ೧೩೯೪ ॥

* ಹಂಗಿನರಮನೆಯಿಂದ ವಿಂಗಡದ ಗುಡಿಲೇಸು ।
ಭಂಗಬಟ್ಟುಂಬ ಬಿಸಿಯನ್ನಕಿಂತಲು ।
ತಂಗುಳವೆ ಲೇಸು ಸರ್ವಜ್ಞ ॥ ೧೩೯೫ ॥

* ಅಡಿಯುಮಾವಿನ ಹಣ್ಣು, ಕಡಿದಕಬ್ಬಿನಗಣಿಕೆ, ।
ಪಡೆದಒಡವೆಯನು, ಮಡದಿಯ, ಪರರಲಿ ।
ಬಿಡುವನೇ ಹೆಡ್ಡ; ಸರ್ವಜ್ಞ ॥ ೧೩೯೬ ॥

* ಜಾರೆ ನೆರೆಸೇರುವಗೆ ಶೂರರೊಳು ಹೋರುವಗೆ ।
ಊರಿರುಳ ಸಾರಿ ಕಳವಗೆ ತಿಳಿಯದೆ ।
ಮಾರಿ ಬಂದಿಹುದು! ಸರ್ವಜ್ಞ ॥ ೧೩೯೭ ॥

† ಹಾಲು ಇಲ್ಲದ ಊಟ ಬಾಲೆಯರ ಬರಿನೋಟ ।
ಕಾಲಿಲ್ಲದವನ ಹರಿದಾಟ ಕಂಗಳನ ।
ಕೋಲು ಕಳೆದಂತೆ! ಸರ್ವಜ್ಞ ॥ ೧೩೯೮ ॥

† ಆಳಾಗ ಬಲ್ಲವನು ಆಳುವನು ಅರಸಾಗಿ।
ಆಳಾಗಿ ಬಾಳಲರಿಯದನು ಕಡೆಯಲಿ।
ಹಾಳಾಗಿ ಹೋಹ! ಸರ್ವಜ್ಞ ‖ ೧೪೯೯ ‖

‖ ಒಬ್ಬನರಿದರೆ ಸ್ವಾಂತ ಇಬ್ಬರಲಿ ಏಕಾಂತ।
ಇಬ್ಬರನೊಬ್ಬನರಿದ ಬೇರೊಬ್ಬನಿಂ।
ಹಬ್ಬಿಲೋಕಾಂತ! ಸರ್ವಜ್ಞ ‖ ೧೫೦೦ ‖

* ಅಕ್ಕಿಯಿಂ ತೆಂಗು ಜಾ। ನಕ್ಕಿಯಿಂ ಲಂಕೆಯು।
ಮೆಕ್ಕಿಯಿಂ ಕಣಿಕ ಕೆಡುವಂತೆ ದುರ್ಬುದ್ಧಿ।
ಹೊಕ್ಕಲ್ಲಿ ಕೇಡು ಸರ್ವಜ್ಞ ‖ ೧೫೦೧ ‖

‖ ಇಬ್ಬರೊಳಗಿನ ಕಿಚ್ಚು ಒಬ್ಬರರಿಯದೆ ಹೊತ್ತಿ।
ಹಬ್ಬುತ್ತಲಿಬ್ಬರೊಳಗೊಬ್ಬ ಬೆಂದರಿ-।
ನ್ನೊಬ್ಬಗೆ ಹಬ್ಬ ಸರ್ವಜ್ಞ ‖ ೧೫೦೨ ‖

‖ ಗಾಳಿಗೆ ಮರನುರುಳಿ ಹುಲ್ಲೆಲೆಯು ಉಳಿವಂತೆ।
ಕೂಳಿನ ಬಲದಿ ಮೆರೆದುರಿವ ಖಳನಳಿದು।
ಕೀಳ ಬಾಳುವನು ಸರ್ವಜ್ಞ ‖ ೧೫೦೩ ‖

* ಗವುಡನೊಳು ಹಗೆತನವು ಕಿವುಡನೊಳು ಏಕಾಂತ।
ಪ್ರವುಢನೊಳು ಮೂಢನುಪದೇಶ ಹಸಿದೆದ್ದು।
ತವುಡು ತಿಂದಂತೆ ಸರ್ವಜ್ಞ ‖ ೧೫೦೪ ‖

* ಎಲ್ಲವನು ಅರಿಯುವದು ಬಲ್ಲವನು ಎನಿಸುವದು ।
ನಲ್ಲಳನು ಅರಿತು ಕೂಡುವದು ಜಗದೊಳ- ।
ಗೆಲ್ಲವರಿಗಿಹುದು ! ಸರ್ವಜ್ಞ ॥ ೧೪೦೫ ॥

॥ ಮುದ್ದುಮನುಜನ ಕೆಡಿಸ । ಲಿದ್ದು ದುರ್ಬುದ್ಧಿಯುಲಿ ।
ಯುದ್ಧವನು ಹೂಡಿ ಆಡಿದರೆ ಗಡಿಗೆಗೆ ।
ಗೆದ್ದಲ್ಹಿಡಿದಂತೆ ಸರ್ವಜ್ಞ ॥ ೧೪೦೬ ॥

* ಬೇಗೆಯೊಳು ಹೋಗದಿರು ಮೂಗರೊಳು ನುಡಿಯದಿರು ।
ಆಗದರ ನಂಬಿ ಕೆಡದಿರು ! ನಡುವಿರುಳು ।
ಹೋಗದಿರು ಪಯಣ ! ಸರ್ವಜ್ಞ ॥ ೧೪೦೭ ॥

* ಮೆಚ್ಚದಿರು ಪರಸತಿಯ ರಚ್ಚೆಯೊಳು ಬೆರೆಯದಿರು ।
ನಿಚ್ಚನೆರೆಯೊಳಗೆ ಕಾದದಿರು ಒಬ್ಬರ ।
ಇಚ್ಛೆಯುಲಿರದಿರು ಸರ್ವಜ್ಞ ॥ ೧೪೦೮ ॥

* ಬದ್ಧರಲಿ ಋಣದಲ್ಲಿ, ಉದ್ಯೋಗವಳಿದಲ್ಲಿ ।
ನಿರ್ದೇಶವಾದ ಪಥದಲ್ಲಿ ಹೊದ್ದಿದರೆ ।
ಬುದ್ಧಿ ತಪ್ಪುವದು ! ಸರ್ವಜ್ಞ ॥ ೧೪೦೯ ॥

* ಮಾನಾಪಮಾನವನು ಜ್ಞಾನತನಗಾದುದನು ।
ಮಾನಿನಿಯೊಲಿದ ರತಿಸುಖವ ಪರರಲಿ ।
ಮಾನಿಸುವನೆಗ್ಗ ಸರ್ವಜ್ಞ ॥ ೧೪೧೦ ॥

* ಆನೆ ಬೀದಿಲಿ ಬರಲು ಶ್ವಾನತಾ ಬೊಗಳುವದು ।
ಶ್ವಾನನಂತಾನೆ ಬೊಗಳಿದರೆ ಆನೆಯ ।
ಮಾನವೇ ಹಾನಿ ಸರ್ವಜ್ಞ ॥ ೧೪೧೧ ॥

* ಮಾನಭಂಗವಾದಂದು ಘನನಿದ್ರೆಹೋದಂದು ।
ವನಿತೆಯು ಸುತರು ಜರಿದಂದು ಮರಣವು ।
ತನಗೆ ಬಂತೆಂದ ಸರ್ವಜ್ಞ ॥ ೧೪೧೨ ॥

† ಕೆಟ್ಟವ್ಯೈಹೆಂಗಸನು ಬಟ್ಟೆಯಲಿ ತುರುಚೆಯನು ।
ಅಟ್ಟಿಟ್ಟ ಕಡಿವ ಕಡಜನ ಹುಟ್ಟನ್ನು ।
ಮುಟ್ಟಬೇಡೆಂದ ! ಸರ್ವಜ್ಞ ॥ ೧೪೧೩ ॥

* ತಾಗುವ ಮುನ್ನವೇ ಬಾಗುವಾ ತಲೆಲೇಸು ।
ತಾಗಿ ತಲೆಯೊಡೆದು ಕೆಲನಾದ ಬಳಿಕದರ ।
ಭೋಗವೇನೆಂದ ? ಸರ್ವಜ್ಞ ॥ ೧೪೧೪ ॥

* ತಾಗಿ ಬಾಗ್ವದರಿಂದ ತಾಗದಿರುವದು ಲೇಸು ।
ತಾಗಿ ಮೂಗೊಡೆದು ಬುಗುಟಿದ್ದು ಬಾಗುವದು ।
ಹೇಗನ ಗುಣವು ! ಸರ್ವಜ್ಞ ॥ ೧೪೧೫ ॥

* ಸಾವ ಸಂಕಟ ಹೊಲ್ಲ ಹಾವಿನಾವಿಷ ಹೊಲ್ಲ ।
ನಾವಿಗನ ಕೂಡ ಹಗೆ ಹೊಲ್ಲ ಚಿಕ್ಕವರ
ಕಾವುದೇ ಹೊಲ್ಲ ಸರ್ವಜ್ಞ ॥ ೧೪೧೬ ॥

* ಬರೆವ ಕರಣಿಕನೊಡನೆ ಹಿರಿದು ಹೋರಲು ಬೇಡ ।
ಗರಗಸದೊಡನೆ ಮರನಾಡಿ ತನ್ನ ತಾ- ।
ನಿರಿದುಕೊಂಡಂತೆ ! ಸರ್ವಜ್ಞ ॥ ೧೪೧೭ ॥

* ಇತ್ತು ದಣಿಯದವಂಗೆ ಮೃತ್ಯು ಒಲಿಯದೆ ಬಿಡಳು ।
ಹತ್ತಿರ್ದಲಕ್ಷ್ಮಿ ತೊಲಗಲು ಮುಂದವನ ।
ತೊತ್ತಾಗಿ ಬರುವ ! ಸರ್ವಜ್ಞ ॥ ೧೪೧೮ ॥

* ಸಿರಿಯು ಸಂಸಾರವನು ಸ್ಥಿರವೆಂದು ನಂಬದಿರು ।
ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ ।
ಹರಿದು ಹೋದಂತೆ ಸರ್ವಜ್ಞ ॥ ೧೪೧೯ ॥

* ನೀರಬೊಬ್ಬುಳಿ ನೆಚ್ಚಿ ಸಾರಿ ಕೆಡದಿರು ಮರುಳೆ ! ।
ಸಾರಗುಣಿಯಾಗು ! ನಿಜತಿಳಿ ! ಸರುವರೊಳು ।
ಕಾರಣಿಕನಾಗು ! ಸರ್ವಜ್ಞ ॥ ೧೪೨೦ ॥

† ಗಂಧವನು ಇಟ್ಟ ಮೇ । ಲಂದದಲಿ ಇರಬೇಕು ।
ನಿಂದೆ ಕುಂದುಗಳ ಸುಟ್ಟವನು ಧರಣಿಗೆ ।
ಇಂದುಧರನೆಂದ ! ಸರ್ವಜ್ಞ ॥ ೧೪೨೧ ॥

† ಅಟ್ಟಿಕ್ಕುವಾಕೆಯೊಳು ಬಿಟ್ಟಿತ್ತು ಹಗೆ ಬೇಡ ।
ಸಟ್ಟುಗದಿ ಗೋಣ ಮುರಿವಳು ಅಲಗಿಲ್ಲ- ।
ದಟ್ಟಿಯಾಳುವಳು ಸರ್ವಜ್ಞ ॥ ೧೪೨೨ ॥

† ಉಂಡುಂಡು ಕೆಡೆಕೆಡೆದು ಕಂಡೆಯನು ಮಸೆಮಸೆದು ।
ಕಂಡವರ ಕಾಲು ಕೆದರುವ ದುರುಳನ ।
ಗುಂಡಿಗಿಕ್ಕೆಂದ ಸರ್ವಜ್ಞ ॥ ೧೪೨೩ ॥

‖ ಓಲಯ್ಸುತಿರುವವನು ಮೇಲೆನಿಸುತಿದ್ದರೂ ।
ಸೋಲದ ಬುದ್ಧಿಯಿರುವನಲಿ ಭಾಗ್ಯದ ।
ಕೀಲು ಕಾಣಯ್ಯ ! ಸರ್ವಜ್ಞ ॥ ೧೪೨೪ ॥

† ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ।
ಹಿಡಿದಿದ್ದ ಧರ್ಮ ಹೊಡಮರಳಿ ಕಚ್ಚುವ ।
ಹೆಡೆನಾಗ ನೋಡ ! ಸರ್ವಜ್ಞ ॥ ೧೪೨೫ ॥

† ಕರುವ ಕಾವಾಬುದ್ಧಿ ಗುರುಗಳಿಗೆ ಇರದಿರೆ ।
ಧರಣಿಯು ಜನರು ಉಳಿವರೆ ? ಇವರೂರ ।
ನರಿಗಳೆಂದರಿಗು ! ಸರ್ವಜ್ಞ ॥ ೧೪೨೬ ॥

† ಊರೆಲ್ಲ ನೆಂಟರು ಕೇರೆಲ್ಲ ಬಳಗವು ।
ಧಾರುಣಿಯೆಲ್ಲ ಕುಲದೈವವಾಗಿನ್ನು ।
ಯಾರನ್ನು ಬಿಡಲೋ ! ಸರ್ವಜ್ಞ ॥ ೧೪೨೭ ॥



"The great poets are judged by the frame of mind they induce."

—*Emerson*

## ೨೨. ಜ್ಯೋತಿಷ ಪದ್ಧತಿ.

### ಗಣಿತ ಜ್ಯೋತಿಷ.

* ರಂಧ್ರಗತಿಯಾದಿತ್ಯ । ರೊಂದಾಗಿ ಅರ್ಥಿಸುತ[1]
ಅಂದಿನ ತಿಥಿಯನೊಡಗೂಡೆ, ನಕ್ಷತ್ರ ।
ಮುಂದೆ ಬಂದಕ್ಕು ಸರ್ವಜ್ಞ || ೧೪೨೮ ||

* ಗತವಾದ ಮಾಸವನು ಗತಿಯಿಂದ ದ್ವಿಗುಣಿಸಿ ।
ಪ್ರತಿಪದ ತಿಥಿಯನೊಡಗೂಡೆ ಕರಣ ತಾ-[2] ।
ನತಿಶಯದಿ ಬಕ್ಕು[3] ಸರ್ವಜ್ಞ || ೧೪೨೯ ||

* ಆವಿಯಾ ಮಾಸವನು ವೇದದಿಂ ತಾ ಗುಣಿಸಿ ।
ಆವಿನದ ತಿಥಿಯನೊಡಗೂಡೆ ಯೋಗ ತಾ- ।
ನಾದಿಯಲಿ ಬಕ್ಕು ಸರ್ವಜ್ಞ || ೧೪೩೦ ||

* ಸಂದಿರ್ದ ಮಾಸವನು ಕುಂದದಿಮ್ಮಡಿ ಮಾಡಿ ।
ಅಂದಿನಾ ತಿಥಿಯನೊಡಗೂಡಲಾತಾರೆ ।
ಮುಂದೆ ಬಂದಿಹುದು ಸರ್ವಜ್ಞ || ೧೪೩೧ ||

* ನಂದೆಯನು ಭದ್ರೆಯನು ಒಂದಾಗಿ ಅರ್ಥಿಸಲು ।
ಅಂದಿನಾ ತಿಥಿಗೆ ಸಮನಾಗೆ ಗ್ರಹಣ ತಾ ।
ಮುಂದೆ ಬಂದಕ್ಕು ಸರ್ವಜ್ಞ || ೧೪೩೨ ||

---

1 C. ಅರ್ಚಿಸುತ. 2 & 3 Ac. ಗೂಡಲಾತಾರೆ ಸ್ಥಿತದಿ ಬಂದಕ್ಕು.

* ಅಡಿಯುನಿಮ್ಮಡಿ ಮಾಡಿ ಒಡಗೂಡಿ ಹನ್ನೊಂದ ।
ತಡೆಯದಿನ್ನೂರ ಹತ್ತಕ್ಕೆ ಭಾಗಿಸಲು ।
ನಡೆವ ಘಳಿಗಕ್ಕು[1] ಸರ್ವಜ್ಞ ॥ ೧೪೩೩ ॥

ಮಳೆ ಲಕ್ಷಣ.

* ಮೃಗಶಿರಾದಿಯು ಮೂರು ಭಗಣದಲಿ ರವಿಯಿರಲು ।
ಮಘಿಯುರಿಕ್ಷವನು ಶಶಿತೊಲಗೆ, ಮಳೆಗಾಲ ।
ಜಗದಣಿಯುಲಕ್ಕು; ಸರ್ವಜ್ಞ ॥ ೧೪೩೪ ॥

* ಆಗಿಯ ಹುಣ್ಣಿಮೆ ಹೋದ ಮಿಗೆ ಮೂರು[2] ದಿವಸಕ್ಕೆ ।
ಮೃಗಧರನ ಕೂಡೆ ಮೃಗವಿರಲು ಮಳೆಗಾಲ ।
ಜಗದಣಿಯುಲಕ್ಕು ಸರ್ವಜ್ಞ ॥ ೧೪೩೫ ॥

* ಚಂದ್ರ ಮಾರ್ತಂಡರನು ಸಂದಿಸಿಯೆ ಪರಿವೇಷ ।
ಕುಂದದೇ ನಿಚ್ಚ ಬರುತಿರಲು ಜಗವೆಲ್ಲ ।
ಕುಂದಣಿಗೆಯುಕ್ಕು ಸರ್ವಜ್ಞ ॥ ೧೪೩೬ ॥

* ಹೊತ್ತಾರೆ ನೆರೆಯುವದು ಹೊತ್ತೇರೆ ಹರಿಯುವದು ।
ಕತ್ತಲೆಯ ಬಣ್ಣ ಮುಗಿಲಾಗೆ ಮಳೆಯು ತಾ ।
ನೆತ್ತಣದಿ ಬಕ್ಕು ? ಸರ್ವಜ್ಞ ॥ ೧೪೩೭ ॥

* ವಾಯುವಾಯುವ ಕೂಡೆ ವಹಿಲದಿಂ ಮಳೆಯಕ್ಕು ।
ವಾಯುನೈರುತಿಯನೊಡಗೂಡೆ ಮಳೆಯು ತಾ ।
ವಾಯುವೇ ಅಕ್ಕು ಸರ್ವಜ್ಞ ॥ ೧೪೩೮ ॥

1 P. ನಡೆದದ್ದೆ ಘಳಿಗೆ. 2 C. ನಾಲ್ಕು.

* ಅಳಿವಣ್ಣದಾಕಾಶ ಗಿಳಿವಣ್ಣದಾ ಮುಗಿಲು ।
ಅಳಿದಳಿದು ಮರ್ಕನುದಯಿಸಲು ಮಳೆಯು ತಾ ।
ತಳುವದೇ[1] ಬಕ್ಕು ಸರ್ವಜ್ಞ ॥ ೧೪೩೯ ॥

* ಅಡರಿ ಮೂಡಲು ಮಿಂಚೆ ಪಡುವಲಕೆ ಧನುವೇಳೆ ।
ಬಡಗಣದ ಗಾಳಿ ಕಡುಬೀಸೆ ಮಳೆಯು ತಾ ।
ತಡೆಯುದಲೆ ಬಕ್ಕು ಸರ್ವಜ್ಞ ॥ ೧೪೪೦ ॥

* ತೆಂಕಲಿಗೆ ಮುಗಿಲಡರೆ ಶಂಕರನ ದೆಸೆಮಿಂಚೆ ।
ಪಂಕಜಾರಾತಿ ಗುಡಿಗಟ್ಟೆ ಮಳೆಯು ತಾ ।
ಭೋಂಕನೆ ಬಕ್ಕು ಸರ್ವಜ್ಞ ॥ ೧೪೪೧ ॥

ನಕ್ಷತ್ರಫಲ (ಗುರು)

* ಕುರಿಯನೇರಲು ಗುರುವು ಧರೆಗೆ ಹೆಮ್ಮಳೆಯಕ್ಕು ।
ಪರಿಪರಿಯ ಧಾನ್ಯ ಬೆಳೆಯಕ್ಕು ಪ್ರಜೆಗಳಿಗೆ ।
ನೆರೆ ಹರುಷವಕ್ಕು ಸರ್ವಜ್ಞ ॥ ೧೪೪೨ ॥

* ವೃಷಭನೇರಲು ಗುರುವು ವಸುಧೆಯೊಳು ಮಳೆಯಕ್ಕು ।
ಶಿಸು, ಪಶು, ಸ್ತ್ರೀಗೆ ಜಯವಕ್ಕು ಜನರೆಲ್ಲ ।
ಮಿಸುನಿಯಂತಕ್ಕು ಸರ್ವಜ್ಞ ॥ ೧೪೪೩ ॥

* ಮಿಥುನಕ್ಕೆ ಗುರು ಬರಲು ಮಥನಲೋಕದೊಳಕ್ಕು[2] ।
ಪೃಥುವಿಯೊಳಗೆಲ್ಲ ಬರನಕ್ಕು ನರ, ಪಶು, ।
ಹತವಾಗಲಕ್ಕು ಸರ್ವಜ್ಞ ॥ ೧೪೪೪ ॥

1 F. ಗಳಲನೇ 2 W. ಮಥನಗಳು ಪಿರಿದಕ್ಕುಂ.

* ಏಡಿ ಏರಲು ಗುರುವು ನೋಡೆ ಕಡೆ ಮಳೆಯಕ್ಕು ।
ನಾಡೊಳಗೆಲ್ಲ ಬೆಳಸಕ್ಕು ಪ್ರಜೆಗಳು ।
ಈಡೇರಲಕ್ಕು ಸರ್ವಜ್ಞ ॥ ೧೪೪೫ ॥

* ಸಿಂಗಕ್ಕೆ ಗುರು ಬರಲು ಸಂಗರವು ಘನವಕ್ಕು ।
ಅಂಗನೆಗೆ ಬಾಧೆ ಪಿರಿದಕ್ಕು ಕಡೆಮಳೆ ।
ಹಿಂಗಾರಿಯಕ್ಕು ಸರ್ವಜ್ಞ ॥ ೧೪೪೬ ॥

* ಕನ್ಯಕ್ಕೆ ಗುರು ಬರಲು ಚಿನ್ನದಾ[1] ಮಳೆಯಕ್ಕು ।
ಚನ್ನಾಗಿ ಪಶುವು ಕರೆಯಕ್ಕು ಮಂಡನದ ।
ಕನ್ನೆಯರು ಅಕ್ಕು ಸರ್ವಜ್ಞ ॥ ೧೪೪೭ ॥

* ತುಲಪನೇರಲು ಗುರುವು, ನೆಲಿಯಾಗಿ ಮಳೆಯಕ್ಕು; ।
ಫಲಧಾನ್ಯಬೆಳಸು ಪ್ರಜೆಗಳಿಗಿಳೆಯೊಳು ।
ನಿಲಿಕಾಲಮಕ್ಕು ಸರ್ವಜ್ಞ ॥ ೧೪೪೮ ॥

* ಚೇಳನೇರಲು ಗುರುವು ಕಾಳಗವು ಪಿರಿದಕ್ಕು ।
ಗಾಳಿಯಿಂ ಮಳೆಯು ಕಿರಿದಾಗಿ ಬೆಳೆಯಿಲ್ಲ ।
ಕೋಳಾಗಲಕ್ಕು ಸರ್ವಜ್ಞ ॥ ೧೪೪೯ ॥

* ಬಿಲ್ಲನೇರಲು ಗುರುವು ತಲ್ಲಣವು ಪಿರಿದಕ್ಕು[2] ।
ಕಲ್ಲ ಮೇಲೆಲ್ಲ ಬೆಳಸಕ್ಕು ನೃಪರಿಗೆ ।
ತಲ್ಲಣವಕ್ಕು ಸರ್ವಜ್ಞ ॥ ೧೪೫೦ ॥

---

1 W. ಚನ್ನಾಗಿ. 2 D. ಹಲ್ಲಣವು ಹಾರಿಹುದು,

* ಮಕರಕ್ಕೆ ಗುರು ಬರಲು ಮಕರ ತೋರಣವಕ್ಕು ।
ಸಕಲ ಧಾನ್ಯಗಳು ಬೆಳೆಯುಕ್ಕು ಪ್ರಜೆಗಳಿಗೆ ।
ಸುಖವಾಗಲಕ್ಕು ಸರ್ವಜ್ಞ ॥ ೧೪೫೧ ॥

* ಕುಂಭಕ್ಕೆ ಗುರು ಬರಲು ತುಂಬುವವು ಕೆರೆಭಾವಿ ।
ಅಂಬರ ದೊರೆಗೆ ಬೆಳೆಯೆದ್ದು ಜಗದೊಳು[1] ।
ಸಂಭ್ರಮವಿಹುದು[2] ಸರ್ವಜ್ಞ ॥ ೧೪೫೨ ॥

* ಮೀನಕ್ಕೆ ಗುರು ಬರಲು ಮಾನ ಖಂಡುಗವಕ್ಕು ।
ಕಾನನವೆಲ್ಲ ಬೆಳೆಯುಕ್ಕು ಪ್ರಜೆಗಳಿಗೆ ।
ಆನಂದವಕ್ಕು ಸರ್ವಜ್ಞ ॥ ೧೪೫೩ ॥

† ಮೀನಕ್ಕೆ ಶನಿ ಬರಲು ಶಾನೆ ಕಾಳಗಮುಕ್ಕು ।
ಬೇನೆ ಬರಗಳು ಹಿರಿದಕ್ಕು ಜಗಕೆಲ್ಲ ।
ಹಾನಿಯೇ ಬಕ್ಕು ಸರ್ವಜ್ಞ ॥ ೧೪೫೪ ॥

† ತಾರೆಗಳು ಅಯ್ದಕ್ಕೆ ತಾರೇಶ ಬಂದಿರಲು ।
ಧಾರುಣಿಯು ಹೊತ್ತಿ ಹೊಗೆಯುವದು ಜಗದಿ ಹೆ- ।
ಮ್ಮಾರಿ ಕಾಣಯ್ಯ! ಸರ್ವಜ್ಞ ॥ ೧೪೫೫ ॥

† ಪಂಚತಾರೆಯು ಮೃಗ । ಲಾಂಛನವು ಸಹತಾರೆ ।
ಕಂಚಿಯಿಂದತ್ತ ಮಳೆಯಿಲ್ಲ ಭತ್ತವನು ।
ಸಂಚಯ್ಸೊದೊಳಿತು ಸರ್ವಜ್ಞ ॥ ೧೪೫೬ ॥

---

1 & 2 W. ಸಂಭ್ರಮದಿಂದ ಬೆಳೆಯುಕ್ಕು ಮರ್ತ್ಯದೊಳು । ಎಂಬುದಿದು ಸಿದ್ಧ.

† ತಾರೆ ಸಪ್ತಮಿದಿನ ತಾರೇಶ ಮಹಜಂಗೆ।
ಹೋರದೆ ಹೋದಡವನಿರ್ದ ಜಗಕೆ ಹೆ- ।
ಮ್ಮಾರಿ ಕಾಣಯ್ಯ ಸರ್ವಜ್ಞ ॥ ೧೪೫೭ ॥

ಸೀನಿನ ಶಕುನ.

* ಕಟ್ಟಿದಿರ ಸೀತಿಹರೆ ನೆಟ್ಟನೇ ನಿಲಬೇಕು ।
ಒಟ್ಟಯ್ಸಿ ಮೀರಿ ನಡೆದರೆ ಗುರಿನೋಡಿ ।
ತೊಟ್ಟ[1]ನೆಚ್ಚನ್ತೆ ಸರ್ವಜ್ಞ ॥ ೧೪೫೮ ॥

* ಎಡಬಲವು ಎನಬೇಡ ಒಡನೆ ಬಹನೆನಬೇಡ ।
ಕಡುದೂರ ಸಾರಿದೆನೆನಬೇಡ ಸೀತರೊಂ- ।
ದಡಿಯನಿಡಬೇಡ ಸರ್ವಜ್ಞ ॥ ೧೪೫೯ ॥

† ಮರೆದೊಮ್ಮೆ ನಡೆಯುತ್ತ ಸರಕನೇ ಸೀತಿಹರೆ।
ಅರಿದರಡಿಯಿಡದೆ ನಿಲ್ಲುವದು; ಇಲ್ಲದಿ- ।
ರಿರಿದುಕೊಂಡಂತೆ ಸರ್ವಜ್ಞ ॥ ೧೪೬೦ ॥

* ತಾನಕ್ಕ ಪರರಕ್ಕ ಶ್ವಾನ ಗರ್ದಭನಕ್ಕ ।
ವಾನರನಕ್ಕ ಪಶುವಕ್ಕ ಪಯಣದಲಿ।
ಸೀನೆ ಭಯವಕ್ಕು ಸರ್ವಜ್ಞ ॥ ೧೪೬೧ ॥

* ಒಮ್ಮೆ ಸೀತರೆ ಹೊಲ್ಲ ಇಮ್ಮೆ ಸೀತರೆ ಲೇಸು ।
ಕೆಮ್ಮಿ ಕೇಕರಿಸಿ ಉಗುಳುವ ಲೇಸು ಆ- ।
ಬೊಮ್ಮಗೂ ಇಲ್ಲ ಸರ್ವಜ್ಞ ॥ ೧೪೬೨ ॥

1 P. ತಟ್ಟು.

* ಏನು ಮನ್ನಿಸದಿರಲು ಸೀನು ಮನ್ನಿಸಬೇಕು ।
ಸೀನು ಮನ್ನಿಸದೆ ಹೋದರೆ ಹೋದಲ್ಲಿ ।
ಹಾನಿಯೇ ಬಕ್ಕ ಸರ್ವಜ್ಞ ॥ ೧೪೬೩ ॥

* ಒಕ್ಕಾಗೆ ಬಲನಾದ । ಡೊಕ್ಕದು ಕಡುಲೇಸು ।
ಒಕ್ಕಿನ ಮೇಲೆ ಒಕ್ಕಾಗೆ ನಾಯಿನ್ನರ[1] ।
ನೆಕ್ಕಿದಂತಕ್ಕು ಸರ್ವಜ್ಞ ॥ ೧೪೬೪ ॥

### ಮಳೆಗೆ ಜೋಯಿಸರಿಲ್ಲ.

• ತಳಿಗೆಗೆ ತಲೆಯಿಲ್ಲ ಮಳೆಗೆ ಜೋಯಿಸರಿಲ್ಲ ।
ಬೆಳಗಾಗಿ ಕನ್ನಗಳವಿಲ್ಲ[2] ಲೋಕದೊಳ- ।
ಗುಳಿವವರ[3] ಇಲ್ಲ ಸರ್ವಜ್ಞ ॥ ೧೪೬೫ ॥

* ಮೊಗ್ಗಿಯನು ಗುಣಿಸುವಾ ಮೊಗ್ಗರದ ಜೋಯಿಸರು ।
ಅಗ್ಗವನು ಮಳೆಯನರಿಯದೆ ನುಡಿವವರ ।
ಹೆಗ್ಗಡೆಯೆ ಬಲ್ಲ ಸರ್ವಜ್ಞ ॥ ೧೪೬೬ ॥

### ಜೋಯಿಸರನ್ನು ನಂಬಬೇಡ.

† ತಂತ್ರ ತಾಂಬೂಲದಲಿ ಮಂತ್ರ ಗಾರುಡಿಯಲ್ಲಿ ।
ಯಂತ್ರ ಜೋಯಿಸನ ಗೃಹಣಲಿ ಇವು ಮೂರು ।
ಎಂತು ಹುಸಿಯೆಂದ ಸರ್ವಜ್ಞ ॥ ೧೪೬೭ ॥

• ಹಸಿದರೆ ಉಣಲಿಲ್ಲ ಒಸದೇಳ ಹೊತ್ತಿಲ್ಲ ।
ಬೆಸಗೊಂಬುವದಕೆ ಗಡಿಯಿಲ್ಲ ಜೋಯಿಸರ ।
ಘೆಸಣೆಯೇ ಸಲ್ಲ! ಸರ್ವಜ್ಞ ॥ ೧೪೬೮ ॥

---

1 F. ನಾಯಿಂನರ, 2 Gs. ಬೆಳಗಾದ ಮೇಲೆ ಭಯವಿಲ್ಲ, 3 W. ಉಳಿಗಾಲ.

* ಹಿಡಿಯುವದು ಹೆಬ್ಬಾವು; ಪಡೆಯುವದು ಪಡಿಭತ್ತ; |
ಹುಡುಕಿ[1] ನೋಡುವದು ಪರಬೊಮ್ಮ; ಜೋಯಿಸಗೆ |
ಕೊಡುವದೊಂದಡಿಕೆ; ಸರ್ವಜ್ಞ || ೧೪೬೯ ||

## ೨೩. ದೇಶಪದ್ಧತಿ.

ಮೂಡಲು.

* ಬಟ್ಟೆಬಟ್ಟೆಯೊಳೆಲ್ಲ ಹೊಟ್ಟೆ[2]ಜಾಲಿಯ ಮುಳ್ಳು |
ಹುಟ್ಟಿದವರೆಲ್ಲ ಗಿಜವಾಯಿ ಮೂಡಲ |
ಬಟ್ಟೆ ಬೇಡೆಂದ ಸರ್ವಜ್ಞ || ೧೪೭೦ ||

* ಅಗ್ಗ[3]ಸುಗ್ಗಿಗಳುಂಟು[4] ಡೊಗ್ಗೆ ಮಜ್ಜಿಗೆಯುಂಟು |
ಹೆಗ್ಗುಳದಕಾಯಿ ಮೆಲಲುಂಟು[5] ಮೂಡನಾ |
ಡೆಗ್ಗೆನ್ನಬಹುದೆ ಸರ್ವಜ್ಞ || ೧೪೭೧ ||

ಬಡಗಲು.

† ಎಲ್ಲಿ ನೋಡಿದರಲ್ಲಿ ಟೊಳ್ಳು ಜಾಲಿಯ ಮುಳ್ಳು |
ವುಳ್ಳವರೆಲ್ಲ[6] ಕಿಸಬಾಯಿ ಬಡಗಲ |
ತಳ್ಳಿ ಬೇಡೆಂದ ಸರ್ವಜ್ಞ || ೧೪೭೨ ||

* ಊರು ಸನಿಹದಲಿಲ್ಲ ನೀರೊಂದು ಗಾವುದವು |
ಸೇರಿ ನಿಲ್ಲುವರೆ ನೆರಳಿಲ್ಲ ಬಡಗಲಾ |
ದಾರಿ ಬೇಡೆಂದ ಸರ್ವಜ || ೧೪೭೩ ||

1 A. ತಡುಕಿ. 2 A. ಹುಟ್ಟು. 3 & 4 A. ಅಗ್ಗಿ = ಉರವಲ. K ಅಗ್ಗದಾ ಆರಳುಂಟು = ತೂರಮರಿ. 5 Gs. ವಿಡಿರುಂಟು. 6 K. ಜೀಳಿದವರೆಲ್ಲ ( Indian Antiquery vol. II, page 9 ).

ತೆಂಕಲು.

* ಶಂಖ ಹುಟ್ಟಿದ ನಾದ ಬಿಂಕವನು ಏನೆಂಬೆ ।
ಶಂಕರನಪೂಜೆ ಮನೆಮನೆಗೆ ಮಿಗಿಲಾಗಿ ।
ತೆಂಕಲುಂಟೆಂದ ಸರ್ವಜ್ಞ ॥ ೧೪೭೪ ॥

* ರಾಗವೇ ಮೂಡಲು ಯೋಗವೇ ಬಡಗಲು ।
ರೋಗವೇ ಶುದ್ಧ ಪಡುವಲು ತೆಂಕಲು ।
ಭೋಗದಾ ಬೀಡು ಸರ್ವಜ್ಞ ॥ ೧೪೭೫ ॥

† ಅಟ್ಟುಂಬುದು ಮೂಡಲು ಸುಟ್ಟುಂಬುದು ಬಡಗಲು ।
ತಟ್ಟಿಲುಂಬುದು ಪಡುವಲು ತೆಂಕಲು ।
ಮುಷ್ಟಿಲುಂಬುವದು ಸರ್ವಜ್ಞ ॥ ೧೪೭೬ ॥

* ಉಡಹೀನ ಮೂಡಲು ನುಡಿಹೀನ ಬಡಗಲು ।
ಕಡುಕೋಪದವರು ಪಡುವಲು ತೆಂಕಲು ।
ಸಡಗರದವರು[1] ಸರ್ವಜ್ಞ ॥ ೧೪೭೭ ॥

† ಅರೆದಲೆಯು ಮೂಡಲೂ ಹೊರೆದಲೆಯು ಬಡಗಲೂ ।
ಸರಿದಲೆಯುದ್ದ ಪಡುವಲು ತೆಂಕಲು ।
ಬರಿದಲೆಯುವರು ಸರ್ವಜ್ಞ[2] ॥ ೧೪೭೮ ॥

ಬೆಳವಲು.

* ಜೋಳದಾ ಬೋನಕ್ಕೆ ಬೇಳೆಯ ತೊಗೆಯಾಗಿ ।
ಕಾಳೆಮ್ಮೆ ಕರೆದ ಹೈನಾಗಿ ಬೆಳವಲ ।
ಮೇಳ ನೋಡೆಂದ ಸರ್ವಜ್ಞ ॥ ೧೪೭೯ ॥

---

1 Gs. ನುಡಿನಯುದವರು. 2 ಈ ಪದ್ಯವು ರೂಪಾಂತರವಾಗಿದೆ ( Indian Antiquery vol. II, p. 9 ).

* ನವಣೆಯಾ ಬೋನಕ್ಕೆ ಹವಣುಳ್ಳ ತೊಗೆಯಾಗಿ ।
ಕವಣೆಗಲ್ಲಷ್ಟು ಬೆಣ್ಣ್ಯದರೂಟದ ।
ಹವಣ ನೋಡೆಂದ! ಸರ್ವಜ್ಞ ॥ ೧೪೮೦ ॥

* ಕೆಣುಕದಾ ಕಡುಬಾಗಿ ಮಣಕೆಮ್ಮ ಹೈನಾಗಿ ।
ಕುಣಿಕುಣಿದು ಕಡೆವ ಸತಿಯಾಗಿ ಬೆಳವಲ- ।
ದಣಕ ನೋಡೆಂದ ಸರ್ವಜ್ಞ ॥ ೧೪೮೧ ॥

* ಕಡಲೆಯನು ಗೋದಿಯನು ಮಡಿಕುದ್ದು ಬೆಳೆದರೂ[1] ।
ಸುಡಬೇಕು ನಾಡನೆಂದವನ ಬಾಯೊಳಗೆ ।
ಪುಡಿಗಡಬು[2] ಬೀಳ್ಗು ಸರ್ವಜ್ಞ ॥ ೧೪೮೨ ॥

ಮಲೆನಾಡು.

* ಕಾಡೆಲ್ಲ ಕಸುಗಾಯಿ[3] ನಾಡೆಲ್ಲ ಹೆಗ್ಗಿಡವು[4] ।
ಆಡಿದ ಮಾತು ನಿಜವಿಲ್ಲ ಮಲೆನಾಡ ।
ಕಾಡು ಸಾಕೆಂದ ಸರ್ವಜ್ಞ ॥ ೧೪೮೩ ॥

* ಶೀತ ಧಾತುಗಳುಂಟು ಬಾತಿಹವು ಕುಕ್ಷಿಗಳು[5] ।
ಪಾತಕರು ಮರದಿ[6] ತಿರಿದುಂಬ ನಾಡಿಗೆ ।
ಯಾತಕ್ಕೆ ಬಹರು! ಸರ್ವಜ್ಞ ॥ ೧೪೮೪ ॥

* ಅಲ್ಲಮರುಷಣವುಂಟು ಜೆಲ್ಲ ಬಿಳಿಎಲೆಯುಂಟು[7] ।
ಬಳ್ಳಿ ಹಲಸುಂಟು[8]; ಮೆಲ್ಲಲ್ಕೆ ಮಲೆನಾಡ- ।
ನಲ್ಲೆನ್ನಬಹುದೆ ಸರ್ವಜ್ಞ ॥ ೧೪೮೫ ॥

---

1 W. K. ಬೆಳೆವರು 2 D. ಮಡಿಗಡಬು. P. ಮಡಿಕುದ್ದು. 3 Ac. ಕಸಿಕಿಲು= ಹುಲ್ಲು. 4 Gs. ಹೆಗ್ಗವಡೆ 5 Gs. ಯಾತವು ಇಳಿದೋಲು ಶೀತವೂ ಸನ್ನಿಯೂ. 6 K. ಪಾತರವು ಮರದಿ=W ಪಾತ್ರೆಗಳು ಮರದಿಂದ ಮಾಡಿದವು; ಬಡತನದ ಲಕ್ಷಣ; ಇಲ್ಲವೆ ಮರ ಅಗ್ಗ. 7 A. ಗೆಣಸುಗಳುಂಟು. B. ಅಡಿಕೆಲೆ. C. ಸುಂಟಿ. 8 Ac. ನೆಲ್ಲೋಗರುಂಟು ನೆಳಲುಂಟು.

* ಕಿಚ್ಚುಂಟು ಕೆಸರುಂಟು ಬೆಚ್ಚನಾ ಮನೆಯುಂಟು ।
ಇಚ್ಛೆಗೆ ಒರುವ ಸತಿಯುಂಟು ಮಲೆನಾಡ ।
ಮೆಚ್ಚು ನೋಡೆಂದ ಸರ್ವಜ್ಞ ॥ ೧೪೮೬ ॥

---

## ೨೪. ಸ್ತ್ರೀವರ್ಗ ಪದ್ಧತಿ.

---

### ಮದನ ಮದನನ್ನೆಯರ ಲಕ್ಷಣ.

† ಮೂಡಲದು ಹಸ್ತಿನಿಗೆ ಬಡಗಲದು ಚಿತ್ತಿನಿಗೆ ।
ಪಡುವಲದು ಶುದ್ಧಶಂಖಿನಿಗೆ ತೆಂಕಲು ।
ಬೀಡು ಪದ್ಮಿನಿಗೆ ಸರ್ವಜ್ಞ ॥ ೧೪೮೭ ॥

† ಮೂಡಲದು ವಿಟನಿಂಗೆ ಬಡಗಲು ವಿದುಷಕಗೆ ।
ಪಡವಲದು ನಾಗರಿಕನಿಗೆ ತೆಂಕಲು ।
ಪೀಠಮರ್ದಕಗೆ ಸರ್ವಜ್ಞ ॥ ೧೪೮೮ ॥

### ಪುರುಷಲಕ್ಷಣ ಭೇದ.

ಕಿರಿನೋಟ ವಿಟನಿಂಗೆ ಅರೆನೋಟ ವಿದುಷಕಗೆ ।
ನೆರೆನೋಟ ನಾಗರಿಕ ಪೀಠಮರ್ದಕಗೆ ।
ಬಿರಿನೋಟವೆಂದ! ಸರ್ವಜ್ಞ ॥ ೧೪೮೯ ॥

### ಸ್ತ್ರೀಲಕ್ಷಣ ಭೇದ.

* ಹಸ್ತಿನಿಗೆ ಜಂಗೆಗಳು ಚಿತ್ತಿನಿಗೆ ಹರಡುಗಳು ।
ಹಸ್ತಮರ್ದನವು ಶಂಖಿನಿಗೆ, ಪದ್ಮಿನಿಗೆ ।
ಮಸ್ತಕವು ನೋಡ! ಸರ್ವಜ್ಞ ॥ ೧೪೯೦ ॥

† ಒಲಿಯುವಳು ಹಸ್ತಿನಿಯು ಮಲಿಯುವಳು ಚಿತ್ತಿನಿಯು ।
ತಲೆವಾಗಿ ನಡೆವಳು ಶಂಖಿನಿ, ಪದ್ಮಿನಿಯು ।
ಸುಲಭವಾಗಿಹಳು ಸರ್ವಜ್ಞ ॥ ೧೪೯೧ ॥

† ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ।
ಇಬ್ಬೆರಳು ಕುಚಮಧ್ಯ ಶಂಖಿನಿಗೆ ಪದ್ಮಿನಿ- ।
ಗೊಬ್ಬೆರಳು ನೋಡ ಸರ್ವಜ್ಞ ॥ ೧೪೯೨ ॥

* ವೃತ್ತದಾ ಪೊರವಾರು ಮತ್ತೆ ಜೇವಿನ ಗಂಧ।
ಹತ್ತಿದ ಕುಚವು ಮದನಾರಿ ಸಂಚಲಿಯು।
ಚಿತ್ತಿನಿಯು ನೋಡ! ಸರ್ವಜ್ಞ ॥ ೧೪೯೩ ॥

ಅಯಾ ಸ್ತ್ರಿಯರಿಗೆ ತಕ್ಕ ಪುರುಷರು.

† ಎತ್ತಲಾರದ ಕಾಯ ಮಸ್ತಕವು ಮಧ್ಯವೂ।
ಮತ್ತೆ ಕಕ್ಕಸವು ಕೇಳುವಗಾಪುರುಷ।
ಹಸ್ತಿನಿಗೆ ಮೇಳ ಸರ್ವಜ್ಞ ॥ ೧೪೯೪ ॥

† ಅಕ್ಕಳಿಸಿದಾ ಹೊಟ್ಟೆ ಚಿಕ್ಕಗಣ್ಣಿನ ಮೋರೆ।
ಅಕ್ಕಳಿಯು ತುಂಬ ಕಡುಗೋಪಿ ಪುರುಷನು ।
ಚಿತ್ತಿನಿಗೆ ಮೇಳ ! ಸರ್ವಜ್ಞ ॥ ೧೪೯೫ ॥

† ಇಂಬಾದ ದೇಹಕ್ಕೆ ಮುಂಬೆಳಗು ಸಂಭ್ರಮಿಸಿ।
ತುಂಬಿ ನೇರಾದಮಧ್ಯದ ಪುರುಷನು।
ಶಂಖಿನಿಗೆ ಮೇಳ ! ಸರ್ವಜ್ಞ ॥ ೧೪೯೬ ॥

† ಮದವೆದ್ದ ಮದಗಜದ ಹದದಂದದಿರುತಿರ್ದು ।
ವಿಧವಿಧದಿ ಪ್ರೌಢ ನುಡಿಗಳ ನುಡಿವನು ।
ಪದ್ಮಿನಿಗೆ ಮೇಳ! ಸರ್ವಜ್ಞ ॥ ೧೪೯೭ ॥

ವಶೀಕರಣ.

† ಹಲವು ಬಂಧನಕೂಟ ಕಲೆಯ ಭೇದವನರಿದು ।
ಸಲೆಯುದನು ಸವಿದು ಬಳಸಿದಡೆ ಹಸ್ತಿನಿಯು ।
ಒಲಿವಳಾಕ್ಷಣದಿ ಸರ್ವಜ್ಞ ॥ ೧೪೯೮ ॥

† ಹರಿಣಾಕ್ಷಿ ಚಿತ್ತಿನಿಯ ಕರಣೇಂದ್ರಿಯಗಳರಿದು ।
ಕರುಣರಸವೆಂಬ ಸದ್ಗುಣದಿ ನೆರೆದರೆ ।
ಮರಣತನ ಬಿಡಳು! ಸರ್ವಜ್ಞ ॥ ೧೪೯೯ ॥

* ನೋಟಬೇಟಗಳಲ್ಲಿ ಪಾಟಿಸಿದ ದೈನ್ಯವು ।
ಕೂಟದಲಿ ಕೋಪ ಕೊನರಿಸುತ ಶಂಖಿನಿಯು ।
ನಾಟಿಸದೆ ಬಿಡಳು! ಸರ್ವಜ್ಞ ॥ ೧೫೦೦ ॥

† ಮುಂಗುರಳು ಪಿಡಿದಾಡಿ ಭಂಗಿಸುತ ಕವಿಕವಿದು ।
ರಂಗುದುಟಿಗಳ ಕಚ್ಚಿದರೆ ಪದ್ಮಿನಿಯು ।
ಸಂಗವನು ಬಿಡಳು ಸರ್ವಜ್ಞ ॥ ೧೫೦೧ ॥

---

## ೨೫ ಸ್ತ್ರೀಸ್ತುತಿ ಪದ್ಧತಿ.

---

ಸ್ತ್ರೀ ಅವಶ್ಯ.

• ಹೆಣ್ಣಿನಿಂದಲಿ ಇಹವು ಹೆಣ್ಣಿನಿಂದಲಿ ಪರವು ।
ಹೆಣ್ಣಿಂದ ಸಕಲ ಸಂಪದವು ಹೆಣ್ಣಿಲ್ಲ- ।
ದಣ್ಣಗಳು ಎಲ್ಲಿ? ಸರ್ವಜ್ಞ ॥ ೧೫೦೨ ॥

* ಮಗಳಕ್ಕ ತಂಗಿಯು ಮಿಗೆ ಸೊಸೆಯು ನಾದುನಿಯು ।
ಜಗದವನತೆಯರು ಜನನಿಯು ಇವರೊಳಗೆ ।
ಜಗಕೊಬ್ಬಳೈಸು ಸರ್ವಜ್ಞ ॥ ೧೫೦೩ ॥

ಸ್ತ್ರೀಯಿಂದ ಪುರುಷ.

* ಪಲ್ಲಕ್ಕಿ ಏರಿದವ । ರೆಲ್ಲಿಂದ ಬಂದಿಹರು ।
ನೆಲ್ಲಕ್ಕಿಯಂತ ಸುಲಿವಲ್ಲ ಹಿರಿಯರು ।
ನಲ್ಲಳಿಂದಲ್ಲಿ? ಸರ್ವಜ್ಞ ॥ ೧೫೦೪ ॥

† ನಲ್ಲೆಯೊಲ್ಲೆಂಬುವರ ಸೊಲ್ಲು ನಾಲಿಗೆ ಹೊಲೆಯು ।
ಬಲ್ಲಿದ ಶ್ರವಣ ಸನ್ಯಾಸಿಯಿವರುಗ- ।
ಳೆಲ್ಲಿ ಉದಿಸಿದರು ಸರ್ವಜ್ಞ ॥ ೧೫೦೫ ॥

ಸ್ತ್ರೀಯರ ನೆಲೆ ತಿಳಿಯದು.

† ಅಂಬುಧಿಯ ಗಾನವನು ಅಂಬರದ ಕಲಹವನು ।
ಶಂಭುವಿನ ಮಹಿಮೆ; ಸತಿಯರ ಹೃದಯವ ।
ನಿಂಬರಿದರಾರು ? ಸರ್ವಜ್ಞ ॥ ೧೫೦೬ ॥

† ಹೆಣ್ಣಿನ ಹೃದಯದ ತಣ್ಣಗಿಹ ನೀರಿನ ।
ಬಣ್ಣಿಸಿ ಕುಣಿವ ಕುದುರೆಯ ನೆಲೆಯ ಬ- ।
ಲ್ಲಣ್ಣಗಳಾರು ? ಸರ್ವಜ್ಞ ॥ ೧೫೦೭ ॥

† ಲೆಕ್ಕಕ್ಕೆ ದುಕ್ಕಿಲ್ಲ ಜಿಕ್ಕಿಗೆ ವ್ರತವಿಲ್ಲ ।
ಸಿಕ್ಕು ಬಂಧನದಿ ಸುಖವಿಲ್ಲ ನಾರಿಗೆ ।
ಸಿಕ್ಕದವರಿಲ್ಲ! ಸರ್ವಜ್ಞ ॥ ೧೫೦೮ ॥

ಸ್ತ್ರೀಯರನ್ನು ಅರಿಸದವರಿಲ್ಲ.

* ತ್ರವಕದಾತುರದವಳ ನವರತಿಯು ಒದಗಿದಳ ।
ಸವಿಮಾತು ಸೊಬಗು ಸುರಿಯುವ ಯುವತಿಯ- ।
ನವುಕದವರಾರು? ಸರ್ವಜ್ಞ ॥ ೧೫೦೯ ॥

ರತಿಕಲಿಯೊಳತಿಚದುರೆ ಮಾತಿನೊಳಗತಿ ಮಿತಿಯು ।
ಖತಿಗಳೆದ ಮೊಗವು ಸೊಬಗಿನಾ ಸುದತಿ ಕಂ- ।
ಡತಿ ಬಯುಸದಿಹರೆ? ಸರ್ವಜ್ಞ ॥ ೧೫೧೦ ॥

† ಮೊಲೆಗಳುಗಿದವಳಾಗಿ ಚಲುವೆ ಒಲಿದವಳಾಗಿ ।
ಹಲತೆರದಿ ಕರೆವ ಕಾಮಿನಿಯನು ಬಿಟ್ಟು ।
ತೊಲಗುವವರಾರು? ಸರ್ವಜ್ಞ ॥ ೧೫೧೧ ॥

† ಮತಿಯೊಳತಿ ಚದುರಾಗಿ ರತಿಕೇಳಿಗೊಳಗಾಗಿ ।
ಅತಿ ಮೋಹ ಮುದ್ದುಮೊಗವಾಗಿ ಅಂಗನೆಯ ।
ನತಿಗಳೆದರಾರು? ಸರ್ವಜ್ಞ ॥ ೧೫೧೨ ॥

ತ್ರಿಮೂರ್ತಿಗಳೂ ಸ್ತ್ರೀವಶರು.

* ರುದ್ರತಾ ಕರ್ತನು ಅರ್ಧ ನಾರಿಯು ಆದ ।
ಇದ್ದವರೊಳಾರು ಸತಿಯರ ಹೃದಯುವ ।
ಗೆದ್ದವರಾರು? ಸರ್ವಜ್ಞ ॥ ೧೫೧೩ ॥

* ಹರಿಯು ಉರವನು ಮೆಟ್ಟಿ ಹರನ ಶಿರವನು ಹತ್ತಿ ।
ಸರಸಿಜೋದ್ಭವನ ಮೊಗಗೆಡಿಸಿ ಮೀರಿದಳು[1] ।
ಹಿರಿಯರಿನ್ನಾರು? ಸರ್ವಜ್ಞ ॥ ೧೫೧೪ ॥

---

1 A. ಕಾಡಿದಳು.

* ಉಚ್ಚೆಯಾ ಬಚ್ಚಲವು ತುಚ್ಛವೆಂದೆನಬೇಡ ।
ಅಚ್ಯುತ ಬಿದ್ದನಜಬಿದ್ದ ದೇವೇಂದ್ರ- ।
ನೆಚ್ಚತ್ತು ಬಿದ್ದ ಸರ್ವಜ್ಞ ॥ ೧೫೧೫ ॥

* ತಗ್ಗಿನಾ ಕುಣಿಯೆಂದು ಅಗ್ಗವಾಡಲು ಬೇಡ ।
ಭಗ್ಗ ಮೊದಲಾದ ದೈವಗಳದರೊಳಗೆ ।
ಮುಗ್ಗಿಹರಯ್ಯ[1] ಸರ್ವಜ್ಞ ॥ ೧೫೧೬ ॥

ಸ್ತ್ರೀ ಮಹತ್ವ.

* ಕಿರಿಯಲ್ಲಿ ನೋಡಿದರೆ ಕರು ಮೆಟ್ಟಿದಂತಕ್ಕು ।
ನಿರಿಯ ಮರೆಮಾಡಿ[2] ತರುಬಿಕ್ಕೆ ಜಗವೆಲ್ಲ ।
ಇರಿದಾಡುತಿಹುದು ಸರ್ವಜ್ಞ ॥ ೧೫೧೭ ॥

* ಚಿಕ್ಕಂದಿನಲಿ ಹೆಣ್ಣು ಹೆಕ್ಕೆಂಜಲೆನಿಸಿಹುದು[3] ।
ಸೊಕ್ಕಿ ಜವ್ವನವು ನೆರೆದಡೆ ಆ ಹೆಣ್ಣು ।
ಸಕ್ಕರೆಯಂತೆ ಸರ್ವಜ್ಞ ॥ ೧೫೧೮ ॥

* ನೋಡಿದರೆ ಎರಡೂರು ಕೂಡಿದಾ ಮಧ್ಯದಲಿ ।
ಮೂಡಿಹಸ್ಮರನ ಮನೆಯಲ್ಲಿ ಜಗವು ಬಿ- ।
ದ್ದಾಡುತ್ತಲಿಹುದು ಸರ್ವಜ್ಞ ॥ ೧೫೧೯ ॥

* ಸಂದಿಯಾಗಾಯ ಜಗ । ವಂದ್ಯವಾಗೆಸೆದಿಹುದು[4] ।
ನಂದಿವಾಹನರು ಅಜಹರಿಗಳಂತದನು ।
ಹೊಂದಿಕೊಂಡಿಹರು ಸರ್ವಜ್ಞ ॥ ೧೫೨೦ ॥

---

1 D. ನುಗ್ಗಾದರಯ್ಯ. 2 A. ನುರಿಮುರಿದು. 3 Gs. ಮಕ್ಕಳೆಂದೆನಿಸಿಹುದು.
4 A. ಬಂದೆಯಾಗೆಸಗಿತು.

* ಪುಲ್ಲೆ ಚರ್ಮವನುಟ್ಟು ಹಲ್ಲು ಬೆಳ್ಳಗೆ ಬಿಟ್ಟು[1]।
ಕಲ್ಲ ಮೇಲಿಪ್ಪ ತಪಸಿಯು ಮನಸೆಲ್ಲ।
ನಲ್ಲೆಯಲ್ಲಿಹುದು ಸರ್ವಜ್ಞ ॥ ೧೫೨೧ ॥

* ತೋಟದಾ ಬೆಳೆಯನ್ನು ದಾಟಿ[2] ನೋಡದರಾರು।
ಮೀಟು ಜವ್ವನದ ಸೊಬಗಿಯುರವನು ಕಂಡು[3]।
ದಾಟದವರಾರು? ಸರ್ವಜ್ಞ ॥ ೧೫೨೨ ॥

* ಒಡೆದ ರಾಣಿಯು ಮುತ್ತು ಹಡೆಯುದದು ಹಾಗವನು।
ಒಡೆದೊಂದು ಲಕ್ಷವ್ಪೊಡೆವ ಸ್ತ್ರೀರತ್ನವ।
ಪಡೆಯುದವರಾರು ಸರ್ವಜ್ಞ ॥ ೧೫೨೩ ॥

† ಗಂಜಳದ ಬಾವಿಯಲಿ ಗಂಜಳವು ಬೆಳೆದಿಹುದು।
ಗುಂಜುಂಟು ಕೆಸರು ಬಹಳುಂಟು[4] ಆ ಬಾವಿ-।
ಗಂಜದವರಾರು ಸರ್ವಜ್ಞ ॥ ೧೫೨೪ ॥

† ಯೋನಿಜರು ಯೋನಿಯನು ಹೀನಮಾಡುವದೇನು।
ಆನಂದ ಜನನಕದು ಮೂಲ ಶುಚಿಯಿರಲು।
ತಾನೊಲಿವುದೆಂದ! ಸರ್ವಜ್ಞ ॥ ೧೫೨೫ ॥

* ಕಾಮನಾಪುರದಿಪ್ಪ ಆಮಹಾ ಕೆರೆಯೊಳಗೆ।
ಹೇಮ ಹೇಮಿಗಳು ಮುಳುಗಿರಲು ಉಳಿದರ।
ನೇಮವೇನೆಂದ ಸರ್ವಜ್ಞ ॥ ೧೫೨೬ ॥

---

1 F. ಇಟ್ಟು 2 A. ನಾಟಿ. 3 A. ಬೆಲೆವೆಣ್ಣು ಹಳ್ಳವನು 4 D, ಬಳಗುಂಟು

* ಊರಿದಾ ಚೇಳಿನಿಂ । ದೇರಿದಾ ಬೇನೆಯಲಿ ।
ಮೂರು ಜಗವೆಲ್ಲ ಹೊರಳುತಿಹುದಾನೋವ ।
ಮೀರಿದವರಿಲ್ಲ ಸರ್ವಜ್ಞ ॥ ೧೫೨೭ ॥

* ಬಿಲ್ಲು ಬಲ್ಲಿತು ನಾರು[1] ಬಿಲ್ಲಿಂದ ಕಡು ಸಣ್ಣ ।
ಬಿಲ್ಲನೆ ಮುರಳಿ ಎರಗಿಸಿತು ನಾರಿಯಿಂ ।
ಬಲ್ಲಿದರು ಯಾರು? ಸರ್ವಜ್ಞ ॥ ೧೫೨೮ ॥

## ಮನೆವಾರ್ತೆ.

### ಗುಣವಂತೆ ದೊರೆಯುವದು ದೇವರ ಕೃಪೆ.

* ಅಂಗನೆಯರೊಲಿಯುವದು ಬಂಗಾರ ದೊರೆಯುವದು ।
ಸಂಗ್ರಾಮದೊಳಗೆ ಗೆಲುವದು ಇವು ಮೂರು ।
ಸಂಗಯ್ಯನೊಲುಮೆ! ಸರ್ವಜ್ಞ ॥ ೧೫೨೯ ॥

* ತಾಳದೋಲೆಯ ನಿಟ್ಟು ಜೀಳೆಮಣಿಯನು ಕಟ್ಟಿ ।
ವೇಳೆಯನರಿತು ನಡೆವವಳು ದೊರೆವುದು ।
ಶೂಲಿಯಕರುಣ! ಸರ್ವಜ್ಞ ॥ ೧೫೩೦ ॥

* ಉಲಿಯದೇ ಕೆಲಿಯದೇ ತಲೆಯೆತ್ತಿ ನೋಡದೇ ।
ಬಲು ಬಲ್ಲತನದಿ ಇರುವವಳು ದೊರೆವುದು ।
ಸಲೆ ಗುರುಕರಣ! ಸರ್ವಜ್ಞ ॥ ೧೫೩೧ ॥

ಉಲಿಯದಲೆ ಮೊರೆಯದಲೆ ಶಿರನೆತ್ತಿ ನೋಡದಲೆ ।
ಸರಿಬಂದಸ್ಥಾನದಿರುವಳು ದೊರೆವುದು ।
ಗುರುಕರುಣವೆಂದ! ಸರ್ವಜ್ಞ ॥ ೧೫೩೨ ॥

---

1 A. ನಾರಿ.

ಸ್ತ್ರೀಯರಿಲ್ಲದ ಮನೆಯಲ್ಲ.

* ದಂಡಿಗಿಲ್ಲದ ಹಾಡು ಕೊಂಡವಿಲ್ಲದ ಹೋಮ[1] ।
ಹೆಂಡರಿಲ್ಲದನ ಮನೆವಾರ್ತೆ ತಲೆಹೋದ ।
ಮುಂಡದಂತಿಕ್ಕು ಸರ್ವಜ್ಞ ॥ ೧೫೩೩ ॥

* ನಾರಿಯಿಲ್ಲದ ಮನೆಯು ವಾರಿಯಿಲ್ಲದ ದುರ್ಗ ।
ಮೇರೆ ತಪ್ಪಿದನ ಮನ್ನಣೆಯು ಮೂರು ।
ಮಾರಿ ಕಾಣಯ್ಯ ಸರ್ವಜ್ಞ ॥ ೧೫೩೪ ॥

* ಲಿಂಗವಿಲ್ಲದ ಪೂಜೆ ಗಂಗೆಯಿಲ್ಲದ ತೋಟ ।
ಹೆಂಗಳಿಲ್ಲದನ ಮನೆವಾರ್ತೆಯನುದಿನ ।
ಭಂಗ ಕಾಣಯ್ಯ ಸರ್ವಜ್ಞ ॥ ೧೫೩೫ ॥

* ಸುಣ್ಣವಿಲ್ಲದ ವೀಳ್ಯ ಬಣ್ಣವಿಲ್ಲದ ಮದುವೆ ।
ಹೆಣ್ಣಿಲ್ಲದವ ಸಂಸಾರ ಮಳಲೊಳಗೆ ।
ಎಣ್ಣೆ ಹೊಯಿದಂತೆ ಸರ್ವಜ್ಞ ॥ ೧೫೩೬ ॥

ಪುರುಷರಿಲ್ಲದ ಮನೆಯು ಬಂಡು.

* ಗಂಡನಿಲ್ಲದ ನಾರಿ ಮಿಂಡನಿಲ್ಲದ ಸೂಳೆ ।
ಬಂಡವಿಲ್ಲದನ ಬೇಹಾರ, ಮುದಿನಾಯು ।
ಕುಂಡೆಯಂತಿಕ್ಕು ಸರ್ವಜ್ಞ ॥ ೧೫೩೭ ॥

* ಅರಸು ಇಲ್ಲದ ಊರು ಹೊರಸು ಇಲ್ಲದ ನಿದ್ರೆ ।
ಪುರುಷನಿಲ್ಲದಳ ಬಾಳುವೆಯು ನೀರೊಳ- ।
ಕ್ಷರವ ಬರೆದಂತೆ ಸರ್ವಜ್ಞ ॥ ೧೫೩೮ ॥

1 Ac. ಉಂಡಿಗಿಲ್ಲದ ಸುಂಕ; ಉಂಡಿಗೆ = ರಸೀದಿ.

### ಮಕ್ಕಳಿದ್ದರೆ ಮನೆ.

* ಮಕ್ಕಳಿಲ್ಲದ ಮನೆಯು ಪಕ್ಕಿಯಿಲ್ಲದ ವನವು ।
ದಿಕ್ಕಿಲ್ಲದವನ ಸಂಸಾರ ಕಳನು ಮನೆ ।
ಹೊಕ್ಕು ಹೋದಂತೆ ಸರ್ವಜ್ಞ ‖ ೧೫೪೯ ‖

* ಅಂದವಿಲ್ಲದ ದುಸ್ತು ಹಂದರಿಲ್ಲದ ಮದುವೆ ।
ಕಂದನಿಲ್ಲದಳ ಮನೆವಾರ್ತೆಯಿವು ಮೂರು ।
ಕುಂದು ಕಾಣಯ್ಯ ಸರ್ವಜ್ಞ ‖ ೧೫೫೦ ‖

* ಮೊಸರು ಇಲ್ಲದ ಊಟ ಕೆಸರು ಇಲ್ಲದ ಗದ್ದೆ ।
ಬಸುರಾಗದವಳ ಬಾಳುವೆಯು ಬೇಸಿಗೆಯ ।
ಬಿಸಲು ಕಾದಂತೆ ಸರ್ವಜ್ಞ ‖ ೧೫೫೧ ‖

* ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು ।
ಅಕ್ಕರಿಲ್ಲದ ತವರೂರು ಇವು ಮೂರು ।
ದುಕ್ಕ ಕಾಣಯ್ಯ ಸರ್ವಜ್ಞ ‖ ೧೫೫೨ ‖

### ಪತಿವ್ರತೆಯಲ್ಲಿ ಸಂಶಯ ಬೇಡ.

* ಒಪ್ಪುಳ್ಳ ಹೆಣ್ಣಿನಲಿ ತಪ್ಪ ಸಾಧಿಪನೆಗ್ಗ ।
ಕರ್ಪುರದ ಮೇಲೆ ಕಸನಿರಲು ಆದನೊಬ್ಬ- ।
ರೊಪ್ಪುದವರುಂಟೆ? ಸರ್ವಜ್ಞ ‖ ೧೫೫೩ ‖

* ಲೇಸಪ್ಪ ಸತಿಯೊಡನೆ ದೋಷಮರಸುವ ಹೆಡ್ಡ ।
ಕಾಸಿದ ಹಾಲು ನೊಣಮುಟ್ಟಲದನಾರು ।
ಸೋಸಿ ತೆಗೆದಿಹರು? ಸರ್ವಜ್ಞ ‖ ೧೫೫೪ ‖

---

1 F. ಮನೆಕಳ್ಳ.

ಪ್ರೀತಿ ಇದ್ದರೆ ಬಾಳ್ವೆ.

* ಮನಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು ।
ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ ।
ಕೆನೆಯ ಸವೆದಂತೆ ಸರ್ವಜ್ಞ ॥ ೧೫೪೫ ॥

* ತೋಟದಾ ಕಬ್ಬಿಂದ ಹೋಟೆಯಾ ಜೇನಿಂದ ।
ನೀಟಾಗಿ ಕರೆವ ಹೈನಿಂದ ಬಲ್ಲವಳ ।
ಕೂಟವೇ ಲೇಸು ಸರ್ವಜ್ಞ ॥ ೧೫೪೬ ॥

ಪ್ರೀತಿಯು ಇಲ್ಲದ ಬಾಳ್ವೆಯುಲ್ಲ.

† ಬಾರದಾ ಹೆಣ್ಣಿಂಗೆ ಹೋರುವನು ಕಡು ಹೆಡ್ಡ ।
ದೂರದ ಹೆಣಕೆ ನರಿನೆಗೆದು ಕೂಗಿ ಬಾ- ।
ಯಾರಿ ಸತ್ತಂತೆ ಸರ್ವಜ್ಞ ॥ ೧೫೪೭ ॥

* ವಿನಯವಿಲ್ಲದಳಲ್ಲಿ ಮನವನಿಕ್ಕುವ ಹೆಡ್ಡ ।
ಘನವಪ್ಪ ಬೂರಫಲಕಾಗಿ ಪಕ್ಕಿಗಳು ।
ಜಿನುಗಿ ಸತ್ತಂತೆ ಸರ್ವಜ್ಞ ॥ ೧೫೪೮ ॥

* ಸತ್ತವರ ಬಾಯೊಳಗೆ ಒತ್ತಿ[1] ನೀರೆರೆದಂತೆ ।
ಚಿತ್ತವಿಲ್ಲದಳ ಸಂಸಾರ ಶುನಿ ಹೆಣನ ।
ಹತ್ತಿ ತಿಂದಂತೆ ಸರ್ವಜ್ಞ ॥ ೧೫೪೯ ॥

† ಸತ್ತ ಹೆಣನಿಗೆ ನೀರ ಹೊತ್ತು ಮೈದೊಳೆದಂತೆ ।
ಚಿತ್ತವಿಲ್ಲದಳ ಒಡನಾಟ ಕತ್ತೆಯಲಿ ।
ಅತ್ತು ಕರೆದಂತೆ ಸರ್ವಜ್ಞ ॥ ೧೫೫೦ ॥

---

1 W. ಬತ್ತಿ.

* ಓತಿರದ ಹೆಣ್ಣಿನೊಡ ಮಾತನಾಡುವ ಹೆಡ್ಡ ।
ಹೂತ ಮಲ್ಲಿಗೆಯ ವನದೊಳು ತುರುಬಿಲ್ಲ ।
ದಾತ[1] ಸುಳಿದಂತೆ ಸರ್ವಜ್ಞ ॥ ೧೫೫೧ ॥

* ಹರಿದ ಹರಗೋಲ್ಹೊಲ್ಲ ಹರುಕನಾ ಕಳೆಹೊಲ್ಲ ।
ತೊರೆಯಲಂಬಿಗನ ಹಗೆ ಹೊಲ್ಲ, ಕೂಟಕೆ ।
ನೆರೆಯುದಳು ಹೊಲ್ಲ ಸರ್ವಜ್ಞ ॥ ೧೫೫೨ ॥

* ಒಲ್ಲದವಳೊಡನಾಡಿ ಚೆಲ್ಲವಾಡುವ ನೆಗ್ಗ ।
ಕಲ್ಲ ಪುತ್ಥಳಿಯ ಬಿಗಿದಪ್ಪಿ ಚುಂಬಿಸಿ ।
ಹಲ್ಲು ಹೋದಂತೆ ಸರ್ವಜ್ಞ ॥ ೧೫೫೩ ॥

* ಚಿತ್ತವಿಲ್ಲದ ಹೆಣ್ಣ । ಗರ್ತಿ ಮಾಡುವ ಹೆಡ್ಡ ।
ಬತ್ತಿದ ಕೆರೆಗೆ ಗಿಣಿಯೋಡಿ ಬಾಯಾರಿ ।
ಸತ್ತು ಹೋದಂತೆ ಸರ್ವಜ್ಞ ॥ ೧೫೫೪ ॥

ಬೇರಾದದ್ದು ಬೆಲ್ಲಕ್ಕಿಂತ ಸವಿ

† ಕೋಡಗನ ಮುಸುಡಾಗಿ ಬೇಡುಗಾಲವಳಾಗಿ ।
ನೋಡುವರಿಗೆಲ್ಲ ನಗೆಯಾಗಿ ಇಂಬರಿದು ।
ಕೂಡುವಳೆ ಸತಿಯು ಸರ್ವಜ್ಞ ॥ ೧೫೫೫ ॥

* ಕೊಂಕುಗುರುಳಿನ ರಂಭೆ ಕಂಕಣವು ಕಟಿಸೂತ್ರ ।
ಪಂಕಜಗಂಧಿಯೆನಬೇಡ ತಾನೊಲಿದ ।
ಸುಂಕ ಮಾಣಿಕವು ಸರ್ವಜ್ಞ ॥ ೧೫೫೬ ॥

1-C. ವಾಳಿ. A. ದತ್ತ.

ಸಂಸಾರ ಸುಖ.

* ಅಂಗನೆಯು ಗುಣಿಯಾಗಿ ಅಂಗಳದಿ ಹೊರಸಾಗಿ ।
ತಂಗಾಳಿ ಜೊನ್ನದಿರುಳಾಗಿ ಬೇಸಿಗೆಯು ।
ಹಿಂಗದೇ ಇರಲಿ ಸರ್ವಜ್ಞ ॥ ೧೫೫೭ ॥

* ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ ।
ಇಚ್ಛೆಯನರಿವ ಸತಿಯಾಗಿ ಸ್ವರ್ಗಕೆ ।
ಕಿಚ್ಚು ಹಚ್ಚೆಂದ ಸರ್ವಜ್ಞ ॥ ೧೫೫೮ ॥

* ಜೋಳದಾ ಬೋನಾಗಿ ಮೇಲೆ ಕೆನೆಮೊಸರಾಗಿ ।
ವೇಳೆಗೆ ಬರುವ ಸತಿಯಾಗೆ ಸೂಳೆಯನು ।
ಕೋಳ ದಿಕ್ಕೆಂದ ಸರ್ವಜ್ಞ ॥ ೧೫೫೯ ॥

† ಅಳೆಯಿಲ್ಲದಾ ಊಟ ಮಳೆಯಿಲ್ಲದಾರಂಬ ।
ಬಳೆಯಿಲ್ಲದವಳ ನಳಿದೋಳು ದೊಂಬರ ।
ಗಳವು ಮುರಿದಂತೆ ಸರ್ವಜ್ಞ ॥ ೧೫೬೦ ॥

* ಎತ್ತುಗಳು ಎರಡಾಗಿ ಬತ್ತದಿಹ ಹಯನಾಗಿ ।
ಪುತ್ರರಯ್ದಾಗಿ ಸತಿಯೊಬ್ಬಳಾದರೆ ।
ನಿತ್ಯದಲಿ ಸುಖವು ಸರ್ವಜ್ಞ ॥ ೧೫೬೧ ॥

† ಕೆಂದಸಾದೆತ್ತಾಗಿ ಮುಂದರಿವ ಮಗನಾಗಿ ।
ಕುಂದದೆಗಯ್ವ ಸೊಸೆಯಾದರಾಮನೆಗೆ ।
ಬಿಂದಿಗೆಯು ಹೊನ್ನು ಸರ್ವಜ್ಞ ॥ ೧೫೬೨ ॥

† ಹಳ್ಳಗದ್ದೆಗಳಾಗಿ ಕುಳ್ಳವೆರಡೆತ್ತಾಗಿ ।
ಒಳ್ಳೆ ಗುಣದವಳು[1] ಸೊಸೆಯಾದರಾಮನೆಗೆ ।
ಬಳ್ಳದಲಿ ಹೊನ್ನು ಸರ್ವಜ್ಞ ॥ ೧೫೬೩ ॥

---

## ೨೬. ಸ್ತ್ರೀನಿಂದಾ ಪದ್ಧತಿ.

---

### ಅಯೋಗ್ಯ ಮನೆವಾರ್ತೆ.

* ಅರಸನಿಲ್ಲದ ನಾಡು ವರುಷವಿಲ್ಲದ ಬೆಳೆಯು ।
ಹರುಷವಿಲ್ಲದಳ ಮನೆವಾರ್ತೆ ಅರನಾರಿ ।
ಪುರುಷನಂತಕ್ಕು ಸರ್ವಜ್ಞ ॥ ೧೫೬೪ ॥

* ತೊಗೆಯಿಲ್ಲದೂಟ ಸಂ । ಪಿಗೆಯಿಲ್ಲದಾ ತೋಟ ।
ನಗೆಯಿಲ್ಲದವಳ ಒಡನಾಟ ಬೆರಣೆಯ[2] ।
ಹೊಗೆಯ ಕುಡಿದಂತೆ[3] ಸರ್ವಜ್ಞ ॥ ೧೫೬೫ ॥

* ತೋವೆಯಿಲ್ಲದ ಊಟ ಲೋವೆಯಿಲ್ಲದ ಮನೆಯು ।
ನೋವನರಿಯದಳ ಮನೆವಾರ್ತೆ ಸವಿಬೇಡಿ ।
ಬೇವು ತಿಂದಂತೆ ಸರ್ವಜ್ಞ ॥ ೧೫೬೬ ॥

* ಅಡಿಕೆಯಿಲ್ಲದ ವೀಳ್ಯ ಕಿಡಿಕೆಯಿಲ್ಲದ ಮನೆಯು ।
ಒಡಕು ಬಾಯವಳ ಮನೆವಾರ್ತೆ ಎಣ್ಣೆಯ ।
ಕುಡಿಕೆಯೊಡದಂತೆ ಸರ್ವಜ್ಞ ॥ ೧೫೬೭ ॥

---

1 Gs ನೆಳೆಗಣ್ಣವಳು. 2 & 3 Gs. ತೂತಿನ ನೊಗೆಯು ಬಾಳುವೆಯು.

* ಎಣ್ಣೆಯಿಲ್ಲದ ಮೊಹ ಸುಣ್ಣವಿಲ್ಲದ ವೀಳ್ಯ ।
ಕಣ್ಣಿಲ್ಲದವಳ ಮನೆವಾರ್ತೆ ಮಳಲೊಳ- ।
ಗೆಣ್ಣೆಹೊಯಿದಂತೆ ಸರ್ವಜ್ಞ ॥ ೧೫೬೮ ॥

† ಆಸರಿಲ್ಲದ ಮನೆಯು ಮಾಸೆಯಿಲ್ಲದ ಮೋರೆ ।
ಬೇಸರದವಳ ಮನೆವಾರ್ತೆ ಹಣಹೋದ ।
ಮೋಶಿಯಂತಕ್ಕು ಸರ್ವಜ್ಞ ॥ ೧೫೬೯ ॥

* ದೋಸೆ[1]ಯಿಲ್ಲದ ಊಟ[2] ಕಾಸು ಇಲ್ಲದ ಜಾಳ್ಗೆ ।
ಆಸರದವಳ ಮನೆವಾರ್ತೆ ತಾಯ್ಸತ್ತ ।
ಕೂಸಿನಂತಿಕ್ಕು ಸರ್ವಜ್ಞ ॥ ೧೫೭೦ ॥

* ಮೊಸರು ಇಲ್ಲದ ಊಟ ಕೆಸರು ಇಲ್ಲದ ಗದ್ದೆ ।
ಹಸನವಿಲ್ಲದಳ ಮನೆವಾರ್ತೆ ತಿಪ್ಪೆಯ ।
ಕಸದಂತೆ ಇಹುದು ಸರ್ವಜ್ಞ ॥ ೧೫೭೧ ॥

† ಹರಿಕೆಯಿಲ್ಲದ ದಾನ ನೆರಿಕೆಯಿಲ್ಲದ ಮನೆಯು ।
ಅರಿಕೆಯಿಲ್ಲದಳ ಮನೆವಾರ್ತೆ ಅನ್ನದ ।
ಕರಕು ಸವಿದಂತೆ ಸರ್ವಜ್ಞ ॥ ೧೫೭೨ ॥

* ಅರುಪಲರಿಯದ ದೊರೆಯು ಕುರುಪನರಿಯದ ಕುದುರೆ ।
ತಿರುಗಿ ಆಡುವಳ ಒಡನಾಟ ಇಟ್ಟೆಯ- ।
ಲಿರಿದುಕೊಂಡಂತೆ ಸರ್ವಜ್ಞ ॥ ೧೫೭೩ ॥

1 & 2 C. ವೋಸ A ದ್ವೇಷವಿಲ್ಲವ ವಿಪ್ರ.

* ಕಣಿಕವಿಲ್ಲದ ಊಟ ವನಿತೆ[1]ಯಿಲ್ಲದ ಬಾಳ್ವೆ ।
ಎಣಿಕೆಯಿಲ್ಲದಳ ಮನೆವಾರ್ತೆ ಹೊಳೆಯೊಳು ।
ಮುಣುಗಿ ಹೋದಂತೆ ಸರ್ವಜ್ಞ ॥ ೧೫೭೪ ॥

† ಬಂದು ಬಾಗದ ಬಿಲ್ಲು ಹೊಂದಿ ಹೋಗದ ಬಂಟ[2] ।
ತಂದುದನರಿದು ಬಳಸದಿಹ ನಾರಿಯು ।
ಕೊಂದಳೆಂದರಿಗು ಸರ್ವಜ್ಞ ॥ ೧೫೭೫ ॥

* ಕಾಸು ಇಲ್ಲದ ಬಾಳು ಭಾಷೆಯರಿಯದ ಆಳು ।
ಹೇಸಿಯಾಡವಳ ಮನೆವಾರ್ತೆ ಕತ್ತೆಯು ।
ಹೂಸಿನಂತಿಕ್ಕು ಸರ್ವಜ್ಞ ॥ ೧೫೭೬ ॥

* ಬಚ್ಚಲಿಲ್ಲದ ಮನೆಯು ಕೆಚ್ಚಲಿಲ್ಲದ ಪಶುವು ।
ನೆಚ್ಚಿಗಿಲ್ಲದಳ ಮನೆವಾರ್ತೆ ಶ್ರಾವಣದ ।
ಕಿಚ್ಚು ಕಾದಂತೆ ಸರ್ವಜ್ಞ ॥ ೧೫೭೭ ॥

ಸಂಚಿಯಿಲ್ಲದ ವೀಳ್ಯ ಮಂಚವಿಲ್ಲದ ನಿದ್ರೆ ।
ವಂಚನೆಯುವಳ ಮನೆವಾರ್ತೆ ಕಿಲುಬಿಡಿದ ।
ಕಂಚಿನಂತಕ್ಕು ಸರ್ವಜ್ಞ ॥ ೧೫೭೮ ॥

* ಅಲ್ಲವಿಲ್ಲದ ಊಟ ನಲ್ಲಳಿಲ್ಲದ ನಿದ್ರೆ ।
ಹಲ್ಲಿಲ್ಲದವಳ ರತಿಕೂಟ ಸಮರದ ।
ಬಿಲ್ಲು ಮುರಿದಂತೆ ಸರ್ವಜ್ಞ ॥ ೧೫೭೯ ॥

---

1 A. ಬನಿಕೆ. 2 C. ಬಾರದ ನೆಂಟ.

* ಎರೆಯಿಲ್ಲದಾರಂಬ ದೊರೆಯಿಲ್ಲದಾ ಊರು ।
ಹರೆಯು ಹೋದವಳ ಒಡನಾಟ ನಾಯಿ ಹಳೆ- ।
ಕೆರೆವ ಕಡಿದಂತೆ ಸರ್ವಜ್ಞ ॥ ೧೫೮೦ ॥

* ಮುರಿದು ಬಿತ್ತಿದ ಹೊಲವು ಹಿರಿದಾಗಿ ಬೆಳೆವುದೇ ।
ಹರೆಯು ಹೋದವಳ ರತಿಕೂಟ ಮಳಲೊಳು ॥
ಬೆರೆದ ಕೂಳಂತೆ ಸರ್ವಜ್ಞ ॥ ೧೫೮೧ ॥

* ಈಚಲಾ ಮರಹೀನ ನೀಚರಾ ನೆರೆಹೀನ ।
ನೋಚಿದಾ ಹೆಣ್ಣು ತರಹೀನ ಮನೆಯೊಳು ।
ಪೇಚಾಟಹೀನ ಸರ್ವಜ್ಞ ॥ ೧೫೮೨ ॥

* ಬಿದ್ದ ಮೊಲೆಯುಳು ಹೊಲ್ಲ ಇದ್ದೂರ ಹಗೆ ಹೊಲ್ಲ ।
ತಿದ್ದದ ಎತ್ತು ತರಹೊಲ್ಲ ಮನೆಯೊಳಗೆ ।
ಗುದ್ದಾಟ ಹೊಲ್ಲ ಸರ್ವಜ್ಞ ॥ ೧೫೮೩ ॥

* ದಾರಿಯಾ ಮನೆಹೊಲ್ಲ ಜಾರೆಯಾ ನೆರೆಹೊಲ್ಲ ।
ಊರು ಕಾಯುವನ ಹಗೆಹೊಲ್ಲ ಮನೆಯೊಳು ।
ಹೋರಾಟ ಹೊಲ್ಲ ಸರ್ವಜ್ಞ ॥ ೧೫೮೪ ॥

† ಕಣ್ಣು ಬೇನೆಯು ಹೊಲ್ಲ ಹುಣ್ಣಾದ ಮೊಗಹೊಲ್ಲ ।
ಬಣ್ಣವ ಬರೆವ ಸತಿಹೊಲ್ಲ ಕುಲಹೀನ- ।
ಹೆಣ್ಣು ತರಹೊಲ್ಲ ಸರ್ವಜ್ಞ ॥ ೧೫೮೫ ॥

* ಗೋಟಡಿಕೆ ಮೆಲಹೊಲ್ಲ ಬಾಟೆಯೊಳು ಇರಹೊಲ್ಲ ।
ಕೂಟವನು ಮುರಿವ ಸತಿಹೊಲ್ಲ ಹೆಣ್ಣೊಳು ।
ತಾಟಕಿಯೆ ಹೊಲ್ಲ ಸರ್ವಜ್ಞ ॥ ೧೫೮೬ ॥

† ದಾಸಿಯೆಂಜಲು ಹೊಲ್ಲ ಮೀಸೆ ಹುಳುಕಲು ಹೊಲ್ಲ ।
ಬೇಸರದವಳ ಮನೆಹೊಲ್ಲ ನಂಬಿದಲಿ ।
ಮೋಸವೇ ಹೊಲ್ಲ ಸರ್ವಜ್ಞ ॥ ೧೫೮೭ ॥

† ಸಂಜೆಯಲಿ ಉಣಹೊಲ್ಲ ಎಂಜಲನು ತಿನಹೊಲ್ಲ ।
ನಂಜು ಒಡಲೊಳಗೆ ಇರಹೊಲ್ಲ ಮನೆಯೊಳು ।
ಗುಂಜಾಟ ಹೊಲ್ಲ ಸರ್ವಜ್ಞ ॥ ೧೫೮೮ ॥

* ಅಂದವಿಲ್ಲದ ಹೆಣ್ಣು ಚಂದವಿಲ್ಲದ ಮದುವೆ ।
ತಂದುದನು ತಿಂದು ಮಲಗುವ ಸತಿಯಿಂದ ।
ಬೆಂದಿಹುದೆ ಲೇಸು ಸರ್ವಜ್ಞ ॥ ೧೫೮೯ ॥

* ಸೋರುವಾ ಮನೆಯಿಂದ ದಾರಿಯಾ ಮರಲೇಸು ।
ಹೋರುವ ಸತಿಯ[1] ಬದುಕಿಂದ ಹೊಡೆದೊಯ್ವ ।
ಮಾರಿಯೇ ಲೇಸು ! ಸರ್ವಜ್ಞ ॥ ೧೫೯೦ ॥

* ಹೊಸೆಯದಾ ಕೈಯಿಂದ ಕುಸಿದು ಹೋಹುದು ಲೇಸು ।
ಅಸಮಾನದವಳ ಬದುಕಿಂದ ತಿಂಗಳಲಿ ।
ಹಸಿದಿಹುದೆ ಲೇಸು ಸರ್ವಜ್ಞ ॥ ೧೫೯೧ ॥

---

1 Gs. ದಾರಿದ್ರ್ಯದವಸ.

* ಚುಚ್ಚುವಾ ಕೆರದಿಂದ ಕಚ್ಚುವಾ ಶುನಿಲೇಸು ।
ನಿಚ್ಚಲು ಉಲಿವ ಸತಿಯಿಂದ ಉರಿದಿರ್ದ ।
ಕಿಚ್ಚು ಲೇಸೆಂದ ಸರ್ವಜ್ಞ ॥ ೧೫೯೨ ॥

* ಹೇಳಿದರೆ ಕೇಳದಲೆ ಕಾಳುಬುದ್ಧಿಯ ಕಲಿತು ।
ಸೂಳೆಯಂತಿಪ್ಪ ಸತಿಯು ಬಾಳುವೆಯಿಂದ ।
ಕೋಳವೇ ಲೇಸು ಸರ್ವಜ್ಞ ॥ ೧೫೯೩ ॥

* ಒಮ್ಮೆ ಕರೆದರೆ ಕೇಳ । ದಿಮ್ಮೆ ಕರೆದರೆ ಕೇಳಿ ।
ಹಮ್ಮಿನಿಂದುಲಿವ ಸತಿಯಿಂದ ಹೊಡೆದೊಯ್ವ ।
ಹೆಮ್ಮಾರಿ ಲೇಸು ಸರ್ವಜ್ಞ ॥ ೧೫೯೪ ॥

* ಮೋಡಿನಾ ಹೊಲವಾಗಿ ಜೋಡಿಲ್ಲದೆತ್ತಾಗಿ ।
ಕಾಡಿಗೆಗಣ್ಣ ಸೊಸೆಯಾದರಾಮನೆಗೆ ।
ಕೇಡುಬಿಡದೆಂದ ಸರ್ವಜ್ಞ ॥ ೧೫೯೫ ॥

† ಕರಿಯುವೆರಡೆತ್ತಾಗಿ ಜರಿಯುವ ಮಗನಾಗಿ ।
ಕರೆಯಲು ಬರದ ಸೊಸೆಯಾದರಾಮನೆಯು ।
ಉರಿದು ಹೋಗಿಹುದು ಸರ್ವಜ್ಞ ॥ ೧೫೯೬ ॥

ಹಾರುವೆರಡೆತ್ತಾಗಿ ಹೋರುವಾಮಗನಾಗಿ ।
ಸೋರುಗಣ್ಣಾಕೆ ಸೊಸೆಯಾದರಾಮನೆಗೆ ।
ತೂರುವರು ಮಣ್ಣ ಸರ್ವಜ್ಞ ॥ ೧೫೯೭ ॥

† ಚೆಂಚವೆರಡೆತ್ತಾಗಿ ಸಂಚಿನಾ ಸೊಸೆಯಾಗಿ।
ಮಿಂಚಾಗಿ ಬರುವ ಮಗನಾದರಾಮನೆಗೆ।
ಲಂಚ ತಪ್ಪುವದೆ[1]? ಸರ್ವಜ್ಞ ॥ ೧೫೯೮ ॥

* ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ।
ಕಂಡಲ್ಲಿ ಹರಿವ ಮಗನಾದರಾಮನೆಗ।
ದಂಡ ತಪ್ಪುವದೆ? ಸರ್ವಜ್ಞ ॥ ೧೫೯೯ ॥

ಸ್ತ್ರೀನಿಂದಾ.

* ಭಾರ್ಯೆಯಃನು ಯಮನುಂಗಿ ಕಾಯಲರಿಯನು ನೋಡ।
ಮಾಯಾದ ಅಗ್ನಿಯೊಡಗೂಡಿ ಹೆಣ್ಣೆಂಬ।
ನಾಯ ನಂಬುವರೆ? ಸರ್ವಜ್ಞ ॥ ೧೬೦೦ ॥

† ಹುಚ್ಚ ನಾಯಿಯು ಹೊಲ್ಲ ಮಚ್ಚರದ ಮಗ ಹೊಲ್ಲ।
ರಚ್ಚೆಲಿರುವನ ನೆರೆ ಹೊಲ್ಲ ಹೆಣ್ಣನು।
ನೆಚ್ಚಿರಲು ಹೊಲ್ಲ ಸರ್ವಜ್ಞ ॥ ೧೬೦೧ ॥

† ಆಲಕ್ಕೆ ಹೂವಿಲ್ಲ ಶೀಲಕ್ಕೆ ಸರಿಯಿಲ್ಲ।
ನಾಲಿಗೆಗೊಂದು ಎಲುವಿಲ್ಲ ದೃಢಮನ।
ಬಾಲೆಯರಿಗಿಲ್ಲ ಸರ್ವಜ್ಞ ॥ ೧೬೦೨ ॥

† ನೀರಿನೊಳಗಣ ಕಲ್ಲು ನಾರೇಳ ಬಲ್ಲದೇ।
ನಾರಿಯರೊಲುಮೆ ತನಗೆಂಬ ಮನುಜನ।
ಮೋರೆ ನೋಡೆಂದ! ಸರ್ವಜ್ಞ ॥ ೧೬೦೩ ॥

---

1 A. ವಂಚನೆಯುಳಿಹುದು.

* ಜಲದ ಒಳಗಿನ ಕಲ್ಲು ಸಲೆಬೆಮರ ಬಲ್ಲದೇ।
ಲಲನೆಯರೊಲುಮೆ ತನಗೆಂಬ ಮನುಜಂಗೆ।
ಮಲರೋಗವೆಂದ ಸರ್ವಜ್ಞ ॥ ೧೬೦೪ ॥

* ಏರಿ ಮೇಲಣ ಪಂಜು ನೀರೊಳಗೆ ಉರಿದಂತೆ।
ನಾರಿಯರೊಲುಮೆ ತನಗೆಂಬ ಮರುಳಂಗೆ।
ಮಾರಿ ಹಿಡಿದಿಹುದು ಸರ್ವಜ್ಞ ॥ ೧೬೦೫ ॥

† ದಾರಿಯಾ ಮರಬೆಂದು ನೀರೊಳಗೆ ಉರಿದಂತೆ।
ನಾರಿಯರೊಲುಮೆ ತನಗೆಂದು ಕುಣಿವನಾ।
ಸೂರೆ ನೋಡೆಂದ ಸರ್ವಜ್ಞ ॥ ೧೬೦೬ ॥

* ಹಂಚು ಮಣ್ಣಲಿ ಹುಟ್ಟಿ ವಂಚನೆಯುಲಿರುವಂತೆ।
ಸಂಚು ಬೇರವಳ ಮನಬೇರೆ ಹೆಣ್ಣೆಂಬ।
ಹಂಚನೆಚ್ಚುವರೆ? ಸರ್ವಜ್ಞ ॥ ೧೬೦೭ ॥

* ಮನೆಯ ಮೇಲಿನ ಜೋಳ[1] ತೆನೆಯಾಗಬಲ್ಲದೇ।
ವನಿತೆಯು ಒಲಿದಳೆನಬೇಡ ಬೆಳ್ಳಕ್ಕಿ।
ದನವ ಕಾದಂತೆ ಸರ್ವಜ್ಞ ॥ ೧೬೦೮ ॥

* ಕುದುರೆಯಾ ಚದುರೆಯಾ ಹದಿರೆರಡು ಒಂದಯ್ಯ।
ಚದುರನೇರಿದರೆ ಕುಣಿವದು ಬೆಳ್ಳಾಳ।
ಬಿದಿರಿ ಹಾಕುವದು ಸರ್ವಜ್ಞ ॥ ೧೬೦೯ ॥

---

1 A. ಹುಲ್ಲು C ದಂಟು.

* ಹೆಂಡರಾ ಕೌತುಕವು ಗಂಡರಿಗೆ ತಿಳಿವುದೇ।
ಗುಂಡಿ[1]ನೀರೊಳಗೆ ಕಿರಿಮೀನ ಹೆಜ್ಜೆಯು।
ಕಂಡಾತನಾರು? ಸರ್ವಜ್ಞ ॥ ೧೬೧೦ ॥

* ಮೊಗೆಯ ನೀರೊಳಗೊಂದು ನೆಗಳಾಡಿದಂದಿಗೇ।
ತಗುಣಿ ಹೆಬ್ಬುಲಿಯ ಹಿಡಿದಂದು ಹೆಣ್ಣಿನ।
ಬಗೆಯ ನಂಬುವದು ಸರ್ವಜ್ಞ ॥ ೧೬೧೧ ॥

* ಯಾತದಾ ಗಣಿಚಿಗಿತು ಕಾತುಫಲವಾದಂದು।
ಹೋತು ಹೆಬ್ಬುಲಿಯ[2]ನಿರಿದಂದು ಹೆಣ್ಣಿನ।
ಮಾತ ನಂಬುವದು ಸರ್ವಜ್ಞ ॥ ೧೬೧೨ ॥

* ಅಡವಿಯೊಳು ಮಳೆಹೊಡೆದು ಗಿಡ ಸೇಡುಗೊಂಡಂದು।
ಹುಡಿಯಲ್ಲಿ ಕಮಲ ಬೆಳೆದಂದು ಹೆಣ್ಣಿನ।
ನುಡಿಯ ನಂಬುವದು! ಸರ್ವಜ್ಞ ॥ ೧೬೧೩ ॥

* ಅಲ್ಲ ಸಿಹಿಯಾದಂದು[3] ನೆಲ್ಲಿ ಹಣ್ಣಾದಂದು।
ಕಲ್ಲು ಪ್ರತಿಮೆಗಳು ಕುಣಿದಂದು ಸತಿಯರ।
ಸೊಲ್ಲ ನಂಬುವದು ಸರ್ವಜ್ಞ ॥ ೧೬೧೪ ॥

ತಾತ್ಪರ್ಯ.

* ನಂಬಿದಂತಿರಬೇಕು ನಂಬದಲೆ ಇರಬೇಕು।
ಇಂಬರಿದು ಎಚ್ಚರಿರಬೇಕು ಹೆಣ್ಣನು।
ನಂಬಿದವ ಕೆಟ್ಟ ಸರ್ವಜ್ಞ ॥ ೧೬೧೫ ॥

---

1 W. ಗುಂಡಿ. 2 C. ಹೋತೆದ್ದು ಕರಿಯು. 3 ಜೆಲ್ಲ ಕಹಿಯಾದಂದು.

† ಹೆಣ್ಣು ಮುನಿದರೆ ತಿದ್ದು । ವಣ್ಣಗಳ ನಾ ಕಾಣೆ ।
ಹೆಣ್ಣೊಳಮೃತವು ವಿಷವುಂಟು ಉಣಬಲ್ಲ ।
ಅಣ್ಣಗಳು ಯಾರು? ಸರ್ವಜ್ಞ ॥ ೧೬೧೬ ॥

* ಹೆಣ್ಣಿನಾ ಗುಣವರಿಯೆ ಕಣ್ಣಿಗದು ಕಾಂಬುವದೆ? ।
ಸುಣ್ಣದ ಕಲ್ಲಿನೊಳು ಅಡಗಿ ಸುಡುಗಿಚ್ಚು ।
ತಣ್ಣಗಿದ್ದಂತೆ ಸರ್ವಜ್ಞ ॥ ೧೬೧೭ ॥

* ನಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ ।
ನಾರಿ ಸಕಲರಿಗೆ ಹಿತಕಾರಿ, ಮುನಿದರೆ ।
ನಾರಿಯೇ ಮಾರಿ! ಸರ್ವಜ್ಞ ॥ ೧೬೧೮ ॥

---

## ೨೭. ಜಾರರ ಪದ್ಧತಿ.

---

### ಜಾರತ್ವದ ಲಕ್ಷಣ.

* ಅಳಿಯಾಸೆ ಹೆಪ್ಪಿಂಗೆ ಮಳೆಯಾಸೆ ಸಕಲರಿಗೆ[1] ।
ಬಲಿಯಾಸೆ ಮೀನು ಹಿಡಿವಗೆ, ಹಾದರಕೆ ।
ಸುಳಿದಾಟದಾಸೆ; ಸರ್ವಜ್ಞ ॥ ೧೬೧೯ ॥

* ಪಡಿಯಾಸೆ ಹರದಂಗೆ ಮಡಿ[2]ಯಾಸೆ ವೇಶ್ಯೆಗೇ ।
ಜಡೆಯಾಸೆ ಬೂದಿಗೊರವಗೆ, ಹಾದರಕೆ ।
ಎಡೆಯಾಟದಾಸೆ; ಸರ್ವಜ್ಞ ॥ ೧೬೨೦ ॥

---

1 A. ಕಳ್ಳಂಗೆ. C. ಜಿಳಬಿಂಗೆ. 2 A. ನುಡಿ.

* ಕಟ್ಟಾಸೆಯರಮನೆಗೆ ಮೆಟ್ಟಾಸೆ ಕಾಲಿಂಗೆ।
ಪಟ್ಟಣದಾಸೆ ಹರದಂಗೆ, ಹಾದರಕೆ।
ಮುಟ್ಟಾಟದಾಸೆ; ಸರ್ವಜ್ಞ ॥ ೧೬೨೧ ॥

* ಕರೆವಾಸೆ[1] ಗೊಲ್ಲಂಗೆ ನಿರಿ[2]ಯಾಸೆ ಸೂಳೆಗೆ।
ಒರೆಯಾಸೆ ಕತ್ತಿಯುಲಗಿಗೆ ಹಾದರಕೆ।
ಮರೆಯಾಟದಾಸೆ ಸರ್ವಜ್ಞ ॥ ೧೬೨೨ ॥

* ಮಂಜುಮಳೆ ಬರಲೇಸು ಪಂಜು ಇರುಳಲಿ ಲೇಸು।
ನಂಜುತಲುಣುವಾ ಹಾದರಗಳ್ಳಗೆ।
ಬಂಜೆ ಲೇಸೆಂದ ಸರ್ವಜ್ಞ ॥ ೧೬೨೩ ॥

* ಉಂಡು ಓಡಲು ಹೊಲ್ಲ ಕೊಂಡೆಯನ ಕೆಳೆ ಹೊಲ್ಲ।
ಮಂಡೆಯಲಿ ಹೊರೆಯ ತರಹೊಲ್ಲ ಹಾದರಕೆ।
ಮುಂಡಾಟ ಹೊಲ್ಲ ಸರ್ವಜ್ಞ ॥ ೧೬೨೪ ॥

ವಶೀಕರಣ.

* ಲೋಕವಶ್ಯಕೆ ಮದ್ದು ಏಕ ಮೂಲಿಕೆ ಹೇನು।
ಆಕೆಯನೊಲಿಸಲದುಮದ್ದು, ಮಿಕ್ಕವು।
ಕಾಕು ಮದ್ದೆಂದ ಸರ್ವಜ್ಞ ॥ ೧೬೨೫ ॥

* ಕಾಮುನಾ ಬಾಧೆಗೇ ಹೇನುವೇ ಔಷಧವು।
ಭೂಮಿಯಾ ಬೇರನಗಿವರ ತಲೆಯಲ್ಲಿ।
ತಾಮಃಸವಿಹುದು ಸರ್ವಜ್ಞ ॥ ೧೬೨೬ ॥

1 B. ಕರವ.ಸೆ. 2 A. ಸಿರಿ.

† ಅಡವಿಯಾ ಗಿಡಗಳನು ಕೆಡಿಸಿ ಅಗಿಯಲು ಬೇಡ।
ಕೊಡಲೊಲ್ಲದವನ ಅವಳೊಲ್ಲಳೇನಕಟ।
ಗಿಡವು ಮಾಡಿದವು? ಸರ್ವಜ್ಞ ॥ ೧೬೨೭ ॥

* ನಾರು ಬೇರಿಕ್ಕಿದರೆ ನಾರಿಯರು ಒಲಿಯುವರೆ?।
ನಾರಿಯರು, ಜಗವು, ಒಲಿವರೆ ಹೊನ್ನಿನ।
ಬೇರನಿಕ್ಕಿಂದ! ಸರ್ವಜ್ಞ ॥ ೧೬೨೮ ॥

* ಬೆಚ್ಚನಾ ಮನೆಗೆ ಮನ-ಮೆಚ್ಚಿದಾ ಹೆಣ್ಣಾಗಿ।
ವೆಚ್ಚಕ್ಕೆ ನೂರು ಹಣವಾದರಾಕೂಟ।
ನಿಚ್ಚಲೂ ಬೇಕು ಸರ್ವಜ್ಞ ॥ ೧೬೨೯ ॥

* ಆಕೆಯನು ಕಂಡು ಮನೆ। ಯಾಕೆಯನು ಮರೆದಿಹರೆ।
ಹಾಕಿದಾ ಉಂಕೆ ಹರಿದಂತೆ ಮನೆಯೊಳ-।
ದ್ದಾಕೆ ತಾ ಕೆಡುಗು ಸರ್ವಜ್ಞ ॥ ೧೬೩೦ ॥

† ಇಪ್ಪವಳ ಬಿಟ್ಟು ತನ। ಗೊಪ್ಪವಳ ನೆರೆದಿಹರೆ।
ಇಪ್ಪುರಿ ನುಲಿಯು ಹರಿದಂತೆ, ತನ್ನನು।
ಅಪ್ಪವಳು ಕೆಡುಗು ಸರ್ವಜ್ಞ ॥ ೧೬೩೧ ॥

ಜಾರರ ಭಂಗ.

* ವ್ಯಸನದ ದೆಸೆಯಿಂದ ಮಸಿಹೆಣ್ಣಿಸೊಶವಾದೆ।
ಹುಸಿದು ಹೋಗುವಳ ಒಡನಾಡಿ ನಾನುಗ್ಗು।
ನುಸಿಯಾದೆ ಕಾಣೊ ಸರ್ವಜ್ಞ ॥ ೧೬೩೨ ॥

• ತ್ರುಯ್ಯಲಿಲ್ಲದ ತೋಟ ತುಯ್ಯಲಿಲ್ಲದ ಊಟ ।
ಕೈಯ್ಯಲಿಲ್ಲದ ಬರಿನೋಟ ಕೋಲಿಲ್ಲ- ।
ದ್ಹುಯ್ಯಲ್ಹೋದಂತೆ ಸರ್ವಜ್ಞ ॥ ೧೬೩೩ ॥

† ಚಾಟು ಇಲ್ಲದ ಮನುಜ, ಕೋಟೆಯಿಲ್ಲದ ನಗರ, ।
ಕೂಟಕಿಲ್ಲದ ಜಾರನು, ಬಿಲ್ಪಡಿದು ।
ಮೋಟನೆಚ್ಚಂತೆ; ಸರ್ವಜ್ಞ ॥ ೧೬೩೪ ॥

* ನೋಟ ಬೇಟವು ತನಗೆ ನಾಟಿಸಿದ ಬಳಿಕಲ್ಲಿ ।
ಸಾಟಿಯೇ ಕಾಮನೆಸಿಗೆಗೆ? ಒಲುಮೆಗೆ ।
ನೋಟವೇ ಮುಖ್ಯ! ಸರ್ವಜ್ಞ ॥ ೧೬೩೫ ॥

† ತಾಂವನು ಕೊಡುವದು, ಊರರಿಯದ್ಹೋಗುವದು ! ।
ಪರಿಚಿತಳೆಂದು ಪರಸತಿಯ ಹೋದರೆ ।
ಮಾರಿ ಬಂದಿಹುದು; ಸರ್ವಜ್ಞ ॥ ೧೬೩೬ ॥

* ಆರಿಗಾದರು ಸತಿಯು ಮೀರಿ ಚಲುವಾಗಿರಲು ।
ಆರರಿಯುರೆಂದು ಸಾರಿದರೆ ಕಣ್ಣೊಳು ।
ಕಾರವಿಟ್ಟಂತೆ ಸರ್ವಜ್ಞ ॥ ೧೬೩೭ ॥

ನಿಷಿದ್ಧಗಮನ.

* ಕೆಕ್ಕೆಯುದು ಕಹಿಗಾಯಿ ಬಿಕ್ಕೆಯುದು ಹುಳಿಗಾಯಿ ।
ಸೊಕ್ಕಿ ಸುಗುಡಿಗೆ ಹಾರಿಹೋಹದರಿಂದ ।
ಸಕ್ಕರೆಯನುಣ್ಣೊ ಸರ್ವಜ್ಞ ॥ ೧೬೩೮ ॥

* ಕಾರೆಯದು ಕಸುಗಾಯಿ ಈರೆಯದು ಹುಳಿಗಾಯಿ ।
ಡೋರುವೈಯಾದ ಮುದುಕಿ ಹೋಹದರಿಂದ ।
ಕಾರಿಕೊಂಡುಣ್ಣೊ! ಸರ್ವಜ್ಞ ॥ ೧೬೩೯ ॥

* ಒಂದು ಹೆತ್ತಾತಕೆಯನು ಹೊಂದಲೊಂದರೆ ಲೇಸು ।
ಸಂದಿಸಿ ಹತ್ತು ಹಡೆದವಳ ಕೂಟದಿಂ ।
ಬಂಧನವೆ ಲೇಸು ಸರ್ವಜ್ಞ ॥ ೧೬೪೦ ॥

* ರಸವರಿತ ದಂಟುಗಳ ಹಸು ಮೇಯಲೊಲ್ಲದು ।
ರಸಗೆಟ್ಟುಹೋದ ವನಿತೆಯ ಹೋಹನು ।
ಪಶುವಿನಿಂದತ್ತ ಸರ್ವಜ್ಞ ॥ ೧೬೪೧ ॥

* ಸ್ವಚ್ಛವಿರುವಳ ಕಂಚು ಇಚ್ಛೆಯಲಿ ನೋಡುವರು ।
ಕಚ್ಚೆಯಲುಚ್ಚಿ ಬರುತಿಪ್ಪ ಠಾವಿಗೆ ।
ನೆಚ್ಚಿಕೆಟ್ಟಹರೊ! ಸರ್ವಜ್ಞ ॥ ೧೬೪೨ ॥

* ಚೊಕ್ಕದಳ ಅರೆನೋಟ ಸಕ್ಕರೆಯ ಸವಿದಂತೆ ।
ಚೊಕ್ಕವಿಲ್ಲದಳ ಬಿರಿನೋಟ ಹುಡಿಮಣ್ಣ ।
ಮುಕ್ಕಿದಂತಿಹುದು ಸರ್ವಜ್ಞ ॥ ೧೬೪೩ ॥

* ಮೇಳವಿಲ್ಲದ ಊಟ ಬಾಲೆಯರ ರತಿಕೂಟ ।
ಕಾಳೆಮ್ಮೆ ಹಸಿದು ಹಸುರಿಗೆ ಕೀಳಿನ ।
ಕೂಳನುಂಡಂತೆ ಸರ್ವಜ್ಞ ॥ ೧೬೪೪ ॥

* ಮುದಿನಾಯಿ ಮೊಲವ ಕಂ। ಡದು ಬೆನ್ನಹತ್ತಿದೋಲ್ ।
ಮುದುಕ ಜವ್ವನೆಯನೊಡಗೂಡೆ ಮುದಿಗೂಗೆ- ।
ಯೊದರಿಕೊಂಡಂತೆ ಸರ್ವಜ ॥ ೧೬೪೫ ॥

* ಗುದ್ದುಗಣ್ಣಾದವಗೆ ಮುದ್ದು ಹೆಂಗಸು ಯೇಕೆ ॥
ಗದ್ದೆಯಾ ಹಸುರ ಮೆಲಹೋಗಿ ಕೋಣನು ।
ಬಿದ್ದು ಸತ್ತಂತೆ ಸರ್ವಜ್ಞ ॥ ೧೬೪೬ ॥

* ನೆರೆಬಂದ ಮುದುಕಂಗೆ ಭರದ ಜವ್ವನೆಯೇಕೆ ॥
ಕರಗಿದ ತುಪ್ಪ ಹೆರೆವಂತೆ ಜವ್ವನವು ।
ತಿರುಗಿ ಬಂದಿಹುದೆ? ಸರ್ವಜ್ಞ ॥ ೧೬೪೭ ॥

† ಉರಿದ ಕಟ್ಟಿಗೆ ಬೂದಿ ನೆರೆದು ಮರವಪ್ಪುದೆ।
ಹರೆಯು ಹೋದವಳ ರತಿಕೂಟ ಜೀವನು ।
ಅರೆದುಕುಡಿದಂತೆ ಸರ್ವಜ್ಞ ॥ ೧೬೪೮ ॥

† ಹಳೆ ಸ್ನೇಹವಿಹುದೆಂದು ಎಳಸಿಹೋಗುವ ನೆಗ್ಗ।
ಕಳಕಳವಕ್ಕು ಹಳಿಯುಕ್ಕು ಹೆಣ್ಣಿನಾ।
ಕುಳಿಯಲೆಂತೆಂದ ಸರ್ವಜ್ಞ ॥ ೧೬೪೯ ॥

* ಬೇರೂರ ಸ್ನೇಹಕ್ಕೆ ಹಾರಿಹೋಗುವ ಹೆಡ್ಡ।
ಮೀರಿದ ಶೂಲದ್ದೆಣಕೊಲಿದು ನರಿಯು ಬಾ-।
ಯಾರಿ ಸತ್ತಂತೆ ಸರ್ವಜ್ಞ ॥ ೧೬೫೦ ॥

* ನೋಟ ಬೇಟಗಳಿಂದ ಹೋಟೆ ಸಂಗವು ಲೇಸು ।
ತೀಟೆಯು ತೀರುವದರಿಂದ ನರಕದ[1] ।
ಊಟವೇ ಲೇಸು[2] ಸರ್ವಜ್ಞ ॥ ೧೬೫೧ ॥

* ನೋಟದಾ ಸವಿಸುಖಕೆ ಕೋಟೆ ಹೊಂಬೆಳೆಯಲ್ಲ ।
ಕೂಟಕ್ಕೆ ನೋಟವನು ಸಾರಿ ವ್ಯಸನಕ್ಕೆ ।
ಬೇಟವೇ ಮೊದಲು ಸರ್ವಜ್ಞ ॥ ೧೬೫೨ ॥

* ಗೋಟು ಕೋಹುದಕಿಂತ ಹೋಟೆ ಹೋಹುದು ಲೇಸು ।
ತಾಟಿಸಿ ತರಡು ಬಡಿವಾಗ ಮುದಿಯನ ।
ಕೋಟಲೆಯ ನೋಡ ಸರ್ವಜ್ಞ ॥ ೧೬೫೩ ॥

† ಹಾರುವನ, ನೆಗಳಿನಾ ಗೇರುಬೀಜದ ಸೊನೆಯ ।
ಜಾರವನಿತೆಗಳ ಗುಣವನು ಅರಿಯದೆ ।
ಸಾರಿದವ ಕೆಡಗು ಸರ್ವಜ್ಞ ॥ ೧೬೫೪ ॥

* ಕೆಗ್ಗ ಕಾಣಲು ಹೊಲ್ಲ ಮೊಗ್ಗೆ ಮುಡಿಯಲು ಹೊಲ್ಲ ।
ಬೊಗ್ಗಿದ ಸ್ತ್ರೀಯು ಹೋಹೊಲ್ಲ ಹುಡುಗಿಯು ।
ಕಿಗ್ಗಳವೆ ಹೊಲ್ಲ ಸರ್ವಜ್ಞ ॥ ೧೬೫೫ ॥

* ಕಿರಿಗೂಸ ಹೋಗುವದು ಕಿರಿಮಾತನಾಡುವದು ।
ಕರುಸತ್ತ ಆವ ಕರೆವುದು ತನ್ನ ತಾ- ।
ನಿರಿದುಕೊಂಡಂತೆ ಸರ್ವಜ್ಞ ॥ ೧೬೫೬ ॥

---

1 & 2 F. ಬೀಟೆಯು ಮರದ ನೆರಳಿಂದ ಕೀಟೆಯು ಕಾಟವೇ ಕಷ್ಟ.

* ಕೂಸುಳ್ಳ ಸೂಳೆಗೇ ಹೇಸದೊತ್ತೆಯ ಕೊಟ್ಟು ।
ಕೂಸತ್ತು, ನಲ್ಲ ಬೇಸತ್ತು, ಬಾಣತಿಯು ।
ಏಸಕ್ಕು ಬೇಡ ಸರ್ವಜ್ಞ || ೧೬೫೭ ||

* ದಾಸಿಯನು ಹೋಗುವಗೆ ಏಸ ಹತ್ತದು ಕೈಗೆ;[1] ।
ಹೇಸಿ, ತೊಲಗುವಳು ಜಯಲಕ್ಷ್ಮಿ! ಆಯುಷ್ಯ ।
ನಾಶವಾಗುವದು! ಸರ್ವಜ್ಞ || ೧೬೫೮ ||

* ತೊತ್ತು ಹೋಹುದಕಿಂತ ಕತ್ತೆ ಹೋಹುದು ಲೇಸು ।
ಕತ್ತೆ ಹತ್ತೆಂಟು ಹೋದರೆ ಉಸುರದೆ ।
ಸತ್ತಿಹುದೆ ಲೇಸು ಸರ್ವಜ್ಞ || ೧೬೫೯ ||

* ಕತ್ತೆಯಾ ಕಿವಿಯೆಂದು ಒತ್ತೊತ್ತಿ ಬರುತಿಹರು[2] ।
ಹೊತ್ತೊತ್ತಿಗ್ಹೋಗಿ ಕೂಡುವರು[3] ಕರಿತಲೆಯ ।
ಕತ್ತೆಮಾನವರು ಸರ್ವಜ್ಞ || ೧೬೬೦ ||

* ಕೆಂಕಿ ಹೋಹುದರಿಂದ ಮಂಕಿ ಹೋಹುದು ಲೇಸು ।
ಬಿಂಕ ಬೈತಲೆಯ ಬೆಳೆವೆಣ್ಣ ಹೋದರೆ ।
ಬೆಂಕಿ ಹಿಡಿದಂತೆ ಸರ್ವಜ್ಞ || ೧೬೬೧ ||

* ಮಾಗಿಗೆ ಮೈಕೇಡು ಯೋಗಿಗೆ ಸ್ತ್ರೀಕೇಡು ।
ತ್ಯಾಗವಿಲ್ಲದಗೆ ಧನಕೇಡು, ಸ್ತ್ರೀಯರತಿ ।
ಭೋಗವೇ ಕೇಡು ಸರ್ವಜ್ಞ || ೧೬೬೨ ||

---

1 Bangalore Reader III ಲೇಸಾಗದದು ಮುಂದೆ. 2 ಕತ್ತೆಯಾ ಕಿವಿಯಂತೆ ಚಿತ್ರರವ ಬರೆದಿಹರು. 3 Gs. ಒತ್ತೊತ್ತಿ ಹೊಗೆಯ ಕುಡಿದಾರು.

* ವ್ಯಸನಕ್ಕೆ ಹೋಗಿಹರೆ ಅಸಿಯಳನು ಹೋಗುವದು ।
ಬಸುರೆ ಕಣುಗಂಡು ಹೋದರೆ ಕಿಲುಬಿನ[1] ।
ಮೊಸರು ಕುಡಿದಂತೆ ಸರ್ವಜ್ಞ ॥ ೧೬೬೩ ॥

## ೨೮. ಜಾರೆಯರ ಪದ್ಧತಿ.

### ಜಾರಸ್ತ್ರೀಯರ ಲಕ್ಷಣ.

* ಅಚ್ಚ ಮುತ್ತನು ಕಟ್ಟಿ ಬಿಚ್ಚೋಲೆಯನು ಇಟ್ಟು ।
ಹೆಚ್ಚಾಗಿ ಸೆರಗ ಬಿಡುವಳು ಕಾಮನ ।
ಮೆಚ್ಚಿನಲ್ಲಿಹಳು ಸರ್ವಜ್ಞ ॥ ೧೬೬೪ ॥

* ಅಚ್ಚ ಬಣ್ಣವನುಟ್ಟು ಉಚ್ಚ ಜೈತಲೆ ಬಿಟ್ಟು ।
ನಿಚ್ಚಲೂ ಸೆರಗ ಹೊರುವಳು ಹಾದರದ- ।
ಕಿಚ್ಚು ಕಾಣಯ್ಯ ಸರ್ವಜ ॥ ೧೬೬೫ ॥

† ಅಚ್ಚು ಹಾಕಿದ ಸೀರೆ ಪಚ್ಚಗುಪ್ಪಸ ತೊಟ್ಟು ।
ಹೆಚ್ಚಾಗಿ ಮುರಕ ಮಾಡುವಳು ಕಾಮನು ।
ನೆಚ್ಚಿದಾ ಬಾಣ ಸರ್ವಜ್ಞ ॥ ೧೬೬೬ ॥

* ಹತ್ತ ಕಟ್ಟಿದ ಮುತ್ತು ಒತ್ತಡಿಕೆ ಬಿಳೆ ಎಲೆಯು ।
ಹೊತ್ತೇರಿ ಹಲ್ಲ ಸುಲಿವಳು ಕಾಮನೊಲಿ- ।
ದೆತ್ತಿದಾ ಬಾಣ ಸರ್ವಜ್ಞ ॥ ೧೬೬೭ ॥

1 F. ಕಿಲುಬನ್ನ ಮೊಸರು ಉಂಡಂತೆ.

† ಒತ್ತಿ ಕಟ್ಟಿದ ಟೀಕೆ ಕೆತ್ತಿಸಿದ ಹರಳೋಲೆ।
ನಿತ್ಯವು ಒನಪ ಮಾಡುವಳು ಕಾಮನೋ-।
ಡೆತ್ತಿದಾ ಬಾಣ ಸರ್ವಜ್ಞ ॥ ೧೬೬೮ ॥

* ಉಟ್ಟುಟ್ಟು ಕಳೆಯುವಳ ಬಿಟ್ಟಿಟ್ಟು ಉಡುತಿಹಳ।
ಬೊಟ್ಟಿಟ್ಟು ಹಲ್ಲ ಸುಲಿವಳ ಕಂಡರೆ।
ಕೆಟ್ಟಿಳೆಂದರಿಗು ಸರ್ವಜ್ಞ ॥ ೧೬೬೯ ॥

* ಬೀಡುಗಾಲವಳಾಗಿ ಕೋಡಗನ ಮುಸುಡಾಗಿ।
ನೋಡುವರಿಗೆಲ್ಲ ಮರುಳಾಗಿ ತವಕದಲಿ।
ಕೂಡುವಳು ಜಾರೆ ಸರ್ವಜ್ಞ ॥ ೧೬೭೦ ॥

* ಉಟ್ಟೊಮ್ಮೆ ಕಳೆಯುವಳು ಬಿಟ್ಟೊಮ್ಮೆ ಉಡುತಿಹಳು।
ಕೊಟ್ಟಮನೆ ಬಿಟ್ಟು ಬರುತಿಹಳು ಹಾದರದ।
ಮೊಟ್ಟೆ ಕಾಣಯ್ಯ ಸರ್ವಜ್ಞ ॥ ೧೬೭೧ ॥

† ಉಟ್ಟಳಿದು ಉಡುತಿಹಳು ಕಟ್ಟಳಿದು ಮುಡಿಯುವಳು।
ಕಟ್ಟೆಯಲಿ ಕೂತು ಕೆಲೆವಳು ಹಾದರದ।
ಕಟ್ಟಾಣಿಯೆಂದ ಸರ್ವಜ್ಞ ॥ ೧೬೭೨ ॥

* ಉಳಿಗನಾ ಮರಿಯಂತೆ[1] ಉಲಿವಾಕೆ ಸಜ್ಜನಿಯೆ ?।
ತಲೆಗುತ್ತಿ ನೆಲನ ಬರೆವಳು ಹಾದರಕೆ।
ನೆಲವನೆಯೆಂದ ಸರ್ವಜ್ಞ ॥ ೧೬೭೩ ॥

---

1 C. ವುಲುಗನಾ ಮೆಳೆಯಂತೆ.

† ಅರಳಿಯಾ ಮರದಂತೆ ಮೊರೆವಾಕೆ ಸುಗುಣಿಯೇ? ।
ಬೆರಳಿಂದ ನೆಲವನಗಿವಳು ಹಾದರಕೆ ।
ನೆರಳು ಕಾಣಯ್ಯ ಸರ್ವಜ್ಞ ॥ ೧೬೭೪ ॥

* ನೀರ ನೆರಳನು ನೋಡಿ ಗೀರು ಗಂಧವನಿಟ್ಟು ।
ಹಿರೆದುರುಬಿಕ್ಕಿ ನಡೆವವಳು ಗಂಡನ ।
ಏಮಾರಿದವಳೆಂದ ಸರ್ವಜ್ಞ ॥ ೧೬೭೫ ॥

* ಕೆಂಬಾಯಿ ತೆರೆಯುತ್ತ ಕೆಂಬಲ್ಲ ತೋರುತ್ತ ।
ಕಂಭವನೊರಗಿ ಮುರುಕಿಪಳು ಹಾದರದ ।
ಬೊಂಬೆ ಕಾಣಯ್ಯ ಸರ್ವಜ್ಞ ॥ ೧೬೭೬ ॥

* ಕುರುಳ ನೇವರಿಸುತ್ತ ನಿರಿಗೆಗಳ ಪಸರಿಸುತ ।
ಉರದೋರೆಸೆರಗ ಹಾರುವಳು ಹಾದರದ ।
ತಿರುಳು ಕಾಣಯ್ಯ ಸರ್ವಜ್ಞ ॥ ೧೬೭೭ ॥

* ಬೀಸುವಾ ನೆವದಿಂದ ವೇಶವನು ತಾಳುವಳು ।
ಮಾಸಿಹೆನೆಂದು ಉಡುವಳು ಹಾದರದ ।
ವೇಶಿ ಕಾಣಯ್ಯ ಸರ್ವಜ್ಞ ॥ ೧೬೭೮ ॥

† ಬೀಸಿ ಕುಟ್ಟಿ ತನಗಾ । ಯಾಸವು ಇಹುದೆಂದು ।
ಹಾಸಿಗೆ ಹಾಸಿ ಮಲಗುವಳು, ಹಾದರಕೆ ।
ದಾಸಿ ಕಾಣಯ್ಯ ಸರ್ವಜ್ಞ ॥ ೧೬೭೯ ॥

* ಕುಟ್ಟುವಾ ನೆವದಿಂದ ರಟ್ಟೆಯನು ತಿರುಹುವಳು ।
ಗಟ್ಟ್ಯಾಗಿ ಪದನ ಹಾಡುವಳು[1] ಹಾದರದ ।
ಮೊಟ್ಟೆ ಕಾಣಯ್ಯ ಸರ್ವಜ್ಞ ॥ ೧೬೮೦ ॥

* ನಡೆಯುತ್ತ ನಾಚುತ್ತ ಸುಡಿಯುತ್ತ ಕೊಂಕುತ್ತ ।
ಮಡಿಯುಟ್ಟು ಹಲ್ಲ ಸುಲಿವಾಕೆ ಅಗ್ಗದ ।
ತುಡುಗುಣಿಯು ಎಂದ ಸರ್ವಜ್ಞ ॥ ೧೬೮೧ ॥

* ನಡೆಯುತ್ತ ಸೀರೆಯನು ಕೊಡಹುತ್ತ ಕೆಮ್ಮುವಳು ।
ಎಡಗಣ್ಣಿನಿಂದ ಮೀಟುವಳು ಹಾದರದ ।
ಮಡುವು ಕಾಣಯ್ಯ ಸರ್ವಜ್ಞ ॥ ೧೬೮೨ ॥

† ಕೂಸಿನಾ ನೆವದಿಂದ ದೋಸೆಯನು ಮಾಡುವಳು ।
ಹೇಸಿಯೆನಗಂಡನೆಂಬುವಳು ಹಾದರದ ।
ರಾಶಿ ಕಾಣಯ್ಯ ಸರ್ವಜ್ಞ ॥ ೧೬೮೩ ॥

* ಕೆಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು ।
ಎಣಿಕೆಯಲಿ ಹಲ್ಲ ತೋರುವಳು ಹಾದರದ ।
ಕುಣಿಕೆ ಕಾಣಯ್ಯ ಸರ್ವಜ್ಞ ॥ ೧೬೮೪ ॥

† ಕೆಣಕಾಲು ಕಿರಿದಾಗಿ ಕುಣಿಕುಣಿದು ನಡೆಯುವಳು ।
ಅಣಕದಲಿ ಉರವ ತೋರುವಳು ಗಂಡನ ।
ಟೊಣೆದಳೆಂದರಿಗು ಸರ್ವಜ್ಞ ॥ ೧೬೮೫ ॥

---

1 ಗಟ್ಟ್ಯಾಗಿ ಪದವನಾಡುವಳು = ಸದ್ದಾಗದಂತೆ ನಡೆಯುವಳು.

† ಕಚ್ಚುವಾ ಕೆಲೆಯುವಾ ಮುಚ್ಚುಳದಲುಂಬುವಾ।
ಮೆಚ್ಚಿನ ಮಾತನಾಡುವ ಹೆಣ್ಣನ್ನು।
ನೆಚ್ಚಬೇಡೆಂದ ಸರ್ವಜ್ಞ ॥ ೧೬೮೬ ॥

† ಸಂದ ಲೋಭಿಯು ಧನವ ಬಂದು ಮುದ್ದುವ ತೆರದಿ।
ಕಂದನ ತಂದೆಯೆತ್ತಿ ಮುದ್ದಲು ಜಾರೆ।
ಹಿಂದೆ ನಗುತಿಹಳು ಸರ್ವಜ್ಞ ॥ ೧೬೮೭ ॥

• ಚೊಕ್ಕವಿರುವಳ ಕೂಟ ಅಕ್ಕರದ ಮನೆಯಂತೆ।
ಚೊಕ್ಕವಿಲ್ಲದಳ ನೆರೆಕೂಟ ಗಾಣದಿ।
ಸಿಕ್ಕು ಸತ್ತಂತೆ ಸರ್ವಜ್ಞ ॥ ೧೬೮೮ ॥

* ಮುಂಡೆ ಬಾಯಿಯು ಹೇತ— ಕುಂಡೆಯಂತಿರಬೇಕು।
ಮುಂಡೆ ಮುಂಬಲ್ಲ ಸುಲಿದರೆ ಒಬ್ಬನ।
ಕೊಂಡಳೆಂದರಿಗು ಸರ್ವಜ್ಞ ॥ ೧೬೮೯ ॥

* ಮುಂಡೆಯಾ ಮಂಡೆ ನೂ। ಲುಂಡೆಯಂತಿರಬೇಕು।
ಮುಂಡೆ ಬೈತಲೆಯ ತೆಗೆದರೆ ಮಿಂಡನ।
ಕಂಡಿಹಳು ನೋಡ! ಸರ್ವಜ್ಞ ॥ ೧೬೯೦ ॥

† ಮುಂಡೆ ಮುಖ ಮುದಿನಾಯ— ಕುಂಡೆಯಂತಿರಬೇಕು।
ಮುಂಡೆ ಅಡಿಕೆಲೆಯನಗಿದರೆ ಕಂಡವರ[1]।
ಹೆಂಡತಿಯು ಎಂದ[2] ಸರ್ವಜ್ಞ ॥ ೧೬೯೧ ॥

1 & 2 C. ಮುಂಡೆ ಎಡೆತಲೆಯು ನಡುಸಾಲು ಕಂಡರೆ ಕೊಂಡಳೆಂದರಿಗು.

† ನುಡಿಯಿಲ್ಲದಾ ಮಂತ್ರ ಗಿಡವಿಲ್ಲದಾ ಮದ್ದು ।
ಗಿಡನಿದ್ದ ವೈದ್ಯ[1] ನೋಡಿದರೆ ಆ ಬೇನೆ ।
ತಡೆಯದೇ ಪೋಕು ಸರ್ವಜ್ಞ ॥ ೧೬೯೨ ॥

* ಬಿಲ್ಲು ಕೈಯನೆ ಗೆಯ್ದು ನಲ್ಲಳಿಂ ಮಿಗಿಲಾಗಿ ।
ಚಲ್ವಿನ ಹಾಸು[2] ತಲೆದಿಂಬು ಜಾರೆಯೊಲಿ- ।
ದಲ್ಲಿಯೇ ನೋಡು ಸರ್ವಜ್ಞ ॥ ೧೬೯೩ ॥

* ಚಿಕ್ಕಾಡಿ ತಗಣಿಯೂ ರಕ್ಕಸರು ಜಾರೆಯರು ।
ಒಕ್ಕಲಿಕ್ಕುವರು ಇರುಳೆಲ್ಲ, ಬೆಳಗಾಗಿ ।
ಸುಕ್ಕಿದಂತಿಹರು ಸರ್ವಜ್ಞ ॥ ೧೬೯೪ ॥

* ತುಡುಗುಣಿಯು ಗಂಡನಾ ಬಡತನವ ಬಲ್ಲಳೇ ।
ಕಡನ[3] ತಂದಿಕ್ಕಿ ಕುದಿಸಿ ತುಪ್ಪವ ಬೆರಸಿ ।
ಹೊಡೆದು ಕುಳ್ಳಿಹಳು ಸರ್ವಜ್ಞ ॥ ೧೬೯೫ ॥

* ತಿನಸುಗೂಳಿಯ ಬಾಳು ಕನಸಿನಲಿ ಉಂಡಂತೆ ।
ತೊನಸಿ ಮುದಿಎತ್ತ ಹರಿತಿಂದು ಹುಳಗಳ- ।
ನಿರಿಸಿ ಹೋದಂತೆ ಸರ್ವಜ್ಞ ॥ ೧೬೯೬ ॥

* ಗಂಡಗಂಬಲಿಯಿಕ್ಕಿ ಗಂಡುಗರಣಿಯನುಂಗಿ[4] ।
ಗಂಡಬಂದಾಗ ನರಳುವಾ ಹೆಣ್ಣನು ।
ಗುಂಡಿಗಿಕ್ಕೆಂದ ಸರ್ವಜ್ಞ ॥ ೧೬೯೭ ॥

---

1 C. ಒಡಲಿಲ್ಲದೊಡೆಯ. 2 A. ಕೂವು. 3 C. ಗುಡನ. 4 F. ವೆಂಡಾಗಿ ತಾನುಂಡು.

† ನೆಲ್ಲನೊಲ್ಲೆಂಬುವಳು ಬೆಲ್ಲ ಬೇಕೆಂಬುವಳು[1] ।
ನೆಲ್ಲ ಹುಲ್ಲಂತೆ ಬಳಕುವಾ ತುಡುಗುಣಿ- ।
ಗೆಲ್ಲಿಯದು ರೋಗ ಸರ್ವಜ್ಞ ॥ ೧೧೯೮ ॥

† ಒಬ್ಬಳಿಗಿಬ್ಬರು ಮದ್ದು ಉಬ್ಬೆಗೇ ಹಿಮ ಮದ್ದು ।
ಕೊಬ್ಬಿದ ಕರಿಗೆ ಹರಿಮದ್ದು, ಜಾರೆಗೆ ।
ಗಬ್ಬವೇ ಮದ್ದು ಸರ್ವಜ್ಞ ॥ ೧೧೯೯ ॥

* ಬಿದ್ದ ಮೊಲೆಯುವಳು ತಾ । ನೆದ್ದೋಡಿ ಬರುವಾಗ ।
ಎದ್ದೆದ್ದು ಬದಿಯು ಬಡಿಯುತ್ತ ಹಾರುವ ।
ಹದ್ದಿನಂತಿಹಳು ಸರ್ವಜ್ಞ ॥ ೧೨೦೦ ॥

* ಉದ್ದಮೊಲೆ ಜಾರೆ ತಾ ಮುದ್ದುಮುದುಕನ ಕೂಡೆ ।
ಬಿದ್ದ ಮೈ ಎದ್ದು ಬಡಿವಾಗ ಹಾಳೂರ ।
ಹದ್ದಾಡಿದಂತೆ ಸರ್ವಜ್ಞ ॥ ೧೨೦೧ ॥

* ಮುದುಕಿ ಮಿಂಡನ ಮೆಚ್ಚಿ ಕುದಿಹಕ್ಕೆ ಒಳಗಾಗಿ ।
ಹದದ ತೆಂಗಾಯು ನರಿ ತಿಂದು ಓಗಡಿನ ।
ಬೆದರು ಪಿಡಿದಂತೆ ಸರ್ವಜ್ಞ ॥ ೧೨೦೨ ॥

† ಉಂಡುಂಡು ಮಲಗುವಾ ಭಂಡವನು ಬೊಗಳುವಾ ।
ಕಂಡವರ ಬಯಸಿ ಮಿಡುಕುವಾ ಹೆಂಡರು ।
ದಿಂಡೆಯರು ಕಾಣೊ! ಸರ್ವಜ್ಞ ॥ ೧೨೦೩ ॥

---

1 Gs. ಏಳು ಬಾ ಎಂಬುವಳು ಎಳ್ಳುರಿದು ತಿಂಬುವಳು.

* ದಿಂಡಿಯಾ ಗಂಡ ತಾ ದಂಡಿಗೇ ಹೋದರೇ ।
ಹಿಂಡಿಯ ಹೆಡಿಗೆಗೆ ಕೋಣನ ತಂದು ಕಣು— ।
ಗಂಡು ಹೊಡೆದಂತೆ ಸರ್ವಜ್ಞ ॥ ೧೭೦೪ ॥

* ಬಡವನಾ ಹೆಂಡತಿಯು ಕಡುಚಲುವೆಯಾಗಿಹರೆ ।
ನಡುಬೀದಿಯೊಳಗೆ ದವನವನು ಬಿತ್ತಲು ।
ಮುಡಿಯದವರಾರು? ಸರ್ವಜ್ಞ ॥ ೧೭೦೫ ॥

* ಬಡವನಾ ಸತಿಯು ತಾ ಕಡು ನೀರೆಯಾಗಿಹರೆ ।
ಹೆಡಿಗೆ ಲಡ್ಡುಗೆಯ ಹೊರಗಿರಿಸಿ ಹಸುಳೆಗಳ[1] ।
ತಡೆಯ ಬಿಟ್ಟಂತೆ ಸರ್ವಜ್ಞ ॥ ೧೭೦೬ ॥

† ಜಾಣೆಯಾ ಪತಿಯು ಪರ—ರಾಜ್ಯಕ್ಕೆ ಹೋದರೇ ।
ಓಣಿಯ ಕುದುರೆ ಕರತಂದು ಕಡಲೆಗೆ ।
ನೇಣು ಸರಿದಂತೆ ಸರ್ವಜ್ಞ ॥ ೧೭೦೭ ॥

* ಜಾರೆಯ ಗಂಡತಾ ಬೇರೂರಿಗ್ಹೋದರೇ ।
ಆರಿದೋಗರಕೆ ಮೊಸರಿಕ್ಕಿ ಕಾಗೆಗ ।
ತೋರಿಕೊಟ್ಟಂತೆ ಸರ್ವಜ್ಞ ॥ ೧೭೦೮ ॥

† ಮಡದಿಯೂ ಪುರುಷನೂ ನಡೆದೊಡನೆ ಬರುವಾಗ ।
ಆಡಕೊತ್ತು ಮರೆದು ಬಂದೆಂದು ಪಾಪವ ।
ನಡಿಸಿದ್ದು ಕಂಡೆ ಸರ್ವಜ್ಞ ॥ ೧೭೦೯ ॥

1 A. ಖಸೇರ.

† ನಾರಿಯಾ ನಲ್ಲ ತಾ ಊರಿಂಗೆ ಹೋದಲ್ಲಿ।
ನಾರಿ ಸಂಬಳಿಗೆ ಮರೆದಲ್ಲಿ[1] ಕನ್ನದ।
ಸೂರೆ ಹೋಗಿತ್ತು ಸರ್ವಜ್ಞ ॥ ೧೭೧೦ ॥

* ಕರುಸತ್ತ ಎಮ್ಮೆ ತಾ ಕರುವಿಂಗೆ ಮೊರೆವಂತೆ।
ಕರುಬಿಡಲು ಕೋಣಗೆ ಮೊರೆವುದು, ಮೋಹದ।
ತೆರನೆಲ್ಲ ಒಂದೆ ಸರ್ವಜ್ಞ ॥ ೧೭೧೧

---

## ೨೯. ವೇಶ್ಯಾಸ್ತ್ರೀ ಪದ್ಧತಿ.

---

ಲಕ್ಷಣ ಭೇದ.

* ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ।
ಜಾಲಿಯು ಗಿಡದಿ ಗಂಧಿಲ್ಲ, ದೇವರು।
ಸೂಳೆಗಿಲ್ಲೆಂದ ಸರ್ವಜ್ಞ ॥ ೧೭೧೨ ॥

* ಅತ್ತಿಮರಕರಳಿಲ್ಲ ಕತ್ತೆಗೇ ಕೋಡಿಲ್ಲ।
ಹತ್ತಿಯ ಹೊಲಕೆ ಗಿಳಿಯಿಲ್ಲ, ಸೂಳೆಗೆ।
ಸತ್ಯವಿಲ್ಲೆಂದ ಸರ್ವಜ್ಞ ॥ ೧೭೧೩ ॥

† ಕತ್ತೆಯಲಿ ಗುಣವಿಲ್ಲ ಕತ್ತಿಗೇ ದಯವಿಲ್ಲ।
ಬತ್ತಿದ ಕೆರೆಗೆ ಜನವಿಲ್ಲ ಸೂಳೆಯರೊ-।
ಳುತ್ತಮರಿಲ್ಲ ಸರ್ವಜ್ಞ ॥ ೧೭೧೪ ॥

---

1 C. ಮರದಲ್ಲಿ.

† ಅರಳಿಯಲಿ ರಸವಿಲ್ಲ[1] ಕರುಳಿಗ್ಹೇಸಿಕೆಯಿಲ್ಲ ।
ದುರುಳರಿಗಾರು ಹಿತರಿಲ್ಲ, ಸೂಳೆಯಲಿ ।
ಸರಲವೇ ಇಲ್ಲ ಸರ್ವಜ್ಞ ॥ ೧೭೧೫ ॥

† ಕಾಲನಿಗೆ ದಿನವಿಲ್ಲ ಸಾಲಕ್ಕೆ ಕೊನೆಯಿಲ್ಲ ।
ಕಾಲಿಲ್ಲದವಗೆ ಬಲವಿಲ್ಲ, ಸೂಳೆಗೆ ।
ಶೀಲವಿಲ್ಲೆಂದ ಸರ್ವಜ್ಞ ॥ ೧೭೧೬ ॥

* ಹೊರಸಿಗೇ ತಲೆಯಿಲ್ಲ ಕೆರಸಿಗೇ ಕಾಲಿಲ್ಲ[2] ।
ಅರಸಿನ ಮಾತು ನಿಜವಿಲ್ಲ, ಸೂಳೆಗೆ ।
ಪುರುಷರೇ ಇಲ್ಲ ಸರ್ವಜ್ಞ ॥ ೧೭೧೭ ॥

* ಬಾಳೆಯಲಿ ಮುಳ್ಳಿಲ್ಲ ಕೋಳಿಯಲಿ ಮೊಲೆಯಿಲ್ಲ[3] ।
ಕಾಳರಕ್ಕಸಿಗೆ ಭಯವಿಲ್ಲ, ಸೂಳೆಗೆ ।
ಕೀಳುಮೇಲಿಲ್ಲ ಸರ್ವಜ್ಞ । ॥ ೧೭೧೮ ॥

* ಕೋತಿಗೇ ಮತಿಯಿಲ್ಲ ಮಾತಿಗೇ ಕೊನೆಯಿಲ್ಲ ।
ಸೋತು ಹೋದವಗೆ ಬಲವಿಲ್ಲ, ಸೂಳೆಗೆ ।
ನೀತಿಯೇ ಇಲ್ಲ ಸರ್ವಜ್ಞ ॥ ೧೭೧೯ ॥

* ಎಲೆಗೆ ಬೀಜಗಳಿಲ್ಲ ಮೊಲೆಗೆ ಎಲುವುಗಳಿಲ್ಲ ।
ಅಲಗಲಗು ಹಳಚಿ ಮುಸೆಯಲ್ಲ;[4] ಸೂಳೆಗೆ ।
ಕುಲಶೀಲವಿಲ್ಲ ಸರ್ವಜ್ಞ ॥ ೧೭೨೦ ॥

---

1 C. ರುಚಿಯಿಲ್ಲ. 2 Gs. ತಲೆಯಿಲ್ಲ, 3 F. ಬೋಳಿಯಲಿ ತುದಿಬಿಲ್ಲ.
4 A. ಅಳಿಯು ಹಾವಸೆಯು ಮುಸಿಯಲ್ಲ.

* ಆನಳಿಮರಕ್ಕೂವಿಲ್ಲ ಕುರುಳು ಕೋಡಗಕಿಲ್ಲ ।
ಮರಣಕಾಲಕ್ಕೆ ಮದ್ದಿಲ್ಲ, ಸೂಳೆಗೆ ।
ಕರುಣವೇ ಇಲ್ಲ ಸರ್ವಜ ॥ ೧೭೨೧ ॥

* ಮತಿಯಿಲ್ಲ ಮರುಳಂಗೆ ಗತಿಯಿಲ್ಲ ಬಡವಂಗೆ ।
ಸ್ತುತಿಯಿಲ್ಲ ಸತತ ದುಡಿವಂಗೆ, ಸೂಳೆಗೆ ।
ವ್ರತವೆಂಬುದಿಲ್ಲ ಸರ್ವಜ್ಞ ॥ ೧೭೨೨ ॥

† ಆಂಗೆ ಹಾಲಿಲ್ಲೆ? ಹಾವಿಂಗೆ ವಿಷವಿಲ್ಲೆ? ।
ಆವಾವ ಮರಕೆ ನೆರಳಿಲ್ಲೆ? ಸೂಳೆಗೊಲಿ- ।
ದೀವವರಿಲ್ಲೆ ? ಸರ್ವಜ್ಞ ॥ ೧೭೨೩ ॥

† ಆವಿಂಗೆ ಹಾಲುಂಟು! ಹಾವಿಂಗೆ ವಿಷವುಂಟು! ।
ಆವಾವ ಮರಕೆ ನೆರಳುಂಟು! ಸೂಳೆತನ- ।
ಗೀವವರಿಗುಂಟು! ಸರ್ವಜ್ಞ ॥ ೧೭೨೪ ॥

† ತುಂಬಿಯಾ ಸೊಪ್ಪಿಂಗೆ ಇಂಗೇಕೆ ಮೆಣಸೇಕೆ ।
ಶೃಂಗಾರವೇಕೆ ಬಡವಂಗೆ? ಸೂಳೆಗೆ ।
ನಂಬಿಗೆಯದೇಕೆ? ಸರ್ವಜ್ಞ ॥ ೧೭೨೫ ॥

ವಿವಿಧ ದೃಷ್ಟಾಂತಗಳು.

* ಹಕ್ಕಿಯಾ ಸೂಳೆಯಾ ಠಕ್ಕೆರಡು ಒಂದಯ್ಯ ।
ಹಕ್ಕಿ ಹಾಲ್ದೆನೆಯು ಹರಿತಿಂದು ಕಂಕಿಯು– ।
ನಿಕ್ಕಿ ಹೋದಂತೆ ಸರ್ವಜ್ಞ ॥ ೧೭೨೬ ॥

* ಕುದುರೆಯಾ ಸೂಳೆಯಾ ಚದುರೆರಡು ಒಂದಯ್ಯ ।
ಕುದುರೆ ಕಡಲೆಯ ಸಲೆತಿಂದು ಬಕ್ಕಣವ- ।
ನೊದರಿ ಬಿಟ್ಟಂತೆ ಸರ್ವಜ್ಞ ॥ ೧೭೨೭

† ಸೋನನಾ ಸೂಳೆಯಾ ಜೀನಸೆರಡೊಂದಯ್ಯ ।
ಕಾನನದೊಳಗೆ ಹೆಣಹರಿದು ಹಂದರವ ।
ತಾನು ಬಿಟ್ಟಂತೆ ಸರ್ವಜ್ಞ ॥ ೧೭೨೮

† ಕೀಡೆಯೂ ಸೂಳೆಯೂ ನೋಡಲೆರಡೊಂದಯ್ಯ ।
ಕೀಡೆ ಹಸುರೆಲೆಯ ಹರಿತಿಂದು ಕಂಬಿಯ- ।
ನೀಡಾಡಿದಂತೆ ಸರ್ವಜ್ಞ ॥ ೧೭೨೯

* ಹರಗೋಲು ಸೂಳೆಯಾ ತೆರನೆರಡು ಒಂದಯ್ಯ ।
ಹರಗೋಲನೇರಿದವನಿಳಿಯೆ ಬೇರೊಬ್ಬ ।
ಹರಿದೇರುವಂತೆ ಸರ್ವಜ್ಞ ॥ ೧೭೩೦

* ಬಳ್ಳಿಯೂ ಬೆಲೆವೆಣ್ಣು ಒಳ್ಳಿತೆಂದೆನಬೇಡ ।
ಬಳ್ಳಿಹೆಮ್ಮರನ ಬಿಗಿದಪ್ಪಿ ಬೇರೊಂದ- ।
ಕೆಳ್ಳಾಡಿದಂತೆ ಸರ್ವಜ್ಞ ॥ ೧೭೩೧

ಸೂಳೆಗೆ ಇವೆಲ್ಲ ಯೇಕೆ?

* ಹದ್ದು ಹಾವಿಗೆ ಯೇಕೆ? ಇದ್ದಲಿಗೆ ಮಡಿಯೇಕೆ? ।
ಗುದ್ದಲಿಗೆ ಹೊನ್ನ ಹಿಡಿಯೇಕೆ ಸೂಳೆಗೆ ।
ನಿದ್ದೆಗಣ್ಣೇಕೆ? ಸರ್ವಜ್ಞ ॥ ೧೭೩೨

* ಹಂದಿಗಂದಣವೇಕೆ ಅಂಧಕಗೆ ಬೆಳಗೇಕೆ ।
ಕುಂದು ಬಂದವಗೆ ಸೊಬಗೇಕೆ? ಸೂಳೆಗೆ ।
ಮಂದತನವೇಕೆ? ಸರ್ವಜ್ಞ ॥ ೧೭೩೩ ॥

† ನಲ್ಲಗಂಬಲಿಯೇಕೆ ಬಿಲ್ಲೇಕೆ ಶ್ರವಣಂಗೆ ।
ಚಲ್ಲಾಟವೇಕೆ ಮುದುಕಂಗೆ? ಸೂಳೆಗೆ ।
ಒಲ್ಲದವನೇಕೆ? ಸರ್ವಜ್ಞ ॥ ೧೭೩೪ ॥

† ಅಲ್ಲದಾ ಮಾತೇಕೆ ಸಲ್ಲದಾ ಸುತನೇಕೆ[1] ।
ಹುಲ್ಲಿಗೆ ಹುಲಿಯು ಕೆಳೆಯೇಕೆ ಸೂಳೆಗೆ ।
ಹಲ್ಲುದ್ದವೇಕೆ? ಸರ್ವಜ್ಞ ॥ ೧೭೩೫ ॥

* ಉಬ್ಬು ಬಡವಗೆ ಯೇಕೆ ಕಬ್ಬೇಕೆ ಬೋಡಂಗೆ ।
ನಿಬ್ಬಣವೇಕೆ ಕುರುಡಂಗೆ ಸೂಳೆಗೆ ।
ಹುಬ್ಬುಗಣ್ಣೇಕೆ ಸರ್ವಜ್ಞ ॥ ೧೭೩೬ ॥

ಸೂಳೆಗೆ ಇವು ಅಯೋಗ್ಯ

* ಮಳೆಗೆ ಹಂದರ ಹೊಲ್ಲ ಗಿಳಿಗೆ ಪಂಜರ ಹೊಲ್ಲ ।
ಸುಳಿಗಾಳಿ ಹೊಲ್ಲ ಸೊಡರಿಂಗೆ ಸೂಳೆಗೆ ।
ದಳಗಾಳು ಹೊಲ್ಲ ಸರ್ವಜ್ಞ ॥ ೧೭೩೭ ॥

† ಅರಿವೆಯನು ಉಡಹೊಲ್ಲ ಮುರುಬಾಳನಿರ ಹೊಲ್ಲ ।
ಮುರಿದಿರ್ದ ಹಲ್ಲ ನಗೆಹೊಲ್ಲ ಸೂಳೆಗೆ ।
ಹೆರಿಗೆಯೇ ಹೊಲ್ಲ ಸರ್ವಜ್ಞ ॥ ೧೭೩೮ ॥

---

1 C. ಹಣವೇಕೆ.

* ಒಂದೆಲಗ ಮೆಲಹೊಲ್ಲ ನಿಂದಕನ ನೆರೆಹೊಲ್ಲ।
ತಂದೆಯನು ಜರಿವ ಮಗಹೊಲ್ಲ ಸೂಳೆಯ।
ದಂದುಗವೆ ಹೊಲ್ಲ ಸರ್ವಜ್ಞ ॥ ೧೭೩೯ ॥

ಕರಿಯ ಹೆಂಗಸು ಹೊಲ್ಲ ನೆರಕೆಯಾ ಮನೆಹೊಲ್ಲ।
ಕರಕಾದಕೂಳನುಣಹೊಲ್ಲ ಸೂಳೆಗೆ।
ಹುರುಕಾಗ ಹೊಲ್ಲ ಸರ್ವಜ್ಞ ॥ ೧೭೪೦ ॥

† ನುಚ್ಚುಗೂಳುಣ ಹೊಲ್ಲ ಚುಚ್ಚಕರ ನೆರೆಹೊಲ್ಲ।
ಮುಚ್ಚರದಿ ನಡೆವ ಮಗ ಹೊಲ್ಲ ಸೂಳೆಗೆ।
ಮುಚ್ಚುಗಣ್ಹೊಲ್ಲ ಸರ್ವಜ್ಞ ॥ ೧೭೪೧ ॥

ಸೂಳೆಗೆ ಇವು ಲೇಸು.

* ಬೆಳೆಗೆ ಮಳೆ ಬರಲೇಸು ಗಿಳಿಗೆ ಪಂಜರ ಲೇಸು।
ಸುಳಿಗಾಳಿ ಲೇಸು ಬೆನುರಿಂಗೆ ಸೂಳೆಗೆ।
ಗಳಿಕೆಯೇ ಲೇಸು ಸರ್ವಜ್ಞ ॥ ೧೭೪೨ ॥

† ಬೆಲ್ಲದಂಬಲಿ ಲೇಸು ಬಿಲ್ಲು ಶಬರಗೆ ಲೇಸು।
ಚಲ್ಲಾಟಲೇಸು ಹರೆಯಲ್ಲಿ, ಸೂಳೆಗೆ।
ಗುಲ್ಲಾಟ ಲೇಸು ಸರ್ವಜ್ಞ ॥ ೧೭೪೩ ॥

ಸೂಳೆಯ ಆಶೆಗಳು.

* ಕುರುಬಂಗೆ ಕುರಿಯಾಸೆ ಮರಿಗಳಿಗೆ ಮೊಲೆಯಾಸೆ।
ಸರುವರಿಗೆ ಮಳೆಯು ಬರುವಾಸೆ ಸೂಳೆಗೆ।
ಜೆರದಾಟದಾಸೆ ಸರ್ವಜ್ಞ ॥ ೧೭೪೪ ॥

† ತೋಟ ತೋಟಿಗಗಾಸೆ ಕೋಟೆ ಮನ್ನೆಯಗಾಸೆ ।
ನಾಟದ ಬೆಳೆಗೆ ಮಳೆಯಾಸೆ, ಸೂಳೆಗೆ ।
ನೋಟಗಳ ಆಸೆ ಸರ್ವಜ್ಞ ॥ ೧೭೪೫ ॥

* ಒಕ್ಕಲಿಗೆ ಊರಾಸೆ ಮಕ್ಕಳಿಗೆ ಮನೆಯಾಸೆ ।
ಜಕ್ಕವಕ್ಕಿಗೆ ಕೊಳದಾಸೆ, ಸೂಳೆಗೆ ।
ರೊಕ್ಕದಾ ಆಸೆ ಸರ್ವಜ್ಞ ॥ ೧೭೪೬ ॥

* ಬಂಡಿಗೇ ಬಳೆಯಾಸೆ ಮಿಂಡಿಗೇ ವೊಲೆಯಾಸೆ[1] ।
ಗಂಡನುಳ್ಳಳಿಗೆ ಗುಣದಾಸೆ, ಸೂಳೆಗೆ ।
ಗಂಡುಗಳ ಆಸೆ ಸರ್ವಜ್ಞ ॥ ೧೭೪೭ ॥

ಸೂಳೆಯ ಜಾಣತನ.

† ಸಪಿಯನೊಕ್ಕಲಿಗನು ಹೊಸೆವಾಕೆ ಬೆಣ್ಣೆಯನು ।
ಆಸಗ ಸೀರೆಯನರಿವಂತೆ ಸೂಳೆಯು ।
ಹುಸಿವರರಿದಿಹಳು ! ಸರ್ವಜ್ಞ ॥ ೧೭೪೮ ॥

† ಬಳ್ಳಿ ತೋಟಿಗ ಬಲ್ಲ ಎಳ್ಳ ಗಾಣಿಗ ಬಲ್ಲ ।
ಕಳ್ಳನ ಬಲ್ಲ ತಳವಾರ, ಸೂಳೆ ಹಣ- ।
ವುಳ್ಳನರಿದಿಹಳು ಸರ್ವಜ್ಞ ॥ ೧೭೪೯ ॥

† ನೆಲೆಯನಂಬಿಗ ಬಲ್ಲ ಬಲೆಯ ಬೋನಿಗ ಬಲ್ಲ ।
ಮಲೆಯ ಸಂಚಾರಿ ನೆರೆಬಲ್ಲ, ಸೂಳೆತನ- ।
ಗೋಲಿವರರಿದಿಹಳು ಸರ್ವಜ್ಞ ॥ ೧೭೫೦ ॥

---

1 F. ಕಳೆಯಾಸ.

† ವಾನರನು ಮರವನ್ನ ಸೋನ ತನ್ನೊಡೆಯನ್ನ ।
ಆನೆ ಮಾಹುತನ ಅರಿವಂತೆ ಸೂಳೆಯು ।
ದೀನನರಿದಿಹಳು ಸರ್ವಜ್ಞ ॥ ೧೭೫೧ ॥

† ಮದಕರಿಯು ಮಾಹುತನ ಕುದುರೆಯು ರಾಹುತನ ।
ಹದುಳವನರಿದು ನಡೆವಂದ ಸೂಳೆತನ- ।
ಗೊದಗುವರನರಿಗು ಸರ್ವಜ್ಞ ॥ ೧೭೫೨ ॥

ಸೂಳೆಯು ಅಪಕಾರಿ.

† ಬಂಧನದ ಆನೆ ತಾ ವಿಂಧ್ಯವನು ನೆನೆವಂತೆ ।
ವಿಂಧ್ಯವಾನೆಯ ನೆನೆವುದೆ? ಆದರ- ।
ನೆಂದೂ ನೆನೆಯಳು ಸರ್ವಜ್ಞ ॥ ೧೭೫೩ ॥

† ಹಸ್ದು ಹಾವನು ನುಂಗು ಮದ್ದು ಕುತ್ತವನುಂಗು !
ನಿದ್ದೆಗೈಯುವನ ವೃತಿನುಂಗು ! ಸೂಳೆಯು ।
ಹೊದ್ದಿದನ ನುಂಗು! ಸರ್ವಜ್ಞ ॥ ೧೭೫೪ ॥

ಸೂಳೆಯು ಬಾಯಿ ಶುದ್ಧ, ಶರೀರ ಅಶುದ್ಧ.

* ಕಾಳೆಯಧ್ವನಿಶುದ್ಧ ಸೂಳೆಯಾ ತುಟಿ ಶುದ್ಧ ।
ಏಳಿಗೆ ಹರಿವ ಜಲಶುದ್ಧ ಸಗ್ಗಳೆಯ ।
ಜೂಳಿ ತಾ ಶುದ್ಧ ಸರ್ವಜ್ಞ ॥ ೧೭೫೫ ॥

* ಬೆಳಿವೆಣ್ಣಿನಾ ಬಾಯಿ ಹಲವೆಂಜಲಿನಬೇಟ ।
ಹುಳಿಮುಟ್ಟಿ ಕಿಲುಬು ಕೆಡುವಂತೆ ಬಾಯುವಳ ।
ಎಲೆ ಮೆಲಲು ಶುದ್ಧ ಸರ್ವಜ್ಞ ॥ ೧೭೫೬ ॥

ಬಡವಗೆ ಸೂಳೆ ಒಲಿಯುವದು ಕ್ವಚಿತ.

† ಒಳ್ಳೆಬಳ್ಳಿಯು ಹೋಗಿ ಕಳ್ಳಿಯನು ಹಬ್ಬಿದೋಲ್ ।
ಕಳ್ಳಗೆ ರಂಭೆಯೊಲಿವರೆ ಅದು ಮುನ್ನಿ- ।
ನೆಳ್ಳಿನಾ ಋಣವು ಸರ್ವಜ್ಞ ॥ ೧೭೫೭ ॥

ಹಣವಿದ್ದರೆ ಸೂಳೆ.

* ಅಂಬು ಬಿಲ್ಲಿಗವಶ್ಯ ಶಂಭು ಸಹಜಗವಶ್ಯ ।
ನಂಬಿಗವಶ್ಯ ಹರದಂಗೆ, ಸೂಳೆಗೆ ।
ಚೆಂಬೊನ್ನವಶ್ಯ ಸರ್ವಜ್ಞ ॥ ೧೭೫೮ ॥

* ಹಣವ ಕಂಡಾಕ್ಷಣವೆ ಗುಣವಂತೆಯಾಗುವಳು ।
ಹಣವಿರದ ವಿಟನು ಬಂದರೆ ಸೂಳೆಗೆ ।
ಹೆಣನ ಕಂಡಂತೆ ಸರ್ವಜ್ಞ ॥ ೧೭೫೯ ॥

† ಹಣವ ಕಂಡರೆ ಬಾಯ ಹೆಣ ಬಿಡುವದೆಂದಿರಲು ।
ಹಣನೋಡಿ ಅಣಿಯುವಮಾಡುವಳು[1] ಇಲ್ಲದಿ- ।
ರೊಣಮಾತಿನವಳು ಸರ್ವಜ್ಞ ॥ ೧೭೬೦ ॥

* ಬಿಕ್ಕ ಬಿಕ್ಕನೆ ತೋರಿ ಇಕ್ಕುವಳು ಕಣ್ಣೀರ ।
ಸಿಕ್ಕಿದಳು ಸೂಳೆಯೆನಬೇಡವದು ರೊಕ್ಕ ।
ತಕ್ಕೊಂಬುವದಕೆ ಸರ್ವಜ್ಞ ॥ ೧೭೬೧ ॥

• ವಾರಾಂಗನೆಯರಿಂಗೆ ಯಾರೆಂಜಲೇನಯ್ಯ ।
ಊರೆಂಜಲನ್ನು ತಿಂಬುವ ಶುನಕಗೆ ।
ಯಾರೆಂಜಲೇನು? ಸರ್ವಜ್ಞ ॥ ೧೭೬೨ ॥

1 F. ಹಣದತ್ತ ಸೂಳೆ ಕರೆವಳು.

* ಹೆಂಡಕೆಂದಗಳಿಲ್ಲ ಹುಂಡಿಕಾರಿಗಳಿಲ್ಲ ।
ಗಂಡರಿದ್ದೊಬ್ಬ[1] ಮಗನಿಲ್ಲ, ಸೂಳೆಗೆರ- ।
ಡಂಡಿನಾರಂಬ ಸರ್ವಜ್ಞ ॥ ೧೭೬೩ ॥

* ಅಡ್ಡಕೊಂಬಾ ಸೂಳೆ । ಗಡ್ಡವೆಂದೆನಬೇಡ- ।
ಗಡ್ಡಕಾಲುಗುರು, ಅಡಿಕೆಲೆ, ಹೂವು, ಮು- ।
ತ್ರಡ್ಡಮುಟ್ಟುವವು! ಸರ್ವಜ್ಞ ॥ ೧೭೬೪ ॥

• ಗದ್ದೆ ಹೊಲಗಳು ಇಲ್ಲ ಸಿದ್ದಾಯ ಮುನ್ನಿಲ್ಲ ।
ಉದ್ಯೋಗಗೆಯ್ವ ಮಗನಿಲ್ಲ ಸೂಳೆಗೆ ।
ಒದ್ದೆಯಾರಂಬ ಸರ್ವಜ್ಞ ॥ ೧೭೬೫ ॥

ಠಕ್ಕನ ವರ್ತನ.

* ಮಾತು ಮಾತನೆ ಆಡಿ ಮಾತಿನಲಿ ಮರೆಮಾಡಿ ।
ಮಾತಿನೊಳು ಹಣವನುರಸಿ ತಾನೆದ್ದುಹೋ- ।
ದಾತನೇ ಜಾಣ ಸರ್ವಜ್ಞ ॥ ೧೭೬೬ ॥

† ಮಾತನೇ ಉಣಕೊಟ್ಟು ಮಾತನೇ ಉಡಕೊಟ್ಟು ।
ಮಾತು ಮುದ್ದುಗಳ ತೊಡಕೊಟ್ಟು ಬೆಳಗೆಹೋ- ।
ದಾತನೇ ಜಾಣ ಸರ್ವಜ್ಞ ॥ ೧೭೬೭ ॥

ಮೂರ್ಖನ ವರ್ತನ

* ರಚ್ಚೆಗೆಲಿ ಸೂಳೆಯನು ನೆಚ್ಚುವನು ಕಡುಹೆಡ್ಡ ।
ಬಿಚ್ಚಲು ನಡೆವ ಪಥಕೊಲಿದು ಹೋರುವನು ।
ಹುಚ್ಚ ಕಾಣಯ್ಯ ಸರ್ವಜ್ಞ ॥ ೧೭೬೮ ॥

1 Gs. ಗಂಡಾಗಿ ಒಬ್ಬ, F. ಗಂಡರಿಗೊಬ್ಬ.

* ಮಾರಿಕೊಂಬುವಳನ್ನು ಮೀರಿ ನಂಬುವ ಹೆಡ್ಡ ।
ಹಾರುವ ಹುಳುವು ಹಣ್ಣೆಂದು ಸೊಡರಿಗೆ ।
ಏರಿ[1] ಸತ್ತಂತೆ ಸರ್ವಜ್ಞ ॥ ೧೭೬೯ ॥

* ನೀರಿಲ್ಲದಾ ಕೆರೆಗೆ ಊರಿಲ್ಲದಾ ಎರೆಗೆ ।
ಸೂರೆಯಾಗಿರ್ದ ಸಂತೆಗೆ ಸೂಳೆಗೆ ।
ಸಾರುವನೆ ಹೆಡ್ಡ ಸರ್ವಜ್ಞ ॥ ೧೭೭೦ ॥

* ಊರುಂಬ ಬಾವಿಂಗೆ ಊರ ಹೆಬ್ಬಾಗಲಿಗೆ ।
ಆರವೆಮರದ ನೆರಳಿಗೆ ಸೂಳೆಗೆ ।
ಹೋರುವನೆ ಹೆಡ್ಡ ಸರ್ವಜ್ಞ ॥ ೧೭೭೧ ॥

* ಅಪ್ಪಿ ಸಪ್ಪಾದವಳ । ನಪ್ಪುವನು ಕಡುಹೆಡ್ಡ ।
ತುಪ್ಪ ಮುಂಡೊಗೆದ[2] ಎಲೆನೆಕ್ಕಿ ನಾಯಿಃಬಾಯ್ ।
ಚಪ್ಪರಿಸಿದಂತೆ ಸರ್ವಜ್ಞ ॥ ೧೭೭೨ ॥

ಬುದ್ಧಿವಾದ.

* ಒಡವೆಯನು ಕೊಟ್ಟಿರಾ— ಬಡವ ಬಲ್ಲಿದನೆಂದು ।
ಒಡವೆ ಸರಿಸುಖವ ಕೊಡುವಳೆ ? ಸೂಳೆಯ ।
ಗೊಡವೆಯೇ ಬೇಡ ! ಸರ್ವಜ್ಞ ॥ ೧೭೭೩ ॥

* ಒಡವೆ ಕೊಟ್ಟಾ ಮಿಂಡ ಬಡವನೆಂದರಿದಿಹರೆ ।
ತೊಡರಿಸುತ ಕೊಡಹಿ ಕಳುಹುವ ಸೂಳೆಯ ।
ತೊಡಚುವವೆ ಪಾಪ ! ಸರ್ವಜ್ಞ ॥ ೧೭೭೪ ॥

1 F. ಎರಗಿ. 2 C. ತುಪ್ಪವನಳಿದ ಬಳ್ಳ. A ತುಪ್ಪೋಗರುಂಡ ತಳಿಗೆಯು.

* ಹೊದ್ದಿದರೆ, ಎನಗೆ ನೀ ಮದ್ದನಿಕ್ಕಿದಿ ಎಂದು ।
ಬುದ್ಧಿಯಲಿ ಹಣವ ತೆಗೆಯುವಾ ಸೂಳೆಯ ।
ಹೊದ್ದಬೇಡೆಂದ ಸರ್ವಜ್ಞ ॥ ೧೭೭೫ ॥

* ದೇಶದಾ ಎಂಜಲನ ಹೇಸದೇ ತಿಂಬುವರೆ ।
ಬೇಸತ್ತೆನೆಂದು ಎನಬೇಡ ಅದಕೊಬ್ಬ ।
ವೇಶಿಯೇ ಸಾಕ್ಷಿ[1] ಸರ್ವಜ್ಞ ॥ ೧೭೭೬ ॥

† ಮೆಚ್ಚಿದಂತಿರುತಿಹಳು ಮೆಚ್ಚು ಮತ್ತೊಬ್ಬನೊಳು ।
ಮೆಚ್ಚಿಹಳು ಸೂಳೆಯೆನಬೇಡ ಅವಳನು ।
ನೆಚ್ಚಬೇಡೆಂದ! ಸರ್ವಜ್ಞ ॥ ೧೭೭೭ ॥

* ನಂಬಿಕೆಯ ಕೊಟ್ಟರೂ ನಂಬದಿರು ಸೂಳೆಯನು ।
ನಂಬಿಸಿ ಒಬ್ಬಗೆ, ಒಳಗೆ ಬೇರೊಬ್ಬನಿ- ।
ಗಿಂಬು ಮಾಡಿಹಳು ಸರ್ವಜ್ಞ ॥ ೧೭೭೮ ॥

* ಇಂಬರಿಯದಾಕೆ ನೆರೆ ನಂಬುಗೆಯ ತೋರಿದರೆ ।
ತುಂಬಿದಾ ಕೆರೆಯ ಮಧ್ಯದಿ ಮಾನುರದ ।
ಕೊಂಬೆಕಾತಂತೆ ಸರ್ವಜ್ಞ ॥ ೧೭೭೯ ॥

† ಸೂಳೆ ಸೂತ್ರದ ನೇಣು ಗಾಳವಾಕೆಯ ಮೊಗವು ।
ಮೇಳಯ್ಸುವವಳು ಸಲಿಬೆಂಡು, ಮಿಂಡನು ।
ಬಾಳೆಮೀನೆಂದ ಸರ್ವಜ್ಞ ॥ ೧೭೮೦ ॥

---

1 Gs. ಸಾಳು.

* ಬೇಹತಿಯು ಸೂಳೆಯೂ ಆಡಿನಾ ಬೆಣ್ಣೆಯೂ ।
ಕಾಡಕಗ್ಗೊರಲೆ, ಕಹಿದೊಂಡೆ ನಾತಗಳು ।
ತೀಡಿದರೆ ಬಿಡವು ಸರ್ವಜ್ಞ ॥ ೧೭೮೧ ॥

* ಜತ್ತದ್ಗೆಂಡತಿ ಮೇಲೆ ಮತ್ತೆ ಸೂಳೆಯು ಏಕೆ।
ಕುತ್ತವು ಬಂದು ಮುಸುಗರಿವ ಮನುಜಂಗೆ।
ಮತ್ತೆ ಕಿಚ್ಚೇಕೆ ಸರ್ವಜ್ಞ ॥ ೧೭೮೨ ॥

* ಸಂತೆಯಂಗಡಿಸೂಳೆ, ಮುಂಕೊಲಿವ ಡೊಂಬತಿಯು ।
ಎಂತುಗಂಡತಿಯು, ಜೋಗತಿ ಹೋದವನ ।
ಸಂತಾನ ಕೆಡುಗು! ಸರ್ವಜ್ಞ ॥ ೧೭೮೩ ॥

† ಎತ್ತಹೋದರು ಬೆನ್ನ—ಹತ್ತಿಬರುವಳ ಕಂಡು ।
ಮೆತ್ತನಸೂಳೆಯೆನಬೇಡ, ಅವಳೊಲುಮೆ ।
ಮಿಥ್ಯಕಾಣಯ್ಯ ಸರ್ವಜ್ಞ ॥ ೧೭೮೪ ॥

† ಎತ್ತಣಾ ಕಾಲಕ್ಕೆ ಅತ್ತಿಹೂವಾದಂತೆ ।
ಅತ್ತಳು ಸೂಳೆಯೆನಬೇಡ ಕಣ್ಣೀರು ।
ಮೃತ್ಯು ಕಾಣಯ್ಯ ಸರ್ವಜ್ಞ ॥ ೧೭೮೫ ॥

* ಒಡೆದ ಕಣ್ಬಂದರೂ ಸಿಡಿಲು ಬಡಿವೆದ್ದರೂ ।
ನಡುಗಡಲೊಳ್ಮುಳುಗಿ ಉಳಿದರೂ ಸೂಳೆಯು ।
ನುಡಿಯ ನಂಬದಿರು! ಸರ್ವಜ್ಞ ॥ ೧೭೮೬ ॥

* ಕೊಟ್ಟಾತ ಬರಡಾದ ಬಿಟ್ಟಾತ ಹೈನಾದ ।
ಕೊಟ್ಟವಳ ಪಡೆವೆನೆನುವಾತ ತಾ ಮೊದಲೆ ।
ಬಟ್ಟಬಯಲಾದ ಸರ್ವಜ್ಞ ॥ ೧೭೮೭ ॥

† ಸೂಳೆಯನು ನೆರೆನಂಬಿ ಗಾಳಕ್ಕೆ ಸಿಗಬೇಡ- ।
ಆಳವಾಗಿಹುದು ಕುಣಿ! ಅವಳಕಂಡತೆ ।
ಹೇಳದಲೆ ತೊಲಗು! ಸರ್ವಜ್ಞ ॥ ೧೭೮೮ ॥

† ಜಾಲಿಯಿಂ ಮರಕೆಡುಗು ಮೋಳೆಯಿಂ ಕರೆಕೆಡುಗು ।
ಆಳು ಇಲ್ಲದನ ಹೊಲಕೆಡುಗು ಸಂಸಾರ ।
ಸೂಳೆಯಿಂ ಕೆಡುಗು! ಸರ್ವಜ್ಞ ॥ ೧೭೮೯ ॥

* ನಾರಿಯರ ನಿಜವನ್ನು ನೀರಿನಾ ನೆಲೆಯನ್ನು ।
ಜಾರೆಯರ ತನುವಿನೊಳಗನ್ನು ಅರಿಯದೆ ।
ಸಾರಿದವ ಕೆಡುಗು! ಸರ್ವಜ್ಞ ॥ ೧೭೯೦ ॥

* ನೋಟಕ್ಕೆ ಬಲುಚಂದ ಕೂಟಕ್ಕೆ ಕಡುನರಕ ।
ನಾಟಿಸಿ ಪ್ರಾಣ, ಧನಹಾನಿ ಸೂಳೆಯೇ- ।
ರಾಟವೇ ಬೇಡ! ಸರ್ವಜ್ಞ ॥ ೧೭೯೧ ॥

* ರಂಭೆಯೊಡಗೂಡದಿರು ನಂಬುಗೆಯ ಕೊಡದಿರು ।
ಇಂಬರಿಯದವಳ ಸಂಗತಾನೊಡಲೊಳ- ।
ಗಂಬು ಮುರಿದಂತೆ ಸರ್ವಜ್ಞ ॥ ೧೭೯೨ ॥

† ಸೂಳೆಯನು ಹೋದವನ ಬಾಳನಾನೇನೆಂಬೆ[1] ।
ಕಾಳು ಮೈಬಣ್ಣ ! ಹಲ್ಹೋಗಿ ಹರಿಯುವ[2] ।
ಮೂಳನಾಯಾದ ! ಸರ್ವಜ್ಞ ॥ ೧೭೯೩ ॥

* ಹಣವು ಹರಿಯಿರುವನಕ ಗಣಗಣಿಸುವಳು ಸೂಳೆ ।
ಹಣವು ಹರಿಹೋದ ಮರುದಿನ ಹಾಳೂರ ।
ಶುನಕನಂತಿಹಳು ಸರ್ವಜ್ಞ ॥ ೧೭೯೪ ॥

† ಸೂಳೆ ಸುಂಕದ ನಾಯಿ ಮೇಳ ಬಿಂಕದ ನಾಯಿ ।
ಸೂಳೆಯ ಮಗಳು ಮರಿನಾಯಿ ಅವರವ್ವ ।
ಜೋಳನಾಯೆಂದ ! ಸರ್ವಜ್ಞ ॥ ೧೭೯೫ ॥

* ಸೂಳೆ ಮಿಂಡಗೆ ನಾಯಿ ಕೂಳೆ ಕುಂಟ್ಲಗೆ ನಾಯಿ ।
ಸೂಳೆಯರ ಅವ್ವೆ ಮುದಿನಾಯಿ ಅವರಪ್ಪ ।
ಮೂಳನಾಯೆಂದ ಸರ್ವಜ್ಞ ॥ ೧೭೯೬ ॥

---

## ೩೦. ರಸವಾದ ಪದ್ಧತಿ.

---

ಬಂಗಾರ ಮಾಡುವದು.

* ರಸವುಂಟಂಗಡಿಯಲ್ಲಿ ಕಿಸುವುಂಟು ಸಾಲೆಯಲಿ ।
ವಸುಭಟನೆಂಬ ಗಿಡನುಂಟು, ವಾದಿಗಳು ।
ಹಸಿದರೇಕೆಂದ ! ಸರ್ವಜ್ಞ ॥ ೧೭೯೭ ॥

---

1 F. ಕೂಳಿಲ್ಲದಾದಣ್ಣ, 1 & 2 Gs. ಏನಾದ ಎಂತಾದ । ಹಾಳಾದ ಕೈಯ್ಯ ಹಣ ಹೋದ ಮರುದಿನ.

* ಶಶಕನಾ ಕಿವಿಯಂತೆ ಎಸೆದಿರ್ಪುದಾ ಪತ್ರ।
ರುಷಕುಂಭವದರ ರಸದೊಳಗೆ ಬೆರೆದರೆ।
ಹುಸಿಯಿಲ್ಲ ಕನಕ ಸರ್ವಜ್ಞ ॥ ೧೭೯೮ ॥

† ವೃಷಭನಾ ಕೊಂಬಿನಂ। ತೆಸೆದುದು ಅದರ ಕಾಯ್।
ವಸುಭಟನೆಂಬ ಗಿಡದಿಂದ ಕನಕವು।
ಹುಸಿಯುಲ್ಲ ನೋಡ ! ಸರ್ವಜ್ಞ ॥ ೧೭೯೯ ॥

* ಉತ್ತರಣೆ ಉಪ್ಪಲಿಗೆ ಮತ್ತಲ್ಲ ಶಿಶುಮಾರ।
ಕತ್ತೆಯ ಮೂತ್ರವೆರದರೆ ರಸಭಸ್ಮ।
ಉತ್ತಮವಕ್ಕು ಸರ್ವಜ್ಞ ॥ ೧೮೦೦ ॥

† ಗುಡಮಾತುಲಂಗಕವು ಪೊಡವಿಯೊಳಗೆಸೆದಿಕ್ಕು।
ಒಡಗೂಡೆ ಬಿಸಿಯುರಸವನು ಬಡತನ-।
ಪಡಗಿ ಸಿರಿಬಕ್ಕು ಸರ್ವಜ್ಞ ॥ ೧೮೦೧ ॥

* ತಾಳಕದ ಸತ್ವವನು ಮೇಳಯ್ಸಿ ರಸದೊಳಗೆ।
ಬಾಳದ ಬಿಳಿಯನೊಡಗೂಡೆ ತಾರೆ ತಾ।
ಹೇಳಿದಂತಕ್ಕು ಸರ್ವಜ್ಞ ॥ ೧೮೦೨ ॥

† ಗಂಧಕದ ತೈಲವನು ಕುಂದದಲಿ ರಸಕಿತ್ತು।
ಕಂದಿವ ತಾರೆಯೊಡಗೂಡೆ ಹೇಮವು।
ಮುಂದೆ ಬಂದಕ್ಕು ಸರ್ವಜ್ಞ ॥ ೧೮೦೩ ॥

† ಇಂಗುಳದ ತೈಲದಲಿ ವಂಗವೆರೆ ಬಂಗಾರ ।
ಸಂಗಾತಿಗುಂಟು ತನಗುಂಟು ಮನೆಯಲಿ- ।
ದ್ದಂಗನೆಗು ಉಂಟು ಸರ್ವಜ್ಞ ॥ ೧೮೦೪ ॥

† ಹತ್ತಾರೆ ಹೂವು ತಾ ಮತ್ತೆ ವಂಗವು ಕೂಡಿ ।
ಉತ್ತಮದ ಲೋಹ ತನಗಕ್ಕು ಲೋಕದಿ ।
ಸ್ತುತ್ಯನಾಗಿಕ್ಕು ಸರ್ವಜ್ಞ ॥ ೧೮೦೫ ॥

* ತುತ್ತನಾಗವು ನಾಗ ಮತ್ತೆ ನಾಗವು ನಾಗ ।
ಉತ್ತಮದನಾಗದೊಡಗೂಡೆ ಹೇಮವು ।
ಹತ್ತಿ ಬಂದಕ್ಕು[1] ಸರ್ವಜ್ಞ ॥ ೧೮೦೬ ॥

* ನಾಗ ಸತುವುಗಳೆರಡು ನಾಗದಾರಸ ಮೂರು ।
ಮೇಗೆ ಅಂಜಿಯನೊಡಗೂಡೆ ಹೇಮತಾ- ।
ನಾಗಲೇಬಕ್ಕು ಸರ್ವಜ್ಞ ॥ ೧೮೦೭ ॥

* ರಸವಂಗ ತಾರೆಗಳ ಹಸುಗೆಗಳು ಒಂದೊಂದು ।
ಕಿಸುವೆಂಟು ತೆರದಿ ಕೂಡಲು ತಾರೆಯು ।
ಶಶಿಯುಂದವಕ್ಕು ಸರ್ವಜ್ಞ ॥ ೧೮೦೮ ॥

† ಸೀಗೆ ಬಾಗೆಯುಬೇರು ಕಾಗೆಮೋರೆಯ ಗಡ್ಡೆ ।
ನಾಗರವು ಸೆತ್ತುವೊಡಗೂಡೆ ಹೇಮತಾ- ।
ನಾಗಲೇಬಕ್ಕು ಸರ್ವಜ್ಞ ॥ ೧೮೦೯ ॥

---

1 C. ಹತ್ತಿ, Gs. P. ಸತ್ಯವು ಹೇಮ.

† ಬಳ್ಳಿತುರುಚಿಯ ಬೇರ ಒಳ್ಳಿತಾಗಿಯೆ ಹಣಿದು ।
ಬೆಳ್ಳಿಯಾ ರಸದಿ ಬೆರಸಲು ಹೇಮ ತಾ ।
ಬಳ್ಳದಲಿಬಕ್ಕು ಸರ್ವಜ್ಞ ॥ ೧೮೦ ॥

* ಕಂಡಕಂಡುದನೆಲ್ಲ ಹಿಂಡಿ ಭಂಡಾಗದೇ ।
ಕುಂಡಲಿಯಿಪ್ಪ ಗಿಡವೊಂದ ವಂಗಕ್ಕೆ ।
ಹಿಂಡಿ ನೋಡೆಂದ ಸರ್ವಜ್ಞ ॥ ೧೮೧ ॥

* ಓದಿವಾದಿಗಳೆಲ್ಲ ಕಾದು ವಾದವ ಮಾಡಿ ।
ಊದಲು ಬೂದಿ ತಲೆಗೇರಿ ಬಾಯಾರಿ ।
ಹೋದುದನು ಕಂಡೆ ಸರ್ವಜ್ಞ ॥ ೧೮೨ ॥

† ಸಾಧುಸಿದ್ಧರ ನಂಬಿ ಕಾದ ಒಡವೆಯ ಕೊಟ್ಟು ।
ಹೋದಲ್ಲಿ ಹೇಮಕೊಂದಲು ಗೂದೆಯು ।
ಹಾದುದನು ಕಂಡೆ ಸರ್ವಜ್ಞ ॥ ೧೮೩ ॥

ವಶೀಕರಣ.

† ಇಂಗುಳದ ಬೇರಿನೊಳು ವಂಗವನು ಬೆರಸಿದರೆ ।
ಅಂಗನೆಯು ಬಂದು ವಶವಕ್ಕು, ವೈರಿಯು ।
ಸಂಗಾತಿಯಕ್ಕು ಸರ್ವಜ್ಞ ॥ ೧೮೪ ॥

† ವಿಷಮುಷ್ಟಿನಾಂಗುಲಿಕ ಶಶನಯನ ಪಿತ್ತವರ ।
ರಸವು ತಾಂಬೂಲದೊಡಗೂಡೆ, ಸ್ತ್ರೀವಶವು ।
ಹುಸಿಯಲ್ಲ ನೋಡು ! ಸರ್ವಜ್ಞ ॥ ೧೮೫ ॥

† ಕತ್ತೆಗಿವಿ ಸಹದೇವಿ ಮತ್ತೆತ್ತುನಾಲಿಗೆಯು ।
ಉತ್ತರಣೆವೆರಸಿ ತಿಲಕವಿಡೆ ಲೋಕತ- ।
ನ್ನತ್ತಸಾರುವದು ! ಸರ್ವಜ್ಞ ॥ ೧೮೧೬ ॥

## ೩೧. ಅನ್ನಪದ್ಧತಿ.

ಹೊಟ್ಟೆ ಎಲ್ಲವನ್ನು ಮಾಡಿಸುವದು.

* ಕೊಟ್ಟಣವ ಕುಟ್ಟುವದು ಮೊಟ್ಟೆಯನು ಹೊರಿಸುವದು ।
ಬಿಟ್ಟಿಕೂಲಿಗಳ ಮಾಡಿಸುವದು ಗೇಣು- ।
ಹೊಟ್ಟೆ ಕಾಣಯ್ಯ ಸರ್ವಜ್ಞ ॥ ೧೮೧೭ ॥

* ಸಾಲವನು ಮಾಡುವದು ಹೇಲ ತಾ ಬಳಿಸುವದು ।
ಕಾಲಿನ ಕೆಳಗೆ ಕೆಡಹುವದು ತುತ್ತಿನ ।
ಚೀಲ ನೋಡಯ್ಯ ! ಸರ್ವಜ್ಞ ॥ ೧೮೧೮ ॥

* ಕುಲವನ್ನು ಕೆಡಿಸುವದು ಛಲವನ್ನು ಬಿಡಿಸುವದು ।
ಹೊಲೆಯನ ಮನೆಯ ಹೊಗಿಸುವದು ಕೂಳಿನ ।
ಬಲವ ನೋಡೆಂದ ಸರ್ವಜ್ಞ ॥ ೧೮೧೯ ॥

‖ ಕನ್ನವನು ಕೊರಿಸುವದು ಭಿನ್ನವನು ತರಿಸುವದು ।
ಬನ್ನದ ಸೆರೆಗೆ ಒಯ್ಯುವದು ಒಂದುಸೇ- ।
ರನ್ನ ನೋಡಯ್ಯ ! ಸರ್ವಜ್ಞ ॥ ೧೮೨೦ ॥

* ಹೊಟ್ಟೆಯನು ಕಟ್ಟುವದು ಬಟ್ಟೆಯಲಿ ಬಡಿಯುವದು ।
ಕಟ್ಟಾಳ ಭಂಗಪಡಿಸುವದು ಗೇಣುದ್ದ ।
ಹೊಟ್ಟೆ ಕಾಣಯ್ಯ ಸರ್ವಜ್ಞ ॥ ೧೮೨೧ ॥

ಊಟವಿದ್ದರೆ ಆಟ.

* ಅಟ್ಟೆ ಹರಿದಾಡುವದು ಬಟ್ಟೆಯಲಿ ಮೆರೆಯುವದು ।
ಹೊಟ್ಟೆ ಹುಣ್ಣಾಗಿ ನಗಿಸುವದು, ಒಂದು ಹಿಡಿ- ।
ಹಿಟ್ಟು ಕಾಣಯ್ಯ ಸರ್ವಜ್ಞ ॥ ೧೮೨೨ ॥

* ಉಗುರ ತಿದ್ದಿಸುವದು, ಮುಗುಳುನಗೆ ನಗಿಸುವದು, ।
ಹಗರಣದ ಮಾತ ನುಡಿಸುವದು, ಬೋನದ ।
ಬಗೆಯ ನೋಡೆಂದ! ಸರ್ವಜ್ಞ ॥ ೧೮೨೩ ॥

† ಉಕ್ಕುವದು ಸೊಕ್ಕುವದು ಕೆಕ್ಕನೇ ಕೆಲೆಯುವದು ।
ರಕ್ಕಸನಂತೆ ಮದಿಸುವದು ಒಂದು ಸೇ- ।
ರಕ್ಕಿಯ ಗುಣವು ಸರ್ವಜ್ಞ ॥ ೧೮೨೪ ॥

ಊಟವಿದ್ದರೆ ಕೂಟ.

† ಬಟ್ಟೆಯನು ಉಡಿಸುವದು ಶೆಟ್ಟಿಯೆಂದೆನಿಸುವದು ।
ಕಟ್ಟಾಣಿ ಸತಿಯ ಕುಣಿಸುವದದು ಚೋಟು ।
ಹೊಟ್ಟೆ ಕಾಣಯ್ಯ ಸರ್ವಜ್ಞ ॥ ೧೮೨೫ ॥

† ಸಾಂಬ್ರಾಣಿ ಏರುವರೆ ಕೊಂಬೆಯನು ಕೀಳುವರೆ ।
ರಂಭೆಯರ ತೋಳಲೊರಗುವರೆ ಒಡಲಿಗಿ- ।
ಷ್ಟಂಬಲಿಯು ಬೇಕು ಸರ್ವಜ್ಞ ॥ ೧೮೨೬ ॥

* ಓರೆಯಾಯಿತು ಬಿಲ್ಲು ಜಾರಿಹೋಯಿತು[1] ಅಂಬು ।
ಕೀರೆಯ ಸೊಪ್ಪು ತಿಂಬಾಗ ಕಾಮತಾ- ।
ನಾರಾರನೆಚ್ಚ ಸರ್ವಜ್ಞ ॥ ೧೮೨೭ ॥

† ಕಾಟಯನು ಹಾಕಿದರೆ ಓಟವಿರುವದು ರತಿಗೆ ।
ನಾಟಿಸೆವ ಬಿಲ್ಲುಮುರಿದರೆ ಲೋಕಕ್ಕೆ ।
ಕೋಟಲೆಯಲ್ಲಿ ? ಸರ್ವಜ್ಞ ॥ ೧೮೨೮ ॥

* ಉಪು ಕಾಮನಬಿಲ್ಲು ತುಪ್ಪವಯ್ದಲರಂಬು ।
ಒಪ್ಪ ಭೋಗಗಳು ರತಿಯಾಗಿ ಕೂಳುಕಂ- ।
ದರ್ಪ ಕಾಣಯ್ಯ ಸರ್ವಜ್ಞ ॥ ೧೮೨೯ ॥

ಕೂಳಿಲ್ಲದೆ ಕೆಲಸ ನಡೆಯದು.

* ನೇತ್ರಗಳು ಕಾಣಿಸವು ಶ್ರೋತ್ರಗಳು ಕೇಳಿಸವು ।
ಗಾತ್ರಗಳು ಎದ್ದು ನಡೆಯವು ಕೂಳೊಂದು ।
ರಾತ್ರಿ ತಪ್ಪಿದರೆ ಸರ್ವಜ್ಞ ॥ ೧೮೩೦ ॥

* ಅಡಿಗಳೆದ್ದೇಳವು ನುಡಿಗಳೂ ಕೇಳಿಸವು ।
ಮಡದಿಯರ ಮಾತು ಸೊಗಸವು ಕೂಳೊಂದು ।
ತಡೆದರರಗಳಿಗೆ ಸರ್ವಜ್ಞ ॥ ೧೮೩೧ ॥

* ನಿದ್ದೆಗಳು ಬಾರವು ಬುದ್ಧಿಗಳು ತಿಳಿಯವು ।
ಮುದ್ದಿನಮಾತು ಸೊಗಸದು ಬೋನದ ।
ಮುದ್ದೆತಪ್ಪಿದರೆ ಸರ್ವಜ್ಞ ॥ ೧೮೩೨ ॥

1 C. ನಾರಿಯುರಿಯುದು.

* ಉಂಡು ನೂರಡಿ ಎಣಿಸಿ ಕೆಂಡಕ್ಕೆ ಕೈಕಾಸಿ।  
ಗಂಡು ಮೇಲಾಗಿ ಮಲಗಿದನು ವೈದ್ಯನ।  
ಗಂಡ[1] ಕಾಣಯ್ಯ ಸರ್ವಜ್ಞ ॥ ೧೮೪೪ ॥

* ಹಸಿಯುದಿರೆ ಕಡುಗಾಯ್ದು[2] ಬಿಸಿನೀರ ಕುಡಿಯುವದು।  
ಹಸಿವಕ್ಕು, ಸಿಕ್ಕ ಮಲವಕ್ಕು,[3] ದೇಹವು।  
ಸಸಿನವಾಗಿಹುದು ಸರ್ವಜ್ಞ ॥ ೧೮೪೫ ॥

* ಹಸಿವಿಲ್ಲದುಣಬೇಡ ಹಸಿದು ಮತ್ತಿರಬೇಡ  
ಬಿಸಿಗೂಡಿ ತಂಗೂಳುಣಬೇಡ ವೈದ್ಯನ।  
ಗಸಣೆಯೇ ಬೇಡ ಸರ್ವಜ್ಞ ॥ ೧೮೪೬ ॥

• ಹಸಿಯುದಿರೆ ಉಣಬೇಡ ಹಸಿದು ಮತ್ತಿರಬೇಡ।  
ಬಿಸಿಬೇಡ ತಂಗೂಳುಣಬೇಡ ವೈದ್ಯರ।  
ಬೆಸಸ ಬೇಡೆಂದ ಸರ್ವಜ್ಞ ॥ ೧೮೪೭ ॥

† ಒಚ್ಚೊತ್ತು ಉಂಬುವದು ಕಿಚ್ಚ ತಾ ಕಾಯುವದು।  
ಬೆಚ್ಚನ ಠಾವಿಲೊರಗಿದರೆ ವೈದ್ಯನ।  
ಕಿಚ್ಚಿಲಿಕ್ಕೆಂದ ಸರ್ವಜ್ಞ ॥ ೧೮೪೮ ॥

ಮಿತಿಯಿಂದ ಗತಿ.

† ನಾಲಿಗೆಯ ಕೀಲವನು ಶೀಲದಲಿ ತಾನರಿದು।  
ಶೂಲವು ರುಚಿಯೆಂದಿರುವನು ಮುದಿಯಲಿ।  
ಬಾಲನಂತಿಹನು ಸರ್ವಜ್ಞ ॥ ೧೮೪೯ ॥

---

1 A. ಮಿಂಡ. 2 C. ಹಸಿವರಿತು ಉಂಬುವನು. 3 C. ವಿಷಯು ಘನವಕ್ಕು.

† ನಾಲಿಗೆಯು ಕಟ್ಟಿದನು ಕಾಲಸಿಗೆ ದೂರಹನು ।
ನಾಲಿಗೆಯು ರುಚಿಯು ಮೇಲಾಡುತಿರಲವನ ।
ಕಾಲ ಹತ್ತಿರವು ಸರ್ವಜ್ಞ ॥ ೧೮೫೦ ॥

* ರುಚಿಗಳನು ನೆರೆಗಳೆದು ಶುಚಿಗಳಲಿ ಮೆರೆವಂಗೆ ।
ಪಚನವು ಬೆಳಗಿ ಬಲದಿ ಬಾಳುವನೆಂಬ ।
ವಚನವೊಂದಿಹುದು ಸರ್ವಜ್ಞ ॥ ೧೮೫೧ ॥

ಆಹಾರಗಳ ಪರಿಣಾಮ.

† ಅಕ್ಕಿಯನು ಉಂಬುವನು ಹಕ್ಕಿಯಂತಾಗುವನು ।
ಸಿಕ್ಕ ರೋಗದಲಿ ರೊಕ್ಕವ ವೈದ್ಯನಿ- ।
ಗಿಕ್ಕುತ್ತಲಿರುವ ಸರ್ವಜ್ಞ ॥ ೧೮೫೨ ॥

† ಜೋಳವನು ತಿಂಬುವನು ತೋಳದಂತಾಗುವನು ।
ಬೇಳೆ ಬೆಲ್ಲಗಳನುಂಬನು ಬಹುಕಾಲ ।
ಬಾಳನೆಂದರಿಗು ಸರ್ವಜ್ಞ ॥ ೧೮೫೩ ॥

* ನವಣೆಯನು ತಿಂಬುವನು ಹವಣಾಗಿ ಇರುತಿಹನು ।
ಭವಣೆಗಳಿಗವನು ಬೀಳನು ಈ ಮಾತು ।
ಟವಣೆಯಲ್ಲೆಂದ ಸರ್ವಜ್ಞ ॥ ೧೮೫೪ ॥

* ರಾಗಿಯನು ತಿಂಬುವ ನಿ । ರೋಗಿ ಎಂದೆನಿಸುವನು ।
ರಾಗಿಯು ಭೋಗಿಗಳಿಗಲ್ಲ; ಬಡವರಿ- ।
ಗಾಗಿ ಬೆಳೆದಿಹುದು ಸರ್ವಜ್ಞ ॥ ೧೮೫೫ ॥

† ಒಮ್ಮೆಯುಂಡವ ತ್ಯಾಗಿ ಇಮ್ಮೆಯುಂಡವ ಭೋಗಿ।
ಬಿಮ್ಮಗೆ ಉಂಡರವ ರೋಗಿ ಯೋಗಿಯು।
ಸುಮ್ಮಗಿರುತಿಹನು ಸರ್ವಜ್ಞ ॥ ೧೮೫೬ ॥

ರೋಗಚಿಕಿತ್ಸೆ.

* ಹೆಮ್ಮಿಟಲಿ ಹೇರೆಕ್ಕೆ ರಮ್ಯದಾ[1] ರಸದಾಳಿ।
ಒಮ್ಮಾನದರ್ಧ ಉದಕ ಕಷಾಯದಿಂ।
ಕೆಮ್ಮೆಲ್ಲ ಕೆಡುಗು ಸರ್ವಜ್ಞ ॥ ೧೮೫೭ ॥

‖ ತಕ್ಕ ಗಿಡದಿಂದ ರುಜೆ ಫಕ್ಕನೇ ಅಡಗಿಹುದು।
ತಕ್ಕ ಗಿಡವನು ಕೊಡಲರಿಯದನ ಯಾತ್ರೆ।
ವೈಕುಂಠಯಾತ್ರೆ! ಸರ್ವಜ್ಞ ॥ ೧೮೫೮ ॥

## ೩೩. ಬೆಡಗಿನ ಪದ್ಧತಿ.

ವಿವಿಧ ಒಗಟುಗಳು.

ಪ್ರಾಣಿ, ವಾರ, ವಸ್ತುಗಳನ್ನು ಕುರಿತು.

* ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ।
ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ।
ಬಲ್ಲವರು ಹೇಳಿ ಸರ್ವಜ್ಞ ॥ ೧೮೫೯ ॥

* ಮರನೊತ್ತಿ ಬೇಯುವದು ಉರಿತಾಗಿ ಬೇಯದದು।
ಪುರಗಳ ನುಂಗಿ ಬೊಗಳುವದು[2] ಲೋಕದೊಳು।
ನರನಿದೇನಿಹುದು? ಸರ್ವಜ್ಞ ॥ ೧೮೬೦ ॥

---

1 A. ಎಮ್ಮೆಯ. 2 A. ಉಗುಳುವದು.

* ಉರಿಬಂದು ಬೇಲಿಯನು ಹರಿದು ಹೊಕ್ಕುದ ಕಂಡೆ ।
ಅರಿದಿದು ಬಗೆಗೆ ಕವಿಕುಲದ[1] ಶ್ರೇಷ್ಠರುಗ- ।
ಳರಿತಿದನು ಪೇಳಿ ಸರ್ವಜ್ಞ ॥ ೧೮೬೧ ॥

* ಕಾಲಿಲ್ಲದೇ ಹರಿಗು ತೋಳಿಲ್ಲದೇ ಹೊರುಗು ।
ನಾಲಿಗಿಲ್ಲದಲೆ ಉಲಿವುದು ಕವಿಕುಲದ ।
ಮೇಲುಗಳು ಪೇಳಿ ಸರ್ವಜ್ಞ ॥ ೧೮೬೨ ॥

* ಇರಿದರೆಯು ಏರಿಲ್ಲ ಹರಿದರೆಯು ಶೀಳಿಲ್ಲ ।
ತಿರಿಗೂಳಕೊಂಡು ಋಣವಿಲ್ಲ ಕವಿಗಳೆ ।
ಅರಿದರಿಂದ ಪೇಳಿ ಸರ್ವಜ್ಞ ॥ ೧೮೬೩ ॥

* ಆಡಿದರೆ ಆಡದದು ಆಡ[2]ಮರನೇರುವದು ।
ಕೂಡದೆ[3] ಕೊಂಕಿ ನಡೆಯುವದು ಕಡಿದರೆ ।
ಬಾಡದದು ಪೇಳಿ ಸರ್ವಜ್ಞ ॥ ೧೮೬೪ ॥

* ಕತ್ತಿಗ್ಗರಿಯುತ್ತಿಹುದು ಸುತ್ತಿಬರುತೇಳುವದು ।
ಕಿತ್ತು ಬಿಸಾಡಲು ನಡದದು ಕವಿಜನರೆ ।
ಅರ್ತಿಯಿಂ ಪೇಳಿ ಸರ್ವಜ್ಞ ॥ ೧೮೬೫ ॥

* ಕಚ್ಚಿದರೆ ಕಚ್ಚುವದು ಕಿಚ್ಚಲ್ಲ ಚೇಳಲ್ಲ ।
ಅಚ್ಚರಿಯಲ್ಲ ಅರಿದಲ್ಲ ಈ ಮಾತು ।
ನಿಶ್ಚಯಂ ಬಲ್ಲಿ! ಸರ್ವಜ್ಞ ॥ ೧೮೬೬ ॥

---

1 K. ಬರಿಯುದು ಬೇಗೆಯುರಿಯುವದು. 2 Gs. ಒಡಿ. 3 K. ಕೋಡದೆ (page 15.).

* ಹತ್ತುಸಾಸಿರ ಕಣ್ಣು ನೆತ್ತಿಲಾದರು ಬಾಲ ।
ಹುತ್ತಿನಹುಳವ ಹಿಡಿಯುವದು ಕವಿಜನರ ।
ವೊತ್ತವಿದ ಪೇಳಿ ಸರ್ವಜ್ಞ ॥ ೧೮೬೭ ॥

* ತನ್ನ ಸುತ್ತಲು ಮಣಿಯು ಬೆಣ್ಣೆಕುಡಿವಾಲುಗಳ ।
ತಿನ್ನದೆ ಹಿಡಿದು ತರುತಿಹುದು ಕವಿಗಳಿದ ।
ನನ್ನಿಯಿಂ ಪೇಳಿ ಸರ್ವಜ್ಞ ॥ ೧೮೬೮ ॥

* ಬಟ್ಟಲದ ಬಾಯಂತೆ ಹುಟ್ಟುವದು ಲೋಕದೊಳು ।
ಮುಟ್ಟದು ತನ್ನ ಹೆಂಡರನು ಕವಿಗಳಲಿ ।
ದಿಟ್ಟರಿದ ಪೇಳಿ ಸರ್ವಜ್ಞ ॥ ೧೮೬೯ ॥

* ಹಲ್ಲು ನಾಲಿಗೆಯಿಲ್ಲ ಸೊಲ್ಲು ಸೋಜಿಗವಲ್ಲ ।
ಕೊಲ್ಲದೆ ಮೃಗವ ಹಿಡಿವುದು ಲೋಕದೊಳ- ।
ಗೆಲ್ಲ ಠಾವಿನೊಳು ಸರ್ವಜ್ಞ ॥ ೧೮೭೦ ॥

* ಆಸನದಲುಂಬುವದು ಸೂಸುವದು ಬಾಯಲ್ಲಿ ।
ಬೇಸರದೆ ಹೊತ್ತು[1] ಕೊಲುವದು ಕವಿಗಳೊಳು ।
ಸಾಸಿಗಳು ಪೇಳಿ ಸರ್ವಜ್ಞ ॥ ೧೮೭೧ ॥

* ಹಲವು ಮಕ್ಕಳ ತನ್ದೆ ತಲೆಯಲ್ಲಿ ಜುಟ್ಟು[2]ವಗೆ ।
ಸಲೆ ಗಳಿಗೆ ಜಾವವರಿವನ ಹೆಣ್ಡತಿಗೆ ।
ಮೊಲೆಯಿಲ್ಲ ನೋಡು ! ಸರ್ವಜ್ಞ ॥ ೧೮೭೨ ॥

---

1 K. ಬೇಸರದ ಹೊತ್ತು = ಬೇಸರ ಉಂಟಾದ ಸಮಯ. 2 K. ಜುಟ್ಟು = ಶಿಖೆ.

* ಮಲ್ಲಿಗೆಗೆ ಹುಳಿಯುಕ್ಕು ಕಲ್ಲಿಗೇ ಗಂಟಕ್ಕು ।
ಹಲ್ಲಿಗೆ ನೊಣನು ಸವಿಯುಕ್ಕು ಕನ್ನಡದ ।
ಸೊಲ್ಲುಗಳ ನೋಡಿ! ಸರ್ವಜ್ಞ ‖ ೧೮೭೩ ‖

* ಮಣಿಯ ಮಾಡಿದನೊಬ್ಬ ಹೆಣೆದು ಕಟ್ಟಿದನೊಬ್ಬ ।
ಕುಣಿದಾಡಿ ಸತ್ತವನೊಬ್ಬ ಸಂತೆಯೊಳು ।
ಹೆಣನ ಮಾರಿದನು ಸರ್ವಜ್ಞ ‖ ೧೮೭೪

* ಎಂಟು ಬಳ್ಳದ ನಾಮ ಗಂಟಲಲಿ ಮುಳ್ಳುಂಟು ।
ಬಂಟರನು ಹಿಡಿದು ಬಡಿಸುವದು ಕವಿಗಳಲಿ ।
ಬಂಟರಿದ ಹೇಳಿ ಸರ್ವಜ್ಞ ‖ ೧೮೭೫ ‖

* ನೆತ್ತಿಯಲಿ ಉಂಬುವದು ಸುತ್ತಲೂ ಸುರಿಸುವದು ।
ಎತ್ತಿದರೆ ಎರಡು ಹೋಳಹುದು ಕವಿಗಳಿದ- ।
ಕುತ್ತರವ ಪೇಳಿ ಸರ್ವಜ ‖ ೧೮೭೬ ‖

* ಮುಂಡೆ ಬಾಯೊಳಗಿಕ್ಕು ಚಂಡಿಕೆಯು ಹೊರಗಿಕ್ಕು !
ಹೆಂಡರು ಕರೆಯೆ ಬರುತಿಕ್ಕು ಕಡೆಗೆ ಬಂ- ।
ದುಂಡೆಯುಂತಕ್ಕು ಸರ್ವಜ್ಞ ‖ ೧೮೭೭ ‖

* ಕೋಡಗವು ಕುದುರೆಯಲಿ ನೋಡನೋಡುತ ಹುಟ್ಟಿ ।
ಕಾಡಾನೆಗೆರಡು ಗರಿಮೂಡಿ ಗಗನದಿರಿ- ।
ದಾಡುವದ ಕಂಡೆ ಸರ್ವಜ್ಞ ‖ ೧೮೭೮ ‖

* ಧರೆಯುಲ್ಲಿ ಹುಟ್ಟಿ ಅಂ। ತರದಲ್ಲಿ ತಿರುಗುವದು ।
ಮೊರೆದೇರಿ ಕಿಡಿಯನುಗುಳುವದು ಕವಿಗಳೆ ।
ಅರಿದಿದನು ಪೇಳಿ ಸರ್ವಜ್ಞ ‖ ೧೮೭೯ ‖

* ಕಾಲುಂಟು ನಡೆಯದದು ಮೂಲೆಯಲಿ ಕಟ್ಟಿಹುದು ।
ಬಾಲಕರ ಸೊಮ್ಮು ಹೊರುವದು ಕವಿಗಳಲಿ ।
ಬಾಲರಿದ ಪೇಳಿ ಸರ್ವಜ್ಞ ॥ ೧೪೮೦ ॥

• ಅರಮನೆಯಲಿರುತಿಹುದು ಕರದಲ್ಲಿ ಬರುತಿಹುದು ।
ಕೊರೆದು ವಂಶಜರ ತಿನುತಿಹುದು ಕವಿಗಳಲಿ ।
ದೊರೆಗಳಿದ ಪೇಳಿ ಸರ್ವಜ್ಞ ॥ ೧೪೮೧ ॥

† ಪಾತಾಳಕಿಳಿಯುವದು ಶೀತಳವ ತರುತಿಹುದು ।
ಭೂತಳದ ಮೇಲೆ ಇರುತಿಹುದಿದುತಾನು ।
ಯೇತರದು ಹೇಳಿ ಸರ್ವಜ್ಞ ॥ ೧೪೮೨ ॥

† ಕರ್ಪೂರದಿ ಹುಟ್ಟಿಹುದು ಕರ್ಪೂರವು ತಾನಲ್ಲ ।
ಕರ್ಪೂರವಹುದು ಬಿಳಿಯಲ್ಲ ಈ ಮಾತು ।
ಕರ್ಪೂರದಲುಂಟು ! ಸರ್ವಜ್ಞ ॥ ೧೪೮೩ ॥

† ನಾಡೆಲಿಯು ಮೆಲ್ಲುವಳ ಕೂಡೆ ಜೆಳ್ಳಗೆ ಬಾಯಿ ।
ಊಡಿದ ಅರಿವೆ ಮೊಲೆಕಟ್ಟಿನಾಕೆಯನು ।
ಕಾಡಬೇಡೆಂದ ಸರ್ವಜ್ಞ ॥ ೧೪೮೪ ॥

* ಹತ್ತುತ್ತಲದು ಕೆಂಪು ಮತ್ತಾರುತಲಿಕಪ್ಪು ।
ಹೆತ್ತವ್ವನೊಡಲನುರಿಸುವದು ಕವಿಗಳಿದ- ।
ರರ್ಥವನು ಪೇಳಿ ಸರ್ವಜ್ಞ ॥ ೧೪೮೫ ॥

* ಎಂತುಂಬರಂಬಲಿಯ ಮುಂತೊಬ್ಬನೈದಾನೆ ।
ಅಂತಕನಲ್ಲ ಅಜನಲ್ಲ ಈ ತುತ್ತ- ।
ನೆಂತುಂಬರಯ್ಯ ? ಸರ್ವಜ್ಞ ॥ ೧೪೮೬ ॥

† ಅತ್ತಅಂಬಲಿಯೊಳಗೆ ಇತ್ತೊಬ್ಬನೈದಾನೆ ।
ಅತ್ತವನೋಡ! ಜವನಲ್ಲ, ಅಂಬಲಿಯ- ।
ನೆತ್ತುಂಬನಯ್ಯ ? ಸರ್ವಜ್ಞ ॥ ೧೮೮೭ ॥

† ಮುಂಗೈಯೊಳಾಡುವದು ಹಿಂಗುವದು ಹಿಗ್ಗುವದು ।
ಸಿಂಗಿಯಲಿ ಸೀಳಿ ಬಿಡುತಿಹುದು ಆ ಮಿಗದ ।
ಸಂಗವನು ನೋಡು ! ಸರ್ವಜ್ಞ ॥ ೧೮೮೮ ॥

† ಅಂಬಾಳೆ ನೆಲೆಯೆಂದು ಇಂಬರಿದು ತಾನಿಂದು ।
ಅಂಬೆಂದು ಬೆನ್ನಗರಿ ತೋರ್ಪುದಾ ಮಿಗವ- ।
ನಿಂಬರದು ಪೇಳಿ ಸರ್ವಜ್ಞ ॥ ೧೮೮೯ ॥

* ಕರಚರಣವದಕಿದ್ದು ಕರೆದಲ್ಲಿ ಬಾರದದು ।
ಕರದಲ್ಲಿ ಹುಟ್ಟಿ ಸ್ಥಿರವಾಗಿ ಇರುವದಿದ- ।
ರಿರವರಿದು ಪೇಳಿ ಸರ್ವಜ್ಞ ॥ ೧೮೯೦ ॥

† ಕೆನ್ನೆಯಲಿ ಕುಡಿವಾಲ ತನ್ನ ಸುತ್ತಲು ಮಣಿಯು ।
ತನ್ನ ದೇಹವನು ಹಣ್ಣುವದು ಕವಿಗಳಲಿ ।
ಚನ್ನರಿದ ಪೇಳಿ ಸರ್ವಜ್ಞ । ೧೮೯೧ ॥

* ಬಂದಿಹೆನು ನಾನೊಮ್ಮೆ ಬಂದು ಹೋಗುವೆನೊಮ್ಮೆ ।
ಬಂದೊಮ್ಮೆ ಹೋಗಿ ಬಾರೆನು ಕವಿಗಳಲಿ ।
ವಂದ್ಯರಿದ ಪೇಳಿ ಸರ್ವಜ್ಞ ॥ ೧೮೯೨ ॥

* ಮೂರುಕಾಲಲಿ ನಿಂತು ಮೀರಿ ಮರನುಂಬುವದು ।
ಆರಾರಿ ನೀರ ಕುಡಿವುದು ಕವಿಗಳಲಿ ।
ಧೀರರರಿದ ಪೇಳಿ ಸರ್ವಜ್ಞ ॥ ೧೮೯೩ ॥

* ಕಾಲುಂಟು ನಡೆಯದದು ಮೂಲೆಯಲಿ ಕಟ್ಟಿಹುದು ।
ಬಾಲಕರ ಸೊಮ್ಮು ಹೊರುವದು ಕವಿಗಳಲಿ ।
ಬಾಲರಿದ ಪೇಳಿ ಸರ್ವಜ್ಞ ॥ ೧೮೮೦ ॥

• ಅರಮನೆಯಲಿರುತಿಹುದು ಕರದಲ್ಲಿ ಬರುತಿಹುದು ।
ಕೊರೆದು ವಂಶಜರ ತಿನುತಿಹುದು ಕವಿಗಳಲಿ ।
ದೊರೆಗಳಿದ ಪೇಳಿ ಸರ್ವಜ್ಞ ॥ ೧೮೮೧ ॥

† ಪಾತಾಳಕಿಳಿಯುವದು ಶೀತಳವ ತರುತಿಹುದು ।
ಭೂತಳದ ಮೇಲೆ ಇರುತಿಹುದಿದುತಾನು ।
ಯೇತರದು ಹೇಳಿ ಸರ್ವಜ್ಞ ॥ ೧೮೮೨ ॥

† ಕರ್ಪುರದಿ ಹುಟ್ಟಿಹುದು ಕರ್ಪುರವು ತಾನಲ್ಲ ।
ಕರ್ಪುರವಹುದು ಬಿಳಿಯಲ್ಲ ಈ ಮಾತು ।
ಕರ್ಪುರದಲುಂಟು ! ಸರ್ವಜ್ಞ ॥ ೧೮೮೩ ॥

† ನಾಡೆಲಿಯು ಮೆಲ್ಲುವಳ ಕೂಡೆ ಬೆಳ್ಳಗೆ ಬಾಯಿ ।
ಊಡಿದ ಅರಿವೆ ಮೊಲೆಕಟ್ಟೆನಾಕೆಯನು ।
ಕಾಡಬೇಡೆಂದ ಸರ್ವಜ್ಞ ॥ ೧೮೮೪ ॥

* ಹತ್ತುತ್ತಲದು ಕೆಂಪು ಮತ್ತಾರುತಲೆಕಪ್ಪು ।
ಹೆತ್ತವ್ವನೊಡಲನುರಿಸುವದು ಕವಿಗಳಿದ- ।
ರರ್ಥವನು ಪೇಳಿ ಸರ್ವಜ್ಞ ॥ ೧೮೮೫ ॥

* ಎಂತುಂಬರಂಬಲಿಯ ಮುಂತೊಬ್ಬನೈದಾನೆ ।
ಅಂತಕನಲ್ಲ ಅಜನಲ್ಲ ಈ ತುತ್ತ- ।
ನೆಂತುಂಬರಯ್ಯ ? ಸರ್ವಜ್ಞ ॥ ೧೮೮೬ ॥

† ಅತ್ತಅಂಬಲಿಯೊಳಗೆ ಇತ್ತೊಬ್ಬನೈದಾನೆ ।
ಅತ್ತವನೋಡ! ಜವನಲ್ಲ, ಅಂಬಲಿಯ- ।
ನೆತ್ತುಂಬನಯ್ಯ? ಸರ್ವಜ್ಞ ॥ ೧೮೮೭ ॥

† ಮುಂಗೈಯೊಳಾಡುವದು ಹಿಂಗುವದು ಹಿಗ್ಗುವದು ।
ಸಿಂಗಿಯಲಿ ಸೀಳಿ ಬಿಡುತಿಹುದು ಆ ಮಿಗದ ।
ಸಂಗವನು ನೋಡು! ಸರ್ವಜ್ಞ ॥ ೧೮೮೮ ॥

† ಅಂಬಾಳೆ ನೆಲೆಯೆಂದು ಇಂಬರಿದು ತಾನಿಂದು ।
ಅಂಬೆಂದು ಬೆನ್ನಗರಿ ತೋರ್ಪುದಾ ಮಿಗವ- ।
ನಿಂಬರದು ಪೇಳಿ ಸರ್ವಜ್ಞ ॥ ೧೮೮೯ ॥

* ಕರಚರಣವದಕಿದ್ದು ಕರೆದಲ್ಲಿ ಬಾರದದು ।
ಕರದಲ್ಲಿ ಹುಟ್ಟಿ ಸ್ಥಿರವಾಗಿ ಇರುವದಿದ- ।
ರಿರವರಿದು ಪೇಳಿ ಸರ್ವಜ್ಞ ॥ ೧೮೯೦ ॥

† ಕೆನ್ನೆಯಲಿ ಕುಡಿವಾಲ ತನ್ನ ಸುತ್ತಲು ಮಣಿಯು ।
ತನ್ನ ದೇಹವನು ಹಣ್ಣುವದು ಕವಿಗಳಲಿ ।
ಚನ್ನರಿದ ಪೇಳಿ ಸರ್ವಜ್ಞ ॥ ೧೮೯೧ ॥

* ಬಂದಿಹೆನು ನಾನೊಮ್ಮೆ ಬಂದು ಹೋಗುವೆನೊಮ್ಮೆ ।
ಬಂದೊಮ್ಮೆ ಹೋಗಿ ಬಾರೆನು ಕವಿಗಳಲಿ ।
ವಂದ್ಯರಿದ ಪೇಳಿ ಸರ್ವಜ್ಞ ॥ ೧೮೯೨ ॥

* ಮೂರುಕಾಲಲಿ ನಿಂತು ಮೀರಿ ಮರನುಂಬುವದು ।
ಆರಾರಿ ನೀರ ಕುಡಿವುದು ಕವಿಗಳಲಿ ।
ಧೀರರಿದ ಪೇಳಿ ಸರ್ವಜ್ಞ ॥ ೧೮೯೩ ॥

† ಅರಿವ ಕಲ್ಲಿನಮೇಲೆ ಮರವು ಹುಟ್ಟಿದು ಕಂಡೆ।
ಮರದ ಮೇಲೆರಡು ಕರಕಂಡೆ ಮಾಸನೆಯು।
ಬರುತಿಹುದ ಕಂಡೆ ಸರ್ವಜ್ಞ || ೧೪೯೪ ||

* ಒಣಗಿದಾ ಮರ ಚಿಗಿತು ಬಿಣಿಲು ಬಿಡುವದು ಕಂಡೆ।
ತಣಿಗೆಯ ಸ್ಥಾನಕದು ಬಹುದು; ಕವಿಗಳಲಿ।
ಗುಣಯುತರು ಪೇಳಿ ಸರ್ವಜ್ಞ || ೧೪೯೫ ||

† ಅಟ ರಾವಾಡಿಗನ ಸುಟ್ಟಿಹರು ಕುಂಟಿಗೆಯು।
ಹುಟ್ಟಿಯು ಮೂಗ ಹರಿದರು ಮೂವರು ಭವ-।
ಗೆಟ್ಟು ಕೂಡಿಹರು ಸರ್ವಜ್ಞ || ೧೪೯೬ ||

* ಇನ್ನು ಬಲ್ಲರೆ ಕಾಯಿ ಮುನ್ನೂರ ಅರವತ್ತು।
ಹಣ್ಣು ಹನ್ನೆರಡು, ಗೊನೆ ಮೂರು, ತೊಟ್ಟೊಂದು।
ಚನ್ನಾಗಿ ಹೇಳಿ ಸರ್ವಜ್ಞ || ೧೪೯೭ ||

* ಕಡೆಗಪ್ಪು ನಡುಬಿಳಿದು ಉಡುವ ವಸ್ತ್ರವದಲ್ಲ।
ಬಿಡದೆ ನೀರುಂಟು ಮಡುವಲ್ಲ ಕವಿಗಳೀ।
ಬೆಡಗು ಪೇಳುವದು ಸರ್ವಜ್ಞ || ೧೪೯೮ ||

‖ ಕರವುಂಟು ಕಾಲಿಲ್ಲ ಶಿರಹರಿದ ಮುಂಡವೂ।
ನರದಿ ಬಿಗಿದಾರು ತುಂಡುದಕೆ ಕವಿಗಳೆ।
ಅರಿದಿದನು ಪೇಳಿ ಸರ್ವಜ || ೧೪೯೯ ||

‖ ಕೂತು ಮಾತಾಡುತ್ತ ಯಾತವನು ಹೊಡೆದಿಹರೆ।
ಕಾತಕಾಯಿಗಳು ಹೆಡಗೆಯಲಿ ಮಿರುಗುವ।
ಸೌತೆಯುಂತಿಹುದು ಸರ್ವಜ್ಞ || ೧೫೦೦ ||

† ಹತ್ತುಸಾವಿರಕಣ್ಣು ಕತ್ತಿನಲಿ ಕಿರಿಬಾಲ ।
ತುತ್ತನೆ ಹಿಡಿದು ತರುತಿಹುದು ಕವಿಗಳಿದ- ।
ರರ್ಥವನುಪೇಳಿ ಸರ್ವಜ್ಞ ॥ ೧೦೯೧ ॥

* ಆರವತ್ತು ಸಿಂಹ ಒಂ। ದಿರುವೆ ಕಚ್ಚಿದ ಕಂಡೆ।
ಕೆರೆಯು ಕೋಡೊಡೆದು ಧರೆಬೆಂದು ಕೈಲಾಸ।
ಉರಿವುದನು ಕಂಡೆ ಸರ್ವಜ್ಞ ॥ ೧೯೦೨ ॥

† ನಲ್ಲ ದೇವಾ ಸಾಲಿ ಹುಲ್ಲಿಗೊಂಬತ್ತು ಮುಖ।
ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದ- ।
ನಿಲ್ಲಿಯೇ ಕಂಡೆ ಸರ್ವಜ್ಞ ॥ ೧೯೦೩ ॥

† ತೆಂಗು ಬಟ್ಟಲು ನುಂಗಿ ಮುಂಗಲಿಯನಿಲಿನುಂಗಿ ।
ಗಂಗಾಹಿಮಕರ ಹರನುಂಗಿ ಜಗವು ಬೆಳ- ।
ದಿಂಗಳಂತಿಕ್ಕು ಸರ್ವಜ್ಞ ॥ ೧೯೦೪ ॥

† ಜಲದ ಒಳಗಣ ಮೀನು ಹೊಳೆವ ಕೊಂಬಿನಮೇಲೆ ।
ಬೆಳೆದ ಗಿರಿಕಂಡುಕೊಳುತಿರ್ಕು ಕನ್ನಡದ ।
ಒಳಗನಾರ್ಬಲ್ಲ? ಸರ್ವಜ್ಞ ॥ ೧೯೦೫ ॥

† ಚಟುಲಲೋಚನೆಯಂತೆ ಕುಟಿಲ ಕುಂತಳೆಯಂತೆ ।
ವಿಟಹೆಣ್ಣಿನಂತೆ ಹಗಲಲ್ಲಿ, ಇರುಳು ಸಂ- ।
ಗಟಿನ ಕಾಯಂತೆ ಸರ್ವಜ್ಞ ॥ ೧೯೦೬ ॥

† ಸಣ್ಣ, ದೊಡ್ಡವನಲ್ಲ; ಅಣ್ಣನರಿವುದು ಅಲ್ಲ; ।
ಹಣ್ಣಿಕ್ಕು ಲೋಕದೊಳಗೆಲ್ಲ ಇದನು ಬ- ।
ಲ್ಲಣ್ಣಗಳು ಹೇಳಿ ಸರ್ವಜ್ಞ ॥ ೧೯೦೭ ॥

* ಅಡವಿಯಲಿ ಹುಟ್ಟಿಹುದು ಗಿಡಮರನು ಆಗಿಹುದು ।
ಕಡಿದರೆ ಕಂಪಕೊಡುತಿಹುದು ಇದನೊಡೆದು ।
ತಡೆಯದೇ ಪೇಳಿ ಸರ್ವಜ್ಞ ॥ ೧೯೦೮ ॥

† ಗಣಿಕೆಯಾ ಮೂಗಿನಲಿ ಮೊಣಕಾಲು ಹುಟ್ಟಿಹುದು ।
ತೃಣನುಂಡು ನೀರನುಣನೊಲ್ಲದಂತದಕೆ ।
ಎಣಿಕೆಯಿಲ್ಲೆಂದ ಸರ್ವಜ್ಞ ॥ ೧೯೦೯ ॥

† ಆಕೆಯನು ತಾ ಹೋಗಿ ಈಕೆ ಬಾರದ ಕಂಡು ।
ಆಕೆ ಮರೆಸಾರಿ ನೆರೆದು ತಾಮರಳಿ ಮು- ।
ತ್ತಾಕೆಯನೆ ತಂದ ಸರ್ವಜ್ಞ ॥ ೧೯೧೦ ॥

† ಸೃಷ್ಟಿಯನು ಆಳುವಗೆ ಹುಟ್ಟಿದನು ಮಗನೊಬ್ಬ ।
ಅಟ್ಟೆಗಳು ಬೇರೆ ತಲೆಬೇರೆ ಅವನಿಗೆ ।
ಕೊಟ್ಟವರ ಬೇರೆ ಸರ್ವಜ್ಞ ॥ ೧೯೧೧ ॥

† ಬೆಟ್ಟದಂತಾನೆಯು ಬಟ್ಟೆಯಲಿ ಬರೆಕಂಡು ।
ಕಟ್ಟಿರ್ದ ಕಣ್ಣಿ ಹರಿದಿರ್ದು ಕಂಚಿಯು ।
ಮುಟ್ಟಿದನು ಕಂಡೆ ಸರ್ವಜ್ಞ ॥ ೧೯೧೨ ॥

† ಎತ್ತು ಗಾಣವ ನುಂಗು ಕತ್ತರಿಯು ಕಣಿ ನುಂಗು ।
ಸುತ್ತಿಹೊಡೆವವನ ನೊಗನುಂಗು ಈ ಮಾತು ।
ಮಿಥ್ಯವೇ? ಪೇಳಿ! ಸರ್ವಜ್ಞ ॥ ೧೯೧೩ ॥

† ನೂರ ಮೂವತ್ತುಗುರಿ ಬೇರೆ ಹನ್ನೊಂದು ತಲೆ ।
ಊರಿದವೆರಡು ಸಮಪಾದ ಮತ್ತೆರಡ- ।
ನೂರದೇಕೆಂದ ಸರ್ವಜ್ಞ ॥ ೧೯೧೪ ॥

† ಕಾಯುವರು ಹಲಬರೂ ಕಾವ ಗೊಲ್ಲರ ಕಾಣೆ।
ಮೇಯುವದು ಮರನ ಸುಣ್ಣಗೆ ಕವಿ ಎಂಬ।
ಗಾವಿಲರು ಪೇಳಿ ಸರ್ವಜ್ಞ ॥ ೯೧೫ ॥

† ಅಂತರದಲಡಿ ನಾಲ್ಕು ಸೊಂತವಿಟ್ಟವು ನಾಲ್ಕು।
ಮುಂತೆರಡು ಕೋಡು ಕಿವಿಯಾರು ಕಣ್ಣೇಳು।
ಎಂತ ಮೃಗವಯ್ಯ ? ಸರ್ವಜ್ಞ ॥ ೯೧೬ ॥

† ಏರಿಯಾ ಕೆಳಗಿಲ್ಲ ಎಲೆಯುದೋಟದಲಿಲ್ಲ।
ದಾರಿಯಲಿಲ್ಲ ಬಿಸಿಲಿಲ್ಲ ಈ ಮಾತು।
ಯಾರಿಗರಿದಲ್ಲ! ಸರ್ವಜ್ಞ ॥ ೯೧೭ ॥

† ಕಾಲು ನಾಲ್ಕುಂಟದಕೆ ಹೇಳುವರೆ ಮೃಗವಲ್ಲ।
ಮೇಲೆ ತಲೆ ಮೂರು ಅಜನಲ್ಲ ಕವಿಗಳಲಿ।
ಬಾಲಕರು ಹೇಳಿ ಸರ್ವಜ್ಞ ॥ ೯೧೮ ॥

॥ ಹರೆಯಲ್ಲಿ ಹಸುರಾಗಿ ನೆರೆಯಲ್ಲಿ ಕಿಸುವಾಗಿ।
ಸುರರಿಗೆ ಸಿಗದ ಅಮೃತ ನರರಿಂಗೆ।
ಅರಿದಿದನು ಪೇಳಿ ಸರ್ವಜ್ಞ ॥ ೯೧೯ ॥

॥ ಕಾಲಿಲ್ಲ ಕೊಂಬುಂಟು ಬಾಲದಾ ಪಕ್ಷಿಯುದು।
ಮೇಲೆ ಹಾರುವದು ಹದ್ದಲ್ಲ, ಕವಿಗಳಲಿ।
ಬಾಲರಿದ ಪೇಳಿ ಸರ್ವಜ್ಞ ॥ ೯೨೦ ॥

† ಒರೆಯುಂಟು ಒರೆಯುದದು ಬರೆತರೇ ಒರೆಯುವದು।
ಕೆರೆಬಾವಿಯೊರತೆ ತಾನಲ್ಲ ಕವಿಜನಗ-।
ಳರಿತಿದನು ಪೇಳಿ ಸರ್ವಜ್ಞ ॥ ೯೨೧ ॥

† ಸಂದಮೇಲ್ನುಡುತಿಹುದು ಬೆಂದಮೇಲುರಿದಿಹುದು ।
ಬಂಧುಗಳನೆದ್ದು ಬಡಿಯುವದು ಕವಿಗಳಿದ- ।
ನಂದದಲಿ ಪೇಳಿ ಸರ್ವಜ್ಞ ॥ ೧೯೩೩ ॥

† ಕಣ್ಣುಂಟು ಕಾಣದದು ಕಣ್ತೆರೆದು ನೋಡುವದು ।
ಮಣ್ಣಿನಲಿ ಹುಟ್ಟಿ ಬೆಳಗುವದು ಇದನು ಬ- ।
ಲ್ಲಣ್ಣಗಳು ಪೇಳಿ ಸರ್ವಜ್ಞ ॥ ೧೯೩೪ ॥

† ಮಾನು ಮುಟ್ಟದ ವಾರಿ ದಾನವರ ವೈರಿತಾ ।
ಮಾನವರಿಗಾಗಿ ಹಿಡಿದಿಹನ- ಕವಿಗಳಲಿ ।
ಮಾನಿಸರು ಪೇಳಿ ಸರ್ವಜ್ಞ ॥ ೧೯೩೫ ॥

* ಹಲ್ಲುಂಟು ಮೃಗವಲ್ಲ ಸೊಲ್ಲು ಸೋಜಿಗವಲ್ಲ ।
ಕೊಲ್ಲುವದು ತನ್ನ ನಂಬಿದರ ಇದನರಿದು ।
ಬಲ್ಲವರು ಪೇಳಿ ಸರ್ವಜ್ಞ ॥ ೧೯೩೬ ॥

† ಗೂಡನ್ನು ಕಡಿದಿಹರೆ ಹಿಡೆಲ್ಲ ಮುಡಿಕೆಗಳು ।
ಹಿಡಬಡಿದಿಹರೆ ಮುಡಿಕೆಯೊಂದರ ಮೇಲೆ ।
ಅ ೀಕಿರುವದೇನು ? ಸರ್ವಜ್ಞ ॥ ೧೯೩೭ ॥

† ಅರಸು ಬೆಟ್ಟವನು ಸ । ಪ್ಪರಿಸಿ ಬೆಳಸಿಗೆ ತುಂಬಿ ।
ಉರಿವ ಕಿಚ್ಚನು ತಾಸಿರಿಸಿ ಪರಿವಾರ- ।
ಕರಸುವದ ಕಂಡೆ ಸರ್ವಜ್ಞ ॥ ೧೯೩೮ ॥

† ಪ್ರಥಮದಲಿ ಹುಲಿಯಂತೆ ದ್ವಿತಿಯದಲಿ ಇಲಿಯಂತೆ ।
ತೃತಿಯದಲಿ ತಾನು ಕಪಿಯಂತೆ ಕವಿಗಳಲಿ ।
ಮತಿವಂತರ್ಪೇಳಿ ಸರ್ವಜ್ಞ ॥ ೧೯೩೯ ॥

ಸಮಾಪ್ತ.

# ವಿಶೇಷ ಟಿಪ್ಪಣಿ

## ( ಶಬ್ದಾರ್ಥ ಟೀಕಾ ತಾತ್ಪರ್ಯ ಸಹಿತ )

ತಾ. = ತಾತ್ಪರ್ಯ. ಸಂ = ಸಂಸ್ಕೃತ. ವೀ. ಶೈ. = ವೀರಶೈವ ಸಿದ್ಧಾಂತ.

ಸೂ. = ವಿಶೇಷ ಸೂಚನೆ.

---

೧. ಸೂಡು=ಮುಡಿ; ತಲೆಯಲ್ಲಿ ಧರಿಸು. ಅನು=ನಾನು. ತಾ|| ನಂದಿ ವಾಹನನಾದಂಥ ಚಂದ್ರನನ್ನು ತಲೆಯಲ್ಲಿ ಧರಿಸಿದಂಥ ಶಿವನ ಮಗನಾದ ವಿಘ್ನೇಶ್ವರನನ್ನು ಪ್ರಾರ್ಥಿಸಿ ಸಂತೋಷದಿಂದ ಈ ಮುಂದಿನ ಪದ್ಯಗಳನ್ನು ರಚಿಸಿದೆನು. ಸೂ|| ಗ್ರಂಥಾರಂಭದಲ್ಲಿ ಗಣೇಶ್ವರ ಸ್ತುತಿಯನ್ನಿಡುವದು ರೂಢಿಯಲ್ಲಿದ್ದಾಗ್ಯೂ ಇಲ್ಲಿ ಅವನ ಪ್ರಾರ್ಥನೆಯನ್ನು ಶಿವನಿಗೆ ಸಂಬಂಧಿಸಿ ಮಾಡಿರುವನು. ಈ ಪದ್ಯದಲ್ಲಿ ಸೂಡಿದನ, ಏರಿದನ ಎಂಬಿವುಗಳನ್ನು ಸೂಡಿದವನ ಏರಿದವನ ಎಂಬದಾಗಿ ತಿಳಿಯತಕ್ಕದ್ದು. ಕೃನ್ನಾಮ ಕೃದ್ವಾಚಿಕಗಳಲ್ಲಿ ವಕಾರವನ್ನು ಲೋಪಿಸುವದು ಕಾವ್ಯಗಳಲ್ಲಿ ರೂಢಿಯಾಗಿದ್ದರೂ ಈ ಪದ್ಧತಿಯು ಸರ್ವಜ್ಞನಲ್ಲಿ ವಿಶೇಷವಾಗಿ ಕಂಡುಬರುತ್ತದೆ.[1] ಕೈಬರಹದ ಕೆಲವು ಪ್ರತಿಗಳು "ಮುನ್ನಕೈಲಾಸದಲಿ"ಎಂಬ ಮುಂದಿನ ಪದ್ಯದಿಂದ ಪ್ರಾರಂಭವಾಗುವದರಿಂದ ಇದು ಕವಿಕೃತವೋ ಅನ್ಯಕೃತವೋ ಎಂದು ಸಂದೇಹವುಂಟಾಗುತ್ತದೆ.

೨. ಪನ್ನಗ+ಧರ = ಸರ್ಪವನ್ನು+ಧರಿಸಿದವ=ಶಿವ. ಮನ್ನಿಸು=ತಿಳಿ; ಹೊಗಳು. ಸೂ|| ಪುಷ್ಪದತ್ತ ಇಲ್ಲವೆ ಪುಷ್ಪದಂತ (ಪುಷ್ಪದಂತೆ ಶುಭ್ರವಾದ ಹಲ್ಲುಳ್ಳವನು) ಎಂಬವನು ಶಿವನ ಗಣಗಳಲ್ಲೊಬ್ಬನು. ಜೈನ ತೀರ್ಥಂಕರರಲ್ಲಿಯೂ ಪುಷ್ಪದಂತನೆಂಬವನೊಬ್ಬನಿರುವನು. ಇವನಿಗೆ ಹೀಗೆ ಹೆಸರು ಬಂದಿರುವದಕ್ಕೆ ಕಾರಣವು 'ಕಥಾಸರಿತ್ಸಾಗರ' ದಲ್ಲಿ ಸಾಂಗವಾಗಿ ಹೇಳಿದೆ.[2]

---

(1) H. Narayanrao ಕಥಾನಕ ಸರಿನೋಡಿ (2) ನೋಡಿ ತರಂಗ ೭.

೩. ಅಂದಿನ = ಕೈಲಾಸದಲ್ಲಿದ್ದ. ಬಂದ=ಹುಟ್ಟಿದ. ವರರುಚಿ=ಕವಿಯೂ ವೈಯಾಕರಣಿಯೂ ಆದವನ ಹೆಸರು. ಸಾಲೆಸರ್ವಜ್ಞ = ಕುಂಬಾರಸಾಲೆಯಲ್ಲಿ ಬಾಲ್ಯವನ್ನು ಕಳೆದದ್ದರಿಂದ ಬಂದ ಹೆಸರು.[1] (ಸಾಲೆಯಲ್ಲಿ ಈ ಕೆಸರಿನಿಂದ ಕರೆಯಲ್ಪಟ್ಟನೆಂದು ಕಿಟೆಲ್ ಪಂಡಿತರು[2]) ನಿಂದವನು=ಪ್ರಸಿದ್ಧಿಗೆ ಬಂದವನು. ಸೂ॥ ಪುಷ್ಪದಂತ ಇಲ್ಲವೆ ಪುಷ್ಪದತ್ತನೆಂಬವನು ಮಾನವದೇಹವನ್ನಾಂತು ಹುಟ್ಟಿ ವರರುಚಿ ಎಂದು ಹೆಸರ್ಗೊಂಡು ಕಾತ್ಯಾಯನನೆಂದು ಪ್ರಸಿದ್ಧಿಯನ್ನು ಪಡೆದನು. ಇವನು ಒಮ್ಮೆ ಓದಿದರೆ ಸಾಕು (ಸರ್ವಜ್ಞನಂತೆ) ಇಡೀ ಗ್ರಂಥವನ್ನು ನೆನಪಿನಿಂದ ಒಪ್ಪಿಸಿಬಿಡುತ್ತಿದ್ದನೆಂದು ಆ ಕಥೆಯಲ್ಲಿ ಕಾಣುತ್ತದೆ. ಇಲ್ಲಿ ಸರ್ವಜ್ಞನನ್ನು ಕುರಿತು ಎರಡು ಪೂರ್ವದ ಜನ್ಮಗಳು ಹೇಳಲ್ಪಟ್ಟಂತೆ ತೋರುತ್ತದೆ.[3]

೪. ಅರಪಲು=ಹೇಳಲು. ಕಾಶಿಯ ಮುಕ್ಕಣ್ಣ=ಕಾಶಿಯಲ್ಲಿ ಪ್ರಸಿದ್ಧವಾದ ವಿಶ್ವನಾಥ ಇಲ್ಲವೆ ವಿಶ್ವೇಶ್ವರನೆಂಬ ಶಿವನ ಮೂರ್ತಿ. ಸೂ॥ ಕಾಶಿಯಲ್ಲಿ ಈ ಶಿವಾಲಯವು ಈಗ್ಯೂ ಪ್ರಸಿದ್ಧವಿದೆ

೫. ಈಶ=ಶಿವ. ಕಾಶಿಯಅಭವ= ಕಾಶಿಯ ಶಿವ ಅಂದರೆ ವಿಶ್ವೇಶ್ವರ ಮೂರ್ತಿ. ಸೂಸಿತು + ಎಂತೆನಲು= ಹೇಗೆ ಪ್ರಕಟವಾಯಿತೆಂದರೆ. ಸೂ॥ ಮಾಸೂರು, ಧಾರವಾಡ ಜಿಲ್ಲೆಗೆ ಸೇರಿದ ಹಿರೆಕೆರೂರ ಇಲ್ಲವೆ ಕೋಡ ತಾಲೂಕಿನಲ್ಲಿರುವದೊಂದು ಗ್ರಾಮವು. ಇದು ಹಿರೆಕೆರೂರಿನ ಆಗ್ನೆಯಕ್ಕೆ ೭ ಮೈಲಿನ ಮೇಲಿರುವದು. ಈ ಊರ ನೈರುತ್ಯಕ್ಕೆ ೩ ಮೈಲಿನ ಮೇಲೆ ವಿಜಯನಗರದ ಅರಸರು ಕಟ್ಟಿಸಿದ ಒಂದು ದೊಡ್ಡ ಕೆರೆ ಇದೆ. ಇದಕ್ಕೆ ಮದಗ ಮಾಸೂರು ಕೆರೆ ಎಂದೆನ್ನುವರು. ಇದು ಮುಂಬಯಿ ಇಲಾಖೆಯಲ್ಲಿ ಎಲ್ಲಕ್ಕೂ ದೊಡ್ಡ ಕೆರೆಯು.

೬. ಮಾಳವ್ವೆ = ಮಾಳಿ ಎಂಬ ಕುಂಬಾರ ಹೆಂಗಸು. ಇದಕ್ಕೆ ರೆವರೆಂಡ ರೈಸ್,[4] ಕಿಟೆಲ್,[5] ನಾರಾಯಣ ಶಾಸ್ತ್ರಿ[6] ಮೊದಲಾದವರು ಮಾಳವ ಜಾತಿ ಇಲ್ಲವೆ ಮಾಳವ ದೇಶದ ಹೆಂಗಸೆಂದೂ ಬೇರೆ ಕೆಲವರು ಅಗಸರ ಮಾಳಿ,

---

(1) ಸರಿನೋಡಿ ಪದ್ಯ ೮. (2) Kittle's Kavyamale page 5. (3) 'ಕಥಾಸರಿತ್ಸಾಗರ' ತರಂಗ ೧-೨. (4) E. P. Rice's Kan. lit. page 18. (5) Kittle's Kavyamale page 5. (6) N. ಸಟೀಕ ಪುಟ ೩.

ತೋಟದ ಮಾಳಿ ಎಂದು ಜನರು ರೂಢಿಯಲ್ಲಿ ಅನ್ನುವಂತೆ ಕುಂಬಾರ ಮಾಳಿ ಎಂಬದು ಅನ್ವರ್ಥಕನಾಮವಾಗಿರುವದೆಂದೂ ಹೇಳುವರು. ಆದರೆ ಈ ಉಭಯ ಅಭಿಪ್ರಾಯಗಳಿಗೆ ಗ್ರಂಥದಲ್ಲಿ ಯಾವ ಆಧಾರವೂ ಇರುವದಿಲ್ಲ. ತಾ॥ ಬಸವರಸನು ನುಂಗಿದ ಆ ಶಿವಪ್ರಸಾದವು ಮುಂದೆ ವಿಧವೆಯಾದ ಕುಂಬಾರ ಮಾಳಿಯ ಹೊಟ್ಟೆಯಲ್ಲಿ ಬರುವೆನೆಂದು ಹೇಳಿದಂತಾಯಿತು.

೭. ತಡೆಬಿಡಲು+ಆಯ್ತು=(ಕೂಟಕ್ಕೆ) ಯಾವ ಅಭ್ಯಂತರವಿಲ್ಲದಂತೆ+ಆಯಿತು.

೮. ಅಂಬಲೂರು = ಈಗಿನ ಅಬಲೂರು. ಇದು ಹಿರೆಕೆರೂರಿನ ಉತ್ತರಕ್ಕೆ ನಾಲ್ಕು ಮೈಲಿನಮೇಲೆ ಇರುವದೊಂದು ಗ್ರಾಮವು. ಸೂ॥ ಇಲ್ಲಿ ಪ್ರಾಚೀನ ಗುಡಿಗಳಿದ್ದು ಇದು ಜೈನ ಲಿಂಗಾಯತ ಧರ್ಮಗಳಿಗಾಗಿ ಪೂರ್ವದಿಂದ ಹೆಸರಾಗಿರುವದು. ಇಂಬಿನ=ಮೈಕೈಯಿಂದ ದುಂಡಗಾದ; ಪುಷ್ಟವಾದ. ಕಳೆಮಾಳಿ = ರೂಪವತಿಯಾದ ಮಾಳಿ ಎಂಬ ಹೆಂಗಸು. ಇಂಬಿಡು=ಪಾಯ ಹಾಕು; ಜನ್ಮಕ್ಕೆ ಮೊದಲು ಮಾಡು; ಗರ್ಭಾಧಾನಮಾಡು. ಇಂಬಿನ ಕಳೆಮಾಳಿ ಎಂಬದಕ್ಕೆ ಚಿತ್ರಗಳನ್ನು ಬಿಡಿಸಿದ ವಿಸ್ತಾರವಾದ ಮೇಲ್ಮಾಳಿಗೆಯು ಮನೆ (ಚಂದ್ರಶಾಲೆ)ಯೆಂದು ಕೆಲವರು.

೧೦. ಕಾಳಿ=ಸೂಲಗಿತ್ತಿ; ನೆರೆಮನೆಯ ಹೆಂಗಸು ಶಿವನಶಕ್ತಿಯಾದ ಕಾಳಿ ಎಂದು ನಾರಾಯಣ ಶಾಸ್ತ್ರಿಗಳು.[1] ಬಿತ್ತರಿಸು=(ಸಂ) ವಿಸ್ತರಿಸು. ಶ್ವಾಸೋಚ್ಛ್ವಾಸವಾಡುವಂತೆ ಬಿಚ್ಚಿಡು.

೧೧. ಈ ಪದ್ಯವು ಅಶುದ್ಧವಿದೆ. ಅರ್ಥವೂ ಕಷ್ಟವಾಗಿದೆ. (ಸರಿನೋಡಿ ಪರಿಶಿಷ್ಟ ೧) ಒಂದುವೇಳೆ ಹೀಗೆ ಅರ್ಥಮಾಡಬಹುದು-ಬಾಲ್ಯದಲ್ಲಿಯೇ ನನ್ನ ಬುದ್ಧಿಕಳೆಯನ್ನು ತಿಳಿದು ನನ್ನ ಬೆಳವಣಿಗೆಯನ್ನು ಕುರಿತು ಆಶ್ಚರ್ಯಪಟ್ಟವರು ಇಂಥಾ ಜಾಣಪುತ್ರನು ಕುಂಬಾರಾಕೆಯ ಹೊಟ್ಟೆಯಲ್ಲಿ ಹುಟ್ಟತಕ್ಕದ್ದಲ್ಲವೆಂದು ಹೇಳುವವರಾದರು.

೧೨. ಖಂಡ + ಪರಶು = ತುಂಡರಿಸುವ+ಕೊಡಲಿ ( ಯನ್ನು ಹಿಡಿದವ ) =ಶಿವ ಟೀ॥ ಹತ್ತು ತಿಂಗಳು ಹೊತ್ತು ಹಡೆದ ಕಾರಣದಿಂದ ಮಾತ್ರವೇ ಗಂಡುಕೂಸು ತನ್ನದೆಂದು ತಿಳಿದ ಆ ಲಜ್ಜಾಹೀನ ಮಾಳಿಯು ನನ್ನನ್ನು ಮಗನೆಂದು ಕರೆಯುವಳು. ಆದರೆ ನಾನು......

---

(1). N. ಸಟೀಕ ಪುಟ. ೪.

೧೩. ಮೊಳ=ಕುಂಬಾರನಮೊಳಿಯು ಲ್ಲಿ ಮೋಹಿತನಾದ್ದರಿಂದ, ಸರ್ವಜ್ಞನು ತಂದೆಯಾದ ಬಸವರಸನಿಗೆ ಇಟ್ಟ ಹಾಸ್ಯದ ಹೆಸರು. ಕೂಳಿಂದ (೧) ಕೂಳುಹಾಕಿ ಪೋಷಿಸಿದ ನಿಮಿತ್ತ (೨) ಕೂಳುತಿಂದು ಸೊಕ್ಕಿದ್ದರಿಂದ ಮೇಳ ದವನು=ಗಣಗಳಲ್ಲೊಬ್ಬನು.

೧೫. ಟೀ|| ಮಾಳಿಯನ್ನು ಕುರಿತು ನನ್ನಬಾಯಿಂದ ತಾ, ಎಂಬ ಶಬ್ದವಲ್ಲದೆ ತಾಯಿ ಎಂಬ ಶಬ್ದವು ಬರಲಾರದು. ಪರಸ್ತ್ರೀಯರೆಲ್ಲರನ್ನು ತಾಯಿಗಳೆಂದು ಕರೆಯುವಲ್ಲಿ ಒಂದುವೇಳೆ ಈಕೆಗೂ ತಾಯಿಯೆಂದು ಹೇಳುವೆನಲ್ಲದೆ ನಿಜ ವಾದ ತಾಯಿಯೆಂದು ನಾನು ಎಂದಿ ಗೂ ಕರೆಯೆನು. ಸರ್ವಜ್ಞನು ಶಿವನ ವರದಿಂದ ಹುಟ್ಟಿದ್ದರಿಂದ ಎಲ್ಲರಿಗೂ ತಾಯಿಯಾದ ಪಾರ್ವತಿಯೇ ಅವನ ತಾಯಿಯೆಂದು ನಾರಾಯಣ ಶಾಸ್ತ್ರಿ ಗಳು.[1]

೧೬. ಕುಹಕತನ = ದುಷ್ಟಬುದ್ಧಿ. ಏಕವಾಗಿ ಹನು=ಸರಿನೋಡಿಪದ್ಯ (೩೨; ೪೩೬.)

೧೭. ಆರುಬಣ್ಣ = ಹುಟ್ಟುವದು, ಇರುವದು, ಬೆಳೆಯುವದು, ಬದಲಾ ಗುವದು, ಬಡವಾಗುವದು, ಹಾಳಾಗು ವದು ಮುಂತಾದ ಷಡ್ವಿಕಾರಗಳು ವೀ. ಶೈ. ಆಚಾರಾದಿ ಷಡ್ಲಿಂಗಗಳು. ಇಲ್ಲವೆ ಪೀತ, ಶ್ವೇತ, ಮಾಂಜಿಷ್ಠಾದಿ ಆರು ಬಣ್ಣಗಳು. ಮೂರು=ಸತ್ವ, ರಜಸ್ಸು, ತಮಸ್ಸು, ವೀ. ಶೈ. ಶುದ್ಧ, ಸಿದ್ಧ, ಪ್ರಸಿದ್ಧವೆಂಬ ಪ್ರಸಾದತ್ರಯುಗಳು. ರುಚಿದೋರಿ ಮರಸಿ=ಜೀವಭಾವವನ್ನು ಮರಸಿ. ಮೀರಿ ಬೆಳೆಯಲಿ ತನುವು= ಇಂಥ ಶರೀರವು ಉತ್ತರೋತ್ತರವಾಗಿ ವರ್ಧಮಾನವಾಗಲಿ! ತಾ|| ಸರ್ವ ಜ್ಞನು ಷಡ್ವಿಕಾರಗಳಿಗೆ ಒಳಪಟ್ಟು ತ್ರಿಗುಣಗಳಿಂದ ಕೂಡಿದ ಶರೀರವುಳ್ಳ ವನಾಗಿದ್ದರೂ ಸಂಸಾರಿಯಂತೆ ವಿಷ ಯಾಸಕ್ತನಾಗಿರದೆ ವಿರಕ್ತನಾಗಿದ್ದನೆಂ ದು ತಾತ್ಪರ್ಯ.

೧೮. ವುಳಗಿರ್ಪಂತೆ=ಕುಲದಲ್ಲಿದ್ದ ವರಂತೆ. (ಕೆಳಗಿನ ಪಾಠ ನೋಡಿ).

೧೯. ಹೊಲೆಬಲಿದ = ಮುಟ್ಟುತ ಡೆದು ಬೆಳೆದ.

೨೧. ಮಾಸ=ಹುದುಗದ ಮೇಲಿ ರುವ ಹೊಲಸು; ಅಚ್ಛಾಧನ. ಆಸನ= (ತಾಯಿಯ) ಜನನೇಂದ್ರಿಯ.

೨೩. ಬಾಳಲೋಚನ = (ಸಂ) ಫಾಲ = ಹಣೆ. ಲೋಚನ=ಕಣ್ಣು. ಹಣೆಯಲ್ಲಿ ಕಣ್ಣುಳ್ಳವನು=ಶಿವ. ತಾ||

(1). N. ಸ. ತಾ. ಪು. ೪.

ನಾನು ಇದನ್ನು ಹೇಳಿದ್ದು ಪರಮಾತ್ಮನ ಪ್ರೇರಣೆ, ದೈನ್ಯಗಳಿಂದಲ್ಲದೆ ಅಹಂಕಾರದಿಂದಲ್ಲ.

೨೪. ಪರಿ=ಮೇರೆ; ಪರಿಮಾಣ. ಏನೆಂಬೆ=ಎಷ್ಟೆಂದು ಹೇಳಲಿ! ಸೂ॥ ಪರಬ್ರಹ್ಮದ ಪಂಚ ಲಕ್ಷಣಗಳಲ್ಲಿ ಪರಿಪೂರ್ಣ ನೆನಿಸಿಪ್ಪುದೇ ಗುರುಸ್ವರೂಪ. ಪುರುಷನು ಎಲ್ಲವನ್ನು ತುಂಬಿ, ದಶಾಂಗುಲ ಹೆಚ್ಚಿರುವನೆಂಬ ಋಗ್ವೇದದ ಪುರುಷ ಸೂಕ್ತವನ್ನು ಈ ವಚನವು ನೆನಪಿಗೆ ತರುತ್ತದೆ [1].

೨೬. ತಾ॥ ಘರ್ಷಣವಿಲ್ಲದೆ ಮರದಲ್ಲಿರುವ ಬೆಂಕಿಯು ಹೇಗೆ ಕಾಣದೋ ಹಾಗೆಯೇ ಜೀವನಲ್ಲಿರುವ ಶಿವನು ಗುರುವಿಲ್ಲದೆ ಸಾಕ್ಷಾತ್ಕಾರವಾಗನು.

೨೭. ತಾ॥ ಗುರುವಿಲ್ಲದೆ ಬೇರೊಂದು ಉಪಾಯದಿಂದ ಈಶ್ವರನನ್ನು ಕಾಣಲಾಗದು.

೨೮. ಟೀ॥ ಕತ್ತಲೆಯುಲ್ಲಿ ಬೆಳಕಿನ ಮೂಲಕ ಕಣ್ಣುಗಳೂ ಪಂಚೇಂದ್ರಿಯಗಳ ಮೂಲಕ ಸೂತ್ರಿಯಾದ ಜೀವಾತ್ಮನೂ ತಿಳಿಯಲ್ಪಡುವಂತೆ ದೇವರನ್ನು ಗುರುವಿನಿಂದ ತಿಳಿಯತಕ್ಕದ್ದು. ಅಂದರೆ ಸೂತ್ರದಿಂದ (ಯಂತ್ರಾರೂಢನಾದ ಶಿವನನ್ನೆಂದು) ಸೂತ್ರಧಾರಿಯನ್ನು ತಿಳಿಯುವಂತೆ ಎಂದು ಕೆಲವರು. ಇಲ್ಲಿ ಬಹಿರಂಗ, ಅಂತರಂಗ ಸೂಚಕ ಹೀಗೆ ಎರಡು ದೃಷ್ಟಾಂತಗಳು ಹೇಳೋಣವಾಗಿವೆ.

೩೦. ದಂಡಕೋಲು=೯೬ ಅಂಗುಲ ಉದ್ದವಾದ ಅಂದರೆ ಎಂಟು ಗೇಣಿನ ಕೋಲು. ಎರಡು ಕೋಲಾಗೆ ದಂಡವೆನಿಕ್ಕುಂ; ಒಂದು ಕೋಲಿಗೆ ನಾಲ್ಕು ಗೇಣು. ದಂಡಕೋಲ್ವಿಡಿವೊಡಂ=(೧) ಸನ್ಯಾಸಿಯಾಗಿ ಉದ್ದವಾದ ಕೋಲು ಹಿಡಿವರೂ (೨) ತ್ರಿದಂಡಿಯೆನಿಸಿಕೊಂಡರೂ ತ್ರಿದಂಡಿಯೆಂದರೆ ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನು ಜಯಿಸಿದವನೆಂದು ಕೆಲವರು.

೩೧. ಸಾರಾಯ = (ಸಂಸಾರಾಂಶ ?) ಶ್ರೇಷ್ಠವಾದ ತತ್ವ. ಮೋಕ್ಷ. ನಿಜ=ನೆಲೆ. ತಾ॥ ಪೂಜ್ಯಗುರುವಿನಲ್ಲಿ ಜಾತಿಭೇದವನ್ನು ಎಣಿಸಲಾಗದು.

೩೨. ಪರತತ್ವ = ಬ್ರಹ್ಮಾನುಭವ. ಎರವಿಲ್ಲದೆ=ಕೊರತೆಯಿಲ್ಲದೆ. ಪರದೇಶಿ =ಪರದೇಶಿಯಂತೆ = (೧) ಪರತತ್ವದರ್ಶಕನಂತೆ (೨) ದಿಕ್ಕಿಲ್ಲದವನಂತೆ. ಅನುಭವವು ತುಂಬಿಕೊಂಡಿರುವ ಕಾರಣ ಅವನೇ ಪರಶಿವನನ್ನು ತೋರಿಸಬಲ್ಲವನಾದುದರಿಂದ ಪರಮಗುರುವೆನ್ನಿಸಿಕೊಳ್ಳುವನು. ಲೌಕಿಕದೃಷ್ಟಿಯಿಂದ

(1) ಋಗ್ವೇದ ಪು. ಸೂ, ೧೦ ಮಂಡಲ ೯೦

ಕೇವಲ ಬಡವನಂತಿದ್ದಾಗ್ಯೂ ಒಳಗೆ ಅಷ್ಟೈಶ್ವರ್ಯಗಳಿಂದ ತುಂಬಿಕೊಂಡಿರುವವನೇ ಪರಮಗುರುವೆಂತಲೂ ಅರ್ಥಮಾಡಬಹುದು.

೩೫. ತಾಯಿ. ಕಾಯವು ಸತ್ಯವೆಂದು ತೋರಿಸುವಲ್ಲಿ ಗುರುವು ಇದಕ್ಕೆ ವಿರುದ್ಧವಾಗಿ ಶರೀರದ ಮಿಥ್ಯಾತ್ವವನ್ನು ತೋರಿಸಿ ಮಾಯಾಬಂಧನವನ್ನು ಹರಿಸಿ ದೇಹಬುದ್ಧಿಯನ್ನು ನಾಶಮಾಡುವದರಿಂದ ಇಲ್ಲಿ ತಾಯಿ ( ಗಿಂತ ಹೆಚ್ಚಿನ ) ಪ್ರೇಮವು ಹೇಳಲ್ಪಟ್ಟದೆ.

೩೬. ಮಕ್ಕಳಲ್ಲಿ ಗುರುವಿನ ಮೇಲಿ ಅಪೇಕ್ಷೆಯನ್ನು ಹುಟ್ಟಿಸುವದು ತಂದೆಯ ಕರ್ತವ್ಯ. ಪಾಪವನ್ನು ಕಳೆಯುವದು ಗುರುವಿನ ಕರ್ತವ್ಯ. ಇದೇ ಉಭಯತರಿಗಿರುವ ಅಂತರ.

೩೭. ದೈವದೆಡೆಗಳ=ದೇವಾಧಿದೇವತೆಗಳ ನೆಲೆಯನ್ನು ವೀ. ಶೈ. ಆಧಾರಾದಿ ಷಟ್ಚಕ್ರಗಳ ಇಲ್ಲವೆ ಶಿವ, ಸದಾಶಿವ, ಈಶ, ಬ್ರಹ್ಮೇಶ, ಈಶ್ವರ, ಈಶಾನವೆಂಬ ಆರು ಮೂರ್ತಿಗಳ, ಇಲ್ಲವೆ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಮಹಾದೇವ, ಶ್ರೀಗುರುವೆಂಬ ಆರು ದೈವಗಳ ನೆಲೆಯನ್ನು ದೈವವು ಮಾಡುವದನ್ನು ಗುರುವು ಮಾಡಬಹುದು. ಗುರುವು ಮಾಡುವದನ್ನು ದೈವವು ಮಾಡಲಾಗದೆಂದು ತಾತ್ಪರ್ಯ.

೩೮. ಹುಸಿವವ=ಸುಳ್ಳಾಡುವವ ಬೇಹಾರ=(ಸಂ) ವ್ಯಾಪಾರ. ಆರಂಭ= ಒಕ್ಕಲುತನ. ವಿಷಯವುಳ್ಳವ=ವಿಷಯಾಸಕ್ತನಾದವನ. ಮಸಿವಣ್ಣ= ವ್ಯರ್ಥ,

೩೯. ದರುತಗಳಾರು=೧. ಸಾಙ್ಖ್ಯ ೨. ಯೋಗ, ೩. ನ್ಯಾಯ, ೪. ವೈಶೇಶಿಕ, ೫. ಪೂರ್ವಮೀಮಾಂಸೆ, ೬. ಉತ್ತರಮೀಮಾಂಸೆ ಎಂಬ ಆರು ದರ್ಶನಗಳು; ಪುರುಷರು ಮೂವರು=ಬ್ರಹ್ಮ ವಿಷ್ಣು, ಮಹೇಶ್ವರರು ಎಂಬ ತ್ರಿಮೂರ್ತಿಗಳು. ವೀ. ಶೈ. ವಿಶ್ವ, ತೈಜಸ, ಪ್ರಾಜ್ಞ, ಇಲ್ಲವೆ ವಿರಾಟ, ಹಿರಣ್ಯಗರ್ಭ, ಅಂತರ್ಯಾಮಿ ಎಂಬ ಮೂರು ಪರತತ್ವ=ಸದಾಶಿವತತ್ವ, ಇರವು= ನಿಜವು ಬೇರೆಂದು=ನಾದ, ಬಿಂದು ಕಲಾತೀತವೆಂದು.

೪೦. ಟೀ॥ ಮನುಷ್ಯನೇ ದೃಗ್ಮಾನಸಾಗೋಚರನಾದ ಪರಶಿವನನ್ನು ಹಂಬಲಿಸಿ ಏಕೆ ಸಾಯುತ್ತೀ, ಕಾಣುವಂಥ ಗುರುವನ್ನು ನಂಬಿ ತೃಪ್ತನಾಗು ಸೂ॥ ಇಲ್ಲಿ ಅಗಸ್ತ್ಯ ಋಷಿಯನ್ನು ಕುರಿತು ಹೇಳಿದ ಅಭಿಪ್ರಾಯವು ರೂಢಿಯಲ್ಲಿರುವ ಕಥೆಗೆ ಭಿನ್ನವಾಗಿದೆ.

೪೦ ಅಜ್+ವೊಗ ಅಯ್ಮೊಗ= (೧) ಸದ್ಯೋಜಾತ, (೨) ವಾಮದೇವ,

(೩) ಅಘೋರ. (೪) ಈಶಾನ, (೫) ತತ್ಪುರುಷವೆಂಬ ಶಿವನ ಪಂಚಮುಖಗಳು. ಉಳಿದು=ಬಿಟ್ಟು ನೆರವಿಯರನು=ಗಣಸಭೆಯನ್ನು ಎರೆವಗೆ=ಜ್ಞಾನಾಮೃತವನ್ನು ಎರದುಕೊಡುವವನಗೆ ಟಿ॥ ದಿಕ್ಕಾಲಾದ್ಯನವಚ್ಛಿನ್ನನಾದ ಪರಮೇಶ್ವರನು ತಾನಿರುವ ರೂಪದಲ್ಲಿ ಮಾನವರನ್ನು (ಭಕ್ತರನ್ನು) ಉದ್ಧಾರ ಮಾಡಲಿಕ್ಕೆ ಸಾಧ್ಯವಿಲ್ಲದೆ ನರರೂಪವಾದ ಗುರುಸ್ವರೂಪದಿಂದ ಸಹಾಯ ಮಾಡುವನು. ಇಂಥಪ್ಪ ಶ್ರೀ ಸದ್ಗುರುವಿಗೆ ಸಮಾನನಾದವನನ್ನು ಈ ಜಗತ್ತಿನಲ್ಲಿ ಕಾಣೆನು.

೪೨. ಆ ರೂಪ=ಅಖಂಡರೂಪ. ವೀ. ಶೈ. ಲಿಂಗರೂಪ. ನೆರವೀಯಲು=ಸಹಾಯ ಮಾಡಲು

೪೩ ಸುರತರು=ಕಲ್ಪವೃಕ್ಷ ಸುರಭಿ=ಕಾಮಧೇನು. ಪರುಷ=ಸ್ಪರ್ಶವೇಧಿ, ಲೋಹವನ್ನು ಭಂಗಾರ ಮಾಡುವ ಕಲ್ಲು. ಇವುಗಳನ್ನು ಸಾಮಾನ್ಯ ವಸ್ತುಗಳೆಂದು ಹೇಗೆ ತಿಳಿಯಲಾಗದೋ ಹಾಗೆಯೇ ಗುರುವನ್ನು ನರನೆಂದು ತಿಳಿಯಲಾಗದು. ಅಂದರೆ ದೇವರೆಂತಲೇ ಭಾವಿಸಬೇಕೆಂದು ತಾತ್ಪರ್ಯ.

೪೪. ಹರ=ಇಷ್ಟಲಿಂಗ; ಹಾಗೂ ಗುಡಿಯೊಳಗಿನ ಲಿಂಗ ಕರಣ=ಗುರು, ಲಿಂಗ, ಜಂಗಮದ ಭಕ್ತತೀರ್ಥ ಪ್ರಸಾದ=ಗುರು, ಲಿಂಗ, ಜಂಗಮದ ಭುಕ್ತಶೇಷ. ಇವೆರಡರಲ್ಲಿ ಎಂಜಲೆಣಿಸಬಾರದು. ಇಷ್ಟಲಿಂಗವನ್ನು ಶಿಲೆಯೆನ್ನಲಾಗದು. ಗುರುವನ್ನು ಮನುಷ್ಯನೆನ್ನಲಾಗದು. ಇತ್ಯಾದಿ.

೪೫. ಹಿರಿಯನಾನೆನೆಬೇಡ=ನಾನೇ ಶ್ರೇಷ್ಠನೆಂದು ಗರ್ವಿಸಬೇಡ. ಬರೆವ=ಬುದ್ಧಿವಂತ; ಕರಣೀಕ; ಕುಲಕರ್ಣಿ. ಎರವು=ಕಡ. ಸೂ॥ ಕಳವು ಆಗುವ ಸಂಭವವಿರುವದರಿಂದ ಭಂಗಾರದ ಒಡವೆಗಳನ್ನು ಕಡ ತರಬಾರದು.

೪೬. ಸಂದಿಸಿ=ಬೇರಾಗಿ. ಗುರುವನ್ನು ಬಿಟ್ಟು. ಟಿ॥ ಗುರುಭುಕ್ತಶೇಷವಾದ ಶುದ್ಧಪ್ರಸಾದವನ್ನು ಸ್ವೀಕರಿಸದೆ ಉಣ್ಣುವವನು ಹಂದಿಯು ಅಮೇದ್ಯವನ್ನು ತಿಂದಂತೆ ಕನಿಷ್ಠನಾಗಿರುವನು

೪೭. ಉದಕ=ನೀರು, ಮಾರುತ=ಗಾಳಿ. ಉರಗ=ಹಾವು. ಹರಿ=ಸಿಂಹ. ನಾಗ=ಆನೆ. ಇದು ಬಹಿರಂಗಾರ್ಥ. ಉರಿ=ಸಿಟ್ಟು. ಉದಕ=ಕಾಮ ಮಾರುತ=ಚಾಂಚಲ್ಯ ಉರಗ=ದ್ವೇಷ ಹರಿ=ಗರ್ವ. ನಾಗ=ಮದ. ಐದು ಅಂತರಂಗಾರ್ಥ. ಅರಿಷಡ್ವರ್ಗಗಳಿಗೆ ಸಂಕೇತವೆಂದು ಕೆಲವರು.

೪೮. ಕೊರಡು=ಕಟ್ಟಿಗೆಯ ತುಂಡು ( ದೇಹ ) ಬರಡು=ಗೊಡ್ಡಾವು ( ಮನಸ್ಸು ) ಮರಳು ತಂಡಗಳು=ಹುಚ್ಚರ ಗುಂಪುಗಳು ( ಮಾನವರು )

ಪ್ರಣವ=ಪಂಚಾಕ್ಷರಿ ಮಂತ್ರ ಟೀ॥ ಗುರುವು ಕೀಳ ವಸ್ತುವನ್ನು ಉತ್ತಮ ವಸ್ತುವಾಗಿ ಮಾಡಲು ಶಕ್ತನಾಗಿರುವದರಿಂದ ಎಲ್ಲರೂ ಆತನಿಗೆ ನಯಭಯ ತೋರಿಸತಕ್ಕದ್ದು.

೪೯. ತಾ॥ ಎಷ್ಟು ಕೀಳವಾದರೂ ಗುರುಸೇವೆಯು ಮೇಲನ್ನುಂಟು ಮಾಡುವದು. ಸೂ॥ ಮನುಷ್ಯ, ಪ್ರಾಣಿ ಗಿಡ, ವಸ್ತುಗಳ ಉದಾಹರಣೆಗಳಿಂದ ಗುರುಸೇವೆಯಲ್ಲಿ ಅಹಂಕಾರವು ಹೇಗೆ ಕಡಿಮೆಯಾಗುತ್ತ ಬರಬೇಕೆಂದು ಇಲ್ಲಿ ಬಹು ಅಂದವಾಗಿ ತೋರಿಸಿಯದೆ.

೫೧. ಟೀ॥ ಗುರುವಿನ ಉಪದೇಶ ವಿರುವದು. ಕಣ್ಣಿದ್ದವನು ಭಯವಿಲ್ಲದೆ ನಡೆಯುವದಕ್ಕೆ ಸಮಾನವಾಗಿದೆ. ಇದಿಲ್ಲದೆ ಮೋಕ್ಷವನ್ನು ಸಾಧಿಸಲೆತ್ನಿಸುವದು ನೂರಾರು ಕುರುಡರು ಒಬ್ಬರ ಕೈಯೊಬ್ಬರು ಹಿಡಿದು ಸರ್ವರುಸ್ಪರ್ಶೇಂದ್ರಿಯದಿಂದ ತಡವುತ್ತಾ ಮಾರ್ಗವನ್ನು ಕ್ರಮಿಸಿದಂತಿದೆ. ಇವರು ದಾರಿ ಯಾವದು ಕೊರಕಲು ಯಾವದು ಎಂದು ಕಾಲಿನಿಂದ ಭೇದಿಸಿ ತಿಳಿಯದೆ ಎಲ್ಲರೂ ಹಳ್ಳ (ಯಮುಗೊಂಡ) ದಲ್ಲಿ ಬೀಳುವದು ನಿಶ್ಚಯ ಅಂದರೆ ಜ್ಞಾನಾನುಭವ ಸಂಪನ್ನನಾದ ಗುರುವಿನ ಉಪದೇಶ ವಿಲ್ಲದೆ ನಾಶವಲ್ಲದೆ ಮುಕ್ತಿ ದೊರೆಯದೆಂಧು ತಾತ್ಪರ್ಯ.

೫೨. ತಾ॥ ನರಕವು ಪಾಪಿಷ್ಟರಿಂದಲೂ ಸ್ವರ್ಗವು ಭಕ್ತರಿಂದಲೂ ಇರುವಂತೆ ಭೂಲೋಕವು ಗುರು ಪ್ರಯತ್ನದಿಂದ ಇದುವರೆಗೆ ಉಳಿದಿರುವದು. ಹೀಗಿಲ್ಲದಿದ್ದರೆ ಇಷ್ಟರಲ್ಲಿಯೇ ನಾಶಗುತ್ತಿತ್ತು.

೫೪. ಒಸೆದು=ಒಪ್ಪಿ. ಹಸನುಳ್ಳ=ತ್ರಿಕರಣ ಶುದ್ಧನಾದ; ಮಾಯಾವಿಕಾರವಿಲ್ಲದ. ಸೂ॥ ಶಿವಕ್ರಿಯೆಯೇ ಮೊಸರು ಗುರೂಪದೇಶವೇ ಕಡಗೋಲು. ತಾ॥ ಕಡೆದರೆ ಬೆಣ್ಣೆ ಬರುವದು ಹೇಗೆ ನಿಶ್ಚಯವೋ ಹಾಗೆಯೇ ಗುರುವಿನಿಂದ ಮೋಕ್ಷದೊರೆಯುವದು ನಿಶ್ಚಯ.

೫೫. ನಿಷ್ಪನ್ನ=ಸಿದ್ಧ; ಸಂಪೂರ್ಣತೆ ಮುಟ್ಟಿದ. ತಾ॥ ಸಂಶಯವು ಅಂಕುರಿಸದಂತೆ ಒಮ್ಮೆ ಯೋಗ್ಯಗುರುವಿನಿಂದ ಮುಕ್ತಿಯು ದೊರೆತಬಳಿಕ ಅದು ತಿರುಗಿ ಕಳೆದು ಹೋಗಲಾರದು.

೫೬. ಮರಹುಳ್ಳ = ಅಜ್ಞಾನವಶರಾದ. ತೆರನ್+ಆವುದು = ಮೋಕ್ಷ ಸಂಪಾದನೆಗೆ ಮಾರ್ಗವಾವುದೆಂದು ಕೇಳಿದರೆ ಕರಿಗೊಂಡ ಬೆಳಲ ಹಣ್ಣಂತೆ=(ಕರಿ=ಕರ,=ಸೊಂಡಿಲುವುಳ್ಳದು) =ಆನೆ ನುಂಗಿದ ಬೆಳಲದ ಹಣ್ಣಿನಂತೆ. ಟಿ॥ ಆನೆಯ ಹೊಟ್ಟೆಯಲ್ಲಿ ತಿರುಳುಕರಗಿ ಬರಿಗೆರಟೆಯೇ ಲದ್ದಿಯ ಸಂಗಡ ಬೀಳುವದೆಂದು ಹೇಳಿಕೆ ಇರುವದು.

ಆ ಪ್ರಕಾರ ಅಜ್ಞಾನವು ಕರಗಿ ಸಾಮರಸ್ಯ ಜ್ಞಾನವುಂಟಾಗುವದೆಂದು ತಾತ್ಪರ್ಯ. ಸೂ॥ ಈ ದೃಷ್ಟಾಂತವು ವಿಪಕ್ಷವಾಗಿರುವದರಿಂದ ಇಲ್ಲಿ ಕರಿಗೊಂಡ ಎಂಬದಕ್ಕೆ ಪಕ್ವವಾದ ಎಂದು ಅರ್ಥ ಮಾಡುವದು ಯೋಗ್ಯವಾಗಿದೆ. ಅಂದರೆ ಕಾಯಿ ಇದ್ದಾಗ ಹುಳಿಯೂದ ಬೆಲದ ಫಲವು ಪಕ್ವವಾದ ಮೇಲೆ ಸಿಹಿಯಾಗುವಂತೆ ಗುರುಬೋಧೆಯು ಅಜ್ಞಾನವನ್ನು ಕಳೆದು ಮುಕ್ತಿಯನ್ನುಂಟು ಮಾಡುವಷ್ಟು ಮರ್ಮಭೇದಕವಾಗಿರಬೇಕೆಂತಲೂ ಅರ್ಥಮಾಡಬಹುದು.

೫೭. ಮಾಣದೆ = ಬಿಡದೆ. ಎಸೆ= ಚಂದಕಾಣು ಸೂ" ಗುರುವೇ ಸಾಣೆ ಕಲ್ಲು. ಶಿಷ್ಯನೇ ಗಂಧದ ಕೊರಡು; ಘರ್ಷಣವೇ ಉಪದೇಶ; ತಾ॥ ಅಜ್ಞಾನವೆಂಬ ಚಕ್ಕೆಯು ಸವದಂತೆ ಮುಕ್ತಿಯೆಂಬ ಗಂಧವು ಪ್ರಕಟವಾಗುವದು.

೫೮. ಒಮ್ಮಾರು ದೂರವೇ = ಒಂದು ಮಾರು ದೂರವೇ ? ತನ್ನಲ್ಲಿ ಬ್ರಹ್ಮವಿರುವದರಿಂದ ಎಳ್ಳಷ್ಟಾದರೂ ಅಂತರವಿಲ್ಲೆಂದರ್ಥ ಸದ್ಗುರು=ಅಷ್ಟೈಶ್ವರ್ಯ ಜ್ಞಾನಾನುಭವ ಸಂಪನ್ನನಾದ ಗುರು. ಗಮ್ಮನೇ=ಶೀಘ್ರವಾಗಿ ತಾ॥ ಒಮ್ಮೆ ತಿಳಿದರೆ ಸಾಕು ತನ್ನಲ್ಲಿಯೇ ಮುಕ್ತಿಯುಂಟಾಗುವದು.

೫೯. ಹೇಳಿದ್ದೆ ಹೇಳುವರು= (೧) ಪೂರ್ವದ ಋಷಿಗಳು ಹೇಳಿದ್ದನ್ನೇ ಹೇಳುವರು. (೨) ಗಟ್ಟಿಯಾಗುವದರ ದಸೆಯಿಂದ ಪುನಃ ಪುನಃ ಅದನ್ನೇ ಹೇಳುವರು. ಕೇಳಿದ್ದೇ=ಕೇಳಿದ ಪ್ರಶ್ನೆಗಳನ್ನೇ ತಾ॥ ಶಿಷ್ಯರ ತರವನ್ನು ತಿಳಿದು ಗುರುಗಳು ವಿವಿಧ ರೀತಿಯಿಂದ ಹೇಳುವದರಿಂದ ಹೇಳಿದ್ದನ್ನೇ ಹೇಳಿದರೂ ಕೇಳುವಷ್ಟು ಸಾರೆ ಶಿಷ್ಯರಿಗೆ ಆನಂದವೆನಿಸುವದು.

೬೦. ಟೀ॥ ಶಿವನು ವಿಷಪ್ರಾಶನ ಮಾಡಿದಂತೆ ಅಷ್ಟಮದಗಳನ್ನೂ ಪಂಚೇಂದ್ರಿಯಗಳ ಹರಿದಾಟವನ್ನೂ ವಾಸನಾ ಸಹಿತವಾಗಿ ನುಂಗಿದ ಗುರುವು ನೀಲಕಂಠನೆನ್ನಿಸಿಕೊಳ್ಳುವನು.

೬೧. ಮೂರರಿಂದಲಿ=ತ್ರಿಗುಣಾತ್ಮಕವಾದ ಪ್ರಕೃತಿಯಿಂದ. ಹೊರಗೆ ತೋರಿರುವದನು=ವಿಸ್ತಾರವಾಗಿ ಪ್ರಕಟವಾದ ಜಗತ್ತನ್ನು. ಅದರಿಂದ = ಷಡ್ವಿಧಲಿಂಗದಿಂದ ( ಇಲ್ಲವೆ ಷಟ್ಸ್ಥಲಗಳಿಂದ ) ಒಳಗೆ ತೋರಿದರೆ = ಸಂಬಂಧ ಮಾಡಿಕೊಟ್ಟು ತಿಳಿಸಿದರೆ. ಆರಡಿಗೊಂಬ=ಅನುಭವ ಮಾಡಿಕೊಳ್ಳುವೆನು. (೨) ಜೇನು ನೊಣದಂತೆ ಸ್ವಾದಿಸುವನು. ( ೩ ) ಹರಸುವನು. ತಾ॥ ಜಾಗೃತ್ ಸ್ವಪ್ನಸುಷುಪ್ತಿಗಳೆಂಬ ಮೂರು ಅವಸ್ಥೆಗಳ ದೆಸೆಯಿಂದಾಗಲಿ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಶರೀರಗಳ ದೆಸೆಯಿಂದಾಗಲಿ ತನಗೆ ಬೇರೆನಿಸಿ

ತೋರುವ ಪರಶಿವಲಿಂಗವನ್ನು ಆಚಾರಲಿಂಗ, ಗುರುಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬ ಆರು ಲಿಂಗಗಳ ದ್ವಾರದಿಂದ ತನಗೆ ಅಭಿನ್ನವೆಂದು ಗುರುವು ತೋರಿಕೊಟ್ಟರೆ ಶಿಷ್ಯನು ಅದನ್ನು ದೃಢೀಕರಿಸುವನು. ಅಂದರೆ ಅನುಭವ ಮಾಡಿಕೊಳ್ಳುವನು. ಸೂ॥ ಆರಡಿಗೊಳ್ಳು ಎಂಬದಕ್ಕೆ ರೂಢಿಯಲ್ಲಿರುವ ಅರ್ಥವು ಇಲ್ಲಿ ಒಪ್ಪುವದಿಲ್ಲ.

೬೨. ಒಂದರೊಳಗೆ=ಬ್ರಹ್ಮದಲ್ಲಿ. ಎಲ್ಲವೂ=ಜಗತ್ತೆಲ್ಲ. ಸಂದಿಸಿರು=ಅಡಕವಾಗಿರು. ಚಂದದಿಂ=ಅನುಭವಕ್ಕೆ ಬರುವಂತೆ. ವೀ. ಶೈ. ಇಷ್ಟಲಿಂಗದಲ್ಲಿ ಅಂಗಲಿಂಗಸ್ಥಲಗಳು ಅಡಕವಾಗಿರುವ ಲಿಂಗಾಂಗ ಸಕೀಲವನ್ನು ಹೇಳಿ ಜಗತ್ತು ಮಿಥ್ಯವೆಂದು ತೋರಿಸಿಕೊಡದಿದ್ದರೆ...

೬೩. ಒಂದನು = ಅನೇಕತ್ವದಲ್ಲಿ ಏಕತ್ವವನ್ನು (ಬ್ರಹ್ಮವನ್ನು) ವೀ. ಶೈ. ಇಷ್ಟ, ಪ್ರಾಣ, ಭಾವಲಿಂಗಗಳು ಒಂದೇ ಎಂದು. ತಾ॥ ವಿಷಯಾಸಕ್ತನಾಗಿದ್ದು ಹಂದಿಯಂತೆ ಕೆಸರಿನಲ್ಲಿ ಹೊರಳುತ್ತಿರುವ ಗುರುವು ಬ್ರಹ್ಮಾನುಭವದ ಗಂಧವನ್ನು ಅರಿಯನು, ಅಂದರೆ ವಾಚಾಡಂಬರವುಳ್ಳ ಗುರುವಿಗೆ ಕೆಟ್ಟ ಹೆಸರು ತಪ್ಪದೆಂದು ತಾತ್ಪರ್ಯ.

೬೪. ಟಿ॥ ಗುರುವೇ ಕಾಮಧೇನು. ಅನುಭವಾಮೃತವನ್ನು ಹಿಂಡಿಕೊಂಡು ಉಣ್ಣುವವನೇ ಶಿಷ್ಯ. ಇಂಥವರ ಅಗಣಿತ ಪಾಪಗಳು ನಾಶವಾಗಿ ನಿತ್ಯಾನಂದದಲ್ಲಿರುವನು.

೬೫. ಒತ್ತಿಕೊಟ್ಟು=ಬಹಳ ಶ್ರಮಪಟ್ಟು ಹೇಳಿದ. ರಾಜಾನ್ನ=ಸುವಾಸಿಕ ಅಕ್ಕಿ. ಸೂ॥ ಗುರುವಿನ ಉಪದೇಶವು ಉತ್ತಮವಾದ ಭತ್ತದ ಬೀಜಕ್ಕೆ ಸಮಾನ. ಭಕ್ತಿಯಿಲ್ಲದ ಶಿಷ್ಯನ ಹೃದಯವು ನೀರಿಲ್ಲದ ಕೆರೆಯ ಸಮೀಪದಲ್ಲಿರುವ ಗದ್ದೆಗೆ ಸಮಾನ.

೬೬. ಹೀನಮನದವನಿಗೆ=ದುರ್ಮತಿಯಾದ ಇಲ್ಲವೆ ನೀಚನಾದ ಶಿಷ್ಯನಿಗೆ ತಾ॥ ಎಲುವನ್ನು ಕಡಿಯುವ ನಾಯಿಯು ತೆಂಗಿನ ಕಾಯಿಯನ್ನು ನಿಸ್ಸಾರವಾದ ಕಟ್ಟಿಗೆಯ ತುಂಡೆಂದು ತಿಳಿಯುವಂತೆ ನೀಚನ ಮುಂದೆ ಹಾಕಿದ ಗುರುಪದೇಶವು ವ್ಯರ್ಥವಾಗಿರುವದು

೬೭. ಟಿ॥ ಎರಡು ಕಟ್ಟಿಗೆಗಳ ತಿಕ್ಕಾಟದಿಂದ ಅಡವಿಯೆಲ್ಲಾ ಸುಟ್ಟು ಹೋಗುವಂತೆ ಯೋಗ್ಯ ಗುರುಶಿಷ್ಯರ ಸಂಘರ್ಷಣದಿಂದ ಪರ್ವತಪ್ರಾಯವಾಗಿರುವ ಅಜ್ಞಾನವು ಬೂದಿಯಾಗಿ ಹಾರಿ ಹೋಗುವದು.

೬೮. ಹೇಳಬಲ್ಲಡೆ= ಜ್ಞಾನವುಂಟಾಗುವಂತೆ ಹೇಳುವದಕ್ಕೆ ತಿಳಿದರೆ. ಕೇಳಬಲ್ಲಡೆ=ಪ್ರಶ್ನೆಗಳನ್ನು ಕೇಳುವದಕ್ಕೆ ತಿಳಿದರೆ; ಅಂದರೆ ಅಧಿಕಾರಲಕ್ಷಣವಿದ್ದರೆ

ತಾ॥ ಹೇಳುವದಕ್ಕೂ ತಿಳಿಯುವದಕ್ಕೂ ಯೋಗ್ಯತೆಯಿಲ್ಲದ ಗುರುಶಿಷ್ಯರ ಯೋಗವು ವ್ಯಸನಕರವಾಗಿರುವದು. ತಕ್ಕನಿಗೆ ತಕ್ಕನು ಕೂಡಿದಂತೆಂದು ಬಸವಣ್ಣನವರ ವಚನವಿರುವದು.

೬೯. ಹೊಲಬು=ರೀತಿ, ದಾರಿ, ರಹಸ್ಯ. ತಿಳಿಯಲರಿಯದ=ಗ್ರಹಿಸುವದಕ್ಕೆ ಶಕ್ತಿಯಿಲ್ಲದ; (ತಿಳಿಸಿದರೂ ತಿಳಿಯುವ) ನೆಲೆ=ನಿಜ ಆರಯ್ಯದ=ವಿಚಾರಿಸದ, ಅನುಭವ ಮಾಡಿಕೊಳ್ಳದ ತಾ॥ ಮೋಕ್ಷಮಾರ್ಗದನ್ನರಿಯುವ ಗುರುವು, ಬುದ್ಧಿಯಿಲ್ಲದ ಶಿಷ್ಯ, ಅನುಭವವಿಲ್ಲದ ಉಪದೇಶವು ಇವು ಕೂಡಿದರೆ ಕುರುಡನು ಆಳವಾದ ಸರೋವರವನ್ನು ಹಳ್ಳವೆಂದು ದಾಟಹೋಗಿ ಅದರ ನೆಲೆ ತಿಳಿಯದೆ ಮುಳುಗಿ ಸತ್ತಂತಾಗುವದು.

೭೦. ಮುಂದನು=(೧) ಮುಕ್ತಿಮಾರ್ಗವನ್ನು (೨) ಏನು ಹೇಳಬೇಕೆಂಬದನ್ನು. ಹಿಂದನು=(೧) ಜನ್ಮಬಂಧನವನ್ನು ಅಂದರೆ ಸಂಸಾರವು ತನಗೆ ಬಂದ ಕಾರಣವನ್ನು. (೨) ಹಿಂದೆ ಹೇಳಿಕೊಟ್ಟದ್ದನ್ನು. ಸಂದೆರಡು ವರ್ಗ =ಸಂದ+ಎರಡು ವರ್ಗ (ಸಲ್, ಧಾತು=ಪ್ರಸಿದ್ಧವಾಗು, ಪ್ರಸಿದ್ಧವಾದ ಎರಡು ವರ್ಗ=(೧) ಬಂಧಮೋಕ್ಷ (೨) ಆತ್ಮಾನಾತ್ಮ ವಿಚಾರ. (೧) ಜೀವನ್ಮುಕ್ತಿ, (೨) ವಿದೇಹಮುಕ್ತಿ, (೧) ಅಧಿಕಾರಿ, (೨) ಅನಧಿಕಾರಿ ಎಂಬ ಶಿಷ್ಯಲಕ್ಷಣಭೇದ ಇತ್ಯಾದಿ.

೭೧. ಅರುವು = ಬ್ರಹ್ಮಾನುಭವ. ಪರ=ಪರತತ್ವ ಅರಿಯದ= ಅಪೇಕ್ಷಿಸವೆ; ಮುಮುಕ್ಷುವಲ್ಲದ ನೆರೆಯರಿದ+ಓದು=(೧) ಚನ್ನಾಗಿ ತಿಳಿದುಕೊಳ್ಳದೆ ಕಲಿತವಿದ್ಯೆ (೨) ಅನ್ವಯ ತಿಳಿಯದೆ ಓದಿದು. (೩) ಸಮೀಪದವರಿಗೆ ಕೇಳಿಸದಂತೆ ಓದುವದೆಂದು ನಾರಾಯಣ ಶಾಸ್ತ್ರಿಗಳು[1] ಸೂ॥ ಇಲ್ಲಿ. ಅರುವನರಿಯದ ಗುರುವೇ ಕುರುಡ; ಪರವನರಿಯದ ಶಿಷ್ಯನೇ ತಗ್ಗು ದಿನ್ನೆಯಾದ ನೆಲ; ನೆರೆಯರಿದೋದೇ ಕುರುಡನ ಕೈಯೊಳಗಿನ ಕೋಲು ಎಂದು ತಿಳಿಯತಕ್ಕದ್ದು.

೭೨. ಟೀ॥ ಅನಿರ್ವಚನೀಯವಾದ ಬ್ರಹ್ಮವನ್ನು ಕುರಿತು ಅನುಭವವಿಲ್ಲದ ಗುರುವು ಹೇಳಲಿಕ್ಕೆ ಯತ್ನಿಸಿದರೆ ಎಷ್ಟು ಪಾಂಡಿತ್ಯವಿದ್ದರೂ ಅವನು ನಿರುತ್ತರನಾಗುವದು ಸಹಜ ಹೀಗಿದ್ದರೂ ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರಕೊಡಲಿಕ್ಕೆ ತಾನು ಸಮರ್ಥನೆಂದು ತೋರಿಸಲಿಕ್ಕೆ ಹೋಗಿ ದುರಭಿಮಾನದಿಂದ ತರ್ಕಮಾಡುತ್ತಿರುವ ಆ ಗುರುಶಿಷ್ಯರ ಸಂವಾದವು ಸಂತೆಯ ಗದ್ದಲದಂತೆ ಕೇಳಿಸುತ್ತಿರುವದು.

(1). ಸಟೀಕ ಪುಟ ೧೫ ಪದ್ಯ ೨೬.

೭೩. ಹೇರುವ ಗೊಡ್ಡು ಹಯು ನಕ್ಕು=ಹೇರಾಟದ ಪಶುವು (ಗೊಡ್ಡಾವು) ಹಿಂಡುವ ಆಕಳ ವಾಗುವದು. ತಾ॥ ಈಶ್ವರನ ಕೃಪೆಯಿದ್ದರೆ ಇದ್ದದ್ದು ಇಮ್ಮಡಿಯಾಗಿ ಸರ್ವವೂ ಸುಖಕ್ಕೆ ಪರಿಣಮಿಸುವದು.

೭೪. ಸರವೆ=ಹುಲ್ಲುಹಗ್ಗ. ಸುರಲತೆ=ಸ್ವರ್ಗದ ಬಳ್ಳಿ, ಗೊರವ=ಭಿಕ್ಷುಕ. ಸುರಪತಿ= ಇಂದ್ರ. ಗರಿಯುು ಗಿರಿಯಕ್ಕು=ಸಣ್ಣದು ದೊಡ್ಡದಾಗುವದು.

೭೫. ತಗ್ಗಿ=ಆರಿ ಉದಕ ಕಂಡಂತೆ= ನೀರಿನಲ್ಲಿದ್ದಂತೆ ತಣ್ಣಗಾಗಿರುವದು (ಅಡಿಪಾಠ ನೋಡಿ ಕಂಡಂತೆ = ತಣ್ಣೀರು ಹೋಯಿಸುಕೊಂಡಂತೆ.)

೭೬. ದುರ್ಗಿ…ಚಂಡಿ=ಕ್ಷುದ್ರದೇವತೆಗಳು. ಅಗ್ಗದ=ಶಿವನ ಅಂಶವಾದ ಕನಿಷ್ಟ ಶಕ್ತಿ. ಇವುಗಳಾಗಲಿ ಶಿವನ ಶ್ರೇಷ್ಟ ಶಕ್ತಿಗಳಾಗಲಿ ಉತ್ತಮರಿಗೆ ಏನೂ ಕೇಡು ಮಾಡಕೂಡದೆಂದು ದೇವರ ಅಪ್ಪಣೆ ಇದೆ.

೭೭. ವಿಷಯಕ್ಕೆ=ವಿಷಯಸುಖಕ್ಕೆ ಅಸಮಾಕ್ಷ=ಅ+ಸಮ + ಅಕ್ಷ=ಎರಡಕ್ಕಿಂತ ಹೆಚ್ಚು ಕಣ್ಣುಳ್ಳವ ಅಂದರೆ ಮುಕ್ಕಣ್ಣ = ಶಿವ. ತಾ॥ ಜಿತೇಂದ್ರಿಯನೂ, ಮಿತಾಹಾರಿಯೂ, ಭಕ್ತನೂ ಆದವನಿಗೆ ಗುರುಕಟಾಕ್ಷ ತಪ್ಪದು.

೭೮. ಸಮಿದೆ= (ತದ್ಭವ ಸೌದೆ) ಉರವಲದ ಕಟ್ಟಿಗೆ. ಹೊಸೆ=ತಿಕ್ಕುಟೀ॥ ವಿಷಯಲಂಪಟನಾದ ಮನುಷ್ಯಗೆ ಎಷ್ಟು ಉಪದೇಶ ಮಾಡಿದರೂ, ಹಸಿ ಕಟ್ಟಿಗೆಯಂತೆ ಕಣ್ಣು ನೋಯಿಸುವ ಹೊಗೆ ಹುಟ್ಟಬಹುದಲ್ಲದೆ ಅವನಲ್ಲಿ ಪರಮಾರ್ಥವೆಂಬ ಬೆಂಕಿಯು ಉರಿಯುು ಎಂದಿಗೂ ಹುಟ್ಟಲಾರದು. ಅಂದರೆ ಸಂಸಾರವಿಮುಖನಾಗದೆ ಗುರು ಕಟಾಕ್ಷವಾಗದೆಂದು ತಾತ್ಪರ್ಯ.

೭೯. ಕುಟ್ಟಿಕೊಳ್ಳು=ದೇಹ ದಂಡನೆಮಾಡು. ಅಟ್ಟಿ=ದಪ್ಪವಾಗಿ ಬಡೆದು. ವೀ. ಕೈ. ತ್ರಿಪುಂಡ್ರಗಳು ಒಂದಕ್ಕೊಂದು ಹೊಂದುವಂತೆ ಭಸ್ಮವನಿಟ್ಟು. ಬೂದಿಡು=ಸನ್ಯಾಸಿಯಾಗು. ಬೆಟ್ಟದಲ್ಲಿದ್ದು = ಲೋಕವಂದ್ಯ ಋಷಿಯೆನಿಸಿ. ಬಟ್ಟೆ = ರೀತಿ. ನಡಾವಳಿ, ಜ್ಞಾನ.

೮೦. ಪರುಷ (ಸರಿನೋಡಿ ಪದ್ಯ ೪೩.) ಸೋಂಕಿ=ಮುಟ್ಟಿ. ವರುಷ= ಬಹುಕಾಲ; ತಡಕ್ಕೆ ಸಂಜ್ಞೆ ಪರುಷವು+ಎಂತು+ಅಂತೆ = ಪರುಷವು ಹೇಗೋ ಹಾಗೆಯೇ ದರುಶನ=ಸಾನಿಧ್ಯ; ಜ್ಞಾನೋಪದೇಶ. ಸೂ॥ ಮಧ್ಯದಲ್ಲಿರುವ ಪ್ರಶ್ನಾಚಿನ್ಹೆಯು ವರುಷವಿರಬಲ್ಲುದೇ? ಎಂಬಲ್ಲಿ ಇರತಕ್ಕದ್ದು.

೮೧. ಸಂಸಾರಕೂಪ = ಸಂಸಾರವೆಂಬ ಕೊಳಚಿ ತಾಪದಲಿ=ಕಷ್ಟದಿಂದ ಸಂಕಟಪಡುವ. ಆಪತ್ತ ನಳಿದು=ಕಷ್ಟ

ವನ್ನು ಪರಿಹರಿಸಿಕೊಂಡು. ಪೊರವುಡು=ಪಾರಾಗು. ಸೋಪಾನ=ನಿಚ್ಚಣಿಕೆ

೮೨. ಗಂಡ=ಅತ್ಯುತ್ತಮ. ಎರಕವಾಗಿ=ತನುಮನಗಳು ಒಂದೇ ಆಗಿ. ಟೀ॥ ಮನಸ್ಸಿನಿಂದ ದೇಹವು ಶುದ್ಧವಾಗುವಂತೆ ದೇಹದಿಂದ ಮನಸ್ಸು ಶುದ್ಧವಾಗದು. ಕಾರಣ ಗುರುವನ್ನು ತನುಮನಗಳೆರಡರಿಂದಲೂ ಮುಟ್ಟಬೇಕು. ಬರಿ ತನುವರ್ಪಿತವೆಂದರೆ ಗುರುದ್ರೋಹ ಮನವರ್ಪಿತವೆಂದರೆ ಲಿಂಗದ್ರೋಹ ಧನವರ್ಪಿತನೆಂದರೆ ಜಂಗಮದ್ರೋಹ ಕಾರಣ ಗುರುವಿಗೆ ಸರ್ವವನ್ನೂ ಭಕ್ತಿಯಿಂದ ಅರ್ಪಿಸಬೇಕೆಂದು ತಾತ್ಪರ್ಯ. ಸೂ॥ ಹೆಂಡತಿಯು ಮನಸ್ಸಿನಿಂದಲೂ ಸೂಳೆಯು ಶರೀರದಿಂದಲೂ ಪುರುಷನನ್ನು ಅಪ್ಪುವಳೆಂದು ಬಸವಣ್ಣನವರ ವಚನವಿರುವದು[1]

೮೩. ಮಣಿಯುಕ್ಕು=ರತ್ನಮಣಿಯಂತೆ ಶೋಭಿಸುವದು. ಪರಿಣಾಮ=ಆನಂದ; ಸೌಖ್ಯ. ಪದ=ಶಿವಪದ. ನೆರೆಮನೆ= (೧)ಬಹು ಸಮೀಪ (೨)ತತ್ಕಾಲಸಹಾಯ (೩) ಜೀವನ್ಮುಕ್ತಿ. ಸೂ॥ ಗುರುವಿನ ಚರಣದಂಗುಷ್ಟದೊಳಗೆ ಅರವತ್ತೆಂಟು ಕೋಟಿ ಪುಣ್ಯದ ನದಿಗಳೂ. ಹರಡಿನಲ್ಲಿ ಕುಲಗಿರಿಗಳೂ, ಪಾದದಲ್ಲಿ ಸಪ್ತಶರಧಿಗಳೂ, ಮುಖದಲ್ಲಿ ೬೬ ಕೋಟಿ ತಾರೆಗಳೂ ಅಡಗಿರುವದರಿಂದ ಗುರುವಿನ ಪಾದದಲ್ಲಿ ತಲೆಯನ್ನಿಟ್ಟರೆ ಅದು ಜ್ಞಾನ ಕಾಂತಿಯನ್ನು ಕೊಂಡು ಮಣಿಯಂತೆ ಭೂಷಿಸುವದು[2]

೮೪. ಬಾಗಿ=ಸಾಷ್ಟಾಂಗ ನಮಸ್ಕಾರಮಾಡಿ ಬೇಗದಿಂದ = ವಯಸ್ಸನ್ನೂ ಸಂಸಾರ ಸುಖಗಳನ್ನೂ ಗಣಿಸದೆ ಆಗಮಾತೀತ = ಆಗಮಶಾಸ್ತ್ರಗಳಿಗೆ ಮೀರಿದವ; ಪರಶಿವ. ಭವ=ಸಂಸಾರಸಾಗರ ಭೋಗದೊಳಿಹನೆ=ಫಲಪ್ರಾಪ್ತಿಯನ್ನು ಹೊಂದುವವನೆ?

೮೬. ಟೀ॥ ಸಂಶಯ ಮಾಡದೆ ನೀನೇ ಗತಿಯೆಂದು ಗುರುವಿನ ಪಾದಕ್ಕೆ ಬಿದ್ದರೆ ಬೆಟ್ಟದಷ್ಟು ಕರ್ಪುರವು ಸುಟ್ಟು ಹಣಿಗೆ ಬೊಟ್ಟಿಡುವದಕ್ಕಾದರೂ ಹೇಗೆ ಬೂದಿಯು ಉಳಿಯುವದಿಲ್ಲವೋ ಹಾಗೆಯೇ ಪರ್ವತದಷ್ಟು ದೊಡ್ಡದಾಗಿರುವ ಪಾಪವು ನಿಶ್ಶೇಷವಾಗಿ ಸುಟ್ಟು ಹೋಗುವದು. ಸೂ॥ ಇಲ್ಲಿ ನೆಟ್ಟನೆ ಎಂಬ ಪದವನ್ನು ಗುರುವಿಗೆ ವಿಶೇಷಿಸಿ ಕೆಲವರು ಯೋಗ್ಯ ಗುರುವೆಂದು ಅರ್ಥ ಮಾಡುವರು.

೮೭. ಎಂತೆನಲು=ಹೇಗೆಂದು ಕೇಳಿದರೆ. ದೃಷ್ಟಾಂತದಿಂದ ಹೇಳುತ್ತಾನೆ–ವಜ್ರ=ಇಂದ್ರಾಯುಧ ಅಂದರೆ ಸಿಡಿಲು ತಾ॥ ಸಿಡಿಲಿನಿಂದ ಗುಡ್ಡವು ಪುಡಿ

(1) ಪ್ರಾಣಲಿಂಗಸ್ಥಳ ವಚನ ೧ (2) ಷಟ್ಸ್ಥಲ ಸುಧಾರಸ ಪುಟ ೫.

ಪುಡಿಯಾಗುವಂತೆ ಗುರುವಿನ ಉಪದೇಶದಿಂದ ಪಾಪವು ಪುಡಿಪುಡಿಯಾಗಿ ಹಾರಿಹೋಗುವದು.

೮೭. ಟೀ॥ ರಾಮನು ಇಂದ್ರಜಿತುವಿನೊಡನೆ ಮಾಡಿದ ಯುದ್ಧದಲ್ಲಿ ಸೈನ್ಯವು ಮೃತಪಟ್ಟಿರಲು ಸಂಜೀವನ ಗಿಡವನ್ನು ತರಲಿಕ್ಕೆ ಹೋದ ವಾಯು ಪುತ್ರನು ಮೇರುಪರ್ವತವನ್ನು ಕಿತ್ತಿಕೊಂಡು ಬಂದಂತೆ ಪಾಪೋದ್ಧಾರಕನಾದ ಗುರುವಿನಿಂದ ಕರ್ಮವು ಸಮೂಲವಾಗಿ ನಾಶವಾಗುವದು.

೮೯. ಟೀ॥ ಬ್ರಹ್ಮಾನುಭವವನ್ನು ಇಲ್ಲವೆ ಶಿವತೇಜಸ್ಸನ್ನು ಪಡೆದ ಗುರುವಿನ ರಹಸ್ಯವನ್ನು ತಿಳಿದ ಶಿಷ್ಯನು ಗುರುವಿನ ಬೆಳಕಿನಿಂದ (ಒಳಗನು) ತನ್ನ ನಿಜವನ್ನು ತಿಳಿದುಕೊಂಡರೆ ಕರ್ಮವನ್ನು ನಿಶ್ಶೇಷವಾಗಿ ಕಳೆದುಕೊಳ್ಳುವನು.– ಗುರುವು ಬ್ರಹ್ಮವನ್ನೂ, ಶಿಷ್ಯನು ಗುರುವನ್ನೂ ಪ್ರತಿಬಿಂಬಿಸಬೇಕೆಂದು ತಾತ್ಪರ್ಯ.

೯೦. ಉರಿಯುಂಡ = ಒಮ್ಮೆ ಸುಟ್ಟುಹೋದ. ಸರಕು ಮಾರು=ತಿರುಗಿ ಅಂಗಡಿಯಲ್ಲಿಟ್ಟು ಮಾರು. ನಿಜ=ಬ್ರಹ್ಮ ಪರತತ್ವ.

೯೨. ಬಳ್ಳ = ಅಳತೆಯ ಸೇರು, ಹಿಕ್ಕೆ = ಕುರಿಹಿಕ್ಕೆ. ನಿಗಮ = ವೇದ. ತಾ॥ ಶರಣರು ಎಲ್ಲೆಲ್ಲಿ ಈಶ್ವರನನ್ನು ಭಾವಿಸಿ ಪೂಜಿಸುವರೋ ಅಲ್ಲಲ್ಲಿ ಅವರವರಿಗೆ ಪ್ರತ್ಯಕ್ಷನಾಗಿರುವನು. ಸೂ॥ ತಿರುಕಾಳ ಹಸ್ತಿಯಲ್ಲಿ ಕಣ್ಣಪ್ಪ ದೇವರಿಗೆ ಕಂಭದಲ್ಲಿಯೂ, ಬಳ್ಳೇಶಮಲ್ಲಯ್ಯನಿಗೆ ಬಳ್ಳದಲ್ಲಿಯೂ, ಕುರುಬಗೊಲ್ಲಾಳನಿಗೆ ಹಿಕ್ಕೆಯಲ್ಲಿಯೂ, ನಂಬಿಣ್ಣನಿಗೆ ಕುಚದಲ್ಲಿಯೂ ಪ್ರತ್ಯಕ್ಷವಾದಂತೆ ವೀರಶೈವರಲ್ಲಿ ಹೇಳಿಕೆಯುಂಟು.

೯೩. ಕಡೆ=ಅಂತ್ಯ; ಮೇರೆ. ಹಿಂಗು=ರಹಿತ ಪಡಿಸು.

೯೬. ಪುರುಷ= (೧) ಜಗದಾತ್ಮ. (೨) ವೀರಶೈವ. ಸರಸ = ಸುಖಕರ; ರಸಿಕ ಲಿಂಗವುಳ್ಳವನ ಭೋಗದಿ ಜಗವು=ಜಗತ್ತು ಭಕ್ತನ ಭೋಗಕ್ಕೂ ಉದ್ಧಾರಕ್ಕೂ ಉಂಟಾಗಿರುವದು. ಅಂದರೆ ಜಗತ್ತಿನ ಜನನಕ್ಕೆ ಲಿಂಗವೇ ಕಾರಣವೆಂದು ತಾತ್ಪರ್ಯ.

೯೫. ಓಕಾರಮುಖವಲ್ಲ=ಓಕಾರವು ಬ್ರಹ್ಮದ ಮುಖವಲ್ಲ[1] ಆಕಾಶತಳವ=ಆಕಾಶ ಪಾತಾಳಗಳನ್ನು. ಮೀರಿ=ತುಂಬಿ; ದಶಾಂಗುಲ ಹೆಚ್ಚಿ. (ನೋಡಿ ಪದ್ಯ ೨೫.) ಸೂ॥ ಪಾತಾಳದಿಂ ಕೆಳಗೆ ಪುರುಷನ ಪಾದ, ಸ್ವರ್ಗಲೋಕದಿಂ ಮೇಲೆ ತಲೆ, ಬ್ರಹ್ಮಾಂಡವೇ ಅವನ ಮುಕುಟ, ಗಗನವೇ ಮುಖ, ದಶದಿ

(1) ವಿವೇಕ ಚಿಂತಾಮಣಿ ಮಾತೃಕಾಪ್ರಕರಣಂ ದಿನ್ನಾ ೯.

ಕ್ಕುಗಳೇ ಬಾಹು, ಮಹದಾಕಾಶವೇ ಶರೀರ. ನಕ್ಷತ್ರಗಳೇ ಪುಷ್ಪ, ಮೇಘಗಳೇ ಜಡೆ, ಬೆಳದಿಂಗಳೇ ವಿಭೂತಿ, ಪರ್ವತಗಳೇ ರುದ್ರಾಕ್ಷಿ ಎಂದು ವಚನಗಳಿರುವವು. [1]

೯೬. ಈ ಪದ್ಯದಲ್ಲಿ ಪೂಜೆ ಮಾಡಿದದೆ, ಕೊಂಡಾಡಿದಡೆ, ನೆನಹ ನಿಲಿಸಿದಡೆ ಎಂಬೀ ಮೂರು ಪದಗಳಿಂದ ನವವಿಧ ಭಕ್ತಿಗಳಲ್ಲಿ ಮುಖ್ಯವಾದ ಪೂಜಾ ಕೀರ್ತನಾ, ಧ್ಯಾನ ಎಂಬ ಮೂರು ಭಕ್ತಿ ಪ್ರಕಾರಗಳು ಹೇಳಲ್ಪಟ್ಟವೆ.

೯೭. ನಿಷ್ಠೆ=ಇತರ ವಿಷಯ ಪರಿತ್ಯಾಗ ಪೂರ್ವಕವಾಗಿ ಶಿವನಲ್ಲಿ ಪ್ರೀತಿ ಇಡುವದು. ಗಟ್ಟಿಗೊಂಡು = ನಿಮಿಷ ಮಾತ್ರವೂ ಬಿಡದೆ; ಸ್ಥಿರವಾಗಿ. ತಾ॥ ನಿಷ್ಠೆಯೇ ಭಕ್ತನ ಮುಖ್ಯ ಲಕ್ಷಣವಾಗಿರುವದರಿಂದ ಇದಿಲ್ಲದೆ ೩, ೫, ೯ ವೇಳೆ ಲಿಂಗಪೂಜೆ ಮಾಡಿದರೂ ವ್ಯರ್ಥ,

೯೮. ಇಟ್ಟ+ಆ+ವಿಭೂತಿ=ಗುರುವು ದೀಕ್ಷಾ ಕಾಲದಲ್ಲಿ ಬ್ರಹ್ಮಲಿಪಿಯನ್ನೊರಿಸಿ ಭಕ್ತನ ಹಣೆಯಲ್ಲಿಟ್ಟ ತ್ರಿಪುಟ್ರ ಶೋಭೆಯೇ ವಿಭೂತಿಯೆನಿಸುವದು ಪಟ್ಟಗಟ್ಟಿರುತಿಕ್ಕು =ಒಪ್ಪುವ ವಿಭೂತಿಯು ನೊಸಲಿಂಗೆ ಪಟ್ಟಗಟ್ಟಿದರೆ ಮುಕ್ತಿ ಸಾಮ್ರಾಜ್ಯದೊಡೆತನಕ್ಕೆ ಪಟ್ಟಗಟ್ಟಿದಂತಾಯಿತಯ್ಯ- (ವಚನ)! ವಿಭೂತಿಯುರಿಯದೊಡೆ= ಅದು ಶಿವಪ್ರಕಾರವೆಂದು ತಿಳಿಯದೆ ಧರಿಸಿದರೆ ಸೀಳಿದಾ ಬಟ್ಟೆಯುಂಶಕ್ಕು=(ಮೂರು) ತುಂಡಾಗಿ ಸೀಳಿದ ಬಿಳಿ ಅರಿವೆಯುಂತಿರುವದು.

೯೯. ರುದ್ರಾಕ್ಷಿ=ಜಗತ್ತಿನಲ್ಲಿ ಶಿವತತ್ವವನ್ನು ಸಂಧಾನ ಮಾಡುವದೇ ರುದ್ರಾಕ್ಷಿಯ ಸಂಕೇತ. ಭಸಿತ=ಶಿವತೇಜಸ್ಸನ್ನು ಸರ್ವತ್ರ ಸಾಕ್ಷಾತ್ಕರಿಸುವದೇ ಭಸಿತ. ಇವುಗಳನ್ನು ತಯಾರಿಸುವ ಹಾಗೂ ಇವುಗಳ ಅಧ್ಯಾತ್ಮಿಕ, ಆದಿಭೌತಿಕ ಪ್ರಯೋಜನಗಳನ್ನು ಕುರಿತು ಅಷ್ಟಾವರಣ ಸಂಬಂಧವಾಗಿ ಬರೆಯಲ್ಪಟ್ಟ ಗ್ರಂಥಗಳನ್ನು ಓದಿಕೊಳ್ಳತಕ್ಕದ್ದು. [2]

೧೦೦. ನೋಟ = ಇಷ್ಟಲಿಂಗದಲ್ಲಿ ನೋಟ. ನುಡಿ = ಪ್ರಾಣಲಿಂಗದಲ್ಲಿ ಮಂತ್ರರೂಪವಾದ ನುಡಿ. ಕೂಟ= ಭಾವಲಿಂಗದಲ್ಲಿ ಮನೋಲಯುವೆಂಬ ಕೂಟ. ಸೂ॥ ತನುವನ್ನು ಗುರುವಿಗೂ ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಕೊಡಬೇಕೆಂಬ ವೀ. ಶೈವ. ಸಾಮಾನ್ಯ ಸಿದ್ಧಾಂತದಂತೆ.ಇಲ್ಲಿ ಮನ

(1) ವಚನಶಾಸ್ತ್ರಸಾರ ಪುಟ ೮. (2) ನೋಡಿ ಬೆಳಿಯುಂಗಡಿಗೆ ೨ರ ಅಷ್ಟಾವರಣ. ವಿಚಾರಸಾರ ಪುಟ ೭೩—೧೦೩.

ಸ್ಸನ್ನು ಲಿಂಗದಲ್ಲಿರಿಸುವದನ್ನು ಮಾತ್ರವೇ ಕುರಿತು ಹೇಳಿಯುದೆ.

೧೦೧. ಟೀ॥ ಜಗವಾಗಲು ಜಗವಾಗದಿರಲು ಬಲ್ಲಮಹೇಶ್ವರನಿಗೆ ದೇಹವುಳ್ಳವನೆಂದು ಅನ್ನಬೇಡ, ದೇಹಕ್ಕಿಂತಲೂ ದೇಹಗುಣದ ಆಶೆಯನ್ನು ಅಳಿದವನೇ ಈಶ್ವರನು. ಅಂದರೆ ಜಗವೇ ಅವನಿಗೆ ಲಿಂಗಸ್ವರೂಪವಾಗಿ ತೋರುವದೆಂದು ತಾತ್ಪರ್ಯ.

೧೦೨. ಟೀ॥ ಶಿವಪ್ರಸಾದ ತುಷ್ಟನಾಗಿ(ಸರ್ವದಾ ಸರ್ವತ್ರ)ಬಹಿರೇಂದ್ರಿಯಗಳಿಂದಲೂ ಅಂತರೇಂದ್ರಿಯಗಳಿಂದಲೂ ಲಿಂಗವನ್ನು ಅನುಭವ ಮಾಡುತ್ತ ಅಂಗೇಂದ್ರಿಯಗಳೆಲ್ಲ ಲಿಂಗೇಂದ್ರಿಯವಾದವನೇ ಮಹೇಶ್ವರನು.

೧೦೩. ಅಂಗದಿಚ್ಛೆಗೆ=ಶರೀರದ ಭೋಗೇಚ್ಛೆಗಳಿಗೆ ಭಂಗಗೊಳು=ಕಷ್ಟಪಡು. ಸತ್ಯದಿ=ಶಿವನಲ್ಲಿ ನಿಷ್ಠೆಯಿಂದ. ಲಿಂಗದೊಳು ...... ನಿಲೆ=ಲಿಂಗಾಂಗಸಕೀಲವನ್ನೂ ತಿಳಿದುಕೊಂಡರೆ. ಅಂದರೆ ಷಡ್ವಿಧ ಅಂಗಗಳಲ್ಲಿ ಷಡ್ವಿಧ ಲಿಂಗಗಳನ್ನು ಷಡ್ವಿಧ ಭಕ್ತಿಗಳಿಂದ ಸಂಬಂಧ ಮಾಡುವ (ಅಂಗಸ್ಥಲಗಳು ೪೪ ಲಿಂಗಸ್ಥಲಗಳು ೫೭ ಅಂತೂ ನೂರೊಂದು ಸ್ಥಲಗಳನ್ನು ತಿಳಿದರೆ.)

೧೦೪. ವಂಶವನು ಪುಗನು=ಗುರೂಪದೇಶವನ್ನು ಹೊಂದಿ ಲಿಂಗಧಾರಣೆಯಾದ ಬಳಿಕ ತಂದೆ ತಾಯಿ ಬಂಧುಬಳಗಗಳೆಂದು ಮಲಸಂಬಂಧವ ನೆನೆಯುನು. ಅಂದರೆ ಅಪ್ರಾಕೃತನಾಗಿ ಲೌಕಿಕರು ಹೇಳುವ ಕುಲವಂಶವನ್ನು ಬಿಟ್ಟು ಶಿವ (ಗುರು) ವಂಶವನ್ನೇ ಹೇಳುವನು. ಎಂದಿಗೆ+ಆಶಿಸನು. ಹಿಂಸೆಗೆ+ಒಡಬಡನು. ಒಡಬಡು=ಸಮ್ಮತಿಸು. ಹುಸಿ ಕಳವು ಪಾರದಾರ ಪರಹಿಂಸೆರಹಿತನೇ ಪರಮೇಶ್ವರನು. [1]

೧೦೫. ಅರ್ಪಿತದ ಭೇದವನು ತಪ್ಪದೇ ತಿಳಿದಾತ=ಶುದ್ಧಾದಿ ಸುಜ್ಞಾನಾಂತವಾದ ೧೧ ತರದ ಪ್ರಸಾದ ಭೇದವನ್ನು ಚನ್ನಾಗಿ ತಿಳಿದವನು. ಅಂದರೆ ಶಬ್ದ, ಸ್ಪರ್ಶ, ರೂಪ, ರಸ ಗಂಧಗಳನ್ನು ಶ್ರೋತ್ರ, ನೇತ್ರ, ಘ್ರಾಣ ಜಿಹ್ವೆ, ತ್ವಕ್ಕುಗಳೆಂಬ ಮುಖದ್ವಾರಾ ಲಿಂಗಕ್ಕೆ ಅರ್ಪಿಸುವದು. ಅಂದರೆ ರೂಪಾಗಿ ಬಂದುದನು ಕಾಯದ ಕೈಯಲ್ಲಿಯೂ ತೃಪ್ತಿಯಾಗಿ ಬಂದುದನು. ಭಾವದ ಕೈಯಲ್ಲಿಯೂ ರುಚಿಯಾಗಿ ಬಂದುದನು ಮನದ ಕೈಯಲ್ಲಿಯೂ ಕೊಡುವದು.

(1) ಮಹೇಶ್ವರ ಲಕ್ಷಣ ಬಗ್ಗೆ ಬಸವಣ್ಣನವರ ವಚನ; ಷಟ್ಸ್ಥಲ ಸುಧಾರಸ ಪದ್ಯ ೯೫. ಹಾಗೂ ವಚನಶಾಸ್ತ್ರಸಾರ ಇತ್ಯಾದಿ ನೋಡಿ.

೧೦೬. ಈಶಪ್ರಸಾದ= ಶಿವಪ್ರಸಾದ. ಸೂಸದಲೆ=ಸ್ವಲ್ಪವಾದರೂ ಒಂದಗುಳಾದರೂ ಚಲ್ಲದೆ. ತಾ॥ ಶಿವಪ್ರಸಾದದ ಮಹಿಮೆಯು ಅಪಾರವಾದದ್ದು. (ಪ್ರಸಾದ ಮಹಿಮೆಯನ್ನು ಕುರಿತು ನೋಡಿ ವಚನಶಾಸ್ತ್ರಸಾರ ಪುಟ ೩೭೬–೭೯)

೧೦೭. ಶಿವಗಿತ್ತು = ಲಿಂಗಾರ್ಪಿತ ಮಾಡಿ ರಾಗದಿಂ ಸತ್ಯವೆರಸಿಹ=ಪ್ರೀತಿಯಿಂದ ಶಿವನಲ್ಲಿ ಬೆರೆತುಹೋದ.

೧೦೮. ಟೀ॥ ಲಿಂಗಾರ್ಪಿತವಿಲ್ಲದೆ ತಿನ್ನುವವನು ಸುಖವನ್ನು ದೇಹಭೋಗವೆಂದು ಭೋಗಿಸಿ ಮುಂದಿನ ಭೋಗಕ್ಕೆ ಬೀಜವನ್ನು ಸಂಗ್ರಹಿಸುವವನಾದ್ದರಿಂದ ತಿಂಗಳ ಹಿಂದೆ ಸತ್ತು (ತಿಂಗಳ ಅಸ್ವಸ್ಥದಲ್ಲಿ ಬಿದ್ದು ಸತ್ತು!) ಕೊಳೆತು ನಾರುವ ನಾಯಿಯ ಮಾಂಸವನ್ನು ತಿಂದಂತಾಗುವದು.

೧೧೦. ಭಂಗಬಂಧನವು=ದುಃಖಕ್ಕೆ ಕಾರಣವಾದ ಭವಪಾಶವು.

೧೧೧. ಅಣಿಮಾದಿಯೊಳಿರಲು= ಅಣುವಿನಷ್ಟು ಸಣ್ಣಾಗುವ; ಅಣಿಮಾ ಲಘಿಮಾ ಮೊದಲಾದ ಅಷ್ಟಸಿದ್ಧಿಗಳನ್ನು ಬಲ್ಲವನಾಗಿ. ಲಿಂಗದಿ ಮನವ ಹೂಣಿ+ಕೇಣವಿಡಿದು+ವಿರತಿಯಲಿ+ಇಹನು=ಲಿಂಗದಲ್ಲಿ ಮನಸ್ಸನ್ನು ಹುಗಿದು+ಅದನ್ನು ಆಟೋಪದಲ್ಲಿಟ್ಟುಕೊಂಡು+ ವೈರಾಗ್ಯದಲ್ಲಿರುವನು. ಆಣಿವ ಮೊದಲಾದ ಮಲತ್ರಯಗಳಿಂದ ದೂರವಾಗಿರುವನು.

೧೧೨. ತಿರದ=ಸ್ಥಿರವಾದ; ಮುಪ್ಪಾಗದ ಬಂದರೆ=ದೊರೆತರೆ.

೧೧೩. (ಸರಿನೋಡಿ ಪದ್ಯ ೧೦೭) ಕಿಂಕರತೆ=ಸೇವಾವೃತ್ತಿ.

೧೧೪. ಮಲಯಜ = ಮಲಯಪರ್ವತದಲ್ಲಿ ಹುಟ್ಟುವ ವೃಕ್ಷ. ಅಂದರೆ ಶ್ರೀಗಂಧದ ಗಿಡ. ಸುಲಲಲಿತ=ಶುದ್ಧ, ನಿರ್ಮಲವಾದ ಸೂ॥ ಶರಣನ ಶುದ್ಧ ಹೃದಯವೇ ಗಂಧದ ಗಿಡ. ಶಿವನ ಆವಾಸವೇ ಗಂಧ.

೧೧೫. ಸುಘೃತ=ತಿಳಿದಪ್ಪ ಪಚ್ಚತಳ=ಶುದ್ಧವಾದ ಕರ್ಪುರ; ಪಚ್ಚಕರ್ಪುರ ಅಚ್ಚಳಿದು=ಪೂರ್ವದ ರೂಪವನ್ನು ಬದಲಿಸಿ; ದೇಹಗುಣವನ್ನು ಬಿಟ್ಟು ನಿಜದಿ=ಬ್ರಹ್ಮದಲ್ಲಿ. ಟೀ॥ ಶುದ್ಧವಾದ ತುಪ್ಪವೂ ಕರ್ಪುರವೂ ಬೆಂಕಿಯಲ್ಲಿ ಸುಟ್ಟು ರೂಪಾಂತರವಾಗಿ ಹವೆಯಲ್ಲಿ ಹೇಗೆ ಕೂಡಿಕೊಂಡು ಹೋಗುವವೋ ಹಾಗೆಯೇ ಶರಣನು ಲಿಂಗಾಂಗಭೇದವನ್ನು ಅಡಗಿ ಶಿವನಲ್ಲಿ ತಾದಾತ್ಮ್ಯವಾಗಿರುವನು.

೧೧೬. ಅಚ್ಚು=ದೇಹಭಾವ. ನಿಚ್ಚಟದ=(ಸಂ) ನಿಶ್ಚಟ = ಕಪಟವಿಲ್ಲದ= ತಾನೇತಾನಾದ; ಯಥಾರ್ಥವಾದ ನಿಲ

ವು=ಇರುವಿಕೆಯು ಅಂದರೆ ಕೈವಲ್ಯ. ೫॥ ಉರಿಯುವ ಕೊಳಲಿನಲ್ಲಿ ಕಿಚ್ಚ ನ್ನೂ ಕೋಲನ್ನೂ ಬೇರೆ ಮಾಡಲಾಗ ದಂತೆ ದೇಹಭಾವನನ್ನು ನಾಶಪಡಿಸಿದ ಶರಣನು ಪರತತ್ವದಲ್ಲಿ ಸಮರಸವಾಗಿ ರುವನು.

೧೭. ತಡಿ=ನದಿತೀರ. ಮಂಗಳ=ಗ್ರಹ. ಬಲ=ಬಲಾಚಾರ, ಯೋಗ.

೧೧೮. ಆಕಾಶಪಥಮೀರಿದ= ೩೬ ತತ್ವಗಳಿಂದ ಉಪರಿಯಾದ; ಸೂಕ್ಷ್ಮವೂ ಅಖಂಡವೂ ಆದ. ಏಕವಸ್ತು=ಪರತತ್ವ. ಸಾಕಾರವಳಿದು=ನಾಮರೂಪ ಭೇದಗಳನ್ನು ನಾಶಪಡಿಸಿ, ಏಕತ್ರ=ಸಮದೃಷ್ಟಿ. ಲಿಂಗದೃಷ್ಟಿ.

೧೧೯. ಅತಿಗಳೆದು= ಸಂಪೂರ್ಣವಾಗಿ ತ್ಯಜಿಸಿ.

೧೨೦. ದೀನ=ದರಿದ್ರ. ಅನುಚಿತ=ಯೋಗಾಯೋಗ್ಯ ಭೇದ.

೧೨೧. ಆರಾರು = ಯಾವ ಕುಲ ಜಾತಿಯವನಾದರೂ ಒಳಗೆ=(ಶಿವಸುಖದಲ್ಲಿ) ಕೈವಲ್ಯದಲ್ಲಿ. ನಿಲಲು=ಸೇರಲು (ಅಪೇಕ್ಷಿಸಿದರೆ) ಆರುಸ್ಥಲವು=ಭಕ್ತಾದಿ ಐಕ್ಯಾಂತವಾದ ಷಟ್ಸ್ಥಲಗಳು. ಆರ ಮೊಗ=ಶಿವನಿಗೆ ಸದ್ಯೋಜಾತಾದಿ ಅಘೋರಾಂತವಾದ ಐದು ಮುಖಗಳಲ್ಲದೆ ಪಾತಾಳಮುಖವೆಂಬದಿನ್ನೊಂದು ಮುಖವಿರುವದು. ಇದನ್ನು ತತ್ವಜ್ಞರಲ್ಲದೆ ಉಳಿದವರು ಅರಿಯರು.[1] ಇಲ್ಲವೆ ಶ್ರೋತ್ರಾದಿ ಹೃದಯಾಂತವಾದ ೬ ವದನಗಳು ಆರು+ಕರವ+ಅರಿದ= (೧) ಸುಚಿತ್ತ, (೨) ಸುಬುದ್ಧಿ. (೩)ಸುಮನ, (೪) ನಿರಹಂಕಾರ. (೫) ಸುಜ್ಞಾನ. (೬) ಸದ್ಭಾವವೆಂಬ ಆರು ಕೈಗಳನ್ನು ತಿಳಿದ ಇಲ್ಲವೆ ಷಡ್ವಿಧ ಅಂಗಗಳಲ್ಲಿ ಷಡ್ವಿಧ ಲಿಂಗಗಳನ್ನು ಷಡ್ವಿಧ ಭಕ್ತಿಗಳಿಂದ ಸಂಬಂಧಮಾಡಿಕೊಡುವ ನೂರೊಂದು ಸ್ಥಲಗಳನ್ನು[2] ತಿಳಿದ ಉತ್ತಮನು=ತತ್ವಜ್ಞನು.

೧೨೨. ಆಗಿಲ್ಲ ಹೋಗಿಲ್ಲ=ಅನಾದ್ಯನಂತ; ಕಾಲಾತೀತ. ಮೇಗಿಲ್ಲ ಕೆಳಗಿಲ್ಲ=ಸ್ಥಳಾತೀತ. ತಾಗಿಲ್ಲ = ಸರಿಯಾದದ್ದು ಇನ್ನೊಂದಿಲ್ಲ. ತಪ್ಪಿಲ್ಲ = ನಿತ್ಯಮುಕ್ತ. ತಡೆಯಿಲ್ಲ=ಅಡ್ಡಿಯಿಲ್ಲ = ಸರ್ವತಂತ್ರ ಸ್ವತಂತ್ರ. ದೇಗುಲವೆ ಇಲ್ಲ=(ಇಂಥಪ್ಪ ಲಿಂಗಕ್ಕೆ) ಗುಡಿಯೇ ಇಲ್ಲ.

೧೨೩. ಅಲಸದಾ = ಬೇಸರಿಯದೇ ಮಾಡುವ. ಹುಲುಸು=ಸಮೃದ್ಧಿ. ಬಲು ಕವಲು+ಒಡೆದು= ಅನೇಕ ಟೊಂಗೆಗಳನ್ನು ಬಿಟ್ಟು. ಬೇರಿಂದ =(ನೆಲದೊಳಗಿನ ಬೇರಿನಿಂದ ಕಾತಂತೆ = ಕಾಯಿ

(1) ಚನ್ನಬಸವ ಪುರಾಣ ಅಧ್ಯಾಯ ೧೦ ಶ್ಲೋಕ. (2) ಷಟ್ಸ್ಥಲ ಸುಧಾರಸ ಪುಟ ೧೭

ಬಿಟ್ಟಂತೆ ತಾ॥ ಶಿವನಲ್ಲಿ ನೆಟ್ಟ ಭಕ್ತಿಯು ವಿಪುಲವಾಗಿ ಫಲಿಸುವದು.

೧೨೫. ಟೀ॥ ನಿಮಿಷಮಾತ್ರದಲ್ಲಿ ಸೃಷ್ಟಿಯೆಲ್ಲಾ ತಿರುಗಿ ಬರುವ ಮನಸ್ಸನ್ನು ಶಿವನಲ್ಲಿ ನಿಷ್ಠೆಯಿಂದ ನಿಲ್ಲಿಸಿ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಇವು ಮೂರು ಒಂದೇ ಎಂದು ಯಾವನು ತಿಳಿಯುತ್ತಾನೋ ಅವನೇ ಉತ್ತಮ ಜ್ಞಾನಿ. ಇಲ್ಲವೆ ಭಕ್ತನೆನೆಸುವನು.

೧೨೬. ಸಜ್ಜೆ=ಸಂ(ಶಯ್ಯ) ಆಧಾರ. ತಾ॥ ಕಮಲ ಪುಷ್ಪಕ್ಕೆ ಸಮಾನವಾದ ಶರೀರದಲ್ಲಿ ಅಮೌಲ್ಯವಾದ ರತ್ನದಂತಿರುವ ಜೀವವೇ (ಅಂದರೆ ತಾನೇ) ಲಿಂಗವೆಂದು ತಿಳಿದು ಪೂಜಿಸುವವನೇ ದೇವರು. ಇಲ್ಲವೆ ದೇವರನ್ನು ಯೋಗ್ಯವಾಗಿ ತಿಳಿದು ಪೂಜಿಸುವವನೆಂದು ತಿಳಿಯತಕ್ಕದ್ದು.

೧೨೭. ಆತಂತ=ಚಿಂತೆ; ರೋಗಾವಳಿ, ಭಯ=ಭವಭಯ ದಶವಿಧ ಪಾತಕಗಳು=ಪಂಚಮಹಾಪಾತಕಗಳ ಹಾಗೂ ಪಂಚ ಉಪಪಾತಕಗಳ ವಪಾಕ.[1] ಇಲ್ಲವೆ ಜ್ಞಾನೇಂದ್ರಿಯ ಪರಿಚಕ, ಹಾಗೂ ಕರ್ಮೇಂದ್ರಿಯ ಪಂಚಕಗಳಿಂದುಂಟಾದ ಪಾಪಗಳು.

೧೨೮. ಹಿಂಗು=ಅಡಗು; ಸಮರಸವಾಗು ಲಿಂಗಾಂಗಸಾಮರಸ್ಯವಾದನು. ನೀರು ಬಲಿತು ರೂಪಾಂತರವಾಗಿ ಕೊಬ್ಬರಿಯಾದಂತೆ ಅಂದರೆ ಗಟಕ ತೆಂಗಿನ ಕಾಯಂತೆ ಇರುವನೆಂದು ತಾತ್ಪರ್ಯ.

೧೨೯. ಟೀ॥ ಅಂಗವನ್ನೂ ಲಿಂಗವನ್ನೂ ಸಂಬಂಧಿಸುವದು ಹೇಗಾಗುವದೆಂದು ಕೇಳಿದರೆ ಇಷ್ಟಲಿಂಗದ ತ್ರಿವಿಧ ಷಡ್ವಿಧ ಸ್ಥಾನಗಳಲ್ಲಿ ಸಂಬಂಧ ಮಾಡುವ ಪರಿಕ್ರಮನನ್ನು ತಿಳಿದು ಯಾವಾಗಲೂ ಲಿಂಗಚಿಂತನದಲ್ಲಿರುವದರಿಂದಲೇ ಎಂದು ಹೇಳಬೇಕು. ಹೀಗಿದ್ದರೆ ದೇವರು ಭಕ್ತನನ್ನು ಕ್ಷಣಮಾತ್ರವಾದರೂ ಅಗಲಿರನು.

೧೩೦. ಇಮ್ಮನ= (ಎರಡು+ಮನ) ಚಾಂಚಲ್ಯ. ವಿಧಿವಶವು = ಮರಣ ನಿಶ್ಚಯ. ಟೀ॥ ಮರಣವು ನಿಶ್ಚಯವಾಗಿದ್ದು. ಅದು ಸಂಭವಿಸುವದು. ಯಾವಾಗೆಂದು ತಿಳಿಯದಿರುವದರಿಂದ ತಡಮಾಡದೆ ಶಿವಾರಾಧನೆಯನ್ನು ಕೈಕೊ! ಪರಮಾರ್ಥವನ್ನೂ ಪ್ರಪಂಚವನ್ನೂ ಹಿಡಿದು ಕೆಡಬೇಡ. ಎರಡನ್ನೂ ಸೇವಿಸ ಪ್ರಯತ್ನಿಸಿ ನಿಷ್ಕಾರಣವಾಗಿ ಕೆಟ್ಟು ಹೋಗುವಿ!

೧೩೧. ಅಷ್ಟವಿಧದರ್ಚನೆ=ಷೋಢಶೋಪಚಾರಗಳಿಂದ ಕೂಡಿದ ಎಂಟು

(1) ವೀವೇಕ ಚಿಂತಾಮಣಿ.

ವಿಧವಾದ ಲಿಂಗಪೂಜೆ. ಅಂದರೆ ಜಲ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ ಇವುಗಳಿಂದ ಕೂಡಿದ್ದು ನಿಷ್ಠೆ ದೃಢಭಕ್ತಿ.

೧೩೨. ಇಷ್ಟಲಿಂಗ=ಗುರುದತ್ತವಾಗಿ ಸಂಗತವಾಗಿ ಶರೀರದಲ್ಲಿ ಪೂಜಿಸಲ್ಪಡುವ ಲಿಂಗ; ಕರ್ಮದ ಬಟ್ಟೆ=ಸಂಸಾರ ಚಕ್ರ ಹೋಹ=ಹೋಗುವದು ನಿಶ್ಚಯ.

೧೩೩. ಮುಟ್ಟಿಸು=ಹಚ್ಚು; ಬೆಳಗು. ಕೊಟ್ಟಗೆ=ಗುಡಿಸಲ. ಇಳಿಚಪ್ಪರ ಸೂ|| ಆರಿಸುವದಕ್ಕೆ ಜನರಿಲ್ಲದ್ದರಿಂದ ಹೇಗೆ ಅದು ಉರಿಯುವದೋ ಹಾಗೆಯೇ ಶಿವಪೂಜೆ ಇರುವದು.

೧೩೪. ಒಸೆದು = ಪ್ರೀತಿಯಿಂದ; ಆಡಂಬರದಿಂದ ಮಿಸುನಿ = ಭಂಗಾರ. ಗಿಣ್ಣಿಲು ಗಿಂಡಿ=ಒಂದು ತರದ ಸೊಂಡಿಲು ಗಿಂಡಿ; ಧಾರೆಯ ಗಿಂಡಿ. (ಕಲಶಗಳು ಇತ್ಯಾದಿ.) ಹುಸಿದು=ಭಕ್ತಿಯಿಲ್ಲದೆ. ಜೋಗಾರ ಪಸರವಿಟ್ಟಂತೆ= ಕಂಚುಗಾರನು ಅಂಗಡಿಯನ್ನು ಹಚ್ಚಿದಂತೆ ಅಗುವದು.

೧೩೫. ಮಸಿವಣ್ಣವೆಂತೆನಲು=ಹೇಗೆ ವ್ಯರ್ಥವೆಂದು ಕೇಳಿದರೆ ಮುಸುಕಿದ=(ಕರುಳುಗಳಲ್ಲಿ) ತುಂಬಿಕೊಂಡಿದ್ದ ಪೃಷ್ಟ=ಗುದದ್ವಾರ. ಅಮೇಧ್ಯವನ್ನು ಹೂವುಗಳಿಂದ ಮುಚ್ಚಿದಂತಿರುವದೆಂದು ನಾರಾಯಣ ಶಾಸ್ತ್ರಿಗಳು.[1]

೧೩೬. ಹೆತ್ತುಪ್ಪ= (ಹೆರು ಧಾತು ಘಟ್ಟಿಯಾಗು) ಶುದ್ಧವಾದ ಮೇಲಾದ ತುಪ್ಪ. ನಿತ್ಯ ನೆಲೆಗೊಳ್ಳದೆ=ನಿತ್ಯನಾದ ದೇವಗಲ್ಲಿ ಯಾವಾಗಲೂ ಭಕ್ತಿಯೆಲ್ಲದೆ ಹತ್ತಿಗೇಡು = ಬತ್ತಿಗೆ ವೆಚ್ಚಮಾಡಿದ ಅರಳಿಯು ವ್ಯರ್ಥ.

೧೩೭. ಆಳುತ+ಏಳುತ= ( ನೀರಿನಲ್ಲಿ) ಮುಳುಗುತ್ತ+ಏಳುತ್ತ. ಬೆರಳು ಚಾಳಿ+ಜಪದಲ್ಲಿ ಬೆರಳು ಅಲ್ಲಾಡಿಸುವದು. ಲೆಕ್ಕ ಮಾಡುವಾಗ ಬೆರಳೆಣಿಸಿದಂತೆ ಕಾಣುವದು. ಮಿಡುಕುವ ಬಾಯಿ=ಮಂತ್ರವನ್ನು ಅನ್ನುವಾಗ ಏನಾದರು ತಿಂದಂತೆ ಕಾಣುವದು. (ಇದು ಹಾಸ್ಯ) ಮೇಳ=ಸಂಸಾರ; ವ್ಯಭಿಚಾರ; ದುಸ್ಸಹವಾಸ. ಸೂ|| ಆಳುತೇಳುತ ಬೆರಳುಚಾಳಿ–ಎಂಬದಕ್ಕೆ ಕಿಟಲ್ ಪಂಡಿತರು ಕೂಡ್ರುವಾಗಲೂ ಏಳುವಾಗಲೂ ದೇವರ ಹೆಸರನ್ನು ಹೇಳುತ್ತ ಬೆರಳುಗಳಿಂದ ಲಟಿಕು ಮುರಿಯುವದೆಂದು ಹೇಳಿರುವರು [2]

೧೩೮. ಎಣಿಸು=ಬಾಯಿಲೆಕ್ಕ ಮಾಡಿದಂತೆ ಕಾಣು. ಪೊಣರು=ಯುದ್ಧ

(1) ಸಟೀಕ ತಾತ್ಪರ್ಯ ಪುಟ ೨೯. (2) ಕನ್ನಡ–ಇಂಗ್ಲಿಷ ನಿಘಂಟು. ಪುಟ ೧,೧೪೦.

ಮಾಡು ಬೆರಳುಗಳು ಒಂದಕ್ಕೊಂದು ತಾಕಿ ಜಗಳಮಾಡಿದಂತೆ ಕಾಣುವದು. (ಇದು ಹಾಸ್ಯ). ಒಂದನು ಎಣಿಸುವ= (೧) ಮನಸ್ಸಿನಲ್ಲಿ ಬೇರೆಬೇರೆ ವಿಷಯಗಳನ್ನು ಕುರಿತು ಯೋಚಿಸುವ. (೨) ಮಣಿಯನ್ನು ಹಿಡಿದು ಲೆಕ್ಕಿಸುವ. ಜಪವು ಮುಗಿಯಿತೆಂದು ಮುಖ್ಯ ಮಣಿಯು ಗಂಟಿನಿಂದ ತಿಳಿಯುವದಲ್ಲದೆ ಮನಸಿನಿಂದಲ್ಲ. ಅಂದರೆ ಜಪದಲ್ಲಿ ಶರೀರವಲ್ಲದೆ ಮನಸ್ಸಿಲ್ಲವೆಂದು ತಾತ್ಪರ್ಯ

೧೪೯. ಪೂಜೆಯಲ್ಲಿ ಮನಸಿಲ್ಲದವರು ಹಸಿದ ನಾಯಿಯು ಡೊಕ್ಕೆ ಕಿಸಿದುಕೊಂಡು ಜನರಿಲ್ಲದ ಊರಲ್ಲಿ ಮನೆ ಮನೆ ಹಣಿಕಿದಂತಿರುವದು.

೧೫೦. ಕೊಲುವ=ಪರರನ್ನು ನಾಶಪಡಿಸುವ. ಸ್ವಾರ್ಥಚಿಂತನೆಯುಳ್ಳ. ಎರೆದ=ತುಂಬಿದ. ಮಗ್ನನಾದ. ಕೈ, ಬಾಯಿ, ಮನಸ್ಸು ಅಂದರೆ ತ್ರಿಕರಣಗಳು ಅಶುದ್ಧತ್ವದಿಂದ ತುಂಬಿದ್ದರೂ ಸಂಭಾವಿತನಂತೆ ಶಿವಪೂಜೆಯನ್ನು ಮಾಡುವವನು ಹೊಲೆಯನೇ ಸರಿ. ತಿನ್ನುವ ಬಾಯಲ್ಲಿ ಮಂತ್ರವೂ ದುಷ್ಟಕಾರ್ಯಗಳನ್ನು ಮಾಡುವವನ ಕೈಯಲ್ಲಿ ಶಿವಪೂಜೆಯೂ ಇರಲಾಗದೆಂದು ತಾತ್ಪರ್ಯ. ಆಹಾರಕ್ಕಾಗಿ ಪ್ರಾಣಹಿಂಸೆಮಾಡುವ ಕೈಯಿಂದ ಪೂಜೆಯೂ ಅಂಥಕೊಂದ ಪ್ರಾಣಿಯನ್ನು ತಿನ್ನುವ ಬಾಯಲ್ಲಿ ಮಂತ್ರವೂ ಎಂದು ನಾರಾಯಣ ಶಾಸ್ತ್ರಿಗಳು [1]

೧೫೧ ಕ್ಷೇಮ=ಅನುಗ್ರಹ. ೧೫೨ ಕಪಿ=ಮಂಗ, ಹುಚ್ಚ, ಲೋಭಿ.

೧೫೩. ಟೀ॥ ಗುರುವಿನ ಆಶೀರ್ವಾದವಾದ ಬಳಿಕ ಕೈಗೂ, ಗಂಗಾಳಕ್ಕೂ ಹತ್ತಿದ್ದ ಪ್ರಸಾದ ಕಣಗಳನ್ನು ದುರ್ಲಕ್ಷದಿಂದ ತೊಳೆದು ಚಲ್ಲಲಾಗದು. ಹೀಗೆ ಮಾಡಿದರೆ ಪವಿತ್ರವಸ್ತುಗಳನ್ನು ಸಾಮಾನ್ಯವಾಗಿ ತಿಳಿದ ದೋಷಬರುವದು.

೧೫೪. ಒಲುಮೆ=ಪ್ರಸನ್ನತೆ. ತಾ॥ ವಿದ್ಯಾಮದ, ಕುಲಮದವಿದ್ದು ಲಿಂಗದ ಕಟಾಕ್ಷವಿಲ್ಲದಿದ್ದರೆ ಪ್ರಯೋಜನವಿಲ್ಲ.

೧೫೫. ಓದು=ವಿದ್ಯೆ, ಪಾಂಡಿತ್ಯ. ವಾದ=ತರ್ಕಶಕ್ತಿ. ಗಾದೆಯ ಮಾತು= ಲೋಕಾನುಭವ ಹಾದಿ=ತತ್ವಮರ್ಮ.

೧೫ . ಒಪ್ಪಾದ=ಶಾಸ್ತ್ರಸಮ್ಮತವಾದ. ಪುಷ್ಪವೇರಿಸು=ಲಿಂಗಪೂಜೆಮಾಡು. ಅರ್ಪಿತದ ಗೊಡದೆ=ಲಿಂಗಾಂಗ ಸಕೀಲ ವಿಚಾರ. ನೆಪ್ಪ=ನೆಪ್ಪು (ಲಿಂಗದ) ಯಥಾರ್ಥ ಜ್ಞಾನ, ಭಕ್ತಿ.

೧೫೭. ಕೊಂಡು=(೧) ಗುರುದೀಕ್ಷೆ ತಕೊಂಡು. ಆ ಲಿಂಗವನ್ನು ಕ್ರಿಯಕ್ಕೆ

(I) ಸಟೀಕ ಪುಟ ೨೩.

ಕೊಂಡು. ಕೊಂಡಾಡು=ಆರಾಧಿಸು. ಕೊಂಡು+ಆಡು=ಲಿಂಗ ಜ್ಞಾನವನ್ನು ತಿಳಿದು ವ್ಯವಹರಿಸು. ಹೆಸರಿನ ಲಿಂಗಾಯತನು ಕೊರಳಲ್ಲಿ ಲಿಂಗದ ಬದಲಿಗೆ ಕೆಂಡವನ್ನು ಕಟ್ಟಿರುವನೆಂದು ತಿಳಿಯುತಕ್ಕದ್ದು. ಅಂದರೆ ಇಂಥವನಿಗೆ ನಾಶನವು ತಪ್ಪದೆಂದು ತಾತ್ಪರ್ಯ.

೧೪೮. G. S. ಪ್ರತಿಗಳಲ್ಲಿ 'ಕಣ್ಣುಮನ ನಟ್ಟರೆ ಸಾಕು' ಎಂಬ ಪಾಠವು ಇರುವದು.

೧೫೧. ಮಾದೇವ= (ಸಂ) ಮಹಾದೇವ. ಆದಪನೆ=ರಕ್ಷಿಸುವವನೇ.

೧೫೨. ಚಿತ್ರ=ಸೌಂದರ್ಯ. ವಿಚಿತ್ರ=ಅಡದ್ಭುತ. ಚಿತ್ರಿಸು=ಜ್ಞಾನದಿಂದ ರಚಿಸು.

೧೫೩. ಕಥಾನುಸಾರ—ಆಲದ ಗಿಡದ ಬುಡದಲ್ಲಿ ಮಲಗಿದ್ದ ದಾರಿಕಾರನೊಬ್ಬನು ಅಗಾಧವಾದ ದೇವರ ಜ್ಞಾನವನ್ನು ಕುರಿತು ಯೋಚಿಸುತ್ತ ಆತನು ಕುಂಬಳ ಬಳ್ಳಿಗೆ ದೊಡ್ಡ ಕಾಯಿಗಳನ್ನೂ ಆಲದಂಥ ದೊಡ್ಡ ಮರಕ್ಕೆ ಸಣ್ಣ ಕಾಯಿಗಳನ್ನೂ ಮಾಡಿದ್ದರಲ್ಲಿ ಸ್ವಲ್ಪ ತಪ್ಪಿರುವನೆಂದು ತನ್ನೊಳಗಂದುಕೊಂಡು ನಿದ್ರೆಹೋದನು. ಒಳ್ಳೇ ಜಂಪು ಹತ್ತಿದಾಗ ಒಂದು ಆಲದ ಹಣ್ಣು ಉದುರಿ ಅವನ ಮೂಗಿನ ಸಿಂಬೆಯು ಮೇಲೆ ಬಿತ್ತು. ಅದರಿಂದ ಅವನು ಎಚ್ಚೆತ್ತು ನೋಡಲು ಮೂಗು ಬಿಚ್ಚಿ ವಸ್ತ್ರದ ಮೇಲೆಲ್ಲ ರಕ್ತವು ಸುರಿಯುತ್ತಿತ್ತು. ಆಗ ಅವನು ಎದ್ದು ದೇವರು ಆಲದ ಗಿಡಕ್ಕೆ ಕುಂಬಳ ಕಾಯಿಯಂಥ ದೊಡ್ಡ ಕಾಯಿಗಳನ್ನು ಮಾಡಿದ್ದರೆ ನನ್ನ ತಲೆಯು ಒಡೆದು ಹೋಗುತ್ತಿತ್ತಲ್ಲಾ! ಎಂದು ತನ್ನ ಅಲ್ಪಜ್ಞಾನವನ್ನು ತಿಳಿದು ನಾಚಿಕೊಂಡು ಮನೆಗೆ ಹೋದನು.

೧೫೪. ಭೃಂಗ=(೧) ಗುಂಗೀಹುಳ (೨) ಜಾತಕಪಕ್ಷಿ.

೧೫೫. ಇವುಗಳ ಎಲೆ, ಹಣ್ಣು, ಬೀಜಗಳಲ್ಲಿ ದೇವರು ಔಷಧವನ್ನು ಹನಿಯಾಗಿ ಇಟ್ಟಿರುವನು.

೧೫೬. ಭ್ರಷ್ಟದೈವ=ಮೂರ್ತಿ, ಇಷ್ಟಾರ್ಥ= ಬೇಡಿದ ಪದಾರ್ಥ.

೧೫೭. ಬಲ್ಲಿದ = ಸರ್ವಶಕ್ತನಾದ. ಆತನು+ಇಲ್ಲೆನಲಿಕೆ+ಅರಿಯ.

೧೫೮. ಟೀ॥ ಹೊಟ್ಟೆಗಾಗಿ ಮನೆಮನೆ ತಿರುಗುವ ಮೂರ್ತಿಗಳನ್ನು ಬೇಡಿಕೊಂಡರೆ ತಿರುಕರಿಂದ ತಿರಿದುಕೊಂಡಂತಾಗುವದು.

೧೫೯. ಭೇದಿಸು=ವಿವೇಕಿಸಿ ತಿಳಿ. ಎಡೆಮಾಡು=ನೈವೇದ್ಯಕೊಡು.

೧೬೦. ತನ್ನಲಿಹಲಿಂಗ=ತನುತ್ರಯದಲ್ಲಿ ಕೂಡಿದ ಇಷ್ಟಪ್ರಾಣ, ಭಾವ,

ಲಿಂಗಗಳನ್ನು ಮನ್ನಿಸಲಿಕ್ಕೆ=ಪೂಜಿಸಲಿಕ್ಕೆ ಬಿನ್ನಣ=(ಸಂ) ವಿಜ್ಞಾನ ಹಸ್ತಕೌಶಲ್ಯ ಅನ್ಯಾಯ=ಅಧರ್ಮ.

೧೬೧. ಲಿಂಗಕೆ+ಉಣಬಡಿಸಿ, ಬಣಗು=ಕ್ಷುದ್ರ ಮನುಷ್ಯ.

೧೬೨. ಕಳೆಯನಿಲಿಸಿದ= ಪ್ರಾಣಪ್ರತಿಷ್ಠೆ ಮಾಡಿದ

೧೬೩. ಬಟ್ಟೆಯಾ ಆ ಕಲ್ಲು=ದಾರಿಯಲ್ಲಿದ್ದ ಗುಂಡುಕಲ್ಲು, ಲಿಂಗವು+ಅಡಿಯಾಗಿ. ಸೂ॥ ಇವರಿಗಿಂತ ಮುಂಚೆ ಕೊರಳೊಳಗಿನ ಲಿಂಗ ಅಡ್ಡ ಬೀಳುತ್ತದೆ. ಹೀಗೆ ಕಲ್ಲಿಗೆ ಕಲ್ಲು ಅಡ್ಡಬಿದ್ದು ಮನಸ್ಸು ಬೀಳದೆ ಇರುವದರಿಂದ ಇವರು ಭ್ರಷ್ಟರೆಂದು ಹೇಳಲ್ಪಟ್ಟಿತು. ಅಡಿಟಿಪ್ಪಣಿ. ಮೆಟ್ಟಿದಾ=ಹೂಳಿರುವ.

೧೬೪. ಸಂಬಾರ ಅರೆವ ಬಲುಕಲ್ಲು=ರುಬ್ಬುವ ದೊಡ್ಡ ಗುಂಡು. ಟೀ॥ "ಅಜ್ಞಾನಾಂ ಪ್ರತಿಮಾ ಪೂಜಾ" ಎಂಬ ಉಕ್ತಿಯನ್ನನುಸರಿಸಿ ಮೂರ್ತಿಪೂಜೆಯು ಅಜ್ಞಾನಿಗಳಿಗೆಂದು ಅವುಗಳನ್ನು ಒಮ್ಮೆ ನಂಬಬೇಕಂತಲೂ ಮತ್ತೊಮ್ಮೆ ಅದು ಜ್ಞಾನಿಗಳಿಗೆ ಅನವಶ್ಯವಾಗಿರುವದರಿಂದ ಅವುಗಳನ್ನು ನಂಬಲಾಗದೆಂತಲೂ ಬೋಧಿಸುತ್ತಿರುವರು. ಹೀಗಿರುವಲ್ಲಿ ದೇವರು ಅರೆಯುವ ಕಲ್ಲಿನಂತಿರುವನೆಂದರೆ ಯಾರು ನಂಬುವರು!

೧೬೬. ಬೋದಿಗೆ=ಕಂಭಕ್ಕೂ ಅಡ್ಡತೊಲೆಗೂ ನಡುವೆ ಆಧಾರವಾಗಿ ಇಟ್ಟಿರುವ ತುಂಡು. ನಡುರಂಗ=ಮಧ್ಯಭಾಗ ಗರ್ಭಗುಡಿ ? ಸೆರಗು=ಚುಂಗು ತುದಿ. ತಾ॥ ಎಲ್ಲಕ್ಕೂ ಕಲ್ಲು, ದೇವಗೂ ಕಲ್ಲು ನಿಜನಾಗಿ ಜೀವವುಳ್ಳ ದೇವರು ಬೇರೆ ಇರುವನು.

೧೬೭. ಪ್ರಾಣ=ಜೀವಾತ್ಮ. ಪರಮ=ಪರಮಾತ್ಮ. ಮಾಣದೆ=ಬಿಡದೆ. ಪ್ರಾಣಾತ್ಮ=[ಜೀವವುಳ್ಳ] ದೇವರು.

೧೬೮. ಕಲ್ಲುಗುಂಡು=ಗುಂಡಕಲ್ಲು ಅರಳು=ಹೂವು. ಬುಗುಟು+ಇಲ್ಲದೆ+ಇಲ್ಲ=ಕಲ್ಲಿಗೆ ತಲೆತಾಗಿ ಬಾಯುವವಲ್ಲದೆ ಬೇರೆ ಪ್ರಯೋಜನವಿಲ್ಲ.

೧೬೯. ಹಣ್ಣಿಸಿ=ಸಿದ್ಧಪಡಿಸಿ, ಒಡ್ಡಿ. ತಾ ಮಾಯೆಯಿಂದ ಶಿವನು ಮನುಷ್ಯರನ್ನು ಇವುಗಳ ಮೂಲಕ ಹಿಡಿದು ತನ್ನ ಆಧೀನತೆಯಲ್ಲಿಟ್ಟಿರುವನು.

೧೭೦ ಗಡ=ನಿಶ್ಚಯ ಹೌದು. ಸ್ಥಿತಿ=ಪಾರಿಪಾಲನೆ ತಾ॥ ಉತ್ಪತ್ತಿ, ಸ್ಥಿತಿ ಲಯಗಳಿಗೆ ಕಾರಣರಾದ ತ್ರಿಮೂರ್ತಿಗಳ ಮೂಲವನ್ನು ತಿಳಿದು ನೋಡಿದರೆ ಅವರ ಸಾಮರ್ಥ್ಯವೆಷ್ಟೆಂದು ಗೊತ್ತಾಗುವದು!

೧೭೧. ಟೀ॥ ಹರನಿಗೆ ಖಡ್ಗವೂ, ಹರಿಗೆ ಚಕ್ರಾಯುಧವೂ, ಬ್ರಹ್ಮನಿಗೆ ಮಂತ್ರಜಲವೂ ಮುಖ್ಯ ಸಾಹಿತ್ಯಗಳಾಗಿರುವವು. ಇವುಗಳಲ್ಲದೆ ಅವರು ಏನೂ ಮಾಡಲರಿಯರು; ಅಂದರೆ ತ್ರಿಮೂರ್ತಿಗಳೂ ಪರತಂತ್ರರೆಂದು ತಾತ್ಪರ್ಯ.

೧೭೨. ದುರ್ಮತಿ = ಮೂರ್ಖ, ತಾ॥ ಸೃಷ್ಟಿಕರ್ತನಾದ ಬ್ರಹ್ಮನ ಹೆಂಡತಿಯ ಮೂಗು ಹೋಗಲಾಗಿ ಅದನ್ನು ಪುನಃ ಯಾಕೆ ಸೃಷ್ಟಿಸಲಿಕ್ಕಾಗಲಿಲ್ಲ? ಕಥಾನುಸಾರ— ಬ್ರಹ್ಮನ ಮಗನಾದ ದಕ್ಷನು ಒಂದಾನೊಂದು ದಿವಸ ಅವನ [ಬ್ರಹ್ಮನ] ಸಭಾಂತರಕ್ಕೆ ಬಂದನು, ಅಲ್ಲಿ ದಕ್ಷನ ಅಳಿಯನಾದ ಈಶ್ವರನು ಕೂತಿದ್ದನು, ದಕ್ಷನನ್ನು ಕಂಡು ದೇವತೆಗಳೆಲ್ಲರೂ ನಮಸ್ಕಾರ ಮಾಡಿದರು. ಆದರೆ ಈಶ್ವರನು ಮಾತ್ರ ಮಾಡಲಿಲ್ಲ, ಈ ಸಂಬಂಧ ಸಿಟ್ಟುಹಿಡಿದು ದಕ್ಷನು ತಾನೊಂದು ಯಜ್ಞವನ್ನು ಮಾಡಿಸಿ ಎಲ್ಲರಿಗೂ ಹೇಳಿಕಳುಹಿಸಿ ಮಗಳಾದ ಸತಿಯನ್ನೂ ಅಳಿಯನಾದ ಈಶ್ವರನನ್ನೂ ಬೇಕೆಂದು ಬಿಟ್ಟುಬಿಟ್ಟನು. ಆದರೂ ಸತಿಯು ತಾನಾಗಿಯೇ ಆ ಯಜ್ಞಕ್ಕೆ ಹೋದಳು. ಇದನ್ನು ತಂದೆಯಾದ ದಕ್ಷನು ನೋಡಿದಾಗ್ಯೂ ಅವಳನ್ನು ಸತ್ಕರಿಸದೆ ಅವಳ ಗಂಡನಾದ ಈಶ್ವರನನ್ನು ಕುರಿತು ಬಹಳವಾಗಿನಿಂದಿಸಿದನು. ತಂದೆಯು ಗಂಡನಿಗೆ ಮಾಡಿದ ದೂಷಣೆಯನ್ನು ಕೇಳಲಾರದೆ ಅವಳು ಆ ಯಜ್ಞಕುಂಡದಲ್ಲಿಯೇ ಹಾರಿ ಪ್ರಾಣಬಿಟ್ಟಳು. ಈ ಸುದ್ದಿಯು ಈಶ್ವರನಿಗೆ ಮುಟ್ಟಲು ಅವನು ತನ್ನ ಜಡೆಯನ್ನು ಕಿತ್ತು ನೆಲಕ್ಕೆ ಅಪ್ಪಳಿಸಿದನು. ಇದರಿಂದ ಸಹಸ್ರಮುಖಬಾಹುಗಳುಳ್ಳ ವೀರಭದ್ರನು ಹುಟ್ಟಿದನು. ಇವನಿಗೆ ದಕ್ಷನ ಯಜ್ಞನನ್ನು ಕೆಡಿಸಿ ಅವನನ್ನು ಸಂಹಾರಮಾಡಬೇಕೆಂದು ಅಪ್ಪಣೆಯಾಯಿತು. ಅದರಂತೆ ವೀರಭದ್ರನು ಅಲ್ಲಿಗೆ ಹೋಗಿ ನೆರೆದಂಥ ದೇವತೆಗಳ ಅವಯವಗಳನ್ನು ಭಂಗಮಾಡಿದನು. ಆಗ ಬ್ರಹ್ಮನ ಹೆಂಡತಿಯಾದ ಸರಸ್ವತಿಯ ಮೂಗು ಹೋಯಿತು.

೧೭೩. ಹುಟ್ಟಿಪ=ಬ್ರಹ್ಮ. ಕಷ್ಟದ ನುಡಿ=ಕಠೋರವಾದ ಮಾತು. ಸುಳ್ಳು. ಕಥೆ–ಶಿವನಿಗೆ ಐದು ಮುಖಗಳಿದ್ದಂತೆ ಬ್ರಹ್ಮನಿಗೂ ಐದು ತಲೆಗಳಿದ್ದದರಿಂದ ತಾನು ಶಿವನಷ್ಟೇ ದೊಡ್ಡವನೆಂಬ ಅಹಂಕಾರವು ಬ್ರಹ್ಮನಲ್ಲಿ ಹುಟ್ಟಿತು. ಆಗ ಶಿವನು ಅವನದೊಂದು ತಲೆಯನ್ನು ಚಿವುಟಿಬಿಟ್ಟನು.

೧೭೪. ಹತ್ತುಭವ = ದಶಾವತಾರ. ಎತ್ತ ಎಮ್ಮೆಯಕಾದು = ಗೋಪಾಲಕೃಷ್ಣನೆನಿಸಿ ಪಾಂಡವರಿಗಾಳಾದ=ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವರಿಗೆ ಆಳಾಗಿ ಸಹಾಯಮಾಡಿದ. ಹರಿ=ವಿಷ್ಣು. ಎತ್ತಣಾದೈವ=ದೇವರು ಹೇಗೆ?

೧೭೫. ಕಥಾನುಸಾರ– ವಿಷ್ಣುವಿನ ವೈಕುಂಠದಲ್ಲಿ ದ್ವಾರಪಾಲಕನಾಗಿದ್ದವನೊಬ್ಬನು ಹಿರಣ್ಯಕಶ್ಯಪನೆಂಬ ನಾಮದಿಂದ ಭೂಲೋಕದಲ್ಲಿ ಅರಸನಾಗಿ

ಬಣ್ಣದ ಚಿತ್ರಗಳಲ್ಲಿರುವ ಶಿವನು ಮನುಷ್ಯನಲ್ಲಿಲ್ಲವೇ ?

೨೮೧. ಅಡಗಿ = ಪ್ರತಿಬಿಂಬ ರೂಪವಾಗಿ.

೨೮೩. ಟೀ॥ ದೇವಾನುದೇವತೆಗಳು ನೂರು ಖಂಡುಗ ಹೊಟ್ಟಿದ್ದಂತೆ. ಮೂರಕ್ಷರವಾಗಿ ಓಂಕಾರ ಪ್ರಣವಕ್ಕೆ ಅತೀತನಾಗಿರುವ ಪರಬ್ರಹ್ಮನು ಗಟ್ಟಿಯಾದ ಕಾಳಿದ್ದಂತೆ

೨೮೪. ಟೀ॥ ಅಪ್ರಯತ್ನಯು ಸಿದ್ಧವಾಗಿರುವ ಪರಮಾತ್ಮನನ್ನು ನೀವು ಎಂದಿಗೂ ಕಾಣಲಿಕ್ಕಿಲ್ಲ ಕಂಡರೆ ನಿಮ್ಮಾಣೆ ಎಂದು ಕರ್ಮಗಳುಳುತ್ತವೆ.

೨೮೭. ಇಂದ್ರಿಯ = ರೇತಸ್ಸು. ಪ್ರಕೃತ್ತಿ ವಾಯು=ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನವೆಂಬ ಪಂಚವಾಯುಗಳು ಸೂ॥ ಇಲ್ಲಿ ಚಾರ್ವಾಕ ಮತವು ಖಂಡಿಸಲ್ಪಟ್ಟಿದೆ. *

೨೮೯. ಒಳಸಂಚು=ತಂತ್ರ ಕಪಟ.

೨೯೦. ಪಂಚವಿಂಶತಿತತ್ವ=ಸಾಂಖ್ಯದಲ್ಲಿ ಹೇಳಿರುವ ೨೫ ತತ್ವಗಳು ಸಂಚಯದ= ಕೂಡಿ ಉಂಟಾದ. ಹಂಚೆಂದು=ಕ್ಷಣಿಕವೆಂದು. ಭವ=ಪುನರ್ಜನ್ಮ. ಗೊಂಚಲು=ಬಹಳ, ಅಸಂಖ್ಯ.

೨೯೧. ಅಂದದಿ ಸಂದು=ಚನ್ನಾಗಿ ಉಂಡು. ಭಾಂಡ=ಮಣ್ಣಿನ ಪಾತ್ರೆ. ತಾ॥ ದೇಹವು ಮಣ್ಣಿನ ಪಾತ್ರೆಯಂತೆ ಅನೇಕ ಭೋಗಗಳನ್ನು ಭೋಗಿಸಿ ಒಂದು ದಿನ ನಾಶವಾಗುತ್ತದೆ.

೨೯೪. ಸರ್ವಜ್ಞನಿಗೆ ಪುನರ್ಜನ್ಮದಲ್ಲಿವಿಶ್ವಾಸವಿದ್ದಿಲ್ಲವೆಂತಾಗುತ್ತದೆಂದು ಭಯಪಡುವ ಕೆಲವರು ಜನ್ಮಾಂತರವನ್ನು ಸ್ಥಾಪಿಸುವವಕ್ಕೆ ಹೀಗೆ ಅರ್ಥ ಮಾಡುವರು–ಸತ್ತು ಹುಟ್ಟುವರೆಂಬ ಮಾತು ಮಿಥ್ಯದ ನುಡಿ ಯಾಕೆ? ಬಿತ್ತಿದರೆ ಬೀಜ ಬೆಳೆಯುವದು ಎಷ್ಟು ಸತ್ಯವೋ ಅಷ್ಟೇ ಶರೀರವೆಂಬ ವೃಕ್ಷವು ಸತ್ತು ಹುಟ್ಟುವದೂ ನಿಶ್ಚಯ.

೨೯೫. ಆತುಮದ ಬಣ್ಣ=ಆತ್ಮನ ನಿಜರೂಪ. ಮಾತಿನ ಅಗಾಧ= ತತ್ವಮಸಿಯೆಂಬ ಮಹಾ ವಾಕ್ಯದ ಮರ್ಮ. ಜಾತಿಯ ನೆಲೆಯ ನರಿದು=ತಾನಾರು ? ತನಗೆ ಈ ಶರೀರ ಬಂಧನವು ಹೇಗೆ ಬಂತೆಂದು ತಿಳಿದು.

೨೯೭. ತರಣಿ=ಸೂರ್ಯ. ತಿಮಿರ = ಕತ್ತಲೆ ಆವರಣ = ಮುಸುಕು. ವರಜ್ಞಾನ=ಶ್ರೇಷ್ಠಜ್ಞಾನ (ಬ್ರಹ್ಮವಿದ್ಯೆ) ಸಂಸಾರ=ಪುನರ್ಜನ್ಮ.

೨೯೮. ಹೊದ್ದು=ಹೊಂದು. ೨೯೯ ಕಳೆಬೆಳಗು=ಶಿವತತ್ವಪ್ರಕಾಶ, ಬ್ರಹ್ಮಾನುಭವ.

* ವೀರಶೈವ ಸಿದ್ಧಾಂತ ಶಿಖಾಮಣಿ ಪಿಂಡಜ್ಞಾನ ಸ್ಥಲ ಪುಟ ೫೦

೩೦೦. ಟೀ|| ಅಜಾನನೆಂಬದು ಎಲ್ಲಕ್ಕು ಮೂಲ ತಾಯಿ. ಜಗತ್ತೇ ಈಕೆಯಿಂದ ಹುಟ್ಟಿದ ಮಗ. ಇವನಲ್ಲಿ ಜ್ಞಾನವು ಉದಿಸಲು ಅಜ್ಞಾನವು ತನ್ನಷ್ಟಕ್ಕೆ ನಾಶವಾಗಿ ( ತಾಯಿಯನ್ನು ಕೊಂದು ) ತನ್ನಲ್ಲಿಯೂ ಅಹಂಕಾರವನ್ನುಳಿದು (ತಾನೂ ಸತ್ತು ) ಕೈವಲ್ಯವನ್ನು ಪಡೆದು ತಿರುಗಿ ಬಾರದಂತಾಗುವನು.

೩೦೧. ಅಗಣಿತ ಫಲ=ಶಿವ ಸುಖ. ಸವಿ=ಉಣ್ಣು. ಅಘ=ದುಃಖ, ಜನ್ಮ. ಒಮ್ಮೆ ಜ್ಞಾನ ಬಂದು ಆರೂಢತ್ವಕ್ಕೆ ಮುಟ್ಟಿದವನು ತಿರುಗಿ ಕೆಳಗಿಳಿಯನೆಂದು ತಾತ್ಪರ್ಯ.

೩೦೨. ಓಡು= ಮಣ್ಣಿನ ಗಡಿಗೆ, ಬೋಕಿ ತಾ|| ಗಡಿಗೆ ಸುಟ್ಟಮೇಲೆ ತಿರುಗಿ ಹೇಗೆ ಮಣ್ಣಾಗದೋ ಹಾಗೆಯೇ ಒಮ್ಮೆ ಶಿವಸುಖವನ್ನು ಅನುಭವಿಸಿದವನು ತಿರುಗಿ ಸಂಸಾರದಲ್ಲಿ ಸಿಲುಕನು.

೩೦೪. ಮಕುರ=ಕನ್ನಡಿ ನೋಡಿ ಪ್ರಸ್ತಾವನೆ ಪುಟ ೨೪.

೩೦೫. ಇಂದ್ರಿಯ=ವಿಷಯ ಸುಖ. ವಂದ್ಯ = ಪೂಜನೀಯ. ಬಿಂದುವಿನ ಭೇದವರಿದ= ( ೧ ) ಬಿಂದು, ನಾದ, ಕಳಾತೀತನಾದ ಪರಶಿವನನ್ನು ತಿಳಿದ. (೨) ಶರೀರದ ಅಸ್ಥಿರತ್ವವನ್ನು ಅರಿತ. ಬೆಂದನುಲಿ = ಜ್ಞಾನಾಗ್ನಿಯಿಂದ ಸಂಸಾರ ಬಂಧನವನ್ನು ಸುಟ್ಟ, ವಾಸನಾ ರಹಿತ.

೩೦೬. ಮುನ್ನ= ಮುಂಚೆ, ಇಲ್ಲಿ ಎಂದಿಗೂ, ಮಾಯೆ ಹೇಗೆ ಸಂಬಂಧಿಸದಿರುವದೆಂಬದಕ್ಕೆ ದೃಷ್ಟಾಂತ ಹೇಳಿರುವದು.

೩೦೭. ಬೇಡನು+ ಇಕ್ಕಿದಡೆ+ಉಂಬ=(೧) ತಾನಾಗಿ ಯಾರನ್ನೂ ಬೇಡನು. ಪ್ರೀತಿಯಿಂದ ತಾವಾಗಿಯೇ ಕರೆದು ಕೊಟ್ಟರೆ ಮಾತ್ರ ಉಣ್ಣುವನು. ( ೨) ಕೀಳು ಜಾತಿಯವನು ಕರೆದರೂ ಊಟಮಾಡುವನೆಂದು ಕೆಲವರು. ಆ ಜಾತಿ=ಸಂಸಾರಿಕ, ಕುಲಾಭಿಮಾನಿ. ಓಡು ಮಾಣಿಕವು ಸರಿಯೆಂಬ =ಸಮದರ್ಶಿಯಾದ.

೩೧೧. ಎಂಜಲವು ಹೊಲೆ=ಮಡಿ ಮೈಲಿಗೆ. ಸಂಜೆ ಬೆಳಗು=ಸಂಧ್ಯಾವಂದನಾದಿ ನಿತ್ಯಕರ್ಮಬಂಧನ. ಅಂಜನ= ಮಂತ್ರಸಿದ್ಧ ದ್ರವ್ಯ. ಇದನ್ನು ಹಚ್ಚಿಕೊಂಡರೆ ಮರೆಯಾದದ್ದೆಲ್ಲ ಕಾಣುವದೆಂದು ಹೇಳಿಕೆ.

೩೧೨. ಜ್ಞಾನ ಹೃದಯದಿ ನೆಲಸಿದ= (೧) ಪರಮಾತ್ಮನಲ್ಲಿ ಐಕ್ಯವಾಗಿ ಅಲ್ಲಿಯೇ ಬೇರೂರಿಕೊಂಡಿರುವ ( ೨ ) ಜ್ಞಾನವು ಹೃದಯದಲ್ಲಿ ಸದಾ ನೆಲೆಗೊಂಡಿರುವ.

೩೧೩. ತಾ॥ ಯಾವಾಗಲು ಎಚ್ಚರ ವಿರುವವನಿಗೆ ಬೆಳಗಾಯಿತು ಕೆಲಸಕ್ಕೆ ಎದ್ದೇಳು ಎಂದು ಎಬ್ಬಿಸುವ ಕಾರಣ ವಿಲ್ಲ. ಜ್ಞಾನಿಯು ಹೀಗೆಯೇ ಇರುವನು.

೩೧೪. ಬೆಟ್ಟಿತು ಮಾತು=ಬಿರುನಾತು=ಬಿರುನುಡಿ=ಹಾಸ್ಯ.

೩೧೫. ಯೋಗವಟ್ಟಿಗೆ=ಯೋಗಿ ಸುತ್ತಿಕೊಳ್ಳುವ ವಸ್ತ್ರದ ಪಟ್ಟಿ ಇಲ್ಲವೆ ಲಾಡಿ. ಮೊಳ=ಅಗಲ.

೩೧೬. ವಾರಣಾಸಿ=ಕಾಶಿಕ್ಷೇತ್ರ. ತಾರಣಪುರುಷ=ಉದ್ಧಾರಕ. ಭ್ರಷ್ಟಭವಿಗಳಿರಾ ಲಿಂಗದಲ್ಲಿ ಸಕಲ ಕ್ಷೇತ್ರಗಳಿರಲು ತೀರ್ಥಗಳಿಗೆ ತಿರುಗುವ ಕಾರಣವೇನು ಹೇಳಿರೋ ಎಂದು ವಚನ ವಿರುವದು.

೩೧೭. ಹಿತ್ತಲಗಿಡ = ಪದ್ಯ ೪೯. ಅರಸು=ಹುಡುಕು.

೩೧೮. ಇಲ್ಲಿ+ಇಲ್ಲದೆ+ಇಲ್ಲವು+ಎಂದು+ಅರಿವಡೆ+ಅದು=ಅದು ಹೇಗಾದರು ಇಲ್ಲಿಯೇ ಉಂಟೆಂದು ತಿಳಿದರೆ. ಸೂ॥ ಇದು ಆತ್ಮಸ್ವರೂಪಿಯಾದ ದೇವರು, ಸತ್ಯ, ಮೋಕ್ಷ ಇವುಗಳಲ್ಲಿ ಯಾವದೊಂದು ಆಗಬಹುದು.

೩೨೦. ಈ ಮಾತಿನ ಅರ್ಥವು ೩೨೧ ರಲ್ಲಿ ಹೇಳಿರುವದು.

೩೨೪. ಟೀ॥ ಅನಿರ್ವಚನೀಯವಾದ ಬ್ರಹ್ಮವನ್ನು ಅಹಂಕಾರದಿಂದ ವಚನಿಸಲಿಕ್ಕೆ ಹೋಗುವರೆ ಕಳವು ಮಾಡಲಿಕ್ಕೆ ಹೋಗಿ ಕೆಮ್ಮಿ ಪರರ ಕೈಯಲ್ಲಿ ಸಿಕ್ಕು ಹೊಡಿಸಿಕೊಂಡಂತೆ ನಾಚಿಸಲ್ಪಡುವನು. ೩೨೫=೩೨೭.

೩೨೮. ಅರಿವಿನಾತೆರನ = ನಿರಹಂಕಾರ ರೂಪವೆಂದು ಹರಿಬೊಮ್ಮರ+ಇರವಿನಂತೆ= ಅಹಂಕಾರದಿಂದ ತುಂಬಿರುವ ತ್ರಿಮೂರ್ತಿಗಳ ಸ್ಥಿತಿಯಂತೆ.

೩೩೦. ವೇದಕ್ಕೆ=ವಿದ್ಯೆಗೆ, ತಿಳವಿಕೆಗೆ. ಭೇದಕ್ಕೆ ಹೊಲಬಿಲ್ಲ=ಜಗಳ ಮಾಡುವದಕ್ಕೆ ಮನಸ್ಸಿದ್ದರೆ ಕಾರಣವು ಅವಶ್ಯವಿಲ್ಲ.

೩೩೧. ಒಂದನು = (೧) ಪರತತ್ವವನ್ನು (೨) ಸಾಮರಸ್ಯವನ್ನು. ಏನೊಂದನು = ಅಭಿಮಾನವನ್ನು ಅಯು = ಹೊಂದು.

೩೩೪. ಆಸ್ಥೆಸಿ = ಪ್ರೀತಿಯಿಂದ. ಕರೆ=ಎತ್ತಿಕೊಳ್ಳು.

೩೩೫. ಮೂಲವಸ್ತು = ಶಿವತತ್ವ. ಲೀಲೆ=ಆನಂದ ಶೂಲಿಯ ಶರಣ=ಶಿವಶರಣ.

೩೩೬. ಸಂದರಿವನರಿದ = ಸಂದ ಎಂಬದು ಸಲ್ (ಹೆಸರಿಗೆ ಬರು) ಎಂಬ ಧಾತುವಿನ ಭೂತನ್ಯೂನ. ಸಂದ+ಅರಿವನು+ಅರಿದ = ಪ್ರಸಿದ್ಧವಾದ ಜ್ಞಾನ (ಬ್ರಹ್ಮಜ್ಞಾನ) ವನ್ನು ತಿಳಿದ.

೩೩೭. ಸಂ ಸಾ ರ ದ ಲ್ಲಿ ದ್ದ ರೂ ನಿರ್ಮೋಹಿಯಾಗಿರುವನು.

೩೩೮. ಒಪ್ಪರ=ನಿಷ್ಕಪಟ ಮಾರ್ಗ. ಹಲ್ಲು ಕಳ=ಯೋಗ್ಯ ಶಿಕ್ಷೆ ವಿಧಿಸು. ಇದೇ ಮಹಾತ್ಮರಲ್ಲಿ ಪ್ರಕಾಶಿಸುವ ಗುಣ ಸೌಂದರ್ಯ.

೩೩೯. ಶಯನಗೆಯ್ = ನಿದ್ರಿಸು. ನಿರುತ=ಶಿವ.

೩೪೦. ಕೆರೆ=ಬೋಳಿಸು. ಕರೆ= ಅಂದಂದು ರೂಢಿಯಲ್ಲಿ ತರು.

೩೪೧. ನೊಂದು ಶ್ರಮಪಟ್ಟು ಹಿಂಸೆತಾಳಿ. ಸೈರಿಸು=ತಾಳಿಕೊಳ್ಳು. ಟೀ ಗಂಧದ ಗಿಡವು ಸುಟ್ಟಷ್ಟು ಸುವಾಸನೆಯನ್ನು ಕೊಡುವಂತೆ ಸತ್ಪುರುಷರ ಗುಣವು ಕಷ್ಟವೆಂಬ ಬೆಂಕಿಯಲ್ಲಿ ಮತ್ತಷ್ಟು ಪ್ರಕಾಶಕ್ಕೆ ಬರುವದು. ಕಡಿದು ಗಾಣಕಿಕ್ಕಿದ ಕಬ್ಬು ಬೆಂದು ಪಾಕಗೊಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತೇ ? ಎಂದು ವಚನವಿರುವದು.

೩೪೩. ಎದ್ದೋಳು = ಹೋಗಿಬಿಡು. ಸಾಯು.

೩೪೪—೪೫. ದಾಯ=ಲಾಭ. ಟೀ॥ ಪಗಡೆಯಾಟದಲ್ಲಿ ಕವಡೆಯು ಹೊರಳ ಬಿದ್ದರೆ ನಾಲ್ಕು ನೆಟ್ಟಗೆ ಬಿದ್ದರೆ ಎಂಟು ಎಂದು ಲೆಕ್ಕಿಸಲ್ಪಡುವಂತೆ. ಜ್ಞಾನಿಗೆ ಯಾವ ಪರಿಸ್ಥಿತಿಯು ಪ್ರಾಪ್ತವಾದರೂ ಸುಖಸ್ಥನಾಗಿರುವನೆಂದು ತಾತ್ಪರ್ಯ.

೩೪೬. ಅಡಗು = ತಲ್ಲೀನವಾಗು. ಬಂಧು= (೧) ಸಂಬಂಧಿಕ. (೨) ಪಂಚೇಂದ್ರಿಯ. ಉನ್ನತಿ=ಮಹಾನಂದ.

೩೪೯. ಬಿಂದುವು ಬಲಿತಾದ=ಬಿಂದು ಸಾಕ್ಷಾತ್ಕಾರವಾದವ.

೩೫೦. ಅರಿವಿನ+ಅರಿವನು+ಅರಿವಡೆ+ಆತನು+ ತನ್ನನ್ನು+ಅರಿಯನೆ+ಅದನು+ಅರಿಯ. ತನ್ನನ್ನು ಅರಿಯದ ವಿಃ ಬ್ರಹ್ಮಜ್ಞಾನವನ್ನು ಪಡೆಯನೆಂದು ತಾತ್ಪರ್ಯ.

೩೫೧. ಚನ್ನ=ಚನ್ನಾಗಿ. ಅರಿವ+ಪರಿಯು+ಎಂತೆಂದಡೆ=ತಿಳಿಯುವ ಬಗೆ ಹೇಗೆಂದು ಕೇಳಿದರೆ ಅನ್ಯದಿಂದ=ಗುರುವಿನಿಂದ.

೩೫೨. ನಿನಗೆ+ನೀನು+ಅನ್ಯನು = ನಿನಗೆ ನೀನೇ ವೈರಿಯು.

೩೫೩. ಟೀ। ಕಾಣುವದೆಲ್ಲ ನಾಶವಾಗುವ (ಯದ್ದೃಷ್ಟಂ ತನಷ್ಟಂ)ದೆಂದು ತಿಳಿಯದೆ ವಿಷಯಸುಖವೇ ಸತ್ಯವೆಂದು ಪ್ರೀತಿಸುವದು ಅಜ್ಞಾನ.

೩೫೪. ಬೊಬ್ಬುಳಿ=ಗುರುಳಿ (ಕ್ಷಣಭಂಗುರವಾದ ದೇಹ). ಸಾರ=ಮೋಕ್ಷ ಮಾರ್ಗ.

೩೫೬. ತನಿರಸ=ಸವಿರಸ. ಅಗಿ= ತಿನ್ನು.

೩೫೭. ಟೀ॥ ಹೇಳಶಕ್ಯನಾದವನೆ ಸನ್ಯಾಸಿಯಾಗಿ ಬೋಳಿಸಿಕೊಳ್ಳುವದು

ಯುಕ್ತ. ಮುಮುಕ್ಷುವಾಗಿ ಭಕ್ತನಾಗಿದ್ದರೆ ಬೋಳಿಸಿಕೊಳ್ಳುವದು ಉಚಿತವೇ. ಹೀಗಿಲ್ಲದೆ ವೇಷಕ್ಕಾಗಿ ಬೋಳಿಸಿಕೊಳ್ಳುವದು ವ್ಯರ್ಥ. ಒಳಗೆ ಬೋಳಾಗಲರಿಯದೆ ಹೊರಗೆ ವೇಷವ ತಾಳಿದರೇನು ? ಹಮ್ಮು ಬಿಮ್ಮು, ಅಹಂಕಾರವನಳಿದರೊಂದು ಬೋಳು. ಬ್ರಹ್ಮದಲ್ಲಿ ಭಾವ ತುಂಬಿರಬಲ್ಲಡದು ಬೋಳು ಇಂತೀ ಬೋಳಿನ ಘನವರಿಯದೆ ಗಂಡುದೊತ್ತಿನಂತೆ ಮುಂಡೆ ಬೋಳಿಸಿಕೊಂಡು ಕಂಡವರ ಕೂಡ ಅಲೆಯುತ್ತ ಮದ ಮತ್ಸರಂಗಳಿಂದ ಕೂಡಿರ್ಪ ಬೋಳು ಜಾಳು ಬೋಳು ನೋಡ * ಅರ್ಥಾಂತರ – ಶೂನ್ಯವಾಗಿ ಅನಿರ್ವಚನೀಯವಾದ ಬ್ರಹ್ಮವನ್ನು ಹೇಳಲಿಕ್ಕೆ ಯತ್ನಿಸಿ ನಾಚಿಕೆಗೆ ಗುರಿಯಾಗುವಂತೆಂದು ಕೆಲವರು. 'ಆಡಬಾರದ ಬಯಲು, ನೋಡಬಾರದ ಬಯಲು. ನುಡಿಯಬಾರದ ಬಯಲು. ಈ ಒಡಲಿಲ್ಲದ ಬಯಲೊಳಗೆ ಅಡಗಿರ್ದ ಭೇದವನು ಈ ಲೋಕದ ಜಡರೆತ್ತ ಬಲ್ಲರಯ್ಯ. † ಇಲ್ಲಿ ಕಾಳು ಬೋಳಿಗಿಂತ ಜಾಳು ಬೋಳೆಂಬ ಪಾಠವು ಹೆಚ್ಚು ಸರಿಯಾಗಿರಬಹುದು ? ಇತ್ಯಾದಿ

೩೫೮. ಟೀ॥ ಜ್ಞಾನವು ತನ್ನನ್ನು ತಿಳಿಯುವದು. ಅಹಂಕಾರ ಬಿಟ್ಟರುವದು, ತಿರಸ್ಕರಿಸುವವರನ್ನು ಸಮಾಪಿಸದು, ಕಲಿಕೆಯಿಂದ ಬಂದು. ಇತ್ಯಾದಿ

೩೫೯. ಕರುಹು = ಭೇದಲಕ್ಷಣ. ಆತ=ಅಜ್ಞಾನಿ. ಏಡಿಸು =ಅಣಕಿಸು.

೩೬೦. ತಾ॥ ದೇವರನ್ನು ಕಾಣುವದಕ್ಕೆ ಸತ್ಪುರುಷರ ಉಪದೇಶವೂ ಶರಣರ ಅನುಕರಣವೂ ಬೇಕು.

೩೬೩. ಟೀ॥ ಕೋಟಿ ಹಣ ಕೊಟ್ಟರೂ ಕರ್ಮ ಮಾರ್ಗಿಯ ಸ್ನೇಹವು ಅಯೋಗ್ಯ. ಆದರೆ ಶಿವದೃಷ್ಟಿಯಿಂದ ಜಗವನ್ನು ಶಿವಸ್ವರೂಪವಾಗಿ ಕಾಣುವ, ಶಿವಜ್ಞಾನಿಯ ಸಂಗವು ಎಲ್ಲಕ್ಕಿಂತಲೂ ಶ್ರೇಷ್ಠವಾದದ್ದು.

೩೬೪. ಹೊಂದಿ=ಪ್ರೀತಿಯಿಂದ ದಂದುಗ=ತೊಂದರೆ.

೩೬೫. ಮಾತಿನಬೊಮ್ಮ=ನಡೆಯಿಲ್ಲದವಾಗದ್ವೈತ. ವಾಗಾಡಂಬರ.

೩೬೬. ನಿಜಗುಣದ ಅರಿವು=ಆತ್ಮಜ್ಞಾನ, ಅಂತರ್ಜ್ಞಾನ.

೩೬೭. ಕೂರ್ಮೆ=ಪ್ರೀತಿ.

೩೬೮. ಬಿಮ್ಮಗೆ = ಮೌನವಾಗಿ, ಜಿತೇಂದ್ರಿಯನಾಗಿ

೩೭೧. ಜಾಣೆ=ಜ್ಞಾನಿ ಟೀ॥ ಬಾಯಿಂದ ಜಂಗಮನನ್ನು ತನ್ನ ಪ್ರಾಣದಂತೆ ನೋಡತಕ್ಕನ್ದೆಂದು ಹೇಳಿ ಉ

* ವಚನಶಾಸ್ತ್ರಸಾರ ಪುಟ ೧೬. ೪೧೬ ಇತ್ಯಾದಿ.

ಣ್ಣುವಾಗ ಅವನಿಗೆ ಹೊರಗೆ ನೀಡಿ ತಾನು ಒಳಗೆ ಉಣ್ಣುವನು. ಇಂಥ ಗರ್ವಿಯಾದ ಜ್ಞಾನಿಯ ಭಕ್ತಿಯು ವ್ಯರ್ಥ.

೩೭೨. ಉಡಿಗೆ=ಕಾವಿವಸ್ತ್ರ ಹಿಡಿಯಲಳವಲ್ಲ=ಗ್ರಹಿಸ ಸಾಧ್ಯವಲ್ಲ.

೩೭೩. ವೇದಿಸುವ=ಸದಸದ್ವಿವೇಕವನ್ನು ತಿಳಿಸುವ ಟೀ|| ಚಿತ್ತ ಶುದ್ಧಿಯಿಲ್ಲದೆ ೪ ವೇದ ೬ ಶಾಸ್ತ್ರ ೩೨ ಆಗಮಗಳನ್ನು ಓದಿಕೊಂಡರೂ ವ್ಯರ್ಥ.

೩೭೭. ಸಾಲುವೇದ=ವಿದ್ಯಾ ಚತುಷ್ಟಯ ಮೂಲಮಂತ್ರ=ಸಪ್ತಕೋಟಿ ಮಹಾಮಂತ್ರಗಳಿಗೆ ಮೂಲವಾದ ಓಂಕಾರ ಪ್ರಣವ.

೩೭೮. ಬಿಂದು=ಮುಮುಕ್ಷುಗಳಿಗೋಸ್ಕರವಾಗಿ ಪರಮಾತ್ಮನು ತಾಳುವ ದಿವ್ಯವಿಗ್ರಹಗಳಿಗೆ ಉಪಾದಾನಕಾರಣವಾದ ಪರಶಿವನ ಪರಿಗ್ರಹಶಕ್ತಿ. ನಾದ=ಸಾಕಾರ, ಚೈತನ್ಯಕ್ಕೆ ಕರ್ತೃವಾದಾತನು. ನಂದನವನ=(೧) ಇಂದ್ರನ ತೋಟ (೨) ಯೋಗಿಗಳು ಅನಾಹತಕರಣದಲ್ಲಿ ಸಾಕ್ಷಾತ್ಕರಿಸುವ ಶರಧಿ ಮೊದಲಾದ ನಾದಗಳು. ವಿವರ—ನಂದನ ವನದಲ್ಲಿ ನಾನಾ ಪ್ರಕಾರ ಗಿಡಮರಗಳೂ ಪಕ್ಷಿಗಳ ಧ್ವನಿಗಳೂ ಕೇಳ ಬರುವಂತೆ ಚಿನ್ನಾದ ಚಿದ್ಬಿಂದು ಚಿತ್ಕಳೆಗಳಿಂದ ಕೂಡಿದ ಜಗತ್ತಿನಲ್ಲಿ ನಾನಾರೂಪ. ಜ್ಯೋತಿ, ನಾದಗಳು ಕೇಳಬರುವದರಿಂದ ಇಲ್ಲಿ ನಂದನವನದ ಸಾಮ್ಯವು ಕೊಡೋಣವಾಯಿತು. ಮತ್ತು ಆ ವನಕ್ಕೆ ಕೊಳವು ಜೀವಾಧಾರವಾಗಿರುವಂತೆ ಜಗತ್ತಿಗೆ ಪರಶಿವನು ಮೂಲ ಕಾರಣನಾಗಿರುವದರಿಂದ ಕೊಳದ ಸಾಮ್ಯವು ಹೇಳೋಣವಾಯಿತು. ಅಂಥ ಶಿವನು ಪವಿತ್ರನೂ ವಿಶುದ್ಧಾತ್ಮನೂ ಆಗಿರುವದರಿಂದ ತಿಳಿನೀರಿಗೆ ಹೋಲಿಸಿದ್ದಾಯಿತು. ಇಂಥ ಸುಖಕರ ವಸ್ತುಗಳಿಂದ ಕೂಡಿದ ತಿಳಿ ನೀರಿನ ಕೊಳದಲ್ಲಿ ತೃಷಿತರಾದ ಸಂಸಾರಿಗಳು ಮಿಂದುಂಡು ಸುಖಿಸಲೊಲ್ಲರಕಟಾ !

೩೭೯. ದಂಡಿಗೆ=ತಂತಿವಾದ್ಯ ತಾಳಹೊರತಾದ=ಶ್ರುತಿಕೆಟ್ಟ ತಾ|| ನಡೆಗೂ ನುಡಿಗೂ ಮೇಳವಿಲ್ಲದ ಉಪದೇಶವು. ತಾಳತಪ್ಪಿದ ಸಂಗೀದಂತೆ.

೩೮೦. ಒಮ್ಮನ=(೧) ಏಕಚಿತ್ತ. (೨) ಅದ್ವೈತ ಇಮ್ಮನ=ಚಂಚಲಚಿತ್ತ. (೨) ದ್ವೈತಭಾವ. ಜಳ್ಳು=ಹುಸಿ.

೩೮೧. ತುತ್ತು ಸವಿಯೆಂದು=ಈಶ್ವರಾರ್ಪಿತ ಬುದ್ಧಿಯನ್ನು ಬಿಟ್ಟು ಅಂಗ ಭೋಗಿಯಾಗಿ.

೩೮೨. ತಾ|| ಆರೂಢನೆನ್ನಿಸಿ ವಿಷಯಲಂಪಟನಾದರೆ ಹಗಲಲ್ಲಿ ಕಳವಾದಂತೆ.

೩೮೩. ನಿಜದ=ಬ್ರಹ್ಮದ ಕಾಣಿಕೆ=ದರ್ಶನ, ಸಿದ್ಧಾಂತ. ನಯನ=ವಿರಿ=ತನ್ನ ಬೊಟ್ಟನ್ನು ತನ್ನ ಕಣ್ಣಿನಲ್ಲಿ ತಿವಿದುಕೊಂಡಂತಾಗುವದು. ಕಣನೇರಿ ಕೈಯ ಮರದಂತೆ=ಗಣಿಯನ್ನೇರಿ ಕೈಯನ್ನು ಮರೆತು ಬಿಟ್ಟಂತೆಂದು E ಪ್ರತಿ.

೩೮೪. ಅಲ್ಲಲ್ಲಿಗೊಂದನು+ಅರಿದು+ಉಲಿಯೆ=ಅಲ್ಪವಿದ್ಯಾ ಮಹಾಗರ್ವಿಯಾದರೆ ಬಲುಮೆ=ಬಲಾತ್ಕಾರ, ೩೮೫ ಗೊದ್ದ=ಡೊಣ್ಣೆಕಾಟ ಓತಿ.

೩೮೬. ಕಂಬಳಿ=(೧) ವಿಷಯವಾಸನೆ! (೨) ಬಿರಿದಿದ ಬಳೆ ಅಂದರೆ ಸೊಕ್ಕೆಂದು ರವರೆಂಡ ವಿರ್ತರು* ಕುಂಭ=ನರಕ ವಿಶೇಷ ತಾ॥ ಬಡವನು ಮಿತವ್ಯಯಿಯಾಗಿರುವಂತೆ ಜ್ಞಾನಿಯು ಜಿತೇಂದ್ರಿಯನಾಗಿರಬೇಕು. ಇಲ್ಲದಿದ್ದರೆ ನರಕಪ್ರಾಪ್ತಿ. ಹೇಗಾದರೂ ಇದರ ಅರ್ಥವು ಸಂದಿಗ್ಧವಾಗಿದೆ.

೩೮೭. ತಾ॥ ತಪೋಬಲವಿದ್ದರೂ ದೇವಬಲವಿಲ್ಲದೆ ಮೋಕ್ಷವಿಲ್ಲ.

೩೮೮. ಸೂ॥ ಇಲ್ಲಿ ಕ್ರಿಯೆಯು ಎಣ್ಣೆಗೂ ಧ್ಯಾನವು ತುಪ್ಪಕ್ಕೂ ಸರಿಮಾಡಲ್ಪಟ್ಟಿದ್ದರೂ ಬತ್ತಿಯಿಲ್ಲದೆ ದೀಪವು ಅಸಂಪೂರ್ಣವಾಗಿರುವದರಿಂದ ಉಪಮೆಯು ಅಷ್ಟು ಚನ್ನಾಗಿ ಒಪ್ಪುವದಿಲ್ಲ. ಆದರೆ ಮುಂದಿನ ವಚನದಲ್ಲಿ ಇದು ಸ್ಪಷ್ಟವಾಗಿದೆ. ಬತ್ತಿಯಿಲ್ಲದೆ ಉರಿಯುವ ಈಗಿನ ದೀಪಗಳನ್ನು ನೆನಸಿಕೊಂಡರೆ ಒಂದು ವೇಳೆ ಸರಿಯಾಗಬಹುದು.

೩೯೧. ನಿರವಯ=ಅಖಂಡ. ಟೀ॥ ಜೀವನಿಗೆ ಜ್ಞಾನವು ಪ್ರಾಪ್ತವಾಯಿತು. ಬ್ರಹ್ಮಾನುಭವ ಉಂಟಾಯಿತು. ಸಂಸಾರವು ದೂರವಾಯಿತು. ಹೀಗಾಗಿ ಅಖಂಡವಾದ ಮುಕ್ತಿಯು ಕರಸ್ಥಿತವಾಯಿತು.

೩೯೩. ತಿರುಪೆಗೆ=ಭಿಕ್ಷಕ್ಕೆ, ಹೊಟ್ಟೆಗೆ.

೩೯೬. ನಿನಗೆ+ಅದು+ಎತ್ತಣದು. ಅತಿ ಜೀವಿರಲು=ಘಟ್ಟಿಮುಟ್ಟಿಯಾಗಿರಲು.

೩೯೭. ಟೀ॥ ಅಜ್ಞಾನಕ್ಕಿಂತ ಇಂದ್ರಿಯ ಜ್ಞಾನವು ಉತ್ತಮ. ಇಂದ್ರಿಯ ಜ್ಞಾನಕ್ಕಿಂತ ಆತ್ಮಜ್ಞಾನವು ಅತಿ ಉತ್ತಮ. ತ್ರಿಗುಣಗಳಿಂದುಂಟಾದ ದೇಹವೆಂಬ ಕತ್ತಲೆಯ ಮನೆಯಲ್ಲಿ ಲೌಕಿಕ ಜ್ಞಾನವು ದೀಪದಂತಿರುವದು. ಆದರೆ ಅನುಭವವೆಂಬ ಸೂರ್ಯನು ಉದೈಸಲು ಆತಾವೇ ಪ್ರಕಾಶಿಸಹತ್ತುವದು.

* ಪ್ರಾಕ್ಕಾವ್ಯ ಮಾಲಿಕೆ ಪುಟ ೩೨೨.

೩೯೮. ಯೋನಿಜ=ಸ್ತ್ರೀಯಿಂದ ಹುಟ್ಟಿದವ=ಮನುಷ್ಯ.

೩೯೯. ಟೀ|| ಸೂಕ್ಷ್ಮಕಿಂತಲೂ ಸೂಕ್ಷ್ಮನಾಗಿರುವನೆಂಬ ಬಿರುದುಳ್ಳವನಾಗಿದ್ದು ತ್ರಿಮೂರ್ತಿಗಳಿಗೂ ತಿಳಿಯದಿರುವ ಪರಮಾತ್ಮನನ್ನು ಯೋಗಿಯು ಬಲ್ಲನು.

೪೦೦. ಮಾಗಿಯ ಮಳೆ = ಮಗಿ ಮಳೆ. ತಾ|| ವಿಷಯಗಳನ್ನು ಕೊಂದರೆ ಯೋಗವು ನಿರ್ವಿಘ್ನವಾಗಿ ಸಾಗುವದು.

೪೦೧. ಟೀ|| ಯೋಗವು ದಾಸಿಯು ತಲೆಯ ಮೇಲೆ ಹೊತ್ತಿರುವ ತುಂಬಿದ ಮಣ್ಣಿನ ಕೊಡದಂತಿರುವದು. ಅದರ ಮೇಲಿನ ಲಕ್ಷವು ತಪ್ಪಿ ಪರಪುರುಷನ ಕಡೆಗೆ ಹೋದರೆ ಕೊಡಬಡೆದು ಹೋಗುವದು ಹೇಗೋ ಹಾಗೆಯೇ ಯೋಗಿಯು ಜಾಗ್ರತೆ ತಪ್ಪಿ ವಿಷಯಾಸಕ್ತನಾದರೆ ಯೋಗವು ಕೆಟ್ಟು ಹೋಗುವದು. ಈ ಪದ್ಯವು ಬಹಳ ಕೆಟ್ಟು ಹೋಗಿದೆ. ಒಂದೊಂದು ಪ್ರತಿಯಲ್ಲಿ ಒಂದು ಪ್ರಕಾರವಿರುವದರಿಂದ ಅರ್ಥ ತಿಳಿಯುವದು ಕಷ್ಟವಾಗಿದೆ. E. ಎಂಬ ಓಲೆಯ ಪ್ರತಿಯಲ್ಲಿ ಹೀಗಿದೆ–ದಾಸಿಯಾ ಕೊಡದಂತೆ ಸೂಸದಿಪ್ಪುದು ಯೋಗ ದಾಸಿಸಾಸಿರಿದ ಒಡನಾಡು ತಾ ಕೊನೊಳಾಸೆಯಿಪ್ಪಂತೆ ಸರ್ವಜ್ಞ||

೪೦೨. ಟೀ|| ಹೃತ್ಕಮಲದಲ್ಲಿ ಬದ್ಧನಾಗಿ ತಿರುಗುತ್ತಿರುವ ಆತ್ಮಹಂಸನ ಭೇದವೆಂತೆಂದರೆ–* (೧) ಇಂದ್ರದಳದಲ್ಲಿ ಭಕ್ತಿ. (೨) ಆಗ್ನೆಯ ದಳದಲ್ಲಿ ನಿದ್ರೆ. (೩) ಯಮದಳದಲ್ಲಿ ಕೋಪ. (೪) ನೈರುತ್ಯ ದಳದಲ್ಲಿ ಪಾಪ ಬುದ್ಧಿ. (೫) ವರುಣ ದಳದಲ್ಲಿ ಕ್ರೀಡೆ. (೬) ವಾಯು ದಳದಲ್ಲಿ ಗಮನ. (೭) ಉತ್ತರ ದಳದಲ್ಲಿ ರತಿಪ್ರೀತಿ. (೮) ಈಶಾನ್ಯ ದಳದಲ್ಲಿ ದ್ರವ್ಯದಾನ ಇಂತೀ ಎಂಟು ದಳಗಳಲ್ಲಿ ಪರಮಾತ್ಮರೂಪನಾದ ಹಂಸನು ಯಾವ ಯಾವ ದಳಗಳಲ್ಲಿ ಸಂಚಾರ ಮಾಡುತ್ತಾನೋ ಆಯಾ ದಳಗಳಲ್ಲಿ ಮನುಷ್ಯರಿಗೆ ಮೇಲೆ ಹೇಳಿದ ಗುಣಗಳು ಉತ್ಪನ್ನವಾಗುತ್ತವೆ. ಆದರೆ ಹೀಗೆ ತಿರುಗುವದನ್ನು ಬಿಟ್ಟು ಈ ಅಷ್ಟದಳಗಳ ಮಧ್ಯದಲ್ಲಿರುವ ಭ್ರೂಮಧ್ಯ ಸ್ಥಾನದಲ್ಲಿ ನಿಂತುಕೊಂಡರೆ ವೈರಾಗ್ಯವು ಹುಟ್ಟಿ ಮೋಕ್ಷವನ್ನೈದುವನು ಇದೇ ಯೋಗಿಯು ಮಾಡತಕ್ಕ ಕೆಲಸ.

೪೦೩. ನೋಡಿ ಪದ್ಯ ೪೭೨ ಮುಟ್ಟಪ್ಪ ಗತಿ=ಕರಣಿಕ ಸ್ಥಾನ.

* ಷಟ್ಸ್ಥಲ ಸುಧಾರಸ ಪುಟ ೧೧೦—೧೧

೪೦೪. ಟೀ॥ ಜಾಡನು ಕಟ್ಟಿದ ಉಂಕೆಯು ದಾರಗಳಂತೆ ಕಣ್ಣಿನ ರಂಧ್ರಗಳೆರಡು ಮೂಗಿನ ಸಂಧ್ರಗಳೆರಡು ಹೀಗೆ ನಾಲ್ಕು ದಾರಿಗಳಿಂದ ಹೊರಟು, ಇಡಾ, ಪಿಂಗಳ, ಸುಷುಮ್ನಾ ಎಂಬ ಮೂರು ಸ್ಥಳಗಳನ್ನು ಸೇರಿ ನೇತ್ರದಲ್ಲಿ ಜಾಗ್ರತ್, ಕಂತದಲ್ಲಿ ಸ್ವಪ್ನ, ನಾಭಿಯಲ್ಲಿ ಸುಷುಪ್ತಿ, ಎಂಬ ಮೂರು ಪದಗಳನ್ನು ದಾಟಿ ಅದಕ್ಕಿಂತ ಮೇಲಿರುವ ಬ್ರಹ್ಮರಂಧ್ರಸ್ಥಾನದಲ್ಲಿ ಮನಸ್ಸು ನಿಂತರೆ ಅದೇ ಯೋಗನಿಷ್ಠೆ ಇಲ್ಲವೆ ಸಮಾಧಿಯೆನಿಸುವದು.

೪೦೫. ಕುಂಡಲಿ=ಕುಂಡಲಿಸರ್ಪ. ಕಂದನಾಡಿ=ಸುಷುಮ್ನಾ. ಮಂಡಿಸು=ಕೂತಲ್ಲಿಯೆ ತಿರುಗು ವಿವರ=ಮನುಷ್ಯ ಶರೀರವು ೯೬ ರಂಗುಲದುದ್ದವಹುದ ದರಲ್ಲಿ ಗುದಸ್ಥಾನದಿಂದೆರಡಂಗುಲದ ಮೇಲೆ ಶಿಶ್ನದಿಂದೆರಡಂಗುಲದ ಕೆಳಗೆ ಮಧ್ಯದೊಂದಂಗುಲ ಪ್ರಮಾಣ ಸ್ಥಾನವೇ ದೇಹಮಧ್ಯವೆನಿಸುವದು. ಅದು ಶಿಖಿಸ್ಥಾನವೆಂಬ ಹೆಸರುಳ್ಳದ್ದಾಗಿ ತ್ರಿಕೋಣಾಕಾರದಿಂದ ತಪ್ತ ಸುವರ್ಣಕಾಂತಿಮಯುವಾಗಿಹುದು. ಮತ್ತದರಿಂದ ನವಾಂಗುಲದುದ್ದದಲ್ಲಿ ಚದುರಂಗುಲ ವಿಸ್ತಾರದಿಂ ಕುಕ್ಕುಟಾಂಡಕಾರ ಮಪ್ಪುನಾಡೀಕಂದ ವಿಹುದದರ ಮಧ್ಯವೇ ನಾಭಿಯೆನಿಸುವದು. ಆ ನಾಡಿಕಂದದಿಂದೆರಡಂಗುಲದ ಕೆಳಗೆ ಕುಂಡಲಿಸ್ಥಾನ ವಿಹುದದರಲ್ಲಿ ಕುಂಡಲಿ ಸರ್ಪನು ಅಷ್ಟ ಪ್ರಕೃತಿ ರೂಪದಿಂದ ಸಪ್ತಕುಟಿಲಾಕೃತಿಯಾಗಿ ನಾಡಿಕಂದದ ಮಧ್ಯದ ಸುಷುಮ್ನೆ ಎಂಬ ನಾಡಿದ್ವಾರಮಂ ತನ್ನ ಮುಖದಿಂ ಮುಚ್ಚಿ ಮರಸಿ ನಿದ್ರಿತನಾಗಿಹನು. ಮತ್ತಮಾ ನಾಡೀಕಂದದಿಂ ಪೊರಮಟ್ಟು ಜಾಲಿಸೂತ್ರದಂತೆ ಮೇಲೆಕೆಳಗೆಡಬಲಗಳಿಂಗೈದು ಮನಃ ಪ್ರಾಣಾದಿ ದಶವಾಯುಗಳ ಮಾರ್ಗಗಳೆನಿಸಿದಿಪ್ಪತ್ತೆರಡು ಸಾವಿರ ನಾಡಿಗಳೊಳಗೆ ಮುಖ್ಯಮೆನಿಪ ಚತುರ್ದಶ ನಾಡಿಗಳವುಗಳಲ್ಲಿ ಈಶ್ವರನೇ ಅಧಿದೇವತೆಯಾದ ಸುಷುಮ್ನೆಯೇ ಮಸ್ತಕಾಂತವಾಗಿಹುದು. ಈ ಬ್ರಹ್ಮರಂಧ್ರದಲ್ಲಿರುವ ಅಚಲದ್ವಾರದಲ್ಲಿ ಬಾಲವನ್ನಿಟ್ಟು ಜೀವನೆಂದೆನಿಸುವ ಕುಂಡಲಿ ಸರ್ಪನು ತನ್ನ ಪುಚ್ಛವನ್ನು ಗುದಸ್ಥಾನಲ್ಲಿರಿಸಿ ಸಿರವನಮ್ಮಿಕೊಂಡು ತಲೆಯನ್ನಿಟ್ಟು ಮಲಭಕ್ಷಿಯಾಗಿರುವನು. ಇದೇ ಬಾಲ ಮೇಲಾಗಿ ತಲೆ ಕೆಳಗಾಗಿ ಮಲಗ್ರಾಹಿಯಾಗಿರುವ ಮಾಯಾಶಕ್ತಿಯೆಂಬ ಕುಂಡಲಿ ಸರ್ಪನು. ಇವನು ಏನೋ ಸುಕೃತದಿಂದ ತಲೆ ಮೇಲಕ್ಕೆ ಮಾಡಿ ಎನಗೆ ಶಿವಾಚಾರವೆಂಬ ಊರ್ಧ್ವ ಮುಖವಾಯಿತೆಂದು ಬ್ರಹ್ಮರಂಧ್ರದಲ್ಲಿ ಮೊಗವಿಟ್ಟು ನಿಷ್ಕಳಂಕ ಲಿಂಗವನ್ನು

ಆರಾಧಿಸಿ ಮಾಯಾಶಕ್ತಿಯೆಂಬ ಗುಣ ವಳಿದು ಊರ್ಧ್ವಮುಖಿಯಾಗಿಪ್ಪುದೇ ಹಂಸನ ಸುಳುವೆಂದೆನಿಸುವದು. †

೪೦೬. ಬೆರಳು ನಾಲ್ಕು=ನಾಲ್ಕಂಗುಲ ಮಧ್ಯದಲ್ಲಿರುವ ಚತುರ್ದಳ ಕಮಲದಲ್ಲಿ ವಿರಳವಾಡು=ಆಗಿಂದಾಗ್ಯೆ ತಿರುಗಾಡು. ಕೊರಳನಾಳ= ಸುಷುಮ್ನ ನಾಡಿ.

೪೦೭. ಸರಿ ನೋಡಿ ಪದ್ಯ ೪೦೫.

೪೦೮. ನಾದ=ಬ್ರಹ್ಮ. ಬಳಿವಿಡಿ=ಮಾರ್ಗಹಿಡಿ. ಅಯ್ದಿಸು=ಮೋಕ್ಷಕೊಡು. ಆ ಹಾದಿ=ಯೋಗ. ಜನುಮದ ಹಾದಿ=ಸಂಸಾರ ಚಕ್ರ.

೪೦೯. ಕೂಪ=ಸ್ನೇಹಿತ ಕೋಪಕ್ಕೂ ಪಾಪಕ್ಕೂ ಯಮನು ಅಧಿಕಾರಿ. ಇವುಗಳನ್ನು ಅಳಿದವನಿಗೆ ಯಮನು ಸಹ ಸ್ನೇಹಿತನಾಗುವನು.

೪೧೦. ನೆಲಗಟ್ಟು=ತಳಹದಿ ಅಸ್ತಿವಾರ.

೪೧೨. ಟೀ॥ ಮೊಲೆಯಿದ್ದ ಆಕಳಿನಂತೆ ಮನುಷ್ಯನು ಬ್ರಹ್ಮರಂಧ್ರದಲ್ಲಿ ಅಮೃತವನ್ನು ಕರೆಯುತ್ತಿರುವನು. ಅಂದರೆ ಲಂಬಿಕಾ ಯೋಗದಿಂದ ಬ್ರಹ್ಮರಂಧ್ರದಲ್ಲಿ ನಾಲಿಗೆ ಹಚ್ಚಿ ಸ್ವಾದಿಸುವನು. ಇದನ್ನು ತಿಳಿದುಂಬ ಯೋಗಿಯ ಅಜ್ಞಾನವೆಂಬ ಕುಲವು ನಾಶವಾಗುವದು.

೪೧೪. ಟೀ॥ ಹೊಲಸು ಕೂಡಿದ ನೀರು ಕಾಸಿದ ಕೂಡಲೆ ಉಗಿಯಾಗಿ ಹೇಗೆ ಹೊಲಸನ್ನು ಬಿಟ್ಟು ಸ್ವಚ್ಛವಾದ ನೀರನ್ನುಂಟು ಮಾಡುವದೋ ಹಾಗೆಯೇ ಯೋಗಿಯು ಅಜ್ಞಾನವೆಂಬ ಹೊಲೆಯನ್ನು ಜ್ಞಾನಯೋಗದಿಂದ ಸುಟ್ಟು ಗುರುತಿಲ್ಲದಂತೆ ಮಾಡುವನು.

೪೧೫. ಟೀ॥ ಆಶೆಯೆಂಬ ಬೆಕ್ಕು ಕೋಪವೆಂಬ ಸರ್ಪ ಮೊದಲಾದ ಷಡ್ವೈರಿಗಳಿಂದ ಕೆಟ್ಟುಹೋದ ಮನಸ್ಸನ್ನು ಒಗೆದು ಶುದ್ಧಮಾಡಿದ ಯೋಗಿಯು ನಿತ್ಯ ಜೀವಿಯಾಗುವನು.

೪೧೬. ಕಂಜ = ನೀರಲ್ಲಿ ಹುಟ್ಟಿದ್ದು=ಕಮಲ. ಮಂಜರ ಬೆಕ್ಕು ಟೀ॥ಜೀವಹಂಸನೆಂಬ ಗಿಳಿಯು ಶರೀರಪಂಜರವು ಭದ್ರವಾದದ್ದೆಂದು ವಿಷಯಾಸಕ್ತನಾದರೆ ಮಾಯೆ ಎಂಬ ಬೆಕ್ಕಿನ ಬಾಯಿಗೆ ಬೀಳುವ ಪ್ರಸಂಗವಿದೆ. ಆದ್ದರಿಂದ ಶಿವಯೋಗಿಯು ಜಾಗ್ರತನಾಗಿರತಕ್ಕದ್ದು.

೪೧೮. ಅಹಂಕಾರವೆಂಬ ಬೆಂಕಿಯಿಂದ ತ್ರಿಮೂರ್ತಿಗಳೂ ಜಗತ್ತೂ ಸುಟ್ಟುಹೋಗಿದೆ. ಇದನ್ನು ಕ್ರಮೇಣ ಆರಿಸಿದವನೇ ಯೋಗಿ.

---

† ವಿವೇಕ ಚಿಂತಾಮಣಿ ಷಟ್ಸ್ಥಲ ಸಾಧಾರಣ ಪುಟ ೯೭–೯೮ ಶಿವಾನುಭವಶಾಸ್ತ್ರ ಪುಟ ೬೩–೬೭

೪೨೩. ದುರ್ಮತಿ=ಅವಿವೇಕಿ. ಪರತತ್ವ=ಬ್ರಹ್ಮಜ್ಞಾನ. ಪರನೋಟ= ಪರಪುರುಷನ ಆಶೆ.

೪೨೪. ಮೊಲೆನಾಲ್ಕು = ವೇದಗಳ ನಾಲ್ಕು ಮಹಾ ವಾಕ್ಯಗಳು. ನಾದ= ಪ್ರಣವ. ಸಾಧಿಸಿ=ತಿಳಿದು ಪ್ರಯತ್ನಿಸಿ ವಾದಿ=ಕರ್ಮವಾದಿ, ಕುತರ್ಕಿ.

೪೨೬. ಇಂದ್ರಿಯವ+ಅರಿ=ತಿಕ್ಕು, ಕೊಲ್ಲು, ತಿಳಿ ಟೀ॥ ಆಕಾಶಪ್ರಾಯವಾಗಿರುವ ಬ್ರಹ್ಮವು ಎಲ್ಲ ಕಡೆಯಲ್ಲಿಯೂ ತುಂಬಿ ತುಳುಕುತ್ತಿಹುದು. ಹೊರಗಣ ಒಂಬತ್ತು ಬಾಗಿಲನ್ನು ಮುಚ್ಚಿ ಅಂಬರ ಬಾಗಿಲದ ಬೀಗವನ್ನು ತೆಗೆದು, ಒಳಪೊಕ್ಕು ನೋಡಲು ಗಂಗೆ ಸರಸ್ವತಿ, ಯಮುನೆ ಎಂಬ ನದಿಗಳು ಕೂಡಿದ ಠಾವಿನಲ್ಲಿ ಸಂಗಮ ಕ್ಷೇತ್ರವೆಂಬ ಭಾವಿಯಿರುವದು. ಇದರ ನೀರನ್ನು ಕುಡಿಯುವವಕ್ಕೆ ಜಿತೇಂದ್ರಿಯತ್ವವೇ ಸುಲಭೋಪಾಯ.

೪೨೭. ಮೂರು = ಆಣಿವಾದಿ ತ್ರೈಮಲಗಳು ಆರು ಷಡ್ವೈರಿಗಳು ಏಳು=ಸಪ್ತವ್ಯಸನಗಳು ಎಂಟು ಅಷ್ಟ ಮದಗಳು, ಹರಿ=ಕೊಲ್ಲು.

೪೨೯. ಒಡಲು ಅಳಿ=ರೋಗ ಮರಣಾದಿಗಳು ಸಂಭವಿಸು ತಡೆ=ವಿಘ್ನ ಎಡರು=ವಿಪತ್ತು ಕಷ್ಟ ಸಮತೆ=ಸಮತ್ವ, ಸೈರಣೆ, ತಿತಿಕ್ಷೆ.

೪೩೦. ಟೀ॥ ಪರಮಾತ್ಮನನ್ನು ಬುದ್ಧಿಯಿಂದ ಗ್ರಹಿಸುವದಕ್ಕೆ ಪ್ರಯತ್ನಿಸುವದು ಕರ್ಪುರವನ್ನು ಸುಟ್ಟು ಅದು ಬೂದಿಯನ್ನು ಮೈಗೆ ಹಚ್ಚಿಕೊಳ್ಳಲಿಕ್ಕೆ ಯತ್ನಿಸಿದಂತಿರುವದು. ಹೀಗೆ ಮಾಡದೆ ಅನುಭವದಿಂದ ತಿಳಿಯುವವನೇ ಯೋಗಿ.

೪೩೧. ಟೀ॥ ಎಂಟು ದಳಗಳಲ್ಲಿ ಹುಟ್ಟುವ ಎಂಟು ಗುಣಗಳನ್ನೂ ಹಾಗೂ ವೈರಾಗ್ಯವೆಂಬ ೯ನೆಯ ಗುಣವನ್ನೂ ತಿಳಿದು (೪೦೨) ಊರ್ಧ್ವಮುಖಿಯಾಗಿ ಪರಮಾತ್ಮನನ್ನು ಅನುಭವ ಮಾಡುವವನೇ ಯೋಗಿ.

೪೩೨. ತಾ॥ ಬ್ರಹ್ಮಾನುಭವವೂ ನೀತಿಚರ್ಯೆಯೂ ಉಳ್ಳವನೇ ಯೋಗಿ

೪೩೩. ಒಪ್ಪ ಕರ್ಮಗಳ ಬದಿಗೊತ್ತಿ=ಕರ್ಮಠ ಮಾರ್ಗವನ್ನು ತ್ಯಜಿಸ್ಸಿ ಒಳಗಿಪ್ಪವನೆ= ಅನುಭವ ಜ್ಞಾನವುಂಟಾದವನೆ.

೪೩೪. ಆತುಕೊಂಡರಿತು=ಅನುಭವಕ್ಕೆ ತೆಗೆದುಕೊಂಡು. ಜ್ಯೋತಿ=ಪರಮಾತ್ಮ.

೪೩೫. ಹೊಂದಿದಂದಿಗೆ= ಬ್ರಹ್ಮಾನಂದವು ಪ್ರಾಪ್ತವಾದ ಕಾಲಕ್ಕೆ. ಸಂದಿತು=ದೊರಕಿತು. ಉಣ್ಣು=ನುಂಗು ನಿಜದಿ=ಬ್ರಹ್ಮದಲ್ಲಿ.

೪೩೭. ಪಕ್ಷಿ=ಕೋಕಿಲೆ. ಕುಕ್ಷಿ=

ಹೊಟ್ಟೆ, ಅಶನ=ಕೂಳು. ಆಹಾರ.

೪೪೦. ತಾ॥ ದೇವರಾದವನು (ಶಿವ) ತಿರಿದುಂಡ ಮೇಲೆ ತಿರುಕರೆಂದು ಯಾರನ್ನೂ ತಾತ್ಸಾರ ಮಾಡಲಾಗದು.

೪೪೧. ಕಪ್ಪರ ಗುಂಡುಗಪ್ಪರ. ಭಿಕ್ಷಾಪಾತ್ರೆ. ಹಿರಿದೊಂದು ನಾಡು= ಕರ್ನಾಟಕ.

೪೪೨. ತಾ॥ ಅನೇಕಾವರ್ತಿ ಸಾಯುವದು ಸುಲಭವಾಗಿದ್ದು ಜೀವದಿಂದಿದ್ದು ಸೈರಿಸುವದು ಕಷ್ಟಕರವಾಗಿರುವದರಿಂದ ಸಾವಿಗಿಂತ ಸೈರಣೆಯೇ ಶ್ರೇಷ್ಠವಾದದ್ದೆಂದು ಹೇಳಲ್ಪಟ್ಟಿದೆ.

೪೪೩. ವ್ಯಾಪಾರ=ವಿಷಯಪ್ರೀತಿ. ಅಳಿ=ಬಿಡು, ಹೋಗು. ಆ ಪರ=ಮೋಕ್ಷ. ಅತಿಗಳೆ=ಸಂಪೂರ್ಣವಾಗಿ ಬಿಟ್ಟು ಬಿಡು.

೪೪೪. ಕಾಸಿಯಾ ನುಡಿ=ಕೌಪೀನದ ಸುದ್ದಿ, ಸನ್ಯಾಸದ ಯೋಚನೆ. ಕ್ಲೇಷ=ದೇಹ ದಂಡನೆ. ಸಾಸಿರ ಜಡೆ= ಸಾವಿರ ಶೀಳಿನ ಜಡೆ. ಆಸುರದ= ವಿಪುಲವಾಗಿ ಬೆಳೆದ.

೪೪೫. ಕಡಿಯುವದಕ್ಕೆ ಹೆಡೆಯೆತ್ತಿದ ನಾಗಸರ್ಪವು ಪುಂಗಿಯ ಸ್ವರವನ್ನು ಕೇಳುತ್ತಲೆ ಹೇಗೆ ತಲೆ ಅಲ್ಲಾಡುವದೋ ಹಾಗೆಯೇ ಸಮತೆಯ ಮುಂದೆ ಕೋಪವು ಆಡುವದು. ಅಂದರೆ ಕೋಪವು (ವಿಷ) ಎಷ್ಟು ಭಯಂಕರವಾಗಿದ್ದರೂ ಸೈರಣೆಯಿದ್ದರೆ ಅದರಿಂದ ಕೇಡಾಗದೆಂದು ತಾತ್ಪರ್ಯ.

೪೪೬. ಕುಂಡಲಿಯ ಕಂಡಾತ= ಕುಂಡಲಿ ಸರ್ಪವನ್ನು ಊರ್ಧ್ವ ಮುಖ ಮಾಡಿದವನು. ಹೆಂಡತಿ = ಸ್ತ್ರೀಸುಖ ಖಂಡಿತ. ಕೈವಲ್ಯಾನಂದ. ಮಾಂಸದ ಪಿಂಡ=ಇಂದ್ರಿಯ ಸುಖ.

೪೪೭. ಖಂಡಸಕ್ಕರೆ=ಕಲ್ಲುಸಕ್ಕರೆ ಮುಗ್ಗಿದೋಣಹಿಂಡಿ= ಹಳಸಿದ ಕಾರ, ಚಟ್ನಿ. ಎರಗು=ಭೋಗಿಸು ಮನಸ್ಸು ಮಾಡು.

೪೪೮. ತುರುಗಾಹಿ= ದನಕಾಯುವವ. ಇಲ್ಲಿ ಪ್ರಶ್ನೆಗಳು ನಿಷೇದಾರ್ಥವನ್ನು ಕೊಡುತ್ತಿವೆ.

೪೫೨. ಅಂತ್ಯಜಾತಿ = ಹೊಲೆಯ, ಕೀಳು ಜಾತಿ. ಮುಂತೆ = ಮೊದಲಿಂದಂತಿಯೇರು=ಆನೆಯೇರು ದೊಡ್ಡವನೆನ್ನಿಸಿಕೊಳ್ಳು.

೪೫೩. ಕಂತೆ=ಕೌದಿ.

೪೫೪. ಸುತ್ತುವ= ಹರಿದಾಡುವ.

೪೫೫. ಟೀ॥ ಯೋಗಿಯನ್ನು ಜೊಗಯ್ಯ (ಭಿಕ್ಷುಕ) ನೆಂದು ತಿರಸ್ಕರಿಸಲಾಗದು. ಹೀಗೆ ತಿರುಕನಾದ ಶಿವನನ್ನು ದಕ್ಷನು ತಿರಸ್ಕರಿಸಿ ತಲೆಯನ್ನು ಕಳಕೊಂಡನು. ( ನೋಡಿ ಪದ್ಯ ೧೭೨; ೧೮೧) ಇದು ಯೋಗಿಯಾದ ಶಿವನನ್ನು ನಿಂದಿಸಿದ್ದರಿಂದುಂಟಾದ ಪರಿಣಾಮವು.

೪೫೬. ಟೀ॥ ಸ್ವಯಂಜ್ಯೋತಿರೂಪನಾಗಿರುವ ಶಿವಯೋಗಿಗೆ ಸರ್ಪನಿಗೆ ಹೆದರಿದಂತೆ ಭಯಪಟ್ಟು ಭಕ್ತಿ ಸಲ್ಲಿಸಬೇಕು. ಇಲ್ಲವಾದರೆ ಕೇಡಾಗುವದು.

೪೫೭. ಟೀ ॥ ಹೊಳೆಯ ನೀರು ತಣ್ಣಗಿದ್ದರೂ ಆನೆಯಂಥ ದೊಡ್ಡ ಮೃಗವನ್ನು ಮುಳುಗಿಸಿ ಕೊಲ್ಲುವಂತೆ ಶಾಂತನಾದ ಶಿವಯೋಗಿಯ ಕೋಪವು ಉರಿದರೆ ವೈರಿಯು ನಿರ್ನಾಮವಾಗುವನು.

೪೫೮. ನೆಲೆಗಟ್ಟು=ಮೂಲ; ತವರುಮನೆ ಟೀ॥ ಕುಣಿಯನ್ನು ಏರುವ ಮನುಷ್ಯನ ಕೈಯಲ್ಲಿರುವ ಹಗ್ಗವು ಹರಿದರೆ ಹೇಗೆ ಭರದಿಂದ ಬೀಳುವನೋ ಹಾಗೆಯೇ ಕೋಪಿಷ್ಟನು ಪಾಪಮಾಡಿ ಭಯಂಕರವಾದ ನರಕದಲ್ಲಿ ಬೀಳುವನು.

೪೫೯. ಕಡವಸ= ಸನ್ಯಾಸಿ ಧರಿಸುವ ಚರ್ಮ. ಕರಣತಡೆ=ಇಂದ್ರಿಯ ನಿಗ್ರಹ ಮಾಡು. ಬಿಡದೆ ದೇಗುಲದಲಿರು=ಸತತ ದೇವಸ್ಥಾನದಲ್ಲಿದ್ದು ಭಕ್ತಿಯನ್ನು ಮಾಡುತ್ತಿರು.

೪೬೦. ವಾಸನೆ=ವಿಷಯ ವಾಸನೆ, ಪೂರ್ವಸಂಸ್ಕಾರ. ಕೊಡವು=ಝಾಡಿಸಿ ಬಿಡು, ನಾಶಪಡಿಸು.

೪೬೧. ಕುಪಿತ= ಸಿಟ್ಟು. ತಪತಾಪ=ಉರಿಯುವ ಬೆಂಕಿ.

೪೬೪. ಎರಡಾಗು = ಚಂಚಲವಾಗು. ಉತ್ತಮರು= ಶಿವಯೋಗಿಗಳು. ಚಿತ್ರವದನೆಯರ ಸುಳಿ=ಮನಸ್ಸು ಸ್ತ್ರೀಯರ ಸುತ್ತಲು ಸುಳಿದಾಡು.

೪೬೬ ಒಂದು ಕಂಭ=(೧)ಧ್ಯಾನ (೨) ಪರಮಾತ್ಮ ( ೩ ) ಸುಷುಮ್ನಾ ನಾಡಿ. ಐದು ಗಂಥ ಹಂಸ= ಪಂಚೇಂದ್ರಿಯಗಳಿಂದ ಕೂಡಿದ ಜೀವಹಂಸ. ಒಂದರೊಳು=ಯೋಗದಲ್ಲಿ.

೪೬೭. ಟೀ॥ ಮೂತ್ರವನ್ನು ಹೋಗಬಿಟ್ಟು ರತಿಸುಖವನ್ನು ಬಂದುಮಾಡಿದರೆ ಅವನೇ ಪರಬ್ರಹ್ಮನಾಗುವನು.

೪೬೮. ಬ್ರಹ್ಮರಂಧ್ರದ ಗೊತ್ತು=ಸುಷುಮ್ನಾನಾಡಿಯಿರುವ ಸ್ಥಳ. ಒಮ್ಮೆಲೇ ತಿಳಿಯದು—ಬಹು ಯೋಗಸಾಧನೆ ಬೇಕು. ಹಮ್ಮಿನ ಹೊಲೆ= ಅಹಂಕಾರವೆಂಬ ಹೊಲಸು. ಕಳೆದೊಗೆ= ತೊಳೆದು ಬಿಡು, ನಾಶಪಡಿಸು.

೪೬೯. ಜಗತ್ತಿನ ವಿಸ್ತಾರಕ್ಕೆ ಕಾರವಾದ ಬಿಂದುನಾದ ಕಳೆಗಳು ಚಂದ್ರನಾಳ ಸೂರ್ಯನಾಳ ಮುಂತಾದ ೭೨ ಸಾವಿರ ನಾಳಗಳಿಗೆ ಮೂಲವಾದ ಮಧ್ಯನಾಡಿಯಲ್ಲಡಗಿರುವದನ್ನು ತಿಳಿದು, ಅಜ್ಞಾನವೆಂಬ ಗ್ರಹಣವನ್ನು ಹರಿಸಿ ಚಂಚಲವಾದ ಮನಸ್ಸಿನ ಮೂಲವನ್ನು ಗೊತ್ತುಹಚ್ಚಿ ಅದನ್ನು ನುಂಗಿ ಸ್ಥಿರ

ಗೊಳಿಸಿದ ಯೋಗಿಯು ಶಿವನೆನ್ನಿಸಿ ಕೊಳ್ಳುವನು.

೪೭೦. ಆಸನದಿ ದೃಢನಾಗಿ = ೮೪ ಆಸನಗಳಲ್ಲಿ ಮುಖ್ಯವಾದ ಶುದ್ಧಾಸನ ದಲ್ಲಿ ಸುಸ್ಥಿರ ಚಿತ್ತನಾಗಿ ಮೂರ್ತ ಗೊಂಡು ಅಂದರೆ ಗುದ ಮಧ್ಯಸ್ಥಾನ ವಾದ ಯೋನಿ ಮಂಡಲ ದ್ವಾರಕ್ಕೆ ಎಡದ ಹಿಮ್ಮಡವನ್ನಿಕ್ಕಿ ಬಲದ ಹಿಮ್ಮ ಡವನ್ನು ಮೇಢ್ರ ಸ್ಥಾನದಲ್ಲಿರಿಸಿ ಅತ್ತಿ ತ್ತಲುಕದೆ ಬೆನ್ನೆಲವು ಸೋಂಕಿಸದೆ ನೆಟ್ಟನೆ ಕುಳ್ಳಿರ್ದು ಉಭಯಲೋಚನ ವನೊಂದು ಮಾಡಿ ಉನ್ಮನೆಯ ಸ್ಥಾನ ದಲ್ಲಿರಿಸುವದು ಆಸನ ದೃಢತ್ವವೆನಿಸು ವದು. ಸೂಸುವ=ಹರಿದಾಡುವ ಬಿಗಿ= ಕಟ್ಟಿಹಾಕು.

೪೭೧. ಸಂಧಿಸುತ=ನಿರೋಧವಾಗಿ ನಿಂತು–ಮೆಲ್ಲಮೆಲ್ಲನೆ.

೪೭೨. ಭ್ರೂಮಧ್ಯ=ಹಣೆ, ಧ್ಯಾನ ಸ್ಥಾನ, ನಿಟಿಲಾಕ್ಷ=ಶಿವ. ಕುಟಿಲಕುಂ ದಕ= ಪಾಪಕರ್ಮ, ಕೆದರು= ನಾಶ ಪಡಿಸು.

೪೭೪. ಖೇಚರದ ಮುದ್ರೆ=ನಾಲಿಗೆ ಯನ್ನು ಉದ್ದವಾಗಿ ಎಳೆದು ಗಂಟಲಲ್ಲಿ ಸಿಕ್ಕಿಸಿ ಶ್ವಾಸ ನಿರೋಧನ ಮಾಡುವ ಯೋಗ ವಿದ್ಯೆ ಇದರಿಂದ ಮನುಷ್ಯನು ಹಕ್ಕಿಯಂತೆ ಹಗುರಾಗುವನೆಂದು ಹೇ ಳಿಕೆ. ಆಚರಿಸಲು=ಮಾಡಲಿಕ್ಕೆ ತಿಳಿದರೆ ಲೋಚನವು ಮೂರುತನಗಕ್ಕು=ಶಿವ ನಾಗುವನು. ಭೂಚರ= ಭೂಮಿಯ ಮೇಲೆ ಚರಿಸುವ ಮನುಷ್ಯನು. ಖೇಚ ರನಕ್ಕು=ಆಕಾಶದಲ್ಲಿ ಹಾರಾಡುವ ಹಕ್ಕಿ ಯಂತಾಗುವನು.

೪೭೫. ಬೆನ್ನನಳಿ = ಸುಷುಮ್ನಾ ನಾಡಿ. ಶಂಕರನ ಸನ್ನಿಧಿ=ಕೈಲಾಸ.

೪೭೬. ಸುಧಿ=ಜ್ಞಾನ ಸುಧೆ=ಅಮೃ ತ ಮುದ = ಪ್ರೀತಿ ಮಂತ್ರ=ಪಂಚಾ ಕ್ಷರಿ ಮಂತ್ರ, ನಿಧಿ ಪುರುಷ= ಕುಬೇರ, ಆನಂದಸಾಗರ.

೪೭೮. ಎತ್ತಿ ತಾ ಪ್ರಾಣವನು = ಪ್ರಾಣಾಯಾಮಾದಿ. ನೆತ್ತಿಯಾ ಕೊನೆ= ಬ್ರಹ್ಮರಂಧ್ರ. ಚಿತ್ತದ ಮರ್ಮ=ಮನ ಸ್ಸಿನ ಮೂಲ.

೪೭೯. ಅರ್ತಿ=ಪ್ರೀತಿ, ಚಿತ್ತಕೆ ಹೊಲೆಯಿಲ್ಲ= ಸಾಂಖ್ಯರು ಹೇಳುವಂತೆ ಮನಸ್ಸು ಸ್ಫಟಿಕದಂತಿರುವದರಿಂದ ಅದ ಕ್ಕೆ ಮೈಲಿಗೆಯಿಲ್ಲ. ಬತ್ತಲಿದ್ದವ=(೧) ದಿಗಂಬರ(೨)ಎಲ್ಲ ಆಶೆಯನ್ನು ಕಳೆದವ.

೪೮೦. ಟೀ॥ ಶ್ರೇಷ್ಠವಾದ ಮಣಿ ಯಂತಿರುವ ಜ್ಞಾನ ಬೀಜವನ್ನು ಇಲ್ಲವೆ ಬ್ರಹ್ಮವೆಂಬ ಚಿದ್ರತ್ನವನ್ನು ಬಿತ್ತತಕ್ಕ ಹೊಲವೆಂದರೆ ಹೃದಯಮಂಟಪ. ಇದ ರಲ್ಲಿ ಯೋಗದಿಂದ ನಿತ್ಯ ಶುದ್ಧ ಮುಕ್ತ ನಾದ ಪರಮಾತ್ಮನನ್ನು ಅನುಭವದಿಂದ ಕಂಡ ಶಿವಯೋಗಿಗೆ ಮರಣವಿಲ್ಲ.

೪೮೧. ಆವರೋಮ= ಆಕಳು ಕೂ

ದಲು. ಆವುಗಣ್ಣಿ=ಪಶುಕಟ್ಟುವ ಹಗ್ಗ. ಟೀ॥ ಮಾಯೆಯೆಂಬ ಆಕಳನ್ನು ಅದರ ಕೂದಲಿನಿಂದ ಮಾಡಿದ ಹಗ್ಗದಿಂದಲೇ ಅದನ್ನು ಬಂಧಿಸಿ ತಾನು ಕಡೆಗಾದ ಯೋಗಿಗೆ ಮರಣವಿಲ್ಲ. ಮನಸ್ಸಿನಿಂದಲೆ ಮನಸ್ಸನ್ನು ಕಟ್ಟಿ ಮುಕ್ತನಾಗಬೇಕೆಂದು ತಾ॥

೪೮೨. ಟೀ॥ ಅಧೋಕುಂಡಲಿಯನ್ನು ಊರ್ಧ್ವಕುಂಡಲಿಯ ಮಾಡಿದವನಿಗೆ ಸ್ವರ್ಗಮೃತ್ಯು ಪಾತಾಳಗಳು ವಶವಾಗಿ ಅವನು ಸಾವಿಗೆ ಹೆದರದವನಾಗುವನು.

೪೮೪. ಬಿಂದುನಾದ=ಪದ್ಯ ೩೭೮. ಉಡುಗಿಸು = ಆಟೋಪದಲ್ಲಿಟ್ಟುಕೊಳ್ಳು. ನಿಂದಿರದ = ಒಂದು ಕಡೆಯಲ್ಲಿ ಸ್ಥಿರವಾಗಿರದ.

೪೮೫. ಆರಯಿಕೆ=ಶುಶ್ರೂಷೆ. ಬಂದುದಕೆ= ಬಂದ ಕರ್ಮ ಫಲಕ್ಕೆ, ದೈವವಿಧಿಗೆ. ಅಳುಕ=ಅಂಜನು. ಆರೂಢ= ಗುಣಗಳನ್ನು ಗೆದ್ದವ.

೪೮೭. ಅಳವು=ಶಿವಾನಂದ. ಯಾಗ=ಸ್ವಯಜ್ಞ, ಸ್ವಾರ್ಥಯಜ್ಞ.

೪೮೮. ಸಿದ್ಧಾಂತಯೋಗ = ಲಿಂಗಾಂಗ ಅನುಭವ ಯೋಗ.

೪೮೯. ಕುಟಿಲ = ಕಪಟ. ಸಟೆ= ಸುಳ್ಳು. ಸಿಡುಕು=ಸಿಟ್ಟು. ನಟನೆ=ತೋರಿಕೆ. ದಿಟವಾಗಿ=ನಿಶ್ಚಯವಾಗಿ.

೪೯೦. ಅರವಟಿಗೆಯುದಕ= ಉಚಿತಾರ್ಥವಾಗಿ ಹನಿಸುವ ನೀರು. ಪರರ ಕೈಯನ್ನ=ಭಿಕ್ಷೆ. ಸ್ವಯಂಪಾಕನಾಡಿಕೊಳ್ಳತಕ್ಕದ್ದು.

೪೯೧. ಅಸಮ= ಸರಿಯಿಲ್ಲದ, ಸರ್ವೋತ್ಕೃಷ್ಟವಾದ ಸಸಿನೆ ಕುಳ್ಳಿರ್ದ= ಸುಮ್ಮನೆ ತೋರಿಕೆಗೆ ಯಾವದೊಂದು ಯೋಗಾಸನವನ್ನು ಅನುಸರಿಸಿ ಕೂತು. ಉಸಿರ ಕೊನೆಯಲ್ಲಿರಿಸು=ಪ್ರಾಣಾಯಾಮ ಮಾಡು. ಕಿಸವಾಯಿಯಕ್ಕು=ಹಾಸ್ಯಕ್ಕೆ ಗುರಿಯಾಗು

೪೯೨. ಟೀ॥ ಅಹಂಕಾರದಿಂದ ತುಂಬಿ ಪ್ರಯತ್ನವಿಲ್ಲದ ಯೋಗಿಗೆ ಸುಷುಮ್ನಾ ನಾಡಿಯು ತಿಳಿಯದೆ ಹೋಗುವದರಿಂದ ಅವರು ಎಂದಿಗೂ ಬ್ರಹ್ಮಾನಂದವನ್ನು ಪಡೆಯನು.

೪೯೩. ಟೀ॥ ಎಲ್ಲವನ್ನು ತನ್ನಂತೆ ತಿಳಿಯುವದೇ ಶಿವಯೋಗ. ಹೀಗಲ್ಲದೆ ಬೇಕಾದಲ್ಲಿ ಹೀಗೆ, ಬೇಡವಾದಲ್ಲಿ ಹಾಗೆ ವರ್ತಿಸುವ ಕಪಟಿಗೆ ಆ ಶಿವಯೋಗವು ಲಭಿಸುವದು ಹೇಗೆ ?

೪೯೪. ಹಂಸನ+ಆ +ದಳವವರ= ಪದ್ಯ ೪೦೨ರಲ್ಲಿ ಹೇಳಿದಂತೆ ಗುಣಗಳ ಉತ್ಪತ್ತಿಯನ್ನು ತಿಳಿದ ಯೋಗಿಗಳ. ವಂಶ=ಯೋಗಾಭ್ಯಾಸಾನುಭವ, ಮರ್ಮ. ಹಂಸ=ಪರಮಹಂಸ. ವಂಶ= ಗುಂಪು.

೪೯೫. ಹಾಲುಂಬ ಹಂಸ=ಹಂಸವು ಹಾಲನ್ನೂ ನೀರನ್ನೂ ಬೇರೆಮಾಡಿ ಹಾಲನ್ನೇ ಕುಡಿಯುವದೆಂದು ಹೇಳಿಕೆ. ಅಂದರೆ ಪ್ರಪಂಚವನ್ನು ಲಿಂಗಾರ್ಪಿತ ಮಾಡಿ ಅದರಲ್ಲಿಯೇ ಪಾರಮಾರ್ಥವನ್ನು ಅನುಭವ ಮಾಡಿಕೊಳ್ಳುವವನೇ ಯೋಗಿ. ಹೀಗಲ್ಲದೆ ಜನಮೆಚ್ಚಿಕೆಗೆ ಯೋಗಮಾಡುವವನು ಗಿಳಿಯು ವೇದವನ್ನು ಪಠಿಸಿ ಕೂಳಿಲ್ಲದೆ ಸತ್ತುಹೋದಂತಿರುವದು.

೪೯೬. ದೇವರ+ಇರವ+ ಅರಿ=ದೇವರ+ನಿಜವನ್ನು+ಅನುಭವಿಸು. ಅನ್ಯಾಯದಿರವು = ವ್ಯರ್ಥವಾದ ಬಾಳಿಕೆ. ಒಡಲು=ಜೀವಿಕೆ. ೪೯೮. ಕೇಶವನು ಕಿತ್ತಿಸಿಕೊಳ್ಳು=ಇದು ಜೈನ ಸನ್ಯಾಸಿಗಳನ್ನು ಕುರಿತಿದೆ. ತ್ರೈಮಲ=ಅಣು, ಮಾಯಾ, ಕಾರ್ಮಿಕ ಇಲ್ಲವೆ ಹೊನ್ನು ಹೆಣ್ಣು, ಮಣ್ಣೆಂಬ ಮಲತ್ರಯಗಳು.

೫೦೨. ಮಾರಿ=ಹೇನಿನ ಉಪದ್ರವ. ಗುಡುಗುಡಿಸಿ=ಬುಚುರಿಯುವ, ಹೇನು ಹರಿಯುವಾಗ ಆಗುವ ಶಬ್ದ. ಸನ್ಯಾಸಿಯು ಹೇನಿನ ಉಪದ್ರವ ತಾಳಲಾರದೆ ತಲೆತುರಿಸಿಕೊಳ್ಳುವದನ್ನು ಸಂಸಾರಿಕನಾದ ಭಕ್ತನು ನೋಡಿ ನಗುವನು.

೫೦೪. ತೋರುವ = ಸಮೀಪದ, ಶ್ರೇಷ್ಠ. ಕುಲಗಿರಿ=ಏಳು ಮಹಾಬೆಟ್ಟಗಳಲ್ಲೊಂದು (ಶ್ರೀಶೈಲ?). ಬೇರೊಂದ=ಪ್ರಪಂಚ ಸ್ತ್ರೀಸುಖವನ್ನು. ಸೂರೆಹೋಗು=ಕಳವಾಗು.

೫೦೫ ದಂಡ ಕೋಲು=ಉದ್ದವಾದ ಕೋಲು. ಹಿಂಡಿ ಕಟ್ಟಿ=ಒಂದನ್ನು ಧರಿಸಿ ಇನ್ನೊಂದನ್ನು ಒಣಗಲಿಕ್ಕೆ ಕೋಲಿಗೆ ಕಟ್ಟಿ ತನ್ನ ಸಂಸಾರವೆಲ್ಲ ಇಷ್ಟೇ ಎಂದು ತೋರಿಸುವ. ಬಾಯ್ಬಿಡು=ಸಿಕ್ಕಬೇಕೆಂದು ಆಶಿಸು. ಹಿಂಡು ಕೈಪ=ಬಹಳ ಕೌಪೀನಗಳೆಂದು ಕಿಟಲ್ ಪಂಡಿತರು.

೫೦೬, ಸಾಧು=ಗುಣಗಳನ್ನು ತನ್ನ ವಶಕ್ಕೆ ತಂದವ. ಸಿದ್ಧ=ಇದರಲ್ಲಿ ಸಂಪೂರ್ಣತೆಗೆ ಮುಟ್ಟಿದವ. ತೋಯಿಸಿದ ಮಡಿವಸ್ತ್ರ. ಮೇದಿನಿ=ಭೂಮಿ. ವಿಷಯಕ್ಕೆ=ವಿಷಯ ಸುಖಕ್ಕೆ ತಾ॥ ಇಂಥವರು ಯೋಗಿಗಳಲ್ಲ ಹೊಲೆಯರೇ.

೫೦೭. ಆಲದ ಬಿಳಿಲಂತೆ=ಆಲದ ಬೇರಿನಂತೆ. ಜೋಲುಜಡೆ = ಜೋತಾಡುವ ಜಡೆ. ಕೈಪ ಶುದ್ಧಿಲ್ಲ=ಜಿತೇಂದ್ರಿಯತ್ವವಿಲ್ಲ. ಮರಿನಾಯ ಬಾಲದಂತೆ= ಕೌಪೀನವು ಹೆಸರಿಗೆ ಬಿಗಿಯಲ್ಪಟ್ಟಿದ್ದರೂ ಒಳಗೆ ಸಡಿಲಾಗಿ ಐದ್ವಕ್ಕಿದ್ದಂತೆ ವಿಷಯಾಸಕ್ತನಾಗಿರುವನು.

೫೦೮. ಈಶತ್ವ=ತನ್ನನ್ನು ತಾನೇ ಆಳಿಕೊಳ್ಳುವ ಶಕ್ತಿ. ಸೂಸು=ಸುರಿದು ಬೀಳು. ಟೀ॥ ಈಶ್ವರ ಭಕ್ತಿ ಇಲ್ಲವೆ

ಜಿತೇಂದ್ರಿಯತ್ವವೇ ದಾರಿ. ಸದ್ಗುಣಗಳೇ ಇವರಲ್ಲಿರುವ ಮಣಿಗಳು, ಇದಲ್ಲದೆ ಹೋದರೆ ಆ ಮಣಿಗಳು ಉದುರಿಬೀಳುವವು.

೫೦೯. ನಾಯಕ = ದೊಡ್ಡವ. ಆಯು=ನಿಜ, ಕಾಯಕ=ಇಂದ್ರಿಯವ್ಯಾಪಾರ, ನಾಯಕ=ಲೌಕೀಕ, ತಾ॥ ಇಂದ್ರಿಯಗಳ ಆಶೆಯು ಸಾಯದೆ ದೊಡ್ಡವನೆನ್ನಿಸಿಕೊಳ್ಳುವದು ಹೇಗೆ?

೫೧೧. ಜಾಳು ಮಾತು = ವ್ಯರ್ಥ ಮಾತು. ಮೇಳ=ವಿಷಯಸಂಗ.

೫೧೨. ಕಡೆ=ಊಟದ ಮನೆ. ಟೀ॥ ಒಡೆಯನೂ ಶಿವಸ್ವರೂಪಿಯೂ ಅನ್ನಿಸಿಕೊಳ್ಳುವ ಜಂಗಮನು ಮನೆ ಮನೆಗೆ ಬಾಗಿಲಲ್ಲಿ ನಿಂತುಕೊಂಡು ಭಿಕ್ಷೆ ಬೇಡುವದು ಯಾತಕ್ಕೆ ? ಗುಣವಿಲ್ಲದೆ ಭಿಕ್ಷೆಯಿಂದ ಶಿವನಿಗೆ ಸಮಾನವಾದವನು. ಹೊಟ್ಟೆಯ ಜಂಗಮನೇ ಸರಿ.

೫೧೩ ಟೀ॥ ಅಭಿಮಾನವೆಂಬ ಜಾತಿ ಕೆಟ್ಟು ಹೊಲಗೇರಿಯಲ್ಲಿದ್ದವನಂತೆ ಮಡಿಮೈಲಿಗೆ ಲಕ್ಷಿಸದೆ ಇರಬೇಕು. ಹೇಗಂದರೆ—“ಶಿವಯೋಗಿಗೆ ಹೊಲಗೇರಿಯೆಂದರೆ ಚಿದಾಶ್ರಮ. ಚಿದಾಶ್ರಮವೆಂದರೆ ಬ್ರಹ್ಮರಂಧ್ರ. ಇದು ಊರ ಹೊರಗಿರುವದು. ಹೊಲಗೇರಿಯೊಳಗೆ ಆವ ಶೀಲ ವ್ರತಾಚಾರಗಳು, ಮಡಿಮೈಲಿಗೆ ಇಲ್ಲದ ಕಾರಣ ಉಭಯಕ್ಕು ಏಕಪರ್ಯಾರ್ಥ. ಅಂತಪ್ಪ ಚಿದಾಶ್ರಮವೆಂಬ ಬ್ರಹ್ಮರಂಧ್ರದಲ್ಲಿ ಪ್ರವೇಶವಾಗಿ ನೂರೊಂದು ಸ್ಥಳಕುಳದ ಆಚರಣೆ ನಷ್ಟವಾದಾತನೇ ಲಿಂಗಾಂಗ ಸಮರಸ ಸದ್ಭಕ್ತ ನೋಡಾ. ಹೊಲಗೇರಿ ಹೊಕ್ಕು ಕುಲಗೆಟ್ಟವನೇ ಶಿವಯೋಗಿ. ಕಾಣೋ. *

೫೧೪. ಪಿನಾಕಿ=ತ್ರಿಶೂಲಧಾರಿ = ಶಿವ ಲೋಕದ... ನಡೆವಾತ= ವಿಷಯಾಸಕ್ತ.

೫೧೫. ಟೀ ಬ್ರಹ್ಮಾನುಭವ ಸಾಧನೆಯು ತನ್ನಲ್ಲಿಯೇ ಇದ್ದು ಅದನ್ನು ಬೇರೆ ಕಡೆಗೆ ಹುಡುಕುವದು ಎತ್ತನ್ನು ಏರಿ ಎತ್ತನ್ನು ಹುಡುವಂತೆ ಇಲ್ಲವೆ ಕಂಠಿಯ ಸರವನ್ನು ಕೊರಳೊಳಗೆ ಕಟ್ಟಿಕೊಂಡು ಮನೆಯಲ್ಲ ಹುಡುಕಿದಂತಿರುವದು. (ಎತ್ತನ್ನು=ನಿಚ್ಚಣಿ) ಗುಡ್ಡವನ್ನೇರಿ ನಿಚ್ಚಣಿಕೆಯನ್ನು ಹುಡುಕಿದಂತೆಂದು ಕೆಲವರು.

೫೧೬. ನೆನವು=(೧) ಭಕ್ತಿ. (೨) ಎಲ್ಲ ಆಶೆ. ಘನದಲಿ=ಪರಶಿವನಲ್ಲಿ ಬೇರೊಂದು ಪದಾರ್ಥಕ್ಕೆ ಎಡೆಕೊಡದೆ ಸರ್ವತ್ರವ್ಯಾಪಿಯಾಗಿರುವದರಿಂದ ಅವ

---

* ವಚನಶಾಸ್ತ್ರಸಾರ ೩೬೪–೬೫

ನಿಗೆ ಘನ ಇಲ್ಲವೆ ಮಹಾಘನವೆಂದು ಹೆಸರು. ಬಿಗುತರದಲ್ಲೆಂದು ಕಿಟೆಲ್ ಪಂಡಿತರು ( ನೋಡಿ ಕಾವ್ಯಮಾಲೆ ). ಅಪಾನಕೆ=(೧) ಅಧೋಗತಿಗೆ (೨) ವಿಷಯ ಸುಖಕ್ಕೆ ಅನ್ನ+ಪಾನಕ್ಕೆಂದು ಕೆಲವರು. ಎಳಸು=ಬಯ್ಯು; ಹಚ್ಚು.

೫೧೭. ನಿತ್ಯನೇಮ = ೩೬ ನೇಮ ಗಳು. ನೆತ್ತಿ ಬೋಳು ಹಾಗೂ ಜಡೆ ಬಿಡುವದು = ಸನ್ಯಾಸಿಗಳಲ್ಲಿರುವ ಎರಡು ವಿಧ. ಪೂಜೆ = ೮ ವಿಧದ ಪೂಜೆ. ವದನ=ಮುಖ ಬಾಯಿ.

೫೧೯. ಆಶೇಯೇ ನರಕ ನಿರಾಶೆ ಯೇ ಕೈಲಾಸ.

೫೨೦. ರಾಶಿಕರ್ಮ=ಸಂಚಿತ, ಕ್ರಿಯಮಾಣ, ಪ್ರಾರಬ್ಧವೆಂಬ ಮೂರು ರಾಶಿಗಳು ಸುಟ್ಟ=ಜ್ಞಾನಾಗ್ನಿಯಿಂದ ಸುಟ್ಟು. ದೋಷಕಳೆ=ನಿರಂಜನನಾಗು. ಆವಗಂ=ಯಾಗಲು; ಲೇಸಾಗಿ=ಶಿವ ಸುಖವನ್ನನುಭವಿಸುತ್ತ.

೫೨೧. ಮಾನವತಿ=ಮರ್ಯಾದೆ ಯುಳ್ಳ

೫೨೨. ಈವ=ಈಯು ಧಾತು=ಕೊಡು=ದಾನಿ. ಕೈಯಾರೆ=(೧)ಕೈಮುಟ್ಟಿ (೨) ಸ್ವ ಸಂತೋಷದಿಂದ ತಾ॥ ಕೊಡುವದು ದೇವರ ಗುಣವಾಗಿರುವದರಿಂದ ದಾನಿಯು ದೇವರ ಸಮಾನ.

೫೨೪. ಅಕ್ಷಯಪದ=ಎಷ್ಟು ಕೊಟ್ಟರೂ ಕಡಿಮೆಯಾಗದ ಗಂಟು. ಭಾಗ್ಯ.

೫೨೫. ಒಕ್ಕಲಿರಹೋಹ=ಸ್ವರ್ಗ ವನ್ನು ಪಡೆಯುವನು.

೫೨೭. ಇಕ್ಕು=ಅನ್ನದಾನಮಾಡು. ನೀಡು. ನನ್ನಿ=(೧) ಸತ್ಯ. (೨) ಪ್ರೀತಿಯ ಮಾತು. ಬಗೆ=ತಿಳಿ. ಬಿನ್ನಣವು+ಅಕ್ಕು=(ಸಂ. ವಿಜ್ಞಾನ) (೧) ತಿಳಿವಿಕೆಗೆ ಬರು. (೨) ಕರಸ್ಥಿತವಾಗು. ಸೂ॥ ಕೈಲಾಸವನ್ನು ಪಡೆಯುವದಕ್ಕೆ ಇಲ್ಲಿ ಲೌಕಿಕ, ಮಾನಸಿಕ, ನೈತಿಕ ಹೀಗೆ ತ್ರಿವಿಧಸಾಧನೆಗಳು ಹೇಳೋಣವಾಗಿವೆ.

೫೨೮. ಅಮಳ=ಅಮಲ=ನಿಷ್ಕಳಂಕವಾದ. ತಾ॥ ದಾನದಿಂದ ನರೇಂದ್ರ ಹಾಗೂ ದೇವೇಂದ್ರ ಪದವಿಗಳು ದೊರೆಯುವವು.

೫೨೯. ಕೊಟ್ಟ=ಭಾಗ್ಯವನ್ನು ಕೊಟ್ಟ. ಹರನ ರೂಪು=ಜಂಗಮ, ಈಶ್ವರ ಭಕ್ತ. ಹಂದೆ=ಹೆಂಡತಿ ?

೫೩೦. ಕರೆದು = ಬಡಬಗ್ಗರನ್ನು ಹುಡುಕಿ ತಂದು. ಪರಿಣಾಮ=ಸುಖ ಪದ=ಶಿವಪದ. ನೆರಮನೆ=ಬಹುಸಮೀಪ, ಆಪದ್ಬಂಧು.

೫೩೧. ಟೀ॥ ಯೋಗ್ಯಕಾಲದಲ್ಲಿ ಯೋಗ್ಯ ಸ್ಥಳದಲ್ಲಿ (ಚಿಪ್ಪಿನಲ್ಲಿ) ಬಿದ್ದ ಮಳೆಯ ಹನಿಯು ರೂಪಾಂತರವಾಗಿ ಕೋಟ್ಯಾವಧಿ ರೂಪಾಯಿ ಬಾಳುವ

ಮುತ್ತಾಗುವದು ಹೇಗೋ ಹಾಗೆಯೇ ಯೋಗ್ಯ ಕಾಲದಲ್ಲಿ ಯೋಗ್ಯನಾದ ಯತಿಗೆ ಕೊಟ್ಟ ದಾನವು ಪಂಚಮ ಹಾಪಾತಕಗಳನ್ನು ಈಡಾಡುವಷ್ಟು ಮಹಾಪುಣ್ಯವನ್ನುಂಟು ಮಾಡುವದು.

೫೩೨. ಟೀ॥ ಕೊಡೆಹಿಡಿಸಿಕೊಂಡು ಅದರ ನೆರಳಿನಲ್ಲಿ ಮೆರೆಯುತ್ತ ಬರುವ (ಅರಸ) ನನ್ನು ನೋಡಿ—ಇದು ಎಂಥಾ ಸುಖ! ಯಾವ ಪುಣ್ಯವನ್ನು ಮಾಡಿದ್ದ ರಿಂದ ಬಂದಿರಬಹುದೆಂದು ಆಶ್ಚರ್ಯ ಪಡಬೇಡ. ಅದು (ಮುನ್ನಿನ) ಪೂರ್ವ ಜನ್ಮದಲ್ಲಿ ಮಾಡಿದ (ಉತ್ತಮದ) ಪುಣ್ಯದ ಫಲವೇ.

೫೩೪ ಟೀ॥ ಕುದಿಸಿದ್ದನ್ನು ಬಿತ್ತಿ ಅಂದರೆ ಅನ್ನದಾನ ಮಾಡಿ ಪುಣ್ಯವೆಂಬ ಬೆಳೆಯನ್ನು ಉಣ್ಣುವ ದಾಸೋಹನು (ಭಿಕ್ಷುಕ) ಈಶ್ವರ ಪದವಿಯನ್ನು ಹೊಂದುವನು. ಅರ್ಥಾಂತರ—ಕರ್ಮ ವನ್ನು ಕುದಿಸಿ ಆ ಬೆಂದ ಬೀಜದಿಂದ ಲೇ ಜ್ಞಾನದ ಬೆಳೆಯನ್ನು ಉಣ್ಣುವ ಯೋಗಿಯೆಂದು ಕೆಲವರು. ಅಹಂ ಎಂಬುದೇ ದೇಹ ದಾಸೋಹವೆಂಬುದೇ ನಿರ್ದೇಹವೆಂದು ವಚನವಿರುವದು.

೫೩೫. ಅವರು=ದಾನಿಗಳು, ಇವರು= ಬಡವರು. ತಿಳಿದುಪ್ಪ = ಪ್ರೀತಿಯಿಂದ ಬೇಕಾದದ್ದೆಲ್ಲವನ್ನು ನೀಡಿದರೆ.

೫೩೮. ಮಾಡುವದಾನಿ=ಕೊಡಲಿಕ್ಕೆ ಶಕ್ತಿಯೂ ಮನಸ್ಸೂ ಇದ್ದವ. ಫಿಸುಣಿ=ಲೋಭಿ, ಮೂರ್ಖ, ನೀಚ.

೫೩೯. ಟೀ॥ ಸಾವು ನಿಶ್ಚಯವಾಗಿರುವದರಿಂದ ಹಣವನ್ನು ಗಳಿಸಿ ಎರಡನೆಯವರಿಗಿಡದೆ ಸ್ವಂತಕ್ಕೆ ಪ್ರಯೋಜನ ಮಾಡಿಕೊಳ್ಳಬೇಕಾದರೆ ದಾನ ಮಾಡಬೇಕು.

೫೪೧. ಕುದಿ=ಪಶ್ಚಾತ್ತಾಪಪಡು. ಆಡಿಕೊಳ್ಳು= ಗುಣಗುಟ್ಟು. ಬುತ್ತಿ=ಪುಣ್ಯದ ಫಲ.

೫೪೨. ಒಡಲು+ಒಡವೆಗಳು=ಶರೀರವೂ ಹಾಗೂ ಸಂಪಾದಿಸಿದ ದ್ರವ್ಯವೂ, ಅರ್ಥಾಂತರ, ಒಡಲ+ಒಡವೆಗಳು+ಕೆಡೆದು+ಹೋಗದ+ಮುನ್ನ=ಶರೀರದೊಳಗಿನ ಜೀನಸುಗಳು ನಾಶವಾಗುವದಕ್ಕೆ ಮುಂಚೆ; ಅಂದರೆ ಸಾಯುವ ಪೂರ್ವದಲ್ಲಿ, ದೇಹದ ಧಾತುಗಳು ಕಡಿಮೆಯಾಗುವ ಮುಂಚೆ ಎಂದು ನಾರಾಯಣ ಶಾಸ್ತ್ರಿಗಳು.

೫೪೪ ತಾ॥ ದಾನಕ್ಕೆ ಸಮಯ ನಿಯಮವಿಲ್ಲ,

೫೪೫. ಹೊನ್ನಾಗು=ಭಾಗ್ಯದೊರೆ; ಸುಖದಾಯಕವಾಗು.

೫೪೬. ಶೀಲ=ಧರ್ಮ' ತಾ॥ ಸ್ಥಾನ ಕಾಲ ವ್ಯತ್ಯಾಸಮಾಡದೆ ಕೊಡಬೇಕು.

೫೪೭. ಕಡೆಯೇನು ಮೊದಲೇನು= ಸಮಯದ ನೆವನವೇಕೆ. ತಾ॥ ಎಡತಟ

ಕಿದ್ದರ ಕೂಲಿಸೂಗದ್ದರಿಂದ ಇಂಥವನ ಧರ್ಮವು ಗಾಳಿಗೆ ಹಾರುವ ಹುಡಿಯಂತೆ ನಿಷ್ಪ್ರಯೋಜನವಾಗಿರುವದು.

೫೪೮. ತುಯ್ಯಲು =ಸವಿ ಅಡಿಗೆ, ಪಾಯಸ, ಬಯ್ಯದ= ಗುಣಗುಟ್ಟದ, ಮುದ್ರೆಯುಳ್ಳ, ಅಯ್ಯಬಾರೆಂಬ = ಸನ್ಮಾನ ಕೊಡುವ.

೫೪೯. ಹರಿ=ಎರಡನೆಯುವರನ್ನು ಪೀಡಿಸಿ. ಕೊರೆದು=ಸಂಪಾದಿಸಿದ್ದರಲ್ಲಿ ತನಗೆ ಕಡಿಮೆಮಾಡಿಕೊಂಡು. ಇಲ್ಲಿ ಎರಡು ಅತಿತ್ವಗಳು ( extremeti-es )ಹೇಳಲ್ಪಟ್ಟಿವೆ.

೫೫೧. ರೂಥಿಗೇಶ್ವರ ಶರಣ=ಶಿವಶರಣ.

೫೫೨. ಸೂಕ್ಷ್ಮ=ಅತ್ಯಲ್ಪವಾದರೂ. (ವಿಧವೆಯ ದುಗ್ಗಾಣಿ).

೫೫೩. ಭಟ್ಟ=ಭೋಜನಪ್ರಿಯನಾದ ಆಚಾರಿ ಡೊಂಬ=ಆಟಗಾರ, ಗುಣಹೀನ, ನೀಚ.

೫೫೪. ಆಡುವದು + ಅವರ+ಅಕ್ಕಿಯನ್ನು=ತಂದುಕೊಟ್ಟರೆ ಅಡಿಗೆ ಮಾಡಿಕೊಡುವದು.

೫೫೫. ದೇವಾಂಗವಸ್ತ್ರ = ರೇಶಿಮೆ ಮಡಿ. ಜರತಾರಿ. ಮಣಿ=ರತ್ನ ಖಚಿತವಾದ ಆಭರಣ. ನಿತ್ಯದಾನ = ಅಕ್ಕಿ ಹಿಟ್ಟು ಬೇಳೆ ಮುಂತಾದ್ದರಲ್ಲಿ ಒಂದು ಭಾಗವನ್ನು ತಿಂಗಳವರೆಗೆ ತೆಗೆದಿಟ್ಟು ಅದನ್ನು ಯೋಗ್ಯವಾದವನಿಗೆ ಕೊಡುವದು.

೫೫೬. ಬಾಯಿಂದ ಹೇಳದೆ ಕೈಯಿಂದ ಕೊಡುವವನು ಉತ್ತಮ ಹೇಳಿದಂತೆ ಕೊಡುವವನು ಮಧ್ಯಮ. ಹೇಳಿಯೂ ಕೊಡದೆ ಹೋಗುವವನು ಕನಿಷ್ಠ.

೫೫೮. ಸೊಡರು=ದೀಪ ತಾ॥ ಶಕ್ತ್ಯನುಸಾರ ಧರ್ಮಮಾಡಲೇಬೇಕು.

೫೬೦. ಪ್ರಸ್ತಾಪ=ಅವಶ್ಯವಿದ್ದಾಗ ತಕ್ಕ ಸಮಯದಲ್ಲಿ. ಮದಕರಿ=ಹರೆಯದ ಆನೆ.

೫೬೨. ಹಸನಾಗಿ= ನಿರೋಗಿಯಾಗಿ. ದೀರ್ಘಾಯುವಾಗಿ, ವಿಘ್ನಗಳಿಲ್ಲದೆ. ಕುಶಲ=ಜಾಣ.

೫೬೩. ನಲ್ಲಳು=(ಉತ್ತಮ) ಹೆಂಡತಿ ತಾ॥ ದಾನದಿಂದ ಇಹಪರ ಸುಖಪ್ರಾಪ್ತಿ.

೫೬೪. ಭಾನುಮಂಡಲವ ನಡರು=ಸ್ವರ್ಗ ಇಲ್ಲವೆ ಇಂದ್ರಪದವಿ ಹೊಂದು ಒಲಿದು=ಸಂತೋಷದಿಂದ.

೫೬೫. ಅಂದಳ = ಪಲ್ಲಕ್ಕಿ ಚಂದದಿಂದ=ಕೊರತೆಯಿಲ್ಲದೆ. ಮಂದಗಮನೆ=ಮೆಲ್ಲಗೆ+ನಡೆಯುವವಳು = ಸ್ತ್ರೀ. ಚಂದದಿಂದ=ಯಥೇಚ್ಛವಾಗಿ.

೫೬೬. ಮಂದಿ=ಪ್ರಜೆ. ಸಂದಿಸಿ=ಯಾವಾಗಲೂ. ಕುಂದದೆ=ಉತ್ಸಾಹದಿಂದ.

೫೬೭. ಹಾಸಿಗೆ = ಹಂಸತೂಲಿಕಾ ತಲ್ಪ, ತೂಗುವ ಮಂಚ. ಸಂತೋಷ=

೫೬೮. ಭೂಷಣ=ರಾಜಭೂಷಣ. ಸಾಸಿರ+ಅಬಲೆಯರ+ನೆರೆ = ಸಾವಿರ+ ಸ್ತ್ರೀಯರನ್ನು ಇಟ್ಟುಕೊಳ್ಳು ಅಂದರೆ ಅಂತಃಪುರವನ್ನು ಕಟ್ಟಿಸು.

೫೬೯. ಕಾತರಿಸದೆ=ತೊಂದರೆಗೊಳಿಸದೆ. ಸೂತಕ=ಹತ್ತಿದ ದೋಷ.

೫೭೦. ನೋಡಿ ಪದ್ಯ ೫೩೧.

೫೭೧. ಸೀಗುರಿ, ಚಾಮರ=ಪಶುವಿನ ಕೂದಲಿನಿಂದ ಮಾಡಿ ಬಹುಮಾನಕ್ಕಾಗಿ ಬೀಸುವ ಚವರ. ಮೇಗಪ್ಪ= ಮೇಲೆ ಹಿಡಿಸಿಕೊಳ್ಳುವ- ಬೆಳ್ಗೊಡೆ= ಬಿಳಿ ರೇಶಿಮೆಯು ಇಲ್ಲವೆ ಬೆಳ್ಳಿಯಕೊಡೆ. ಶ್ವೇತಛತ್ರ, ಹಡಪಿಗರಭೋಗ=ತಾಂಬೂಲಾದಿ ಸಾಮಗ್ರಿಗಳನ್ನು ಹೋದ ಹೋದಲ್ಲಿ ಒಯ್ಯುವ ಚಾಕರರ ಸುಖ.

೫೭೨. ಅರಿಯದೆ=ಫಲಾಪೇಕ್ಷೆಯಿಲ್ಲದೆ. ತೆರೆದುನೋಡದ ಕಣ್ಣು=ಚಿಲ್ಲರೆ ದೃಷ್ಟಿಯಿಡದ. ಉದಾರವಾದಮನಸ್ಸು.

೫೭೪. ಟೀ|| ಪುಣ್ಯಾತ್ಮನು ಸಾಲಕೆಯಲ್ಲಿ ಕೂತು ಬರುವಾಗ ಪಾಪಿಷ್ಟನು ಅವನ್ನು ಹೊತ್ತು ಹೋಗುವನು. ಇದೇ ಸುಕೃತದುಷ್ಕೃತದ ಮರ್ಮ.

೫೭೫. ವ್ಯಾಪಿಸಿ=ಜನ್ಮಜನ್ಮಗಳಲ್ಲಿ. ನರಕುಲದೀಪ=ಮಹಾತ್ಮ.

೫೭೬. ಅನ್ಯಜಾತ = ಕುಲಗೇಡಿ. ಕೀಳುಕುಲದಲ್ಲಿ ಹುಟ್ಟಿದವ. ಅನ್ಯ= ಹೊಲೆಯ.

೫೭೭. ಭಿನ್ನ...ಳಿಲ್ಲದೆ= ಸ್ಥಾನವ್ಯತ್ಯಾಸಮಾಡದೆ. ಇನ್ನು ಸಲಹುವನು= ಮಳೆ ಬಿಸಿಲುಗಳನ್ನು ಎಲ್ಲರಿಗೆ ಏಕಪ್ರಕಾರವಾಗಿ ಕೊಡುತ್ತಿರುವನು.

೫೭೮. ಅರಿತು=ಜ್ಞಾನದಿಂದ. ಕರ್ಮವಬಿಟ್ಟು= ಸುದುಷ್ಕೃತಗಳೆರಡೂ ಸಂಕೋಲೆಗಳಾಗಿರುವದರಿಂದ. ಮರೆತು=ನಿಷ್ಕಾಮದಿಂದ.

೫೭೯. ಸಣ್ಣಿಸಿ=ಚನ್ನಾಗಿ. ತಾ|| ಲೋಭಿಯು ಸತ್ತರೆ ಬಾಯೊಳಗೆ ಬೀಳುವುದು ಮಣ್ಣೇ.

೫೮೦. ಇದ್ದದ್ದು=ಸ್ವಂತವಾದದ್ದು ಹೊರಗಿದ್ದುದು=ಪರದ್ರವ್ಯ. ಕತ್ತಿಯು ಲದ್ದಿಯೇ ಬೀಳ್ಗ=ಇನು ಶಾಪದ ಮಾತು

೫೮೧. ಉನ್ನತ=ಸ್ವರ್ಗ. ಉನ್ನತವಪ್ಪ=ಆರೂಢನಾದ ಬ್ರಹ್ಮನಂಪಪಡೆದ.

೫೮೨. ತಾ|| ಕೆಚ್ಚಲದಲ್ಲಿದ್ದ ಉಣ್ಣೆಗೆ ರಕ್ತವಾದರೂ ಸಿಕ್ಕುವುದು. ಆದರೆ ಲೋಭಿಗೆ ಏನೂ ಸಿಕ್ಕದಿರುವದಲ್ಲದೆ ನರಕಪ್ರಾಪ್ತಿಯಾಗುವದರಿಂದ ಅವನ ಜೀವಿಕೆಯು ಉಣ್ಣೆಗಿಂತಲೂ ಕನಿಷ್ಟವೆಂದು ಹೇಳಲ್ಪಟ್ಟಿತು.

೫೮೩. ವಿನಯವಿದ್ದಧಿಕರು=ದೀನ ಗುಣವುಳ್ಳ ದೊಡ್ಡ ಮನುಷ್ಯರು ತನು ಗೆಟ್ಟ=ಅಂಗಹೀನವಾದ ಘನಹೀನವಳಿ ದು=ಸ್ಥಾನ, ಕುಲನೋಡದೆ.

೫೮೪. ಟೀ॥ ಜೀವವಿದ್ದು ಎಡತಾಕಿ ಸುವ ಲೋಭಿಗಿಂತ ಸತ್ತ ದಾನಿಯೇ ಲೇಸು. ಅಂದರೆ ಸತ್ತಮೇಲಾದರೂ ಇವರ ಮನೆಯವರು ದಾನ ಮಾಡುವ ರೆಂದು ತಾತ್ಪರ್ಯ.

೫೮೫. ಸಂಚಯಿಸು=ಕೂಡಿಸು. ಹುಗಿ ಕಂಚು ಕಬ್ಬಿನ=ಕಿಲುಬಿನ ಕಬ್ಬಿ ನ ಇಲ್ಲವೆ ಹಿತ್ತಾಳಿಯಂತೆ ಹಂಚ ಕ್ಕು=ತೀರ ಕೆಟ್ಟು ಮಣ್ಣುಪಾಲಾಗು ಉಣಲಕ್ಕು=ಪಾಲಾಗು

೫೮೬. ಇಲ್ಲವೆನೆ ಭಿಕ್ಷುಕ ನಕ್ಕು= ದಾನಮಾಡದಿದ್ದರೆ ದಾರಿದ್ರ್ಯ ಬರು ವು.

೫೮೭ ನರಕದ ಊಟ=ಅಮೇಧ್ಯ ವನ್ನುತಿಂದಂತೆ.

೫೮೮. ಕಟ್ಟೆ=ಕೆರೆ ಕೆಟ್ಟಕಕ್ಕುಲತೆ= ಲೋಭತ್ವ ಟೀ॥ ಕೋಡಿಯಿದ್ದರೆ ಹೆಚ್ಚಾದ ನೀರು ಹರಿದುಹೋಗಿ ಕೆರೆ ಯುಭದ್ರವಾಗಿರುವದು. ಆದರೆ ಲೋ ಭತ್ವದಿಂದ ಉಳಿಸಲಿಕ್ಕೆ ಪ್ರಯತ್ನಿಸಿದರೆ ಕೋಡಿಯನ್ನು ಮುಟ್ಟದಂತಾಗಿ ಬಹ ಳ ನಷ್ಟಪ್ರಾಪ್ತಿಗುವದು.

೫೮೯. ದಂಡಿಸು=ಹೊಟ್ಟೆಕಟ್ಟು. ಕಂಡ=ಸಂಪಾದಿಸಿದ ಬೈಚಿಡು=ಹುಗಿ

೫೯೦. ಬಿದಿರು=(೧) (ನಾಮಪದ) ಗಳಡಂಬು (೨) (ಕ್ರಿಯಾಪದ) ದಾನ ಮಾಡು, ಹಂಚು, ಸಕಲಪದ=ಎಲ್ಲ ತರದ ಸುಖ

೫೯೨. ಟೀ॥ ಕೈಯಲ್ಲಿ ಹಣವಿದ್ದು ಅದನ್ನು ತರುವ ಸ್ಥಳವು ದೂರವೇ ? ಲೋಭಿಯು ಮನಸ್ಸಿಲ್ಲದ್ದರಿಂದ ಹೀಗೆ ಹೇಳುವನಲ್ಲದೆ ಬೇರೊಂದು ಕಾರಣ ದಿಂದಲ್ಲ.

೫೯೩. ಚಾನ=ದೊಡ್ಡ ಉಳಿ–ನೂರಾ ರನು=ನೂರಾರು ರೂಪಾಯಿಗಳನ್ನು.

೫೯೪. ಡೊಳ್ಳರು=ವಿಪರೀತ ಕಾಡಿ ಸಿ ಭಿಕ್ಷೆ ಒಯ್ಯುವವರು. ಸುಳ್ಳುಗೊ ರವ=ಹೊಟ್ಟೆಗಾಗಿ ಭಿಕ್ಷುಕದ ವೇಶ ಹಾಕಿದ. ವೈಗಳು. ಎಳ್ಳಷ್ಟು=ಸ್ವಲ್ಪ ವಾದರೂ.

೫೯೫. ಟೀ॥ ಲೋಭಿಗೆ ನರಕವೂ, ಹಿಂಡಲೊಲ್ಲದ ದನದಿಂದ ಅತಿರೇಕ ಕಷ್ಟವೂ ಪಾದರಕ್ಷೆಯಿಲ್ಲದ ಪಯಣ ದಿಂದ ಅನಾರೋಗ್ಯವೂ ಅಂತೂ ಭಯಂಕರ ಪರಿಣಾಮಗಳಾಗುವದರಿಂ ದ ಆತ್ಮಘಾತಕಕ್ಕೆ ಸರಿಮಾಡಲ್ಪಟ್ಟವೆ.

೫೯೬. ಟೀ॥ ಇತ್ತ ಕೊಡುವದಿಲ್ಲ ವೆಂದು ಎಂದಿಗೂ ಸ್ಪಷ್ಟವಾಗಿ ಹೇಳದೆ ಅತ್ತ ಕೊಡಲಿಕ್ಕೆ ಮನಸ್ಸೂ ಇಲ್ಲದ ಪಾಪಿಯು ಸೂಕ್ಷ್ಮ ನರಹತ್ಯಮಾಡಿದ ನೆಂದು ತಿಳಿಯತಕ್ಕದ್ದು.

೫೯೭. ತಾ॥ ಭಾಷೆಕೊಟ್ಟು ಅಶೆ ಹಚ್ಚಿ ಇಲ್ಲವೆನ್ನುವದು ಪ್ರತ್ಯಕ್ಷ ನರ ಹತ್ಯ.

೫೯೮. ಕೈಹಾಳೇ !=ಕೈಮುರಿದಿದೆ ಯೋ? ಎಡೆ ಏನು ದೂರವೇ?=ಹಣ ವಿಟ್ಟ ಸ್ಥಳವು ದೂರವೇ? ಮನಿಯಲ್ಲಿ ಯೇ ಇರುವದು. ಹೀಗಿದ್ದರೂ ಅಡ್ಡಾ ಡಲಿಕ್ಕೆ ಹಚ್ಚಿ, ಕೊಡದೆ ಹೋಗವನು. ಆ ಮಾತು=ಉಪಚಾರದಮಾತು. (ಸುಳ್ಳು). ಕೊಡಲಿಯಗಾಯ=ಇದು ಜೀವ ವಿದ್ದು ತಾಳಬೇಕಾಗಿರುವದರಿಂದ ಅದ ಕ್ಕಿಂತಲೂ ತೀಕ್ಷ್ಣವಾಗಿದೆ.

೫೯೯. ಟೀ॥ ಜಗಳಕ್ಕೆ ನಿಂತ ಆನೆಯು ಸತ್ತು ಹಂದಿಯು ಉಳಿಯುವದು ಹೇಗೆ ಅಸಾಧ್ಯವೋ ಹಾಗೆಯೇ ಧರ್ಮದಲ್ಲಿ ಪ್ರಖ್ಯಾತನಾದ ದಾನಿಯನ್ನು ಬಿಟ್ಟು ಲೋಭಿಗೆ ಇಂದ್ರಪದವಿಯು ದೊರೆಯುವದು ಅಸಾಧ್ಯ.

೬೦೧. ಅಟ್ಟುಂಬಕಾಲ=ಬೇಡಿದ್ದನ್ನು ಮಾಡಿಕೊಂಡು ಉಣ್ಣುವ ಕಾಲ. ಅಂದರೆ ಐಶ್ವರ್ಯವಿದ್ದಾಗ. ಮುಟ್ಟಿಡೆ=ಸಂಕಟ, ವಿಪತ್ತು.

೬೦೨. ಕೊಂಡು=ಅಧಿಕಾರದಿಂದ ಅಪಹರಿಸಿ. ಅವರ=ಪರರ.

೬೦೩. ಉಳ್ಳಲ್ಲಿ=ಐಶ್ವರ್ಯವಿದ್ದಾಗ. ಉಣ್ಣು=ಸುಖಪಡು. ತಾ॥ ಲೋಭಿಯ ಧನವು ಕಳ್ಳರ ಇಲ್ಲವೆ ಸರಕಾರದ ಪಾಲಾಗುವದು.

೬೦೪. ಗಾವಿಲ=ಲೋಭಿ, ಮೂಢ, ಕೃಪಣ. ( ನೋಡಿ ಪ್ರಸ್ತಾವನೆ ಪುಟ ೯೬ )

೬೦೫. ಕೊಟ್ಟು ಬಹಕಾಲ=ದಾನ ಮಾಡಿ ಪುಣ್ಯಪಡೆಯಬಹುದಾದ ಕಾಲ

೬೦೬. ಒಡಲು+ಹಿಡಿದು = ಹೊಟ್ಟೆ+ಕಟ್ಟಿ, ಜೀನತನಮಾಡಿ. ಒಡವೆ=ಧನ. ಕೊಡದೆ+ಉಣ್ಣದೆ=ತಾನೂ ತಿನ್ನದೆ ಪರರಿಗೂ ಕೊಡದೆ.

೬೦೭. ತಾರ = ಕಾಸು, ರುಪ್ಪಿ ಮಾರಿ=ಮೃತ್ಯು ದೇವತೆ.

೬೦೮. ಖಂಡಿಸು=ಇಂದ್ರಿಯ ನಿಗ್ರಹ ಮಾಡು. ಕರಣ = ಮನಸ್ಸು. ದಂಡಿಸು=ದೇಹದಂಡನೆಮಾಡು. ಅಯ್ದು=ಹೋಗು. ರಂಡೆ=ವಿಧವೆ, ಬಲವಿಲ್ಲದ ಹೆಂಗಸು. ಕೈಯಮುಂಚಿಕೆ= ಕೈಗೆ ನಿಲುಕುವಂತೆ ಹಾಕಿದ ಅಟ್ಟವೇ?

೬೧೦. ಕೊಂಡ=ಕೈಕೊಂಡ. ಸುವ್ರತ=ಪ್ರಾಣಹೋದರೂ ಒಳ್ಳೇ ಕಾರ್ಯ ಮಾಡಿ ತೀರಬೇಕೆಂಬ ಛಲ. ರಂಡೆಯರಹೊರಸು=ಅಲ್ಲಿ ಕೂತುಕೊಳ್ಳುದಕ್ಕೆ ಯಾರಿಗೂ ನಿರ್ಬಂದವಿಲ್ಲದ್ದರಿಂದ.

೬೧೧. ಮಿಸಲು=ಪವಿತ್ರಾಚರಣೆಯುಳ್ಳ. ಲೇಸಪ್ಪದು=ಹಿತಕರವಾದ. ಉತ್ತಮ.

೬೧೨. ಕಂಡು = ಕಷ್ಟದಲ್ಲಿರುವವರನ್ನು ಕಂಡು, ಕೊಟ್ಟದು =ಸಹಾಯ ಮಾಡಿದ್ದು. ದಂಡನೆ= ಇಂದ್ರಿಯನಿಗ್ರಹ. ಷಂಡ=ನಪುಂಸಕ.

೬೧೩. ಪುಟ್ಟಿದ=ಸಾಹಾಯಮಾಡಿದ. ಅರಿವು=ಎರಡನೆಯವರು ತನಗೆ ಮಾಡಿದ ಉಪಕಾರಗಳು.

೬೧೪. ತಾ॥ ಗಳಿಸಿದ್ದರಲ್ಲಿ (ಅರ್ಧ) ಅರ್ಧದಾನಮಾಡಬೇಕು.

೬೧೫. ಎದ್ದಾಗ = ಸುಡುಗಾಡಿಗೆ ಹೋದಾಗ ಸತ್ತಮೇಲೆ. ಗುದ್ದು= ಕುಣಿ, ಸಮಾಧಿ. ಬುದ್ಧಿಬಂದಪುದೆ= ಬುದ್ಧಿ ಬಂದು ಪ್ರಯೋಜನವೇನು?

೬೧೬. ಭರ=ಸಮೃದ್ಧಿ. ಮರೆ= ದಾನಮಾಡಲು ಮರೆತುಬಿಡು ಅರಸು=ಹುಡುಕು, ಚಿಂತಿಸು.

೬೧೭. ತಂತಿವಾದ್ಯ=ವೀಣೆ, ಸತಾರು ಇತ್ಯಾದಿ. ಯಂತ್ರವಾಹಕ=(ವಿಶ್ವಾರೂಢ) ದೇವರು.

೬೧೮. ತಾ॥ ಈ ಮೂರರಲ್ಲಿ ಭದ್ರತೆಯಿಲ್ಲದ್ದರಿಂದ ಇವು ಭಯಾಸ್ಪದವಾಗಿವೆ.

೬೧೯. ರೂಢಿಪತಿ=ಅರಸು ಸೂ॥ ಅರಸನು ಜೀವಾತ್ಮನಿದ್ದಂತೆ ಪ್ರಜೆಯು ದೇಹವಿದ್ದಂತೆ ಇದು ಅನ್ಯೋನ್ಯಾಯ ಭಾವ. ಇಲ್ಲಿ ಕ್ಷೇತ್ರಕ್ಷೇತ್ರಜ್ಞರ ದೃಷ್ಟಾಂತವು ಅನುಕರಣವಾಗಿರುವದು.

೬೨೦. ಕೇಣ = ಅಸೂಯೆ. ಕ[illegible] ಳೆ=ಬಿಟ್ಟುಬಿಡು. ಕ್ಷೋಣಿ ಮಾರ್ಬಲ= ೧೦ ಲಕ್ಷ ಸೈನ್ಯ. ತಾ॥ ಜಯದೊರಕು[illegible] ವದು ಲೌಕೀಕ ಬಲದಿಂದಲ್ಲ ಆತ್ಮಬಲ ದಿಂದಲೇ.

೬೨೧. ತಾ॥ ರಾಜರನ್ನೂ, ದಾ[illegible] ನಿಗಳನ್ನೂ, ಭಕ್ತರನ್ನೂ ದೇವರೆಂ[illegible] ದು ಭಾವಿಸಬೇಕು.

೬೨೩. ಚಂದ = ಸುಖಕರ. ಮ[illegible] ಕ್ಕಳಿಲ್ಲದ ಐಶ್ವರ್ಯವು ವ್ಯರ್ಥ.

೬೨೫. ಕಟುಗ=ಕ್ರೂರ. ಮೂದಲೆ=ನಾಚಿಕೆ, ಭಯ. ಮಠಗಂಟೆ= ಸಂನ್ಯಾಸ ತಾಳಿದ. ಕಲಿಗೆ ...ಲೇಕೆ= ಜೀವಹೋದರೂ ಕಷ್ಟಕ್ಕೆ ಅಂಜನು.

೬೨೬. ಮರಣ ಭೂತಕೆ ಲೇಸು= ಸತ್ತರೆ ಇನೊಬ್ಬರಿಗೆ ಬಡಿಯಲಿಕ್ಕೆ [illegible] ನುಕೂಲವಾಗುವದರಿಂದ. ವರಯುದ್ಧ=ಕಠಿಣವಾದ ಮಲ್ಲಯುದ್ಧ. ಸುಭ[illegible] ಟ=ಜಾತಿವೀರ. ಕರ=ದೊಡ್ಡ

೬೨೭. ಮೆಳೆ=ಕಂಟಿ ಹೊದರು= ಮುಳ್ಳು. ಅದರು=ಲೋಹದಕಲ್ಲು.

೬೨೮. ಜಾತಸ್ಯಮರಣಂಧ್ರುವಂ= ಹುಟ್ಟಿದವನು ಸಾಯುವದು ನಿಚ್ಚಯ ( ಭಗವದ್ಗೀತೆ ೨, ೨೭ ).

೬೨೯. ಅಮ್ಮು=ಸಾಮರ್ಥ್ಯ. ಟೀ॥ ಸೊಕ್ಕಿಗೇರದ ಸಾಕ್ಷಾತ್ ಬಹ್ಮನು ಎ[illegible] ದುರಿಗೆ ನಿಂತರೂ ಸಾಮರ್ಥ್ಯ ವಿದ್ದಷ್ಟು[illegible]

ಮುಟ್ಟಿಗೆ ಕಾದಬೇಕಲ್ಲದೆ ಹಿಂಜರಿಯಲಾಗದು.

೬೩೧. ಅಲಗು=ಕತ್ತಿ. ಹೋರು=ಯುದ್ಧಮಾಡು.

೬೩೩. ಕೆಯ್ದು=ಬಾಣ, ಆಯುಧ ಟೀ॥ ಅರ್ಜುನನು ಕೌರವರನ್ನೂ ರಘುವಂಶಕ್ಕೆ ಸೇರಿದ ರಾಮನು ರಾವಣನನ್ನೂ ಗೆದ್ದದ್ದು ಬಿಲ್ಲಿನಿಂದಲೇ.

೬೩೪. ಬಾಳು=ಖಡ್ಗ. ಸೂರೆ=ಸುಲಿಗೆಯು ಚಂದ

೬೩೬. ಯುಕ್ತಿ=ಪ್ರಯೋಗ ಚಾತುರ್ಯ. ಕತ್ತಿಯನು+ಎತ್ತಿ.

೬೩೭. ನೀಟಾದ=ಗುಣವೂ ರೂಪವೂ ಉಳ್ಳ.

೬೩೮. ತಾ॥ ತಪ್ಪಿಸಿಕೊಳ್ಳಲಿಕ್ಕಾಗದಿದ್ದರೆ ರಣದಲ್ಲಿ ಸಾಯುವದು ಉತ್ತಮ.

೬೩೯. ತೊಗೆ=ಸಾರು, ತೋವೆ ತಿಗುರಿ=ಕುಂಬಾರನ ಚಕ್ರ ತಗರ ಹಿಂಗಾಲಸತುಲೇಸು=ಇರಿದಾಡಬೇಕಾದರೆಟಗರಿಗೆ ಹಿಂಗಾಲ ಸತುವು ಬೇಕು. ಬಿಗಿಬಂದು=ಕಟ್ಟಪ್ಪಣೆ, ಜಿತೇಂದ್ರಿಯತ್ವವೆಂದು ಕೆಲವರು.

೬೪೦. ಆನೆ ಬೆದರಿದರೆ ಬಹಳ ಕೇಡಾಗುವದು. ಸರಸ=ಅತಿ ಸಲಿಗೆ.

೬೪೧. ಮರವು=ವಿಸ್ಮೃತಿ. ನೆನಪುಹಾರುವಿಕೆ ಕಳ=ಕಳೆದುಹೋಗು. ನೆರೆಮಾತು=ಪಟ್ಟಂಗ.

೬೪೨. ಟೀ॥ ಹಣವಿದ್ದರೆ ಜೂಜಾಟ. ಅಡವಿದ್ದರೆ ಸೂಳೆಯಾಟ.

೬೪೩. ಟೀ॥ ( ಸೋತು ಸೆರೆಸಿಕ್ಕ ) ಪರಸ್ತ್ರೀಯರಿಗೆ ಅಣ್ಣತಮ್ಮನೂ ಕಡುವೈರಿಗಳನ್ನು ದಂಡಿಸುವದಕ್ಕೆ ಸಮರ್ಥನೂ (ತಲ್ಲಣನು) ಭೀಕರನೂ ಪಾಪಕ್ಕೆ ಬಹು ಭಯಪಡುವವನೂ. ಸದ್ಗುಣಸಂಪನ್ನನೂ ಆಗಿರುವ ಅರಸನಿಗೆ ಕೀ-ರ್ತಿ ಐಶ್ವರ್ಯಗಳು ಸ್ಥಿರವಾಗಿರುವವು.

೬೪೪. ನಲುಗಿಸು=ಕಷ್ಟಪಡಿಸು. ಲೆಕ್ಕ ಸಿಕ್ಕಿಸು=ಅನ್ಯಾಯದಿಂದ ಹೆಚ್ಚಿಗೆ ಕರ ತೆಗೆದುಕೊಳ್ಳು, ಮೋಸಮಾಡು ಕಕ್ಕುಲತೆಯಿಂದ=ಸ್ವಂತ ಮಕ್ಕಳಂತೆ ಚಕ್ಕಂದ=ಸುಖವಾಗಿ ನಿರ್ಭಯವಾಗಿ.

೬೪೫. ಟೀ॥ ಹೇರಳ ದ್ರವ್ಯವೂ ಕೀ-ರ್ತಿಯೂ ದೊರೆಯಬೇಕಾದರೆ ಒಕ್ಕಲುತನಕ್ಕೆ ಮೊದಲನೆಯ ಸ್ಥಾನ ಕೊಡತಕ್ಕದ್ದು.

೬೪೬. ಕುತ್ತ=ಬಂದಸಂಕಟ. ಕ-ತ್ತು=ತಲೆ.

೬೪೭. ಬೈತ್ರ=ಗಾಳಿಯ ಪಟದಿಂದ ಹೋಗುವ ಹಡಗು. ಎಳೆ+ವಳ್ಳಿ=ಎಳೆಯ ಬಳ್ಳಿ. ಜೆಲೆವೆಣ್ಣು=ಸೂಳೆ. ಅರಸನ ಮನಸ್ಸೂ ಅಂತೆಯೇ. ಇವು ಏಳು ಚಾಂಚಲ್ಯಕ್ಕೆ ದೃಷ್ಟಾಂತಗಳು.

೬೪೮. ನಚ್ಚಿದ=ಮೆಚ್ಚಿದ, ಒಲಿದ ಆ+ಇಚ್ಛೆಯಂತೆ=ಹೇಗೆ ಅಪೇಕ್ಷಿಸು

ತ್ತಾನೋ ಹಾಗೆಯೇ ಅದು=ಆ ಪ್ರೇಮವು. ಒಚ್ಚೊತ್ತು=ಒರ್+ಪೊತ್ತು=ಒಂದಾವರ್ತಿ ತಪ್ಪಿ ನಡೆ=ಅಜಾಗ್ರತೆಯಿಂದ ನಡೆ ಹೊತ್ತೇರಿ=ಮಧ್ಯಾಹ್ನದ ಕಿಚ್ಚು=ಬಿಸಿಲು ಅರಸನಲ್ಲಿ ಮೈತುಂಬ ಕಣ್ಣಿದ್ದು ನಡೆಯಬೇಕೆಂದು ತಾತ್ಪರ್ಯ

೬೪೯. ಚಿತ್ತವೃತ್ತಿ=ಮನಸ್ಸಿನ ಒಲವು; ಧೋರಣ, ಇಂಗಿತ. ಹತ್ತೆವಿಡಿದು=ಬಹು ಸಮೀಪದಲ್ಲಿದ್ದು,ವಹಿವಾಟದಲ್ಲಿದ್ದು, ಜಾಗ್ರತೆಯಿಂದ ಓಲಯ್ಸು=ವಿಧೇಯನಾಗಿರು, ಸೇವಿಸು. ಚಿತ್ತವಪಡೆದು=ವಶಮಾಡಿಕೊಂಡು ಕಿಸೆಯಲ್ಲಿ ಹಾಕಿಕೊಂಡು ಮದವಾಗೆ=ಮನಸ್ಸಿಗೆ ಬಂದಂತೆ ನಡೆದರೆ. (ಇದನ್ನು ತಿಳಿದು ಅರಸನು ಮನಸ್ಸು ತೆಗೆದರೆ ಮೊಲ ನಾಯಿ ) ಹತ್ತಿದಂತೆ=ಬೆನ್ನಟ್ಟಿದಂತೆ. ಜೀವವುಳಿಸಿಕೊಳ್ಳಬೇಕಾದರೆ ಸಾಕುಬೇಕಾಗುವದು.

೬೫೦. ನಡಿಸು=ಕೈಕೊಂಡು, ಬೆನ್ನುಕಟ್ಟು. ದೆಸೆ=ಕೀರ್ತಿ. ಕರಿತುರಗಬಲ=ಚತುರಂಗ ಸೈನ್ಯ. ಕರನಾಶ=(೧) ದೊಡ್ಡ ಕೇಡು. (೨) ಕೈಮುರಿದಂತಾಗುವದೆಂದು ಕೆಲವರು. ಕಿರಿನಾಯಿ'ಯೆಂಬು ನಾರಾಯಣ ಶಾಸ್ತ್ರಿಗಳು

೬೫೧. ಅನವರತ=ಯಾವಾಗಲು. ಅಗಲದಲೆ=ಬಿಡದೆ, ಬಾಲಗುಂಡಾಡಿಸುತ್ತ. ತೇಜ=ವರ್ಚಸ್ಸು, ವೈ...ನಕ್ಕು=ಉಪಾಯವಿಲ್ಲದೆ ವೈರಿಯು ನಿನ್ನ ಸ್ನೇಹಿತನಾಗುವನು.

೬೫೨. ಮುನಿ=ಕೋಪಿಸು. ಅಂಕುರಿಸು= (೧) ಒಕ್ಕಲಾಗಿರು (೨) ಮಹಾಕಷ್ಟವು ಅಂಕುರರೂಪವಾಗಿ ಪ್ರಾರಂಭವಾಯಿತೆಂದು ತಿಳಿಯುತಕ್ಕದ್ದೆಂದು ಕೆಲವರು ಸರಸ=ಪ್ರೀತಿ. ರಾಣ್ಯ=ರಾಜ್ಯ. ಬಾಣದ ಬಿರುಸು=ಭರದಿಂದ ಬರುವ ಬಾಣ ಅಂದರೆ ಸಾಯುವದು ಉತ್ತಮ.

೬೫೩. ನೆರೆಯುಕ್ಕು=(೧) ಸಂಪೂರ್ಣವಾಗಿ (ನಾಶವಾಗು) (೨) ತಾಗಿ ನೆರೆ+ಗೆಲುವಂದ+ಅಕ್ಕು ಎಂತಲೂ, ಅನ್ವಯಿಸಬಹುದು. ಟೀ॥ ಕಲ್ಲಿನ ಕೆಳಗೆ ಅರಗು ಸಿಕ್ಕರೆ ಅದು ಹೇಗೆ ಪುಡಿಯಾಗಿ ಹೋಗುವದೋ ಹಾಗೆಯೇ ಅರಮನೆಯ ಸಹಾಯದಿಂದ ದುಷ್ಟರು ಉತ್ತಮರನ್ನು ನಾಶಮಾಡುವರು.

೬೫೪. ಆ ಮೆಚ್ಚು=ಅದುವರೆಗಿದ್ದ ಪ್ರೀತಿ. [ ಕಿಚ್ಚು=ಸುಡುವ ಬೆಂಕಿ.

೬೫೫. ಕರಭೀತಿ=ಬಹುಭಯ, ಜಾಗ್ರತೆ. ತಾ॥ ಅರಸನನ್ನು ಕೈಯೊಳಗೆ ತೆಗೆದುಕೊಳ್ಳುವ ವಿದ್ಯೆಗೊತ್ತಿಲ್ಲದಿದ್ದರೆ ದೂರವಿರುವದೇ ಉತ್ತಮ.

೬೫೬. ಟೀ॥ ಅರಸನ ಪ್ರೇಮವು ಎಷ್ಟಿದ್ದರೂ ಮಂತ್ರಿಯು ದ್ವೇಷಿಸುತ್ತಿದ್ದರೆ ವಿಶೇಷ ಪ್ರಯೋಜನವಾಗುವದಿಲ್ಲ. ಹೀಗಿರುವಲ್ಲಿ ಅರಸನೂ ಸಿಟ್ಟಾ

ದರೆ ಆ ಸ್ಥಿತಿಯೇನೆಂದು ಹೇಳಲಿ! ಅವನು ಎಮದೂತನಂತೆ ಭಯಂಕರನಾಗುವದೇ ನಿಶ್ಚಯು.

೬೫೭. ನೃಪನಕಾಂತೆ=ರಾಣಿ. ಸಮಗೋಷ್ಟಿ=ಅತಿಸಲಿಗೆ. ಮಂತ್ರವಿಲ್ಲದನ ಒಡನಾಟ=ಅವಿವೇಕಿಯು ಆಪ್ತಾಲೋಚನೆ ತಾ॥ ಇವು ಸಾವಿಗೆ ಮೂಲ.

೬೫೮. ಗರ್ವಿಸಿ ಸದ್ಗುಣಿಗಳನ್ನು ತುಳಿಯಲಿಕ್ಕೆ ಹೋದರೆ ತಾನೇ ಜಾರಿ ಮುಕ್ಕರಿಸಿ ಬೀಳುವನೆಂದು ತಾತ್ಪರ್ಯ

೬೫೯. ಮೇಲು=ಹಿತ, ಕಲ್ಯಾಣ. ಅಧಿಕ=ಅಧಿಕಾರಸ್ಥ, ಧೊರೆ ಬಾಳುವೆ ಕೆಟ್ಟು=ಸ್ಥಿತಿ ಹಾಳಾಗಿ ಬಡವಕ್ಕು=ದರಿದ್ರನಾಗು. ಬೆಸಲಾದ=ಗಬ್ಬದ ಸೂ॥ ಚೇಳು ಮರಿಹಾಕುವ ಕಾಲಕ್ಕೆ ಹೊಟ್ಟೆಯೊಡೆದು ಸಾಯುವದೆಂದು ಹೇಳಿಕೆಯುಂಟು. ಗಬ್ಬದ ಚೇಳು ಗರ್ವಕ್ಕೂ ಹೊಟ್ಟೆಯೊಡೆದು ಸಾಯುವದು ನಾಶನಕ್ಕೂ ಸೌಂಜ್ಞೆ.

೬೬೦. ಓಲಗ=ರಾಜಸಭೆ. ಆಸ್ಥಾನ.ಸರಿಸವಾಡು=ವಿರೋಧ ಮಾತಾಡು, ಸರಿಸಮಾನನಂತೆ ಮಾತಾಡು ವಿಚಾರವಿಲ್ಲದೆ ಆಡು. ಸರಸ=ಹುಡುಗಾಟ ನಿಂದೆ=ಕುವಾಡ. ಓರ್ವರ ಭರವಸಬೇಡ=(೧) ಯಾರನ್ನೂ ನಂಬಬೇಡ. (೨) ಯಾರಿಗೂ ಇಂಥ ಕೆಲಸವನ್ನು ಮಾಡಿಕೊಡುತ್ತೇನೆಂದು ಭರವಸ ಹೇಳಲಾಗದೆಂದು ನಾರಾಯಣ ಶಾಸ್ತ್ರಿಗಳು

೬೬೧. ಎದ್ದುಮಾತಾಡು=ಮುಂದಾಳಾಗಿ ನಿಲ್ಲು ಎದ್ದೆದ್ದು ನಿಲ್ಲು=ಸ್ವಪ್ರತಿಷ್ಠೆ ಬೆಳಸು. ಮಾನಿಸ=ದೊಡ್ಡಗ್ರಹಸ್ಥ. ತಾ॥ ಕೂಡಿದ ನಾಲ್ಕು ಮಂದಿಯೊಳಗೆ ದೊಡ್ಡವರ ಅಪಮಾನ ಮಾಡಬೇಡ ಹೀಗಾದರೆ ಕೇಡಾಗುವದು!

೬೬೨. ಹುರಿಹುಗಿಲಾಗು=ಕಟ್ಟು ಒಡೆ, ಹುರಿಬಿಚ್ಚು. (೨) ಒಡಕು ಹುಟ್ಟು. ಇದು ಅರಮನೆಯಲ್ಲುಂಟಾದರೆ ಮಹಾ ಕೇಡೆಂಬದಕ್ಕೆ ಕಥೆ—ದಾನದಲ್ಲಿ ಪ್ರಸಿದ್ಧನಾದ ಬಲಿಚಕ್ರವರ್ತಿಯು ತಾನು ದಾನಶೂರನೆಂದು ಬಹಳವಾಗಿ ಗರ್ವಿಸಿಕೊಂಡಿದ್ದನು. ಇವನ ಸೊಕ್ಕನ್ನು ಮುರಿಯುವದಕ್ಕೆ ವಿಷ್ಣುವು ವಾಮನ (ಗಿಡ್ಡಮನುಷ್ಯ) ಆಕಾರದಿಂದ ಅವನಲ್ಲಿಗೆ ಬಂದು ಮೂರೇ ಪಾದದಷ್ಟು ಭೂಮಿಯನ್ನು ದಾನಮಾಡಬೇಕೆಂದು ಬೇಡಿಕೊಂಡನು. ಬಲಿಯು ನನ್ನಿಂದಾಗದೆಂದು ಹೇಳುವದನ್ನು ಬಿಟ್ಟು ಗರ್ವದಿಂದ ಎಂಥೆಂಥಾದ್ದನ್ನೋ ದಾನಮಾಡಿದ್ದೇನೆ ಮೂರು ಪಾದದಷ್ಟು ಭೂಮಿಯನ್ನು ಕೊಡಲಾರೆನೇ ? ಎಂದು ದಾನಕ್ಕೆ ಸಿದ್ಧನಾಗಲು ! ರಾಜಪುರೋಹಿತನಾದ ಶುಕ್ರಾಚಾರ್ಯನು ಇದರ ಕು—ಯುಕ್ತಿಯನ್ನು ತಿಳಿದು, ಇಂಥ ದಾನವನ್ನು ಕೊಡಲಾರೆನೆಂದು ಹೇಳು ಎಂಬದಾಗಿ ಅರಸನಿಗೆ ಉಪದೇಶ ಮಾಡಿ

ಡನು. ಆದರೆ ದಾನವ ಮದದಿಂದ ತುಂಬಿದ ಬಲಿಯು ಇವನ ಮಂತ್ರಾಲೋಚನೆಯನ್ನು ಲಕ್ಷಿಸದೆ ಬೇಡಿದಷ್ಟು ಭೂಮಿಯನ್ನು ಧಾರೆ ಎರೆದು ಕೊಡಲಿಕ್ಕಿದ್ದಾಗ ಧಾರೆಯು ಗಿಂಡಿಯೊಳಗಿನ ನೀರು ಬೀಳದಂತೆ ಶುಕ್ರಾಚಾರ್ಯನು ಅವರ ಸೊಂಡಲಿನ ಬಾಯಲ್ಲಿ ಹೋಗಿ ಕೂತುಕೊಂಡನು. ವಿಷ್ಣುವು ಇದನ್ನರಿತು ಒಂದು ದರ್ಭೆಯ ಕಡ್ಡಿಯಿಂದ ಅವನ ಕಣ್ಣಿಗೆ ಚುಚ್ಚಲು ಶುಕ್ರಾಚಾರ್ಯನದೊಂದು ಕಣ್ಣು ಹೋಯಿತು. ಹೀಗಾಗಿ ಪುರೋಹಿತನು ತನ್ನ ಪ್ರಯತ್ನವನ್ನು ಬಿಟ್ಟು ಬಿಟ್ಟನು. ಬಲಿಯು ದಾನ ಸಂಕಲ್ಪ ಮಾಡಿದನು. ಆಗ ವಾಮನ ರೂಪಿಯಾಗಿದ್ದ ವಿಷ್ಣುವು ಒಮ್ಮೆಲೇ ಬೆಳೆದು ತನ್ನ ಎರಡೂ ಪಾದಗಳಿಂದ ಇಡೀ ಲೋಕವನ್ನೇ ತುಂಬಿಕೊಳ್ಳಲು ಇನ್ನೊಂದು ಪಾದದಷ್ಟು ಮಣ್ಣನ್ನು ಕೊಡಲಿಕ್ಕಾಗದೆ ಬಲಿಯು ಸಾಲಕ್ಕೆ ಅಂಜಿ ಉಪಾಯ ತೋರದೆ ನಿಂತುಕೊಂಡನು. ಆಗ, ವಿಷ್ಣುವು ಅವನ ಗರ್ವವನ್ನು ತಗ್ಗಿಸಲಿಕ್ಕೆ ಆ ಮೂರನೇ ಪಾದವನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಪಾತಾಳಕ್ಕೆ ಒತ್ತಿಬಿಟ್ಟನು: ಇಲ್ಲಿ ರಾಜಪುರೋಹಿತನಾದ ಶುಕ್ರಾಚಾರ್ಯನಿಗೂ ಬಲಿಚಕ್ರವರ್ತಿಗೂ ಹುರಿ ಹುಗಿಲಾದ್ದರಿಂದ ಅಂದರೆ ಭೇದಬುದ್ಧಿಯುಂಟಾದ್ದರಿಂದ ಅರಸನ ನಾಶನಕ್ಕೆ ಕಾರಣವಾಯಿತು. ಇದರಿಂದ ಅರಮನೆಯಲ್ಲಿ ಒಡಕುಂಟಾದರೆ ಕೇಡಾಗುವದೆಂದು ತಾತ್ಪರ್ಯ.

೬೬೩. ಕ್ಷಣಿಕ=ಚಂಚಲಚಿತ್ತ. ಗಳಿಗೆಗೆ ಒಂದು ಪ್ರಕಾರವಾಗಿ ವರ್ತಿಸುವ ಗಣಿಕೆ=ಸೂಳೆ. ಕಣಕಟ್ಟು=ಕೈ ಚಮತ್ಕಾರ ಜಾದು. ಅರಮನೆಗೆ ಹೊಣೆಯಾದರೆ ಕೈಯಿಂದ ಹಣ ಕೊಡಬೇಕಾಗುವದು.

೬೬೫. ಟೀ|| ಹಾಡುವದಕ್ಕೆ ಉತ್ತಮ ಕಂಠವೂ ಹಾಡಿದನ್ನು ವಿವರಿಸುವದಕ್ಕೆ ಬೇಕಾದ ವಿದ್ಯೆಯೂ ಸಂಬಂಧ ಮಾಡಿದ ಮೇಲೆ ಪ್ರೀತಿಯಿಂದ ಹೋಗುವ ಆಪ್ತತ್ವವೂ ಬೇಡಿದ್ದನ್ನು ಕೊಡುವ ಯಜಮಾನನೂ ದೊರೆಯಬೇಕಾದರೆ ಪೂರ್ವದ ಪುಣ್ಯಬೇಕು.

೬೬೬. ಕೂಟ=ಸ್ತ್ರೀಭೋಗ. ಇಟ್ಟಿಯ=ಈಟಿ ಹಿಡಿಯುವವ, ವೈಗಾವಲು. ಟೀ|| ಗಂಧವನ್ನು ಮೂಸುವವರ ಬದಲಿಗೆ ಹೊಟ್ಟೆಯೊಳಗೆ ಹಾಕಿಕೊಂಡತಿರುವದು.

೬೬೭. ಕೊಜ್ಜೆ=ನಪುಂಸಕ. ಲಜ್ಜೆಗೇಡು=ಅಪಮಾನಕರ.

೬೬೮. ಸುದತಿಯರ+ಒಲುಮೆ+ಅರಿಯದ=ಸ್ತ್ರೀ ಅಂದರೆ ಸುಂದರವಾದ+ಹಲ್ಲುಳ್ಳವಳು. ಇವರ+ಪ್ರೀತಿಯನ್ನು+ಅನುಭವಿಸದ ಅಂದರೆ ನಪುಂಸಕನಾದ ಸಿದಿಗೆ=ಹೆಣಹೊರುವ ಚಟ.

೬೯. ಮಧುರ = ಇಂಪಾದ ಚ ಮರಿ=ಜಾಣಿ. ಸೂ॥ ಇವು ಮುದುಕನು ಕೆಮ್ಮಿಕೆಮ್ಮಿ ಸಹಾಯಕರಿಲ್ಲದೆ ಸತ್ತಂ-ತಿರುವದು.

೬೭೦. ಉಬ್ಬಸ+ಸಂಕಟ, ಕಷ್ಟ. ಪಸರಿಸಿ=ಅಟ್ಟಹಾಸದಿಂದ, ಸಿರಿ=ಆಭರಣ, ಶೃಂಗಾರ, ಎಸಗಿ ಕಟ್ಟು=ದುಡಿಸು.

೬೭೧. ಬೈಲಾಗು= ಹೋಗಿಬಿಡು. ಹೊಯಿ್=ಹೊಡೆ. ಇರದೋಡು=ದಾರಿಬಟ್ಟು ಹೋಗು ಓಡಿಹೋಗು. ವಿಧಿವೈದರೆ=ಸತ್ತರೆ.

೬೭೪. ಮುರಿ=ಮೈಮೇಲೆ ಬರು. ತರಿ=ಸವರು, ಕಡಿಮುಹಾಕು.

೬೭೬. ಮುಟ್ಟು=ಮೈ ಮೇಲೆ ಬರು ಇಟ್ಟೆಡೆಗೆ+ಇಲ್ಲದ = ಇಕ್ಕಟ್ಟನಲ್ಲಿ ಸಹಾಯ ಮಾಡದ (೨) ನಿಯಮಿಸಿದ ಸ್ಥಳದಲ್ಲಿಲ್ಲದ.

೬೭೭. ಕೇಡು ಬುದ್ಧಿ=ದುಷ್ಟಬುದ್ಧಿ ಕೂಡುವಪಥ = ಸುರತ ಕಾಡು= ಸುಡುಗಾಡು.

೬೭೮. ಬಿಲು = ಬಿಲ್ಲು. ಹೋಗಿ ಬೀಳು=(೧) ತಾನಾಗಿಯೇ ಮೈಮೇಲೆ ಬೀಳು. (೨) ಯುದ್ಧಕ್ಕೆ ಹೋಗಿ ಅಪಜಯದಿಂದ ಸಾಯು.

೬೭೯. ಕಾಗೆ... ಹೊಲ್ಲ = ಇದು ಎಲ್ಲ ಪದಾರ್ಥಗಳನ್ನು ತಿನ್ನುವದರಿಂದ ಪಕ್ಷಿಗಳಲ್ಲಿ ಹೊಲೆ ಎನಿಸುವದು—ಹೀಗೆ ಕಂಟಿಯು ಇತರ ಗಿಡಗಳನ್ನು ಕೆಡಿಸುವದರಿಂದ ಉಲಿ=ಜಗಳಮಾಡು. ಅಪಜಯದ ಭೋಗ—ಸೋತು ವೈರಿಯ ಕೈಗೆ ಬಿದ್ದು ಎಷ್ಟು ಸುಖ ದೊರಕಿದರೂ (ಬೇಡ.)

೬೮೦. ಆಗದ= (೧) ದ್ವೇಷಿಸುವ (೨) ಸಹಾಯಮಾಡದ. ಆಗೀಗಲೆಂಬ= ಕೆಲಸಕ್ಕೆ ಮನಸ್ಸಿಲ್ಲದೆ ಸುಮ್ಮನೆ ದಿನಹಾಕುವ.

೬೮೧. ಹುರಿ=ಸಿದ್ಧ. ಹೊರೆಯಾದ=ಭೂಭಾರವಾದ.

೬೮೩. ಕನ್ನಡಿಗನ ಗೆಳೆತನ—ನಂಬಿದರೆ ಪ್ರಾಣಕೊಡಲಿಕ್ಕೆ ಸಿದ್ಧನಾಗುವದರಿಂದ (ಉತ್ತಮ). ಮನ್ನೆಯ=ಸೇನಾಪತಿ. ಕೈಯಲಗು=ಸ್ವಂತ ಆಯುಧ ತಾ॥ ಈ ಮೂರರಲ್ಲಿ ವಂಚನೆಯಿಂದ ಇಲ್ಲವೆ ಅವಿವೇಕದಿಂದ ವರ್ತಿಸಿದರೆ ಕೇಡು ಇಲ್ಲವೆ ಅಪಜಯುವಾಗುವದು ನಿಶ್ಚಯ.

೬೮೪. ಮಧುರವಿಲ್ಲದ= ರುಚಿಯಿಲ್ಲದ. ( ಹೊಟ್ಟೆ ಕೆಡಿಸುವದರಿಂದ ) ಮುದ=ಪ್ರೀತಿ. ಬೇಟೆ=ಕ್ರೀಡೆ. (ಇದು ವ್ಯಸನಕರ). ವಿಧ = ಯೋಗ್ಯತೆ ಕೊಡು=ಸಂಭಾವನೆ ಕೊಡು ಸದನ=ಮನೆ; ಸ್ಥಳ. ಇಪ್ಪ=ವಾಸಿಸುವ.

೬೮೫. ತಾ॥ ಇವುಗಳಿಲ್ಲದವನು

ಹಾಳೂರ ಗೂಗೆಯಂತೆ ಅಲಕ್ಷ್ಯಕ್ಕೆ ಕಾರಣನಾಗುವನು.

೬೮೬. ಮನ್ನಣೆ+ಈಯದ=ಆದರ ಇಲ್ಲವೆ ಮರ್ಯಾದೆ+ಕೊಡದ.

೬೮೭. ನಿಂದವರ=ಕಾಯುತ್ತ ಬಾಗಿಲಲ್ಲಿ ಕುಳಿತವರನ್ನು. ನುಡಿಸು = ಮಾತಾಡಿಸು.

೬೮೮. ಕೊಂಡೆಯ = ಚಾಡಿಕೋರ, ಗೂಢಚಾರ. ದಂದುಗ=ಗೊಡವೆ, ತೊಂದರೆ.

೬೮೯. ಎಂತಾದರೂ=ಎಷ್ಟು ಕಷ್ಟವಿದ್ದರೂ. ಅಂತರ=ಯೋಗ್ಯತೆ. ಸೂ-ಕರ=ಹಂದಿ.

೬೯೦. ಹೊನ್ನು = ಯೋಗ್ಯಸಂಬಳ, ಕನಕದಾನ. ಮನ್ನಣೆ= ಬೆಲೆ ತಿಳಿ; ಗಣನೆ. ಬಿನ್ನಪ=ಬೇಡುವಿಕೆ ತಾ॥ ಸ-ನ್ಯಾಸಿಯಾದವರೆ ಹೆಚ್ಚು ಮರ್ಯಾದೆ ದೊರೆತೀತು ?

೬೯೧. ಅಯ್ದೆ+ಬಡಿಯುವ =ಬಹಳವಾಗಿ ನಿಂದಿಸುವ. ಒಡ್ಡೋಲಗ = (ಒಟ್ಟು+ಓಲಗ) ದೇಶದ ದೊಡ್ಡವರು ಕೂಡುವ+ಸ್ಥಳ = ರಾಜಸಭೆ, ದರಬಾರು.

೬೯೨. ಹಲ್ಲು+ಉದುರು =ಮುದಕಿಯಾಗು. ಹುಸಿ=ಸುಳ್ಳಾಡು.

೬೯೩. ಒಲ್ಲದ= ಬಾಳ್ವೆಮಾಡಲಿಕ್ಕೆ ಮನಸ್ಸಿಲ್ಲದ. ಸಲ್ಲದ=ಮರ್ಯಾದೆಯಿಲ್ಲದ.

೬೯೪. ಸಾಧಿಪ = ಹುಡುಕುವ. ಉರೆ=ದೊಡ್ಡ. ನೆಳಲು = ಸುಖ ಸಾರು=ಹೋಗು.

೬೯೫. ನುಡಿಯ ಪಾಲಿಸಿನುಡಿಯೆ=ಬಿನ್ನಹವನ್ನು ಚಿತ್ತಕ್ಕೆ ತಂದು ಕೇಳಿದರೆ ತಾ॥ ಕೋಪಿಷ್ಠನಾದ ಅರಸನನ್ನು ಯಾರೂ ಪ್ರೀತಿಸರು

೬೯೬. ಗೆಲ್ಲದ ಜೂಜು=ಒಬ್ಬರಿಗಿಂತ ಒಬ್ಬರು ಸಮರ್ಥರಿರುವದರಿಂದ ಲೋಕದಲ್ಲಿ ಗೆದಿಯಲಾರದ ಪಂಥವು ಇಲ್ಲ. ಅಲ್ಲವ=ದುರ್ಗುಣಿಯಾದ. ಕೂಟ=ಸ್ನೇಹ.

೬೯೭. ಅಲ್ಲದಹುದೆಂಬ=ಸುಳ್ಳನ್ನು ಸತ್ಯವೆಂದು ಸಾಧಿಸುವ

೬೯೮. ಆನೆತಾತುಡುಗಾಗೆ = ಆನೆ ಅಂಜಿ ತುಡುಗು ಮಾಡಿ ತಿನ್ನದು. ಆದರೆ (ಮಹಾತ್ಮರು ಕಪಟಿಗಳಾದರೆ) ಮಾಣಿಪುದು= ಬಂದುಮಾಡುವದು, ನಿಲ್ಲಿಸು. ಅಳವೇ=ಸಾಧ್ಯವೇ?

೬೯೯. ಅಸಗ...ಗರ್ವಿಸಲು-ಹೆರರ ವಸ್ತ್ರಗಳಲ್ಲಿ ಮೆರೆದರೆ ಉಸರು= ಶಕ್ತಿ, ಪರಾಕ್ರಮ. ಮಸಿವಣ್ಣ=ನಾಶನ. (ಮುಖ ಕಪ್ಪಾಗು. ದುಃಖಗ್ರಸ್ತವಾಗು ),

೭೦೦. ಮೊರೆ=ಅವಿವೇಕದಿಂದ ಒದರು. ಉರಿ=ಅಧಿಕಾರ ನಡಿಸು.

೭೦೧. ಕೆಟ್ಟೀತು=ಸಿಂಹಾಸನವು

ತೊಲಗೀತು. ತನನ್ನು ಮರೆತು=ಗರ್ವಿಸಿ ಸೃಷ್ಟಿ=ದೇಶ.

೭೦೨. ಜಾರೆ=ತಪ್ಪಿ. ಕಷ್ಟದಲ್ಲಿ ಬಿದ್ದರೆ. ಮುಟ್ಟು=ಸಹಾಯ ಮಾಡು. ತಾ|| ಸಾಮಾಜಿಕ, ಸಂಸಾರಿಕ, ಹಾಗೂರಾಜಕೀಯ ಸುಖವಿಲ್ಲದ ಊರಲ್ಲಿ ಮಹಾ ಪಿಡುಗು ಇದ್ದಂತೆ ತಿಳಿಯತಕ್ಕದ್ದು.

೭೦೩. ಬಿರುಸು=ಗರ್ವ. ವರುಷ=ತಕ್ಕಮಳೆಗಾಲ.

೭೦೪. ತಾ|| ಸರಕಾರದಲ್ಲಿ ಎಲ್ಲರೂ ಒಬ್ಬರಿಗಿಂತ ಒಬ್ಬರು ನೀಚರಾದರೆ ಯಾರಿಗೆ ಹೇಳಿಕೊಳ್ಳಬೇಕು.

೭೦೫. ಬರೆವಾತ=ಕರಣೀಕ (ಸೆಕ್ರೆಟರಿ). ಇವುಗಳಂತೆ ಇದ್ದರೆ ಅಂಥ ದೇಶದಲ್ಲಿರುವದು ಕಷ್ಟ.

೭೦೬. ಟೀ|| ಧೈರ್ಯದಿಂದ ಯುದ್ಧ ಮಾಡಿದರೆ ವೀರಸ್ವರ್ಗವೂ ಅಂಜಿದರೆ ರೌರವ ನರಕವೂ ಉಂಟಾಗುವದು. ಪ್ರತಿಒಂದು ಮುಂದಡಿಗೆ ಅಶ್ವಮೇಧ ಯಜ್ಞವನ್ನು ಮಾಡಿದಷ್ಟು ಪುಣ್ಯಬರುವದರಿಂದ ದೇಶಕಾರ್ಯದಲ್ಲಿ ಪ್ರಾಣತ್ಯಾಗ ಮಾಡಬೇಕಾದರೂ ಹಿಂಜರಿಯಲಾಗದೆಂದು ತಾತ್ಪರ್ಯ.

೭೦೭. ಮೇರು=ಹಿಮಾಚಲ ಎಣೆ=ಇಷ್ಟೇಎತ್ತರವೆಂದಳತೆ. ಪಡಿ=ಸರಿಯಾದ ಇನ್ನೊಂದು ವಸ್ತು. ಪ್ರ ತಿ ವ ಸ್ತು. ಸಂಸರ್ಗ=ಸ್ನೇಹ ಆರಿಂದಲು+ಅಧಿಕ=ಎಲ್ಲಕ್ಕಿಂತಲೂ ಶ್ರೇಷ್ಠ ಕಾರುಣಿಕ=ಕರುಣಾಶೀಲ.

೭೦೮. ಭೃಂಗ=ಗುಂಗೀ ಹುಳದ ಗಾಯನ ಹಂಗ=ಪಂಚವರ್ಣದ ಪಕ್ಷಿ ಭಂಗವಿಲ್ಲದ=ಮನನೋಯಿಸದ.

೭೧೨. ನಾರಂಗಿ=ಕಿತ್ತಳೆ ಸಿಹಿ ರಸ ಕೊಡುವಂತೆ ಸತ್ಪುರುಷರ ಸೇವೆಮಾಡಿದರೆ ಕಡೆಗೆ ಕಲ್ಯಾಣವಾಗುವದು ತಾತ್ಪರ್ಯ.

೭೧೩. ಟೀ|| ಸತ್ಪುರುಷರೇ ಬಿಸಿ ಅನ್ನವಿದ್ದಂತೆ. ಇದಕ್ಕೆ ರುಚಿಯನ್ನುಂಟು ಮಾಡುವ ಸದ್ಗುಣವೇ ತುಪ್ಪವಿದ್ದಂತೆ. ಇಂಥ ಪುಣ್ಯಶಾಲಿಗಳಿರುವದೇ ತೀರ್ಥ.

೭೧೫. ಸತ್ಯರ=(೧) ಸತ್ಯವಚನಗಳ (೨)ಬ್ರಹ್ಮಾನುಭವ ಉಳ್ಳವಗ. ಆ+ನುಡಿ=ಸಂಭಾಷಣೆ ಉಪದೇಶ. ನಿತ್ಯರಾ=ಸನ್ಮಾರ್ಗಿಗಳ, ಆರ್ಜವ ಉಳ್ಳವರ. ಉಳ್ಳವರ. ಉತ್ತಮ =ಗುಣಸಂಪನ್ನ ಸೂ|| ಒಂದುಕೋಟಿ ವರ್ಷದ ವರೆಗೆ ೬೬ ಕೋಟಿ.

ನದಿಗಳ ಮಿಂದು ಮಡಿಯುಟ್ಟ ಫಲವು ಒಂದು ದಿನ ಸದ್ಭಕ್ತ ಶರಣಗಣ ಸಂಗ ತೀರ್ಥಕ್ಕೆ ಸರಿಯಿಲ್ಲ. ಒಂದು ಕೋಟಿ ವರ್ಷ ವೇದಾಗಮ ಪುರಾಣ ಮಂತ್ರಗಳ ಓದಿದ ಫಲವು ಒಂದು ದಿನ ಶಿವಭಕ್ತಶರಣರ ಸಂಭಾಷಣಕ್ಕೆ ಸರಿಯಿಲ್ಲ.

೭೧೬. ಕೂಳು=ಪಕ್ವಾನ್ನ, ಊಟ. ಹದುಳದ=ಚನ್ನಾಗಿ ಬೇಯಿಸಿದ, ಸುಖದಿಂದ ದೊರಕಿಸಿದ. ಹೃದಯಶೂನ್ಯ=ದುರ್ಮತಿ, ಮನಸಾಕ್ಷಿಯಿಲ್ಲದ. ಒಲವು=ಸ್ನೇಹ,

೭೧೭. ಡೊಂಕು=ಗದರಿಕೆ, ಬುದ್ಧಿವಾದ.

೭೧೮. ಅರಿಕೆಹೀನ= ಅವಿವೇಕಿ ಕೊರಗು=ಕಷ್ಟಪಡು.

೭೧೯. ಸರಿ+ಆಳು= ಅರ್ಧರಾಜ್ಯವಾಳು. ಸರಿಸಮಾನನಂತೆ ವರ್ತಿಸು

೭೨೦. ಅಗಡು+ಎತ್ತು=ಇರು ಕಳ+ದನ ಕೊಳು=ಕೊಂಡುಕೊಳ್ಳು.

೭೨೧. ಕಲೆಕೂಡ್ರು=ಹೆಸರು ಕೆಡು

೭೨೩. ತ್ರಿಕರಣಶುದ್ಧ= ಮನೋವಾಕ್ಕಾಯ; ವೋಣಿ, ಪಾಣಿ, ವಾಣಿಗಳು ಶುದ್ಧವಿರುವ. ಪ್ರಕೃತಿವಿರಹಿತ=ಜಡಸ್ವಭಾವವನ್ನಳಿದ, ಗುಣಾತೀತರಾದ, ಲಿಂಗಸಂಸ್ಕಾರವಾದ.* ಎಳೆಯಿಸು=ನಡಿಸು, ಒಯ್ಯು.

೭೨೪. ಹೆಜ್ಜೇನು=(ಹೆರ್+ಜೇನು) ದೊಡ್ಡಜೇನಿನ ಹುಳದ ತುಪ್ಪ. (೨) ಶ್ರೇಷ್ಠತರದ ಜೇನು. ಸವಿ=ತಿನ್ನು ಸಂಗದೊಡನಾಟ=ಹೊಕ್ಕು ಬಳಿಕೆ. ಸೂ॥ ಹಾಲು ಸಕ್ಕರಿ, ತುಪ್ಪ, ಜೇನು, ಬೆಲ್ಲ ಮೊದಲಾದವುಗಳು ಒಳಗೂ ಹೊರಗೂ ರುಚಿಕರವಾಗಿರುವಂತೆ ಸಾಮರಸ್ಯವುಳ್ಳ ಸಜ್ಜನ ಸಂಗವು ಸರ್ವದಾ ಸಕಲರಿಗೆ ಪ್ರೀಯಕರವಾಗಿರುವದು.

೭೨೬. ಒತ್ತಿ=ಓತಿಕಾಟ; ಡೊಣ್ಣೆಕಾಟ. ಇದು ಎಲ್ಲಕ್ಕೂ ತಲೆ ಹಾಕುವದರಿಂದ ಇಂಥವರನ್ನು ಯಾರೂ ಮೆಚ್ಚರೆಂದು ತಾತ್ಪರ್ಯ.

೭೨೭. ಟೀ॥ ಕಲ್ಲುಪ್ಪು ಕರ್ಪುರಗಳು ರಸ ರೂಪದಲ್ಲಿ ನೋಡುವದಕ್ಕೆ ಒಂದೇ ಬಣ್ಣದವಾಗಿ ತೋರಿದರೂ ವಾಸನೆ, ರುಚಿ ಮುಂತಾದವುಗಳಲ್ಲಿ ಅಜಗಜಾಂತರ ವ್ಯತ್ಯಾಸವಿರುವಂತೆ ರೂಪದಲ್ಲಿ ಒಂದೆಯಾದರೂ ಕಳ್ಳನಿಗೂ ಒಳ್ಳೆಯವನಿಗೂ ಗುಣದಲ್ಲಿ ಮಹದಂತರವಿರುವದು.

೭೨೮. ಸಕ್ಕರೆ ಜೇನು=(೧) ಸಕ್ಕರೆ ಇಲ್ಲವೆ ಜೇನು (೨) ಬಹಳ ದಿವಸ ಇಟ್ಟರೆ ಸಕ್ಕರೆಯಂತೆ ಕೆಳಗೆ ಕೂತು ಹರಳು ಹರಳಾಗಿರುವ ಜೇನು.

೭೨೯. ನಿರ್ಜರರು=ಮುದಿಬಾರದೆ ಇರುವವರು=ದೇವತೆಗಳು. ದೌರ್ಜನ್ಯಕಾರಿ=ದುಷ್ಟಾತ್ಮ. ಕಜ್ಜಿ=ಹುರುಕು. (ದುಷ್ಟ ಸ್ನೇಹಕ್ಕೆ ಸೌಂಜ್ಞೆ).

೭೩೦. ಹಲು=ಹಲ್ಲು ಮೊನೆ=ತುದಿ ಬಾಯಿ. ನಂಜು=ವಿಷಕರ.

೭೩೧. ಮಸ್ತಕದಹಲು= ಶೂಲದ

* ಸಿದ್ಧಾಂತ ಶಿಖಾಮಣಿ ಪುಟ ೪೧೧

ಹಲ್ಲು. (ಇವರು ತ್ರಿಕರಣಗಳಿಂದಲೂ ದುಷ್ಟತ್ವನಡಿಸುವರು).

೭೩೨. ಬೆರಸಿ ತಪ್ಪು = ನಂಬಿಸಿ ಕುತ್ತಿಗೆ ಕೊಯ್ಯು.

೭೩೫. ಚುನ್ನ = ಅತಿಹಾಸ್ಯ. ಮರ್ಯಾದೆ ಗೆಟ್ಟ ಮಾತು. ಬನ್ನ=ತೊಂದರೆ.

೭೩೬. ತಾ|| ಒಳ್ಳೇ ಪದಾರ್ಥಗಳನ್ನು ಬಿಟ್ಟು ಕೆಟ್ಟ ಪದಾರ್ಥಗಳಿಗೆ ಹರಿಯುವದೇ ದುಷ್ಟರ ಗುಣ.

೭೪೦. ತಾ|| ಸಮಸ್ವಭಾವದಿಂದ ಸಂತೋಷವೂ ವಿಶಮ ಸ್ವಭಾವದಿಂದ ದುಃಖವೂ ಪ್ರಾಪ್ತಿಯಾಗುವದು.

೭೪೧. ಟೀ|| ಊಟ ಮಾಡಿ ನಡೆಯಬೇಕು. (ನೋ. ಪ. ೧೮೪೩)ಮೆದುಳಿಗೆ ಅಪಾಯವಾಗುವದರಿಂದ ತಲೆಯಲ್ಲಿ ಹೊರಲಾಗದು—ವೈರಿಗಳು ಹೊಗಳಿದರೆ ಗಂಡಾಂತರವೆಂದು ತಿಳಿ.

೭೪೨. ಮಾಗಿಯ=ಮಾಘಮಾಸದ (ಡಿಸೆಂಬರ ತಿಂಗಳಿನ) ಸೋಗೆ=ಕಬ್ಬಿನ ತುದಿ. ಉರಿಫ = ದ್ವೇಷಿಸುವ, ಜಗಳಾಡುವ. ಯೋಗ=ಸ್ನೇಹ.

೭೪೩. ಹಿಗ್ಗು=ಧರ್ಮ ಸಿಗ್ಗು=ನಾಚಿಕೆ. (ನುಗ್ಗಿಯ ಹೂ ಮಳೆ ಬಂದರೆ ಉದುರುವದು). ಕಿಗ್ಗಳ=ಹೇಸಿತನ ನೀಚಸ್ವಭಾವ.

೭೪೪. ನುಚ್ಚು+ಕೂಳು = ಮಿಜ್ಜೆಯಾಗುವದರಿಂದ ಇದು ಹೊಟ್ಟೆಗೆ ಹಿತವಲ್ಲ. ಮಚ್ಚರಿಸಿ = ಮತ್ಸರ ಬುದ್ಧಿಯಿಂದ (ತಿರಿಗಿ ಉತ್ತರ ಕೊಡುವ) ತುಚ್ಚ=ಆಡಿಕೊಳ್ಳು.

೭೪೬. ಇಟ್ಟಿಯ ಹಣ್ಣು=ಹಾವು ಮೆಕ್ಕೆ (ನಕ್ಸೊಮಿಕ) ಪೆಂಪು=ವೈಭವ.

೭೪೭. ಸರಸ=ಯಥಾರ್ಥ ಪ್ರೀತಿ ಸಜ್ಜನಿಕೆ = ಮರ್ಯಾದೆ ಸುಗುಣ.

೭೪೮. ಹಂದಿ=ಕುರೂಪಿ. ಅಂದವಿದ್ದರೆ= [ಗುಣನೆಟ್ಟಗಿದ್ದರೆ]

೭೫೦. ಮೊಟು=ಹೊಡೆ ಹೊಡೆ=ಕೇಡು ಮಾಡು ಹೊತ್ತು ನೋಡಿ ಸಾಧಿಸು.

೭೫೪. ಕೊತ್ತಿ=ಬೆಕ್ಕು. ಮತ್ತೆ=ಸಮಯನೋಡಿ. ಮೊಸಲು = ದೇವರಿಗಾಗಿ ಇಟ್ಟ. ಇದು ಪವಿತ್ರ ವಸ್ತು.

೭೫೬. ಟೀ|| ಹರಿಯು ವರಾಹಅವತಾರ ತಾಳಬೇಕೆಂದೂ ಶಿವನೂ ಬ್ರಹ್ಮನ ತಲೆಯನ್ನು ಕಡಿದು ಬಿಡಬೇಕೆಂದೂ ಆ ಬ್ರಹ್ಮಕಪಾಲವೇ ಶಿವನ ಭಿಕ್ಷಾಪಾತ್ರೆಯಾಗಬೇಕೆಂದೂ ಹಣೆಯಲ್ಲಿ ಯಾರು ಬರೆದರು? ವಿಧಿ ನಿಯಮದಂತೆ ಎಲ್ಲ ಆಗಿರುವದೆಂದು ತಾತ್ಪರ್ಯ.

೭೫೭. ಹರಿ…ನಾದ = ೨೦೦

೭೫೮. ೭೫೯. ಕಾಗ್ಗಾದ=(ಹಂಸ)? ಪಕ್ಷಿಯಾದ.

೭೫೭. ಕರ್ಮದಿಂದವೆ= ಪೂರ್ವದ ಕರ್ಮಫಲದಿಂದಲೇ. ಚರ್ಮವನು ತಾನುಟ್ಟ = ಗಜಾಸುರನೆಂಬ ರಾಕ್ಷಸ ನನ್ನು ಕೊಲ್ಲುವಾಗ್ಗೆ ಅವನು ತನ್ನ ರೂಪವನ್ನು ಧರಿಸಬೇಕೆಂದು ಬೇಡಿ ಕೊಂಡದ್ದಕ್ಕೆ ಶಿವನು ಅವನ ಚರ್ಮವ ನ್ನು ಸುಲಿದು ತಾನು ಉಟ್ಟುಕೊಂಡನು. ಹೊಮ್ಮರಾಲನು ಅಜನಾದ=(ಹೊನ್+ ಮರಾಲ) ಸುವರ್ಣ ಹಂಸನಾದ ಬ್ರ- ಹ್ಮನು ಆಡಾದ. (ಪ. ೨೦೦) ಗೋ- ವಿಂದ = ವಿಷ್ಣು ಕೃಷ್ಣಾವತಾರದಲ್ಲಿ. ಎಮ್ಮೆಕಾಪ=ಗೋಪಾಲನಾಗಿದ್ದ.

೭೫೯. ಸರಿನೋಡಿ ಪದ್ಯ ೨೦೦.

೭೬೦. ಪುಡಿ=ನಾಶ. ಅಂಗಜ=ದೇ ಹದಿಂದ ಹುಟ್ಟಿದವ=ಕಾಮ(ಇವನನ್ನು ಶಿವನು ಕೊಂದ). ಹಿಡಿವಡೆದ=ಸೆರೆಸಿ ಕ್ಕ (ಲಂಕೆಯಲ್ಲಿ) ಪೊಡವಿಗೀಶ್ವರ= ಶಿವ. ಸಡಗರ=ಬಡಿವಾರ.

೭೬೧. ಅಕ್ಕರವ ಬರೆದಿಹರೆ=ಹಣೆ ಬರಹವಿದ್ದರೆ (ಬೆಕ್ಕು ಕಡಿದು ಸಾಯು ವನು). ಹೀಗಿಲ್ಲದಿದ್ದರೆ ರಾವಣನು ಆ ಗಲೇ ಸಾಯುತ್ತಿದ್ದನು.

**೭೬೨.** ಟೀ॥ ಸೀತೆಯನ್ನು ಕದ್ದೊ ಯ್ದುದ್ದೂ ಆಗವನ ಮಾತಿನಿಂದ ಅಪ ಮಾನವಾದದ್ದೂ ರಾಮನಿಗಲ್ಲದೆ ರಾ- ವಣನಿಗಲ್ಲ. ಅಂದರೆ ವಿಧಿಕಾಟವು ಜೀ- ವದಿಂದಿರುವವರಿಗಲ್ಲದೆಸತ್ತವರಿಗೇನು?

೭೬೬. ಅಕ್ಕರವ ತೊಡದಿಹುದು ಮುಕ್ಕಣ್ಣಗಳವಲ್ಲ = ಹಣೆಬರಹವನ್ನು ಅಳಿಸಿ ಬಿಡುವದಕ್ಕೆ ಶಿವನಿಂದಲೂ ಆ ಗದು. ಹೀಗಿಲ್ಲದಿದ್ದರೆ ತತ್ಕಾಲದಲ್ಲಿ ದೇವತೆಗಳಲ್ಲಿ ಯಾರಾವರೂ ಸೀತೆಗೆ ಸಹಾಯ ಮಾಡುತ್ತಿದ್ದರು.

೭೬೮. ಅಂಕದ=ಯುದ್ಧಪ್ರಿಯ. ರಣಶೂರ. ಹೇಡಿ=ಭಾರತ ಯುದ್ಧ- ದಲ್ಲಿ ಭ್ರಾತೃಗಳಾದ ಕೌರವರನ್ನು ಕೊ ಲ್ಲದೆ ಬಿಲ್ಲನ್ನು ಕೆಳಗಿಟ್ಟನು. ಇದಲ್ಲದೆ ಉರ್ವಸಿಯ ಶಾಪದಿಂದ ಅಜ್ಞಾತವಾ ಸದಲ್ಲಿ ಬೃಹನ್ನಳೆ ಎಂಬ ಹೆಣ್ಣಾಗಿ ವಿರಾಟನ ಮನೆಯಲ್ಲಿ ಒಂದು ವರ್ಷ ನರ್ತನವನ್ನು ಕಲಿಸುತ್ತಿದ್ದನು. ಶಂಕ ರನು ತಿರಿದುಂಡ= ಪ. ೭೫೬. ಪಂಕ ಜನಾಭ=ವಿಷ್ಣು. ದನಗಾಯ್ದ = ಪ. ೭೫೮. ಬಂಕ = ಸೊಕ್ಕು, ಹೆಮ್ಮೆ.

೭೬೯. ಸಾಗರ=ಹಿಂದೀ ಮಹಾ ಸಾಗರ? ಹೊನ್ + ಆಗರ ಹೊನ್ನಿನ ಮನೆ = ಲಂಕಾಪಟ್ಟಣ. ರಾಘವನ ಬಂಟ=ರಘುವಂಶಕ್ಕೆ ಸೇರಿದ ರಾಮನ ಉತ್ತಮ ಸೇವಕನಾದ ಹನುಮಂತ. ಕಚ್ಚುಟಿ=ಕೌಪೀನ. ಚಡ್ಡಿ =ಜಿತೇಂ ದ್ರಿಯನಲ್ಲವೆಂದೋ! ಇದು ಬಡತಕ್ಕೆ ಸೌಂಜ್ಞೆಯೇ? ತಿಳಿಯದು.

೭೭೦. ಹನುಮನು + ಓಡಿದನು= ಲಂಕೆಯಲ್ಲಿ ಸೆರೆಸಿಕ್ಕು ಅದನ್ನು ಸು-

ಟ್ಟು ತಾನು ತಪ್ಪಿಸಿಕೊಂಡು ಓಡಿಹೋದನು. ಭಂಗ=ಅಪಮಾನದ ಮಾತು.

೭೭೧. ವಾರಿಧಿ=ಸಮುದ್ರ. ತ್ರಿಕೂಟ=ಉನ್ನತವಾದ ಬೆಟ್ಟ. ಗಿರಿದುರ್ಗ=ಪರ್ವತದಲ್ಲಿ ಕೋಟೆಯುಳ್ಳ ಪಟ್ಟಣ.

೭೭೨. ಹತ್ತಿರ್ದ=ಸಮೀಪದ ತಾ|| ಅಯೋಧ್ಯೆ ಉತ್ತರದಲ್ಲಿ, ಲಂಕೆ ದಕ್ಷಿಣದಲ್ಲಿ. ರಾವಣನ ಸಾವು ಆಶ್ಚರ್ಯ. ಇದು ವಿಧಿಯ ಕೆಲಸ !

೭೭೩. ಲೋಹದ ಕೋಟೆ=ಲಂಕೆಯ ಸುತ್ತಲು ಒಂದೊಂದನ್ನು ಒಂ-ದೊಂದು ತರದ ಲೋಹಗಳಿಂದ ಕಟ್ಟಿದ ೫ ಕೋಟೆಗಳಿದ್ದವೆಂದು ಐತಿಹ್ಯ. ಎಲ್ಲಕ್ಕೂ ಒಳಗೆ ಸುವರ್ಣ ಕೋಟೆ. ಕಡಲಳಿದು=ಸೇತುಕಟ್ಟಿ ಗಿರಿಯಪುರ=ಲಂಕೆ.

೭೭೪. ಈರ್+ಅಯ್ದು = ೨× = ೧೦. ಹತ್ತು ತಲೆಯವ = ರಾವಣ = ಕಟ್ಟುವಡೆ= ಕಾಯುವದಕ್ಕೆ ಇಡು. (ರಾವಣನು ಸಮುದ್ರಕ್ಕೆ ಕಾವಲು ಇಟ್ಟಿದ್ದನಂತೆ.

೭೭೫. ಒಂದು+ಒಂಭತ್ತು = ೧+೯=೧೦. ಸಂದ=ಪರಾಕ್ರಮದಲ್ಲಿ ಹೆಸರಾದ ಒಂದಾಗಿ = ಸರ್ವಸಾಮರ್ಥ್ಯದಿಂದ ಯುದ್ಧ ಮಾಡಿದರೂ.

೭೭೬. ಕೂಡುವವೆ ಬುದ್ಧಿಗಳು=ಹಿತಕರವಾದ ಯೋಚನೆಗಳು ಕೂಡಬರುವವೇ? ವಿನಾಶಕಾಲೇ ವಿಪರೀತ ಬುದ್ಧಿ. ಕೋಡಗ=ಹನುಮಂತ. ಆಡಕಾದಿಹನೆ= ( ಇದು ಮೈಸೂರು ಪ್ರ-ಯೋಗ) ನಾವು ದನಕಾಯುತ್ತಿದ್ದನೇ? ಎಂದನ್ನುವಂತೆ. ಅಂದರೆ ಏನು ಮಾಡಿಕೊಂಡಿದ್ದನೆಂದರ್ಥ.

೭೭೭. ಮಾರಿ=ಮರಣ. ಭಯಂಕರವಾದ ರಾಕ್ಷಸ ಸೈನ್ಯವು ರಾಮನಿಂದ ನಾಶವಾಯಿತು.

೭೭೮. ಮಂದರಧರ= ಮಂದರಪರ್ವತವನ್ನು ಕರ್ಮಾವತಾರದಲ್ಲಿ ಬೆನ್ನೆಲುವಿನಿಂದ ಎತ್ತಿ ಹಿಡಿದವನು ಇಂದ್ರ=ಉಪೇಂದ್ರ—ಇದೇ ವಿಷ್ಣುವು ಮುಂದೆ ಕೃಷ್ಣಾವತಾರವಾಗಿ ಭಾರತ ಯುದ್ಧದಲ್ಲಿ ಪಾಂಡವರಿಗೆ ಸಹಾಯ ಮಾಡಿದನು. ಗಂಡುಗಲಿ=ಜಾತಿವೀರ. ನಂದನರು=ಪುತ್ರರು. ಹೋದ=ಮಡಿದ.

೭೭೯. ತಂದೆಯು + ಅರ್ಜುನ+ಭೀಮ=ತಂದೆಯಾದ + ಅರ್ಜುನನು+ಭೀಕರನು. ಮಂದರಧರ ಮಾವ=ಮಂದರ ಪರ್ವತವನ್ನೆತ್ತಿದ (ವಿಷ್ಣು) ಕೃಷ್ಣನು ಅವನಿಗೆ ಮಾವ (ಅರ್ಜುನನು ಕೃಷ್ಣನ ತಂಗಿಯಾದ ಸುಭದ್ರೆಯನ್ನು ಮದುವೆಯಾಗಿದ್ದದರಿಂದ ಅರ್ಜುನನ ಮಗನಾದ ಅಭಿಮನ್ಯುವಿಗೆ ಕೃಷ್ಣನು ಸೋದರಮಾವನು. ಇಂಥಿಂಥವರಿದ್ದರೂ ಅಭಿಮನ್ಯುವನ್ನು ವಿಧಿಯು ಕೈ

ಯಿಂದ ಉಳಿಸಿಕೊಳ್ಳಲಿಕ್ಕಾಗಲಿಲ್ಲವಲ್ಲ!

೭೮೦. ತಿರಿದುಣಲು=ಅಜ್ಞಾತವಾಸದಲ್ಲಿ ರಾಜರಾದ ಪಂಚಪಾಂಡವರು ಭಿಕ್ಷಬೇಡಿ ಜೀವಿಸಿದ ಮೇಲೆ ಉಳಿದವರ ಗತಿಯೇನು?

೭೮೧. ಟೀ॥ ಮೂಲೋಕದ ಗಂಡನೆನ್ನಿಸಿಕೊಂಡ ಅರ್ಜುನನು ಅಭಿಮನ್ಯುವಿಗೆ ತಂದೆಯೂ ವಜ್ರಾಯುಧಪಾಣಿಯಾದ ಇಂದ್ರನು ಇವನ ಅಜ್ಜನೂ ಅರ್ಜುನನ ಸಾರಥಿಯಾದ ಕೃಷ್ಣನು (ಸಾಕ್ಷಾತ್ ವಿಷ್ಣು) ಇವನಿಗೆ ಮಾವನೂ ಆಗಿರಲಾಗಿ ಅಭಿಮನ್ಯು ಸತ್ತದ್ದು ಏಕೆ? ಸೂ॥ ಅರ್ಜುನನು ದೇವೇಂದ್ರನ ಮಂತ್ರದಿಂದ ಹುಟ್ಟಿದ್ದರಿಂದ ಅಭಿಮನ್ಯುವಿನ ಮುತ್ತಯ್ಯನೆಂದು ಹೇಳಲ್ಪಟ್ಟಿತು.

೭೮೨. ಒಯ್ಯಾರದಿ = ಬಡಿವಾರ ಮಾಡುತ್ತ ಗಯ್ವರು=ಚಾಕರರು,

೭೮೩-೮೪. ಆದೇಶ=ವಿಧಿ, ದೈವ ದೇಶ=ಸ್ಥಳ. ಕಾಂಚಿ =ಕಂಚಿವಾಳದ ಮರ ಊರು? ನೋಡಿ ಸೋಮೇಶ್ವರಶತಕ ೩೬-೫೦.

೭೮೬. ಇಟ್ಟೆಡೆ=ಇಕ್ಕಟ್ಟಿನ ಸ್ಥಳ. ಕಿರುಬ=(೧) ಕೊಳ್ಳ (೨) ದುಷ್ಟ ಮೃಗ, ಕೆಟ್ಟೋಡಿ = ಭಂಗಪಟ್ಟು, ಕಷ್ಟದಿಂದ ತಪ್ಪಿಸಿಕೊಂಡು.

೭೮೮ ಸೂ॥ ಇಲ್ಲಿ ಪರಿಕ್ಷಿತ ರಾಜನನ್ನು ಕುರಿತು ಹೇಳಿದೆ? ಇವನು ವಿಧಿಗೆ ತಪ್ಪಿಸಿಕೊಂಡು ಒಂದು ಸರೋವರದ ಮಧ್ಯದಲ್ಲಿ ಭದ್ರವಾದ ಒಂದು ಕಲ್ಲಿನ ಮನೆಯನ್ನು ಕಟ್ಟಿಸಿ ಕಡೆಯ ದಿವಸದ ವರೆಗೆ ಜಾಗ್ರತನಾಗಿದ್ದರೂ ಹಣ್ಣಿನೊಳಗಿದ್ದ ಒಂದು ಮಿಡಿನಾಗವು ಕಚ್ಚಿ ಸತ್ತನು. ತಾ॥ ದೇವತೆಗಳ ಹಾಗೂ ಬಲಿಷ್ಠರ ಆಶ್ರಯ, ಭದ್ರವಾದ ಸ್ಥಳವಿದ್ದರೂ ವಿಧಿಯ ಆಟವು ತಪ್ಪದು.

೭೯೦. ನೊಂದೆ = ಸಾಕಾಯಿತು, ತಿಂದು=ಭೋಗಿಸಿ.

೭೯೧. ಊಡು=ಉಣ್ಣಿಸು, ಬಳಿವಿಡಿದು=ಬೆನ್ನುಹತ್ತಿ, ಹಿಡಿತಂದು =ಹಿಡಕೊಂಡು ಬಂದು,

೭೯೨. ಸುರಿಗೆ= ಕತ್ತಿ, (ಹಿಡಿದ ಅಂಗರಕ್ಷಕರು), ಸುತ್ತಿರಲಿ=ಸುತ್ತಲೂ ಇರಲಿ, ಹರಿಗೆ=ಡಾಲು, ಒಡಲೊಳಗೆ= ಅಂಗರಕ್ಷಣೆಗಾಗಿ ತನ್ನ ಹತ್ತರವೇ ಇರಲಿ,

೭೯೩. ಎಷ್ಟು ಉತ್ತಮನಿದ್ದರೂ ವಿಧಿಕಾಟ ತಪ್ಪದು.

೭೯೪. ವೀರಭದ್ರ = ಮಹಾಶಕ್ತ. ನೆರೆ=ಹತ್ತರ. ಆಟ=ಅಧಿಕಾರ.

೭೯೫. ಕಥಾನುಸಾರ–ಮಾಂಡವ್ಯ ಋಷಿಯು ಅಡವಿಯಲ್ಲಿ ತಪಸ್ಸಿನಲ್ಲಿದ್ದಾಗ ಕಳ್ಳರು ಕದ್ದು ತಂದು ಅವನ ಹತ್ತರದಲ್ಲಿ ಬಿಟ್ಟಿದ್ದ ಸಾಮಾನುಗಳನ್ನು

ನೋಡಿ ಅರಸನ ಶಿಪಾಯರು ಇವನೇ ಕಳ್ಳನಿದ್ದು ಓಡಿಹೋಗಲಿಕ್ಕಾಗದೆ ತಪಸ್ವಿಯ ಹಾಗೆ ಮೋಸದಿಂದ ಬಿದ್ದುಕೊಂಡಿರಬೇಕೆಂದು ತಿಳಿದು ಅವನನ್ನು ಕಟ್ಟಿ ಅರಸನ ಬಳಿಗೆ ತಂದರು. ಅರಸನು ಎಷ್ಟು ಮಾತಾಡಿಸಿದರೂ ಇವನು ಮಾತಾಡದ್ದರಿಂದ ಅವನನ್ನು ತ್ರಿಶೂಲದಿಂದ ಕೊಲ್ಲುವದಕ್ಕೆ ಅಪ್ಪಣೆಯಾಯಿತು. ಆಗ ದೇವತೆಗಳು ತಪ್ಪಿಲ್ಲದ ಇವನಿಗೆ ಇಂಥ ಶಿಕ್ಷೆಯಾದದ್ದು ಯಾಕೆಂದು ಯಮನನ್ನು ಕೇಳಲು ಅವನು ಚಿತ್ರಗುಪ್ತನನ್ನು ಕರಿಸಿ ಜೀವನ ಪುಸ್ತಕವನ್ನು ನೋಡಿದನು. ಅದರಲ್ಲಿ ಮಾಂಡವ್ಯನು ನಾಲ್ಕು ವರ್ಷದ ಬಾಲಕನಿರುವಾಗ ಸೂಜಿಯಿಂದ ಒಂದು ನೊಣ ಇಲ್ಲವೆ ಕೀಡಿಯನ್ನು ಚುಚ್ಚಿ ಕೊಂದದ್ದಕ್ಕೋಸ್ಕರ ಶೂಲಾಜ್ಞೆಯಾಯಿತೆಂದು ಉತ್ತರಕೊಟ್ಟನು. ಇವನು ಉತ್ಥಾನಕ್ಕೆ ಬರಲು ಋಷಿಯೆಂದು ತಿಳಿದು ಬಿಟ್ಟುಬಿಟ್ಟರು. ಪಾಪವು ತಿಳಿಯದೆ ಮಾಡಲ್ಪಟ್ಟಿದ್ದು ಅದು ಎಷ್ಟು ಸಣ್ಣದಿದ್ದರೂ ವಿಪಾಕವನ್ನು ತಿನ್ನಿಸದೆ ವಿಧಿಯು ಬಿಡದೆಂದು ತಾತ್ಪರ್ಯ.

೭೯೮. ಟೀ॥ ಸ್ವಭಾವವನ್ನೂ ಕರ್ಮವನ್ನೂ ತಿದ್ದುವದು ಅಸಾಧ್ಯ. ಒಂದು ಪಕ್ಷ ಸ್ವಭಾವವನ್ನು ತಿದ್ದಬಹುದು. ಆದರೆ ಕರ್ಮಫಲವನ್ನು ಬದಲಿಸುವದು ಯಾರಿಂದಲೂ ಆಗದು.

೭೯೯. ಭೃಂಗ=ಚಾತಕ ಪಕ್ಷಿ. ಶೃಂಗಿ=ಬಿಳಿಬಂಗಾರ, ಬೇಗಡೆ ಹಂಗಳಿದ=ಹಳಿಯದಾದ. ಮಡಿ=ಜರತಾರಿ. ಇಲ್ಲವೆ ರೇಶಿಮೆಯ ಮಡಿ.

೮೦೦. ಬಿಂಗು=ಕಾಜಿ ನಂತಿದ್ದ ಅರ್ಧಪಾರದರ್ಶಕವಾದ ಜಿನಸು=ಅಭ್ರಕ. ಬಜ್ಜರ=ವಜ್ರ, ಅಂಗಳದಲ್ಲಿರುವ ಕಲ್ಲು ಬಂಗಾರದ ಖಣಿಯಾಗುವದು.

೮೦೨. ಆಗಿದ್ದ=ಸಂಪಾದಿಸಿದ ಕೂಡಿದ. ಎದ್ದುಹೋದ=ಕಳೆದುಹೋದ. ಆಗಲೇಬಕ್ಕು=ತಿರುಗಿ ಪ್ರಾಪ್ತವಾಗುವದು.

೮೦೩. ಒಂದೊಂದು ಪರಿ=ಕರ್ಮಾನುಸಾರ ಸುಖ ದುಃಖ. ಕೆಂಬೋತ=ಶಾಬತು ಕೋಳಿ.

೮೦೪. ಸಾಗುವ+ಆ+ಕಾಲ=ಸುದೈವ. ಸಾಗರವು=ಮಹಾವಿಪತ್ತು, ಬಯುಲಕ್ಕು=ಇಲ್ಲದಂತಾಗು ಸಾಗದ ದಿನ=ದುರ್ದೈವ.

೮೦೭. ಅಂಟುವದಿನ=ಕರ್ಮವು ಫಲತಿನ್ನಿಸತಕ್ಕ ಸಮಯ.

೮೦೮. ತಾ॥ ತಪ್ಪುಮಾಡಿದವನು ತನ್ನನ್ನು ಹಳಿದುಕೊಳ್ಳಬೇಕಲ್ಲದೆ ವಿಧಿಯನ್ನು ಬೈಯಲಿಕ್ಕೆ ಅದು ಹೋಗಿ ಕಳವು ಮಾಡಿರುವದಿಲ್ಲ.

೮೦೮. ಕೊಟ್ಟು=ಪುಣ್ಯಮಾಡಿ. ಬಾಳದೆ=ದೀರ್ಘಾಯುವಾಗಿ, ಸುಖದಿಂದಜೀವಿಸದೆ. ಬಾಯ್ಬಿಡು=ಬೈಯ್ಯು, ಪಶ್ಚಾತ್ತಾಪಪಡು.

೮೧೦. ಕೊಟ್ಟು = ದಾನಮಾಡಿ ಮುಟ್ಟು=ಪರಾಮರಿಸು. ಇಟ್ಟು=ಭಕ್ತಿಯಿಟ್ಟು. ಗುಟ್ಟು= ಇಂಗಿತ, ಚಿತ್ತ. ದೇವರ ಚಿತ್ತ ತಿಳಿಯದು. ಅಂದರೆ ಶಿವನು ಮನುಷ್ಯರ ಕೈಗೆ ಸಿಗುವಂಥವನಲ್ಲ.

೮೧೧. ಕಂಡದ್ದು ಮರೆಯಾಗಿ=ವಿಷಯಗಳ ಮೇಲೆ ಆಶೆಯಿಲ್ಲದೆ. ಉಂಡದ್ದು ಬರಿದಾಗಿ=ತನಗಿದ್ದದ್ದನ್ನೆಲ್ಲ ಅಹಂಕಾರವಿಲ್ಲದೆ ಶಿವಾರ್ಪಿತ ಮಾಡಿ. ಖಂಡಿತದಿ=ದೇವರಲ್ಲಿ ಭರವಸವಿಟ್ಟು, ಧೃಡಮನಸ್ಸಿನಿಂದ. ಮೃತ್ಯುವಿನ ಗಂಡ=ಸಾವಿಗೆ ಹೆದರದವ.

೮೧೫. ಮನುಷ್ಯಯುಕ್ತಿ ಬೇಡ. ಇದರಿಂದ ಚಿಂತೆ ಹೆಚ್ಚು. ದೇವರ ಚಿತ್ತದಂತೆ ಹೋಗುವದೇ ಸುಖ.

೮೧೬. ವಾಯುಕ್ಕೆ=ವ್ಯರ್ಥವಾಗಿ. ಶಾಖಾ=ವೇದಭಾಗ. ಟೀ॥ ಗಾಯತ್ರಿ ಮಂತ್ರವು ವೇದಗಳಿಗೆ ಮೂಲವಾಗಿರುವದರಿಂದ ಇದು ಇದ್ದರೆ ಸಾಕಿತ್ತಲ್ಲವೇ? ಅನೇಕ ವೇದಶಾಖೆಗಳನ್ನು ಮಾಡಿಕೊಳ್ಳುವದು ಅನವಶ್ಯವೆಂದು ತಾತ್ಪರ್ಯ.

೮೧೭. ಅರಿದು= ಹೊಸಮಾತು, ಅನುಭವದಿಂದ ತಿಳಿಯುವದೇ ವೇದ.

೮೧೮. ಓದುವಾದ = ವ್ಯಾಕರಣ, ತರ್ಕ, ಮೀಮಾಂಸೆಗಳ ದ್ವಾರದಿಂದ ತಿಳಿದರೆ ವೇದದ ಮಹತ್ವ ಹೆಚ್ಚಾಗುವದೇ ? ದ್ವಿಜರು ಇವರ ಇಂಗಿತವನ್ನು ತಿಳಿಯದೆ (ಬೂದಿ) ಹೋಮಾದಿಗಳನ್ನು ಮಾಡಿ ವ್ಯರ್ಥವಾಗಿ ನಾಶವಾಗುವರು.

೮೧೯. ಟೀ॥ ವೇದಗಳು ಸಮುದ್ರದಲ್ಲಿ ಮುಳುಗಿ ಹೋಗುತ್ತಿರಲು ಗಾಯತ್ರಿಯು ಸೂರ್ಯನ ಕುದುರೆಯಾಗಿ ಪ್ರಪಂಚವನ್ನೆಲ್ಲ ಮೀರುವಂತೆ ಓಡಿ ರಕ್ಷಿಸಿತು. ಆದ್ದರಿಂದ ವೇದಗಳಿಗಿಂತ ಆ ಕುದುರೆಯೇ ಯಾಕೆ ಅಧಿಕವಲ್ಲ ?

೮೨೦. ಹಾದರದ ಕಥೆ=ರಾಮಾಯಣ ( ರಾವಣನು ಸೀತೆಯನ್ನು ಕದ್ದೊಯ್ದುದು. ) ಸೋದರ ವಧೆ=ಮಹಾಭಾರತ. ( ಪಾಂಡವರು ಕೃಷ್ಣನ ಸಹಾಯದಿಂದ ಒಡಹುಟ್ಟಿದವರಾದ ಕೌರವರನ್ನು ಕೊಂದ ಕಥೆ ) ಅವರಲ್ಲಿರುವ ತತ್ವಗಳನ್ನು ಬಿಟ್ಟು ಅತಿಶಯೋಕ್ತಿಗಳನ್ನೇ ವಿಶೇಷಿಸುವವರು ಮೂದಿಗರು. ಆದರಿಸಿ=ಕಿವಿಗೊಟ್ಟು, ಲಾಲಿಸಿ.

೮೨೧. ಟೀ॥ ಯೋಗ್ಯ ಕಾಲದಲ್ಲಿ ಶುಚಿರ್ಭೂತನಾಗಿ ಭಕ್ತಿಮಾಡದೆ ಜನಾಪವಾದಕ್ಕಾಗಿ ತರುವಾಯ ಎಷ್ಟು ವೆಚ್ಚಮಾಡಿ ಡಂಭಾಚಾರ ಮಾಡಿದರೂ

ವ್ಯರ್ಥ. ಏಳೆಂಟು = ನಿತ್ಯನೈಮಿತ್ತಿಕ ಕರ್ಮ. ಕೈಕಾಲುಗಳನ್ನು ತೊಳೆಯುವದು ಪಾಪಗಳನ್ನು ತೊಳೆದುಕೊಳ್ಳುವದಕ್ಕೆ ಗುರುತೆಂದು ಕೆಲವರು.

೬೨೨. ಪಕ್ಷ=೧೫ ದಿವಸ. ಪುಕ್ಕಟೆ=ಕ್ರಿಯುವಿಲ್ಲದೆ ಸುಮ್ಮನೆ. ತಾ॥ ಭಕ್ತಿ ಇಲ್ಲದ ಹರಿನಾಮ ಸ್ಮರಣೆಯು ಜನ್ಮಾಂತರಕ್ಕೆ ಕಾರಣವಾಗಿರುವದು.

೬೨೩. ತೋರಿರ್ದ=ಬಂದ, ಪ್ರಾಪ್ತವಾದ, ಮೀರಿಮಾಡು=ಭಕ್ತಿಯಿಲ್ಲದೆ ಬಹಿರಾಚಾರಕ್ಕೆ ಡಂಭಮಾಡು; ಹೊರಗಿನ ಅಟ್ಟಹಾಸ ಸೇರಿದ=ಮಾಡಿಕೊಂಡಿದ್ದ ( ಗಂಡ )

೬೨೪. ತೊರೆಯು ಬಲ್ಲಡೆ=ದಾನವನ್ನು ಫಲಾಪೇಕ್ಷೆಯಿಲ್ಲದೆ ಮಾಡಿದರೆ ಒರತೆಯಾತೊರೆ=ಸೀನೀರಿನ ಹಳ್ಳದ ಒರತೆಯಂತೆ ಸುಖಕರವಾಗಿರುವದು. ತೊರೆಯುಲರಿಯದೆ=ದಾನದ ಮರ್ಮವನ್ನು ತಿಳಿಯದೆ ಕರ್ಮವನ್ನು ಬಿಟ್ಟರೆ. ತೊರೆದುಂಬಿ ಹರಿದು=ಹಳ್ಳವು ತುಂಬಿ ಮೈಮೇಲೆ ಬಂದಂತೆ. ತಾ॥ ತಿಳಿಯದೆ ಜನನಿಮಿತ್ತಕ್ಕೆ ಧರ್ಮವು ಕರ್ಮವೆಂದು ತ್ಯಜಿಸಿದರೆ ನಾಶವಾಗುವದು ನಿಶ್ಚಯ.

೬೨೫. ಟೀ॥ ಮಾಘಮಾಸದಲ್ಲಿ ಮಿಂದರೆ ವಿಶೇಷ ಪುಣ್ಯ ಬರುವದೆಂದು ಹೇಳಿಕೆ. ಮೂಗುಹಿಡಿದು ಬ್ರಾಹ್ಮಣರು ಮುಳು ಮುಳುಗಿ ಏಳುವರು ಆದರೆ, ದೇವರ ಧ್ಯಾನ ಅವನ ಐಕ್ಯದ ಕಡೆಗೆ ಮನಸ್ಸಿಲ್ಲದೆ ಬಹಿರಾಚಾರಕ್ಕೆ ಮೆಚ್ಚಿದ್ದರಿಂದ ಹೀಗಾಯಿತೆಂದು ತಾತ್ಪರ್ಯ.

೬೨೬. ಟೀ॥ ಬ್ರಾಹ್ಮಣನು ಸ್ನಾನ ಮಾಡಿ ಮೈಲಿಗೆಯಿಂದ ತುಂಬಿದ್ದರೂ ನೀರುಮಡಿ ಮಾಡಿದ ವಸ್ತ್ರದ ತುಂಡನ್ನು ಉಟ್ಟುಕೊಳ್ಳುವದೇಕೆ? ನಿಜವಾಗಿ ಶುದ್ಧನಾಗಿದ್ದರೆ ತಿಳಿಯದೆಯೂ ತಿಳಿದೂ ಮಾಡಿದ ಪಾಪಗಳನ್ನು ಕ್ಷಮಿಸೆಂದು ಬೇಡಿಕೊಳ್ಳುವ ಸಂಧ್ಯಾವಂದನೆ ಯಾಕೆ! ಅಂದರೆ ಅಂತರ್ಯ ಸ್ನಾನವಿಲ್ಲದೆ ಬ್ರಾಹ್ಮಣನು ಬಹಿರಾಚಾರಕ್ಕೆ ಬಿದ್ದು ಸಂದೇಹಕ್ಕೊಳಗಾಗಿರುವನೆಂದು ತಾತ್ಪರ್ಯ.

೬೨೭. ಗುಣವಿಲ್ಲದ ಶುದ್ಧಾಚಾರವು ವ್ಯರ್ಥ.

೬೩೧. ಸಂಜೆ=ಸಂಧ್ಯಾವಂದನೆ. ವಾಸು (ಸಂ. ವಾಚ್=ಓದು)=ಅನ್ನು ಜಪಿಸು. ಟೀ॥ ಯಥಾರ್ಥವಾಗಿ ಸಂಧ್ಯಾ ಮಾಡಿದರೆ ಹೆದರಿಕೆಯೇ ಇಲ್ಲ ಎಂದು ಶ್ರುತಿಯಿರುವಾಗ ಸಂಧ್ಯಾ ಜಪಿಸಿಯೂ ಪಾಪದ ಹೆದರಿಕೆಯಿದ್ದರೆ ಅದು ವಿಷವೇ ಸರಿ.

೬೩೨. ಮಟ್ಟೆ=ಕಾವಿ, ಹಳದಿ. ನೊಸಲು=ಹಣೆ. ಕೆಟ್ಟಕೇಡು=ಏನು ಪಾಪ ಮಾಡಿತು.

೮೩೫. ಮೂರೆಳೆ = ಯಜ್ಞೋಪವೀತ. ಕೌದಿ = ಹೊದೆಯುವ ದಪ್ಪ ಅರಿವೆ. ಹೊದ್ದಾತ = (೧) ಭಿಕ್ಷುಕ. (೨) ಕೌದಿಯನ್ನು ಹೊದ್ದಿಸಿದ ಸಬರದ ಎತ್ತು ?

೮೩೭. ಟೀ॥ ಮಿಂದರೆ ಹೋಗುವದಕ್ಕೆ ಪಾಪವು ಕೆಸರೇನು ? ಲೇಪ= ಹತ್ತಿಕೊಳ್ಳುವ ಅಂಟು; ಸರಿಸ.

೮೩೯. ಸೋಪಾನಗಳನೇರಿ= ತೀ-ರ್ಥಸ್ನಾನ ಮಾಡಿ, ಮೇಲೆ ಬಂದು. ವಜ್ರಲೇಪ=ಹತ್ತಿದಮೇಲೆ ಎಂದಿಗೂ ಬಿಡದಿರುವ ಅಂಟು.

೮೪೦. ಮೋದು=ಹೊಡೆ,ಕೊಲ್ಲು. ಟೀ॥ ಮಂತ್ರವನ್ನು ಹೇಳಿ ಕಾದ ತುಪ್ಪದಲ್ಲಿ ಕೈ ಎದ್ದಿದರೆ ಹಾದರ ಮಾಡಿಲ್ಲವೆಂತ ಸಿದ್ಧವಾಯಿತೆಂದು ಹೇಳುವ ಬ್ರಾಹ್ಮಣನನ್ನು ವಿಧಿಯು ಕೊಲ್ಲದೇ ಬಿಡದು. ಅಂದರೆ ಇದು ಸುಳ್ಳು; ಕೇವಲ ಮೋಸವೆಂದು ತಾತ್ಪರ್ಯ.

೮೪೧. ತೂಗಿ=ಸ್ವಲ್ಪ, ಒಂದೇ ತುಂಡು. ದಿಟ=ತತ್ವ. ಆಗಲಿಸು=ಯ-ಜ್ಞಮಾಡಿ (ಆಡುಗಳನ್ನು) ಲೋಕದಲ್ಲಿ ಇಲ್ಲದಂತೆ ಮಾಡು.

೮೪೨. ಕನ್ನೆ=ಎಳೆಯ. ಬನ್ನಬಡಿಸುತ=ಗುದ್ದಿ ಕಷ್ಟಪಡಿಸುತ್ತ. ಅಗಸರ ನಾಯಿ ಅರಿವೆ ಆದರೆ ರೊಟ್ಟಿಯಾದರೂ ಸಿಕ್ಕುದದು. ವಿಪ್ರನು ಇದಕ್ಕೊ ಕಡೆ. ಅಂದರೆ ಯಜ್ಞದಿಂದ ಪಾಪ ವಲ್ಲದೆ ಪುಣ್ಯವು ದೊರೆಯದೆಂದು ತಾತ್ಪರ್ಯ.

೮೪೩. ಉಪಜಿಹ್ವೆ=ಸರ್ಪ, ತಾ ಜಪ ಮಾಡುತ್ತ ಭಕ್ತಿಯ ಉದ್ದೇಶಕ್ಕಾಗಿ ಆಡನ್ನು ಕೊಲ್ಲುವವನು, ವಿಷವುಳ್ಳ ಸರ್ಪನೇ ಸರಿ.

೮೪೪. ಅರ್ತಿ=ಪ್ರೀತಿ. ಯಜನ= ಯಜ್ಞ. ತೀರಿ + ಇರಿದು= ಗುದ್ದಿ + ಕೊಂದು. ಕಾಡಲಿಕ್ಕು = ಸುಡುಗಾಡಿನಲ್ಲಿಡು. ಸುಟ್ಟುಬಿಡು.

೮೪೬. ಜನ್ನವಿದ್ಯೆ= ಯಜ್ಞವಿದ್ಯೆ. ಹಿಂಡಾಡತಿನ್ಪ=ಕಟಿಗ.

೮೪೭. ಅಜನ=ಆಡನ್ನು. ಇಂದ್ರನೇಕಾಗ=ಇಂದ್ರಪದವಿ ಯಾಕೆ ದೊರೆಯಲಾಗದು'

೮೪೮. ಎಳ್ಳು + ಮುಳ್ಳು=ತೈಲ + ಸಮಿದಾದರ್ಭ ಇತ್ಯಾದಿ ಹೋಮಸಾಮುಗ್ರಿಗಳು. ಕುಳ್ಳಿದುರ್ವ=ಶಾಸ್ತ್ರಾನುಸಾರವಾಗಿ ಮಾಡಿ ಪುರಸುಟ್ಟ=ಊರಿಗೆ ಬೆಂಕಿಹಚ್ಚಿದ (ಆತತಾಯಿ) ಇದು ಪಂಚಮಹಾಪಾತಗಳಲ್ಲೊಂದು.

೮೪೯. ಟೀ॥ ಆಡಿನ ( ಅಡಿರಜ ) ಕಾಲಧೂಳು ಬಡಿವತೆ ಮೈಲಿಗೆಯಾಯಿತೆಂದು ಸ್ನಾನಮಾಡಿ ಆಡನ್ನು ಕೊಂದು ತಿಂದರೆ ಇಂದ್ರ ಪದವಿ ದೊ

ರೆಯುವದೆಂದೂ ಹೇಳುವ ಜನರು ಈ ಭರತಭೂಮಿಯಲ್ಲಿರುವರು ಕಂಡ್ಯಾ!

೮೫೦. ಬಾಡು=ಮಾಂಸ ಎಡ ನಾಯಿ=ಎಳೆ ನಾಯಿಮರಿ.

೮೫೧. ನಾಡಿನ ಹದ್ದು=ಊರ ಹದ್ದು. ಪಾಡು=ತರ.

೮೫೨. ಸೂ॥ ಇಂಗನ್ನು ತೊಗಲಿನ ಮೇಲೆ ತಯಾರಿಸುವನೆಂದು ಹೇಳಿಕೆ?

೮೫೩. ನೋಡಿರಿ+ಆ ದಕ್ಷನ+ಒ-ಡಲ+ಮೇಲೆ +ಅಜನ+ ತಲೆ ( ಪದ್ಯ ೧೮೧).

೮೫೪. ಮಾಂಸಾಹಾರಿಯು ಹೊಲೆಯನಲ್ಲ. ಪ್ರಾಣಿಗಳಲ್ಲಿ ಭೂತದಯವಿರಬೇಕೆಂದು ಇತರರಿಗೆ ಬೋಧಿಸಿ ತಾನೇ ಪ್ರಾಣಿಗಳನ್ನು ಕೊಲ್ಲುವ ಬ್ರಾಹ್ಮಣನೇ ಹೊಲೆಯನೆಂದು ತಿಳಿಯತಕ್ಕದ್ದು.

೮೫೫. ಆ ಭಾಷೆ=ರೂಢಿಯ ಮಾತು, ಹೇಳಿಕೆ. ಸಂದಿಹುದು=ಯೋಗ್ಯವಾಗಿರುವದು. ಸಂದುದಲ್ಲದನು=ಶಾಸ್ತ್ರನಿಷಿದ್ಧವಾದದ್ದನ್ನು. ಅವತಿನ್ನ=ಬ್ರಾಹ್ಮಣನು ತಿನ್ನನು.

೮೫೬. ಅಕ್ಕರವನರಿಯದ = ವಿದ್ಯಾಹೀನನಾದ, ಅಜ್ಞಾನಿ. ನಿಷ್ಕರುಣಿ=ಹೊಲೆಯ, ಮಾಂಸಹಾರಿ. ತಾ॥ ತಿಳಿಯದವರು ಮಾಂಸ ತಿಂದರೆ ಕ್ಷಮ್ಯ. ತಿಳಿದವರು ತಿಂದರೆ ತಮ್ಮ ಮಕ್ಕಳನ್ನೇ ಕೊಂದು ತಿಂದಂತಾಗಿ ಮಹಾಪಾತಕಕ್ಕೊಳಗಾಗುವರು.

೮೫೭. ಕೊಂದು ಮಾಡುವ ಭಕ್ತಿ = ವೇದ ಧರ್ಮ, ಕರ್ಮಮೀಮಾಂಸೆ. ಅಂದವನು=ವಿಪರೀತವನ್ನು. ಒರೆವೆ=ವಿವರಿಸಿ ಹೇಳುವೆನು. ಇದು ಗಂಧವನ್ನು ಸುಟ್ಟು ಮೈಗೆ ಹಚ್ಚಿಕೊಳ್ಳುವ ಅವಿವೇಕಿಯಂತಿರುವದು.

೮೫೮. ಆವಾವ=ಅನೇಕ, ಲೆಕ್ಕವಿಲ್ಲದ ಹೇವ=ಕರುಣೆ.

೮೬೦. ಒತ್ತಿ=ಗುದ್ದಿ. ಕೊರೆದು=ಮೆಲ್ಲಮೆಲ್ಲನೆ. ಕಷ್ಟಪಡಿಸಿ, ಜೀವ ತೆಗೆದು. ಉತ್ತಮದ ಹೊಲೆಯ=ಹೆಚ್ಚಿನ ಹೊಲೆಯ.

೮೬೧. ಟೀ॥ ಹೊಲೆಯರು ಚಿಗರಿಯ ಮಾಂಸವನ್ನು ತಿಂದು ಬಿಸಾಡಿದ ಚರ್ಮವನ್ನು ಬ್ರಾಹ್ಮಣರು ಕೃಷ್ಣಾಜಿನವೆಂದು ಹಾಸಿ ಅದರ ಮೇಲೆ ಕೂತು ಊಟಮಾಡುವರು. ಹೊಲೆಯರು ಬಿಟ್ಟದ್ದನ್ನು ಪ್ರಯೋಗಿಸುವವರು ಹೊಲೆಯರಿಗಿಂತಲೂ ಕಡೆ.

೮೬೨. ಪಕ್ಕಲೆ, ಸಗ್ಗಲೆ=ನೀರು ತರುವ ತೊಗಲಿನ ಚೀಲ, ಪಕಾಲೆ ಚೊಕ್ಕಟ=ಶುದ್ಧ. ಚಿಕ್ಕವರು= ಚಿಕ್ಕ ಮಕ್ಕಳೆಂದು ಛಲವಾದಿಯವರಲ್ಲಿ ಒಂದು ಜಾತಿ. ಇವರು ಕೀಳು ಕುಲದವರೆಂದು ಅನ್ನುವದ್ದು ಹೇಗೆ?

೮೬೫. ಸಾದ ಬ್ರಾಹ್ಮಣರಲ್ಲಿ ಒಂದು ಜಾತಿ. ಆಪವ=ಕಷ್ಟದಲ್ಲಿ ಸಹಾಯ ಮಾಡಿದವ.

೮೬೬. ಹೊರು=(೧) ವೈಯ್ಯು. (೨) ಕಳವು ಮಾಡು, ಅಪಹರಿಸು.

೮೬೯. ಮುಟ್ಟುಗಂಡವಳು=ರಜಸ್ವಲೆಯಾದವಳು. ತಾ॥ ಸ್ತ್ರೀಯನ್ನು ಮುಟ್ಟರು. ಆದರೆ ಆಕೆಯಿಂದ ಹುಟ್ಟಿದವರನ್ನು ಮುಟ್ಟುವರು ಕಂಡ್ಯಾ!

೮೭೦. ಹೊಲಸು=ಕೀವು. ಹೊಲೆ ಜಲದ=ಹೊಲಸಿಗೆ ಮೂಲಮನೆಯಾದ. ಹೇಯ = ಧಿಕ್ಕರಿಸತಕ್ಕ. ಎಣಿಸು= ಲಕ್ಷಿಸು.

೮೭೧. ಪಾಲ್+ಕಡಲು=ರೇತಸ್ಸನ್ನು ಆವರಿಸಿಕೊಳ್ಳುವ ಸ್ಥಳ=ಯೋನಿ ಹೊಲೆಯಿಲ್ಲದ=ಸ್ತ್ರೀಯಿಂದ ಹುಟ್ಟಿದ.

೮೭೨. ಎಂಜಲಿಂದ+ಆದ+ತನವು+ಇರಲು=ದೇಹವು ಸ್ತ್ರೀಪುರುಷರ ಸಂಯೋಗದಿಂದಾದ್ದರಿಂದ ಎಂಜಲೆಂದು ಹೇಳಲ್ಪಟ್ಟಿದೆ. ಅಂಜು=ಮುಟ್ಟುವದಕ್ಕೆ ಅಂಜು, ಶೀಲಮಾಡು.

೮೭೩. ತೊಗಲು= ರಕ್ತದ ಮೇಲೆ ಆಚ್ಛಾದಿಸಲ್ಪಟ್ಟ ಸೂಕ್ಷ್ಮವಾದ ಒಳತೊಗಲು. ಬಲಿದ...ಹೊದಿಕೆ=ಅದೇ ಬಲಿತು ಹೊರಗೆ ದಪ್ಪವಾದ ತೊಗಲಿನ ಹೊದಿಕೆಯಾಗಿದೆ. ಹೊಲೆರಕ್ತ+ಶುಕ್ಲದಿಂದಾದ=ಮುಟ್ಟಾದ ಸ್ತ್ರೀಯ ಕೆಂಪು ರಕ್ತವೂ ಪುರುಷನ ಬಿಳಿಯಾದ ವೀರ್ಯವೂ ಸಂಯೋಗವಾಗಿ ಹುಟ್ಟಿದ.

೮೭೪. ಬಿಲ=ನವದ್ವಾರ ರಂಧ್ರ= ತೊಗಲಿನಲ್ಲಿರುವ ಛಿದ್ರ.

೮೭೫. ನಿಲ್ಲದೆ=ಬಿಟ್ಟುಬಿಡದೆ ಅಗಿ= ತಿನ್ನು, ಜಗಿ.

೮೭೭. ತೃಷೆ=ನೀರಡಿಕೆ. ವಿಷಯ= ವಿಷಯಸುಖ. ಬಯಕೆ=ಸುಖದ ಆಶೆ. ಬಯಸಿದ ಪದಾರ್ಥಗಳನ್ನು ತಿನ್ನುವ ಆಶೆ. ಇಲ್ಲಿ ಮೂರಕ್ಕೆ ಮೂರು ಹೇಳಲ್ಪಟ್ಟವೆ. ಗಸಣೆ=ತಿಕ್ಕಾಟ. ತೊಂದರೆ ಕುಲಹದಿನೆಂಟು ಜಾತಿಗಳ ಹೊಡೆದಾಟ.

೮೭೮. ಕೂಳು ಹೆಚ್ಚಾದರೆ ಕುಲಾಚಾರ ಹೆಚ್ಚು. ನೀರು ಹೆಚ್ಚಾದರೆ ನೇಮಾಚಾರಹೆಚ್ಚು. ಬಾಳಿಂದ=ದೀರ್ಘಾಯುವಾದಂತೆ ಬಲ=ಶರೀರ ಸಂಪತ್ತು.

೮೮೧. ಭವಿ= (೧) ನಾಸ್ತಿಕ. (೨) ಲೌಕಿಕ, ಪ್ರಾಪಂಚಿಕ. ಭಕ್ತ=ಆಸ್ತಿಕ. ಪಾರಮಾರ್ಥಿಕ, ಷಟ್ಸ್ಥಲದ ಮೊದಲನೆಯ ಮೆಟ್ಟಿನಲ್ಲಿ ನಿಂತವ. ಶ್ವಪಚ= ಚಾಂಡಾಲ.

೮೮೨. ಟೀ॥ ರಸ, ರುಧಿರಾದಿ ಸಪ್ತಧಾತುಗಳೂ ಅಪ್ಪು, ತೇಜ, ವಾಯು ಮುಂತಾದ ಪಂಚಭೂತಗಳೂ ಮಿಶ್ರವಾಗಿ ಹುಟ್ಟಿದ ದೇಹಕ್ಕೆ ಕುಲವೆಲ್ಲಿ?

ಓತು=ಓ ಧಾತು=ಪ್ರೀತಿಯಿಂದ ಕೂಡು. ಅಂದರೆ ಅನೇಕ ಧಾತುಗಳ (ಯಾಂತ್ರಿಕ) ಮಿಶ್ರಣದಿಂದುಂಟಾದ.

೮೮೪. ಭೂತೇಶ=ಪಶುಪತಿ=ಶಿವ. ಜಾತಿಮಾದಿಗ=ಅತಿಕೀಳ, ಹೊಲೆಯ. ಟೀ॥ ಅತಿಕೀಳ ಹೊಲೆಯನೆಂದರೆ ಮಾದಿಗನಲ್ಲ ಭಕ್ತಿಹೀನನೇ ಕನಿಷ್ಟ ಕುಲದವನೆಂದು ತಿಳಿಯತಕ್ಕದ್ದು.

೮೮೯. ಉತ್ತಮದ ವರ್ಣ=ಬ್ರಾಹ್ಮಣ. ಜಾತಿ ಗುಣದಿಂದಲ್ಲದೆ ಹುಟ್ಟಿನಿಂದಲ್ಲ.

೮೯೦. ಟೀ॥ ಉತ್ತಮ ನಡತೆಯೋದಾರ. ಇಂಥವರ ಸಂಸರ್ಗವೇ ಮುತ್ತಿನಮಾಲೆ ಇವರಿಂದ ತಿದ್ದಲ್ಪಡುವ ಜನರೇ ಮುತ್ತುಗಳೆಂದು ತಿಳಿಯತಕ್ಕದ್ದು. ಆರಿಂದಲು + ಅಧಿಕ=ಎಲ್ಲರಿಗಿಂತಲೂ ಶ್ರೇಷ್ಠ.

೮೯೧. ಬುದ್ಧಿ=ವಿವೇಕ, ತಾರಣೋಪಾಯ. ಕ್ಷಿಪ್ರ=ಬೇಗನೇ.

೮೯೨. ಅರಿತಂಗೆ=ವಿದ್ಯಾವಂತನಿಗೆ ಅರವತ್ತು=(೧)೬೦ ರೂಪಾಯಿ ಸಂಬಳ. (೨) ಪ್ರಾಪ್ತಿ ಹೆಚ್ಚು. ಮರೆತಂಗೆ= ಕಲಿಯದೆ ಬಿಟ್ಟವನಿಗೆ (ಮೂವತ್ತು ಸಂಬಳ) ಪ್ರಾಪ್ತಿ ಕಡಿಮೆ. ಬರೆವಂಗೆ= ಬ್ರಾಹಣನಿಗೆ, ರಾಜ್ಯ ಪರಿಪಾಲು= ಮಂತ್ರಿಯಾಗುವನು? ವಿದ್ಯೆಕಲಿಯದ ಬ್ರಾಹ್ಮಣನು ಬದಕುವದು ಕಷ್ಟ.

೮೯೩. ದ್ವಿಜ=ಎರಡು ಸರ್ತಿ ಹುಟ್ಟಿದವ. ಒಮ್ಮೆ ತಾಯಿಯ ಗರ್ಭದಿಂದ ಮತ್ತೆ ಯಜ್ಞೋಪವೀತ ಧರಿಸುವಾಗ. ಟೀ॥ ಬ್ರಾಹ್ಮಣನ ಗುಣವು ಬದಲದೆ ಒಮ್ಮೆ ತಾಯಿಯಿಂದ ಹುಟ್ಟಿ ಎಲ್ಲರಂತೆ ತ್ರಿಗುಣಾತ್ಮಕನಾಗಿದ್ದರೂ ಮುಟ್ಟಬಾರದೆಂದು ಆಡಿನಂತೆ ದೂರಕ್ಕೆ ಹಾರುವನು. ಯಥಾರ್ಥತ್ವದಿಂದಲ್ಲದೆ ಹುಟ್ಟಿನಿಂದ ಬ್ರಾಹ್ಮಣನು ದ್ವಿಜನೆನ್ನಿಸಿಕೊಳ್ಳಲಾರನೆಂದು ತಾತ್ಪರ್ಯ.

೮೯೪. ಹಾರು=ಮುಟ್ಟಿಸಿಕೊಳ್ಳದೆ ಜಿಗಿ; ಗರ್ವಿಸಿಕೊಳ್ಳು. ಹೇರ್ವ=ಬೊಗ್ಗಿಸುವವ. ನಿಜಗುಣ=ಹುಟ್ಟು ಸ್ವಭಾವ. ತೋರದೆ+ಅಡಗು=ತೋರಿಸದೆ, ಹೊತ್ತಿಗೆ ತಕ್ಕ ವೇಷ ಹಾಕು.

೮೯೫. ಕೋರು=ಕೇಡು ಬಯಸು. ತೋರು=ವಿರುದ್ಧವಾಗಿ ನಟಿಸು. ಕೆಳಗೆ ಬೀಳು=ಸೋಲು. ಸುಳುಹು=ಸ್ನೇಹ.

೮೯೬. ಕೊಡೆಹೊಲ್ಲ—ಇದು ಅವನ ಸ್ಥಾನಕ್ಕೆ ಅಯೋಗ್ಯ. ಬೇಡನು ಕೊಡೆ ಹಿಡಿದುಕೊಂಡರೆ ಇತರ ಕೈಕೆಲಸಗಳನ್ನು ಮಾಡಲಾಗದು. ಮಳೆಹೊಲ್ಲ=ಆಡು ಹೊರಗೆ ಹೋಗಿ ಮೇಯಲಿಕ್ಕಾಗದೆ ಉಪವಾಸ ಬೀಳಬೇಕಾಗುತ್ತದೆ.

೮೯೮. ಕುಟ್ಟು=ಅವರಂತೆ ಮಾತಾಡು. ಕೊಡು=ಲಂಚಕೊಡು. ಬಿಟ್ಟರೆ=

ಹಣ ಕೊಡದಿದ್ದರೆ. ನೋಡಿ ನುಡಿಸರು=ಮುಂದಿದ್ದರೂ ಮಾತಾಡಿಸರು.

೮೯೯. ತಲೆ ಬೆನ್ನುತಟ್ಟು=ಹೊಗಳು. ಕೆಟ್ಟರೆ=ದ್ವೇಷಿಸಿದರೆ. ಕುಟ್ಟಿ ಕೆಡಹು=ನಿರ್ನಾಮಮಾಡು. ಪಾತಾಳಕ್ಕೆ ತುಳಿ ಬಟ್ಟೆ=ಸ್ನೇಹ.

೯೦೦. ಅರ್ಥ=ಹಣ, ದ್ರವ್ಯ ಅನರ್ಥಕ್ಕೆ=ಕೆಡಕಿಗೆ.

೯೦೨. ಟೀ॥ ಈ ಎಂಟು ತರದ ಜನರಿಗೆ ತಮ್ಮಂತೆ ಇನ್ನೊಬ್ಬರಿರಬಾರದೆಂದು ಅಪೇಕ್ಷೆ.

೯೦೩. ಟೀ॥ ಲೋಕಹಿತಾರ್ಥವಾಗಿ ಪರಸೇವೆ ಮಾಡತಕ್ಕ ಬ್ರಾಹ್ಮಣನಿಗೆ ಅಧಿಕಾರವೂ ಭೂಮಿಯನ್ನು ಹೊತ್ತಿರುವ ಆದಿಶೇಷನಿಗೆ ನಿದ್ರೆಯೂ ಆನೆಗೆ ಸೊಕ್ಕೂ ಬಂದರೆ ಜನರಿಗೆ ಕೇಡಾಗುವದು ನಿಶ್ಚಯ.

೯೦೪. ನಂಬಿ=ಮಂತ್ರಾಲೋಚನೆ ಕೇಳಿ. ಭೂಪ=ಅರಸು.

೯೦೬. ಬಂಡುಣಿ=ಜೇನುನೊಣ=ಹೂವುಗಳಿಂದ ಮಕರಂದ ಕೂಡಿಸಿದಂತೆ ಪರದ್ರವ್ಯಾಪಹಾರಿಗಳು. ಭಂಡ=ಬೈಗಳ. ಕಂಡುದ...ನುಡಿಯರು=ಇದ್ದಕಿದ್ದ ಹಾಗೆ ಮಾತಾಡರು.

೯೦೮. ಟೀ॥ ಬ್ರಾಹ್ಮಣನು ವಿದ್ಯೆ ಕಲಿಯುವದು ಒಕ್ಕಲಿಗರ ಗೋಣು ಮುರಿಯುವದಕ್ಕೆ. ಲೆಕ್ಕವನ್ನು ಕಲಿತ ಕುಲಕರ್ಣಿಯು ಮೋಸಮಾಡಿ ನರಕಕ್ಕೆ ಹೋಗುವದನ್ನು ಕಲಿತಂತಾಗುವದು.

೯೧೦. ಬಹುದಾರಿ=ಬಹಳ ಹಂಚಿಕೆ.

೯೧೧. ಪಾರತರ ನಿಜ = ಮೋಕ್ಷಮಾರ್ಗ.

೯೧೨. ಬ್ರಹ್ಮ+ಸೂ = ಬ್ರಹ್ಮನ ಮಗ=ಕಾಮ. ದೇವ+ಸೂ=ದೇವರ ಮಗ=ಶನಿ? ಮಾನಿಸ=ಬ್ರಾಹ್ಮಣ. ಹೆಮ್ಮಗ=ಹಿರಿಯಮಗ. ಈ ಮೂವರು ಹೊಕ್ಕರೆ ಮನೆ ನಿರ್ನಾಮವಾಗುವದು.

೯೧೩. ಕಮ್ಮೆ=ಬ್ರಾಹ್ಮಣರಲ್ಲಿ ಒಂದು ಜಾತಿ. ಭೇದ=ಗುಣಪ್ರಕಾರ.

೯೧೪. ಹೊಮ್ಮು=ಸ್ವಭಾವ. ನೆಮ್ಮು=ತಡವು, ಮುಟ್ಟು.

೯೧೫. ಅಮ್ಮ=ವಿಧವೆ. ಉಮ್ಮಳಿಸು=ಶೆಖೆಯಾಗು. ಮಳೆ=ತಂಪು.

೯೧೬. ತಾಗು=ಇರಿ. ತಾ॥ ಇವರಲ್ಲಿ ವಿಶ್ವಾಸಿಸುವದು ಬಾವಿಯು ಮೇಲಿರುವ ಗಿಡದ ಟೊಂಗೆಯನ್ನು ಆಶ್ರಯಿಸಿದಂತಿರುವದು.

೯೧೭. ಟೀ॥ ವೇದ ಧರ್ಮಕ್ಕಿಂತ ಜೈನ ಧರ್ಮವು ಬೌದ್ಧಿಕ ದೃಷ್ಟಿಯಿಂದ ತಲೆಯುಂತಿರುವದು. ಆದರೆ ಇದಕ್ಕೆ ದೇವರಿಲ್ಲದ್ದರಿಂದ ತಲೆಹೋದ ಮುಂಡದಂತೆ ಆಗಿದೆ. ಅಟ್ಟೆ=ದಿಂಬ, ಮುಂಡ.

ಪಟ್ಟಗಟ್ಟಿರು=ಶ್ರೇಷ್ಠವೆಂದು ಹೊಗಳಲ್ಪಡು.

೯೧೮. ಕೊಲುವ ಧರ್ಮ=ಯಜ್ಞಯಾಗಾದಿಗಳನ್ನು ಬೋಧಿಸುವ ಧರ್ಮ. ಒಲೆಯೊಳಗೆ+ಇಕ್ಕು=ಸುಡು ತಿರಸ್ಕರಿಸು. ತಲೆಯಮೇಲಿರು=ಒಂದು ಪಕ್ಷಕ್ಕೆ ಉತ್ತಮವೆಂದು ಹೇಳು.

೯೧೯. ಆದಿ=ವೇದಕ್ಕಿಂತ ಮುಂಚೆ ವೇದದಲಿ ಹುಸಿಯಿಲ್ಲ=ಅದು ಕರ್ಮವನ್ನು ಬೋಧಿಸುತ್ತಿದ್ದರೂ ಅದರಲ್ಲಿರುವ ವೇದಾಂತತತ್ವವು ಸತ್ಯವಾಗಿದೆ. ವಾದದಿಂದಲ್ಲ= ಹಣಸಂಪಾದನೆಯು ಕಾರ್ಯದಿಂದಲ್ಲದೆ ಬಾಯಿಮಾತಿನಿಂದ ಉಂಟಾಗದು.

೯೨೧. ಕಿಸುಕುಳ = ಅಮೇಧ್ಯದಂತೆ ಹೊಲಸು ನಾರು. ಅಂದರೆ ಸುಳ್ಳಾಡು

೯೨೨. ಇದು ಅಸಂಭಾವಾಲಂಕಾರ.

೯೨೩. ಹೆರೆ+ಕಳೆದ+ಉರುಗ=ಪರೆಬಿಟ್ಟ ಹಾವು. ಗರಳ=ಕಠಿಣ ವಿಷ. ಪರತತ್ವ ಬೋಧೆಯರಿಯದ=ಪರಮಾತ್ಮನು ಅವಶ್ಯವಿಲ್ಲ. ಎಲ್ಲವೂ ಪ್ರಕೃತಿಯಿಂದಾಗಿದೆಯೆಂದು ಪ್ರತಿಪಾದಿಸುವವ. ಜಿನನೆಂದರೆ ಇಂದ್ರಿಯವಿಕಾರವನ್ನು ಗೆದ್ದವನೆಂದು ಅರ್ಥವಾಗುತ್ತಿದ್ದರೂ ಇವನು ಪರೆಬಿಟ್ಟ ಹಾವಿನಂತೆ ಹೊರಗೆ ಸನ್ಯಾಸಿಯಾಗಿ ಒಳಗೆ ದುರ್ಗುಣಗಳಿಂದ ತುಂಬಿರುವನೆಂದು ತಾತ್ಪರ್ಯ.

೯೨೪. ಟೀ॥ ಒಂದು ಕೈಯಲ್ಲಿ (ಲೋಚಗುಂಡಿಗೆ) ಕಮಂಡಲವನ್ನೂ ಮತ್ತೊಂದು ಕೈಯಲ್ಲಿ ಸತ್ತ ನವಿಲಿನ ಗರಿಯ ಬೀಸಣಿಕೆಯನ್ನೂ ಹಿಡಿದಿರುವದು ಅನ್ಯಾಯವಲ್ಲವೆ?

೯೨೫. G. S. ಬಟ್ಟೆ ತಾವಾಗಿ ಎಲ್ಲರಿಗೆ ಮಾದರಿಯಾಗಿ, ಸನ್ಮಾರ್ಗದರ್ಶಿಗಳಾಗಿ. ಬಟ್ಟೆ ಬಟ್ಟು= ದಿಗಂಬರರಾಗಿರಲು ಇವರಂತೆ ನಗ್ನವಾದ ಸಾಣೆಕಲ್ಲು ಯಾಕೆ ಸ್ವರ್ಗಕ್ಕೆ ಹೋಗಲಾಗದು?

೯೨೬. ಮೀರಿ=ತಿಳಿದೂ ತಿಳಿದೂ.

೯೨೭. ಟೀ॥ ಪ್ರಾಣಿಗಳು ಇದ್ದ ಸ್ಥಳವನ್ನು ಬದಲಿಸಿದರೆ ಅವನ್ನು ಕೊಂದದ್ದಕ್ಕಿಂತಲೂ ಹೆಚ್ಚಿನ ಪಾಪ ಬರುವದೆಂದು ಜೈನನು ತಿಳಿಯನು.

೯೨೯. ಟೀ॥ ಝಾಡನೆಯಲ್ಲಿ ಹೊರಬಿದ್ದು ಬಿಸಿಲಿನಲ್ಲಿ ಸಾಯುವ ಜಂತು ತಿರುಗಿ ಹೊಟ್ಟೆಯೊಳಗೆ ನುಂಗಿ ಸಾಕಿದವನೇ ಜೈನನು. ಅಂದರೆ ಅಹಿಂಸಾವಾದವು ಅವ್ಯವಹಾರಿಕವೆಂದು ತೋರಿಸಿರುವನು.

೯೩೨. ಟೀ॥ ಮೌನವ್ರತವನ್ನು ತಾಳಿ ತಪಸ್ವಿಗಳಂತೆ ನಿಂತಿರುವ ಸಸ್ಯಾದಿ

ಗಳನ್ನು ಕೊಲ್ಲುವದು ಪಾಪವೆಂದು ಪಲ್ಯಾಹಾರಿಯು ತಿಳಿಯನು.

೯೩೪. ಸ್ವಾರ್ಥ ಒಂದನ್ನು ಬಿಟ್ಟರೆ ಲೋಕದಲ್ಲಿ ಸಾವಾಗಲಿ ಅಹಿಂಸೆಯಾಗಲಿ ಇಲ್ಲ.

೯೩೫. ಕಾಲ=ವರುಷ. ಬೋರ್ಕಲ್ಲು=ಊರಮುಂದಿನ ಗುಂಡುಕಲ್ಲು K. ಗೋರ್ಕಲ್ಲು=ಬೆಣಚುಕಲ್ಲು, ಸ್ಫಟಿಕ. ನೀರ್ಕೊಳ್ಳು = ಮೃದುವಾಗು, ಹಸಿಯಾಗು.

೯೪೨. ಕಳೆಯಲು = ಒಡಂಬಡಿಸಲು. ಅಳವು=ಸಾಧ್ಯ.

೯೪೪. ಅಳ = ಸಾಮಿಪ್ಯ. ನೆರೆಜಿಡ್ಡು ವಾಸನೆಯ ದೆಸೆಯಿಂದ) ಕೋಡಗ=ಮೂರ್ಖ. ಅಳು= ಮನನೋಯಿಸುವ ಮಾತು, ಅಳುವಿಕೆ. ಓಪರೊಳು=ಪ್ರಿಯರಲ್ಲಿ.

೯೪೬. ಕರ್ಪುರ ವೀಳ್ಯಕೊಡು=ಪೂಜಿಸು. ಕಪ್ಪುಗೊರಳ =ಕೊರಳಿನಲ್ಲಿ ಕಾಳಕೂಟ ವಿಷವನ್ನು ಧರಿಸಿದವ=ನೀಲಕಂಠ=ಶಿವ. ಒಪ್ಪಿ= ಈಶ್ವರನಿಗೆ ಒಳಗಾಗಿ.

೯೫೦. ಸಂದುದು=ಆಯಿತು. ಇರ್+ಸಾಸಿರ=ಎರಡುಸಾವಿರ. ಇಳೆ=ಭೂಮಿ.

೯೫೧. ಮೂಗರುರಾದಂದು = ಅನ್ಯಾಯವನ್ನುನೋಡಿಸುಮ್ಮನಾದಂದು

೯೫೩. ಸಣ್ಣನೆಯನಾಮು = ಗೀರಗಂಧಾಕ್ಷತೆ. ನುಣ್ಣನೆಯ ಮುಡಿ= ಚಂಡಿಕೆ. ಬ್ರಾಹ್ಮಣರ ಅಧಿಕಾರವು ಹೋಗಲು ವೀರಶೈವರ ಪ್ರಾಬಲ್ಯವುಂಟಾಗುವದೆಂದು ತಾತ್ಪರ್ಯ.

೯೫೪. ಇರಿವ+ಎತ್ತು = ಇರುಕಳ ಎತ್ತು. ( ಯಾವನೊಬ್ಬ ರಾಜನಿಗೆ ಸಂಜ್ಞೆ ? )

೯೫೫. ವಾರಿನಿಧಿ ಬತ್ತಿ ಬಯಲಹುದು=ಸಮುದ್ರವು ಆರುವದು=ನೀರಿನ ಕೊರತೆ ಬಹಳ.

೯೫೬. ಒತ್ತಿದ=ಮೈಮೇಲೆ ಬಂದ ತೊತ್ತಳ ತುಳಿ=ಕಾಲಿನಿಂದ ಕಚಪಚನೆ ತುಳಿ.

೯೫೭. ಸುರೆ = ಮದ್ಯ. ಹರಣ= ಪ್ರಾಣ. ಹರದಾಳಿ=ಶಿವಭಕ್ತರಿಗೆ ಕಷ್ಟ!

೯೬೭. ಮಾನಮನ್ನೆಯರು = ದೊಡ್ಡ ಸೇನಾಪತಿಗಳು. ಖಾನ=ತುರುಕ.

೯೬೮. ಉನ್ಮತ್ತದಿ=ಸೊಕ್ಕಿನಿಂದ.

೯೭೧. ಇಪ್ಪತ್ತೊಂದನು = ಇಪ್ಪತ್ತೊಂದು ಗ್ರಾಮ, ಇಲ್ಲವೆ ಪ್ರಾಂತಗಳಿಂದ ಕೂಡಿದ ದೇಶವನ್ನು.

೯೭೭. ವಿಶ್ವನುತ = ಜಗತ್ತಿನಲ್ಲಿ ಹೊಗಳಲ್ಪಡುವ. ದುಸ್ಸಾಮರು=ದುಷ್ಟರಾದ ತುರುಕರು. ನರಪತಿ=ರಾಮರಾಜ? ಸ್ಮಶಾನ=ಮರಣ.

೯೭೮. ಸರಬರ = ಆವಸರದಿಂದ ಅರಿ=ತಿಕ್ಕು, ಕಡಿದು ಹಾಕು.

೯೮೦. ಕೋಳು = ಶೆರೆ ೯೮೧. ವರಕೊಂಮೆ=ಸುತ್ತಿಕೊಂಡು.

೯೮೩. ಓತು= ಜಾಗ್ರತೆಯಿಂದ.

೯೮೯. ಟೀ॥ ಸಿಡಿಲಿನಷ್ಟು ಭಯಂಕರವಾದ ಸೈನ್ಯದಿಂದ ತುಂಬಿದ ಕೋಟೆಯು ಹಾಳಾಗಿ ಸೈನ್ಯಾಧಿಪತಿಯು ಸತ್ತ ಮೇಲೆ ಕರ್ನಾಟಕವು ಹಾಳಾಗುವದು.

೯೯೫. ಗೂಡುಮೂರರ ಹಕ್ಕಿ= ಗೀಜುಗ ?

೯೯೮. ಕುಂಭಿ=ಆನೆ. ಕುಂಭಿನಿ= ಲೋಕ. ಇಂಬುಗೊಳ್ಳು=ನೆಲಸು.

೧೦೦೨. ಚಿಣ್ಣಿಯು=ಚಿಣಿಯುನ್ನು. ಕೋಲು=ಫಣಿಯಿಂದ.

೧೦೦೩. ಕಾರಣ=ದುಶ್ಚಿನ್ಹೆ, ಇಲ್ಲವೆ ಶುಭಚಿನ್ಹೆ. ಗುಡಿಗಟ್ಟು=ಚಂದ್ರನಿಗೆ ಕೆರೆಕಟ್ಟು ತೋರಣದಿ ತುಂಬ=ಧೂಮಕೇತು ಸಂಪೂರ್ಣವಾಗಿ ಕಾಣುವದು, ಇದು ಸಂತೋಷ. ಇಲ್ಲವೆ ದುಃಖಕ್ಕೆ ಕಾರಣ. ಅಂತೂ ಅಪೂರ್ವ ಕಾರ್ಯಗಳು ಸಂಭವಿಸುವವೆಂದು ತಾತ್ಪರ್ಯ.

೧೦೦೯. ಜಾಜಿಹೂ=ಜಾಜಿಕಾಯಿಹೂ ಇಲ್ಲವೆ ಜಾಜಿಮಲ್ಲಿಗೆ. ಮಾಜು= ಮನ್ನಿಸು.

೧೦೨೦. ಕಟ್ಟಾಣಿ=ಬಹು ಪ್ರೀತಿಯ, ಮನಮೆಚ್ಚಿದ. ದಟ್ಟಿ=ನಡುಕಟ್ಟು.

೧೦೨೧. ಪಳಿದೆ=ಮಜ್ಜಿಗೆಯ ಸಾರು. ಕಳ್ಳಹೆಣ್ಣು=ಹಾದರಗಿತ್ತಿ. ಬಯ್ಗಿನ=ಸಂಜೆಯು.

೧೦೨೨. ಬಿದ್ದೊಡವೆ=ಕಳೆದುಹೋದ ವಸ್ತು. ಕೈಗೆಬರು=ತಿರುಗಿಸಿಗು.

೧೦೨೩. ಅಳೆ=ಮಜ್ಜಿಗೆ (ಗೊಲ್ಲಗೆ ಆಳೆಯುಂಬನೆಂದು ಹೆಸರು). ಮೊಳೆ= ಕನ್ನಗತ್ತರಿ. ಸುಳಿದಾಟ=ತಡವ್ಯಾಡುತ್ತ ಹೋಗು.

೧೦೨೪. ಅಕ್ಕಿಯೋಗರ=ತುಪ್ಪದ ಅನ್ನ. ಮೆಕ್ಕಿಹಿಂಡಿ=ಕರಿಹಿಂಡಿಕಾರವೂ ಹುಳಿಯೂ ಇರುವದರಿಂದ ಇದು ರುಚಿಕರವಾಗಿದೆ.

೧೦೨೫. ನುಜ್ಜನ=ಜಳಕ. ಮಡಿ= ಒಗೆದ ವಸ್ತ್ರ. ಕಜ್ಜಾಯ = (ಬಿಸಿ) ರೊಟ್ಟಿ.

೧೦೨೭. ಕತ್ತೆಯು ಬಹಳ ಭಾರ ಹೊರುವದರಿಂದ—ತುಪ್ಪದ ಸಂಗಡ ಉಂಡರೆ ಪ್ರತಿ ಒಂದು ತುತ್ತು ರುಚಿಕರವಾಗಿರುವದರಿಂದ.

೧೦೨೮. ಒಸರುವ = ಶುದ್ಧವಾದ ನೀರು ಬರುವ ಒರತೆ. ತೊರೆ = ಹಳ್ಳ. ಹಸನಾದ=ದನಕರ ಹಾಗೂ ಮೈ ತೊಳೆಯುದ. (ಅಂಗಡಿ ಹತ್ತರದಲ್ಲಿ ಇರಬೇಕು) ವಸುಧಿ=ಭೂಮಿ.

೧೦೨೯. ಮಾಣದೆ=ಬಿಡದೆ, ಯಾವಾಗಲು. ವದನ=ಬಾಯಿ (ಅಶುದ್ಧ ಸಂಭಾಷಣೆ ಮಾಡಬಾರದೆಂತಲೂ ಅರ್ಥವಾಗಬಹುದು). ಕೂರ್ಪವರ=ಪ್ರೀಯುರ.

೧೦೩೦. ಹರಳು ಉಂಗುರ=ರತ್ನ ಖಚಿತವಾದ ಚಿನ್ನದ ಉಂಗುರ. ಮರಳು ನೆಲ=ಸೌಳು ಭೂಮಿ. ಕುರುಳು=ಉಂಗುರ ಕೂದಲು.

೧೦೩೧. ಹರಕು= ಮರುದಿವಸದ. ತಂಗಳಾದ. ಮುರುಕು ಹಪ್ಪಳ=ಕಟುಕಾದ ರೊಟ್ಟಿಯು ತುಣುಕು. ಇವುಗಳು ಸಣ್ಣಾಗಿ ತಿನ್ನಲ್ಪಡುವದರಿಂದ ಲಾಲಾರಸದೊಡನೆ ಕೂಡಿ ಚನ್ನಾಗಿ ಜೀರ್ಣವಾಗುವದು. ಇಲ್ಲಿ ಪಚನಶಾಸ್ತ್ರವು ಲಕ್ಷಿಸಲ್ಪಟ್ಟಿದೆ.

೧೦೩೨. ಕರಿಕೆ = ಸಣ್ಣ ಹುಲ್ಲು. ಮುರುಕು= ಸೋಗು. ಗೊರಸು=ಕೊಳಗ. ಅರಿಕೆ=ತಿಳುವಳಿಕೆ.

೧೦೩೪. ಮಡ್ಡಿ=ಮರಡಿ, ಹಸರು ಹುಲ್ಲಿರುವ ದಿನ್ನೆ. ಗಂಜಿ=ಇದು ವಸ್ತ್ರ ಬಿರುಸಾಗುವದಕ್ಕೆ ನೇಯಿಕಾರನಿಗೆ ಬೇಕು.

೧೦೩೬. ರಾಜಾನ್ನ=ಸಣ್ಣಕ್ಕಿ ಅನ್ನ

೧೦೩೯. ಕೆಂಚನ್ನ=ಕೆಂಪು ವರ್ಣದ. ಕಂಚಿಯು ಫಲ=ಕಂಚಿ, ನಿಂಬೆಯುಪ್ಪಿನಕಾಯಿಗೆ ಬರುತ್ತದೆ.

೧೦೪೧. ಗಾಳಿ=ಅನುಕೂಲಗಾಳಿ. ಒಡಹುಟ್ಟಿದವರು=ಅಣ್ಣ ತಮ್ಮಂದಿರು.

೧೦೪೩. ಬೊಗಸೆ=ಕೆಲಸ.

೧೦೪೬. ನೆನೆದರೆ=ಬಹಳ ಅಳ್ಳಕಾದರೆ, ಕುಣಿಕೆ=ಮೂಲೆಯು ಇಲ್ಲವೆ ಸರದ ಗಂಟು. ಕಣ್ಣು ಕಟ್ಟು=ಚಮತ್ಕಾರ. ಅಲ್ಲಿರಿದರಲಿ=ಬಲ್ಲವರಲ್ಲಿ.

೧೦೪೭. (ಕಾಲಿಗೆ ನಡುವದರಿಂದ ಹುಚ್ಚನು ಅಸ್ಪತ್ರಿಯಲ್ಲಿ ಇಲ್ಲವೆ ಬೇರೆ ಕಡೆಯಲ್ಲಿರಬೇಕು) ಆಗದಲಿ=ಸೇರದಿರುವವರಿರುವಲ್ಲಿ. ಸರಸ=ಸ್ನೇಹ.

೧೦೪೮. ತಪ್ಪನು ನುಡಿವ=ಸುಳ್ಳಾಡುವ ಒಪ್ಪು=ಮಾತುಕೊಡು.

೧೦೪೯. (ಬಹಳ ಗದ್ದಲ ಹಾಗೂ ಧೂಳು ಆಗುವದರಿಂದ) ಬಾಳುವರಿಗೆ ಲೋಕದಲ್ಲಿ ಇನ್ನೂ ಕೆಲವು ವರ್ಷ ಬದುಕಬೇಕೆಂದು ಅಪೇಕ್ಷೆ ಇದ್ದವರಿಗೆ. ಅಂತಕ=ಯಮ, ಮರಣ.

೧೦೫೦. ಸಂತೆಯಲ್ಲಿ ಸಾಲಕೊಟ್ಟರೆ ಸಾಲಪತ್ರ ಮಾಡಿಕೊಳ್ಳಲು ಸಾಕ್ಷಿ, ಇಡಲಿಕ್ಕೆ ಆಗುವದಿಲ್ಲ.) ಕೊನ್ತ=ಈಟಿ. ಬೊನ್ತೆ=ಹರಕು ರಗಟೆ.

೧೦೫೧. ಮೋಟು+ಎತ್ತು =ಅಂಗಹೀನವಾದ+ಎತ್ತು.(ಪರಸ್ತ್ರೀಯ ನೋಟ ಬೇಡ). ತಾಟಗಿತ್ತಿ = ಏನಾದರೂ ಮಾಡಿ ಜಗಳ ಹಚ್ಚುವವಳು.

೧೦೫೨. ಇಟ್ಟಿಯ ಹಣ್ಣು ಇದರ ವಿಷವು ಭಯಂಕರವಾದದ್ದು. (Strychnine). ಕುಸಿ=ಫಕ್ಕನೆ ಬೀಳು

೧೦೫೩. ಹಂದೆ=ಹೇಡಿ; ಪುಕ್ಕ. ಉರಿ=ಹೊಟ್ಟೆಕಿಚ್ಚೆಂತಲೂ ಅರ್ಥವಾಡಬಹುದು.

೧೦೫೪. ನೆರಕಿ=ತಟ್ಟಿ. ಕರಕರೆ ಕೂಳು=ಚಿಂತೆಯು ಅನ್ನ.

೧೦೫೫. (ಹಾವಿನ ಭಯದ ದೆಸೆಯಿಂದ). ಬೆತ್ತ=ಬಾರುಕೋಲು ಹೊಡತ ಬತ್ತೆಗೊಂಬಳು=ಸೂಳೆ.

೧೦೫೬. ಮೆತ್ತು=ರಿಪೇರಿಮಾಡು.

೧೦೫೭. ಪೀಠ = ದೊಡ್ಡಸ್ಥಾನ; ಅಧಿಕಾರ. ಕೀಟ=ತಗಣಿ ಚಿಕ್ಕಾಡು ಇತ್ಯಾದಿ ಕ್ರಿಮಿಗಳು ತೀಟೆ = ತಿಂಡಿ, ತುರಿ.

೧೦೫೮. ತಿಣ್ಣ = ಸ್ಥೂಲ. ತಾ॥ ನೀತಿಭೇದವು.

೧೦೫೯. ತಾ॥ ಹಣಕೊಟ್ಟು ಪಾಪವನ್ನು ಕಳೆಯಲಾಗದು. ಯಾಕಂದರೆ ಹೊನ್ನಿನಿಂದ ಪುಣ್ಯವು ಬಂದೀತಲ್ಲದೆ ಮಾಡಿದ ಪಾಪವು ಎಂದಿಗೂ ಕಡಿಮೆಯಾಗಲಾಗದು.

೧೦೬೦. ಮರವಿನಲ್ಲಿ ಹಿರಿದು ಕಿರಿದುಗಳಿರುವದಲ್ಲದೆ ಅರಿವಿನಲ್ಲಿ ಈ ತರದ ಭೇದವಿಲ್ಲ. † ಯಾವ ಪ್ರಾಯದಲ್ಲಿ ಮಾಡಿದರೂ ಪಾಪವು ಪಾಪವೇ.

೧೦೬೪. ಕಷ್ಟವು, ಹಿಂದೆ ಮಾಡಿದ ಪಾಪವನು, ನೆನಪಿಗೆ ತರುವದು.

೧೦೬೫. ಹಣ್ಣಿದ=ಒಡ್ಡಿದ, ಹೂಡಿದ. ಫಲ=ಸಫಲ.

೧೦೬೭. ಹರಿಶ್ಚಂದ್ರನಿಗೆ ಸತ್ಯದ ದೆಸೆಯಿಂದ ಅನೇಕ ಕಷ್ಟಗಳು ಬಂದರೂ ರೋಹಿಲನೆಂಬ ಅವನ ಒಬ್ಬನೇ ಮಗನು ಸತ್ತರೂ ಸತ್ಯದಲ್ಲಿ ಹರಿಶ್ಚಂದ್ರನೆಂದು ಈ ವರೆಗೆ ಹೂಗಳಲ್ಪಡುತ್ತಿರುವನು!

೧೦೬೯. ಸತ್ಯರು—ಇಲ್ಲಿ ವಿಶೇಷಣವು ನಾಮಪದದಂತೆ ಪ್ರಯೋಗವಾಗಿದೆ. ಮಸ್ತಕದಿ ಎರಗು=ಸಾಷ್ಟಾಂಗ ನಮಸ್ಕಾರ ಹಾಕು.

೧೦೭೦. ಕುಂದ=ಕಷ್ಟ ಪಾಪ. ನೊಂದು...ದೈವ=ಸರಿ ನೋಡಿ ಪದ್ಯ ೧೦೮೫.

೧೦೭೧ ಸುಳ್ಳನಿಗಿಂತಲೂ (ಕಟಗನು) ಉತ್ತಮ. ಅಂದರೆ ಸುಳ್ಳುಹೇಳುವದೇ ಕೊಲೆಪಾತಕನೆಂದರ್ಥ.

೧೦೭೩. ಆಡಿ=ಮಾತು ಕೊಟ್ಟು. ಕೂಡಿ=ಲಗ್ನವಾಗಿ. ತಪ್ಪು=ಬಿಡುಗಡೆ ಮಾಡಿಕೊಳ್ಳು.

೧೦೭೫. ಪುಂಜ=ಸಮೂಹ. ನಿಜದಿ=ಯಥಾರ್ಥನ್ನು.

---

† ವಚನಶಾಸ್ತ್ರಸಾರ ಪುಟ ೧೧೩.

೧೦೭೭. ದೆಸೆಯುತ್ತ = ಆ ಕಡೆಗೆ. ಮುಂತಾಗಿ=ಮುಖಮಾಡಿ. ನೊಸಲೆತ್ತಿ=ದೊಡ್ಡ ಭಕ್ತನಂತೆ ಹಣೆಯನ್ನು ಮೇಲಕ್ಕೆ ಮಾಡಿ (ಕೈ ಮುಗಿದರೆ) ಇಷ್ಟುದ್ದ=ಅಳತೆ ಇಲ್ಲದೆ; ಭಯಂಕರವಾಗಿ.

೧೦೭೮. ಶಿಷ್ಟ=ಉತ್ತಮ. ತೊದಲು ನುಡಿ=ಸುಳ್ಳು. ದಟ್ಟಡಿ = ಮೆಲ್ಲಗೆ ನಡೆಯುವದು. (ಅವನು ಯಾಗಲು ಅವಸರದಲ್ಲಿರಬೇಕು).

೧೦೭೯. ಬುದ್ಧಿ=ಜಾಗ್ರತ್ತಿನಲ್ಲಿರುವಂತೆ ಇಂದ್ರಿಯವ್ಯಾಪಾರ. ಭದ್ರೆ=ವಿಧಿಲಕ್ಷ್ಮಿ=ಈಕೆಯು ತಾಯಿಯಿಂದ ಹುಟ್ಟದೆ. ಶುದ್ಧ ದ್ವಿತೀಯ ಸಪ್ತಮಿ ದ್ವಾದಶಿಯಲ್ಲಿ ಅಂದರೆ ವಿಶೇಷ ಮುಹೂರ್ತದಲ್ಲಿ ಹುಟ್ಟಿರುವದರಿಂದ ಭದ್ರೆ ಎಂದು ಹೆಸರು. ಇಲ್ಲವೆ ಶಿವನ ವಾಹನಗಳಲ್ಲಿ ಒಂದು ಆವು ಶಿವನ ತಲೆಕೂದಲಿನಿಂದ ಹುಟ್ಟಿದ ವೀರಭದ್ರನೆಂದೂ ಕೆಲವರು ಹೇಳುವರು. ಹೇಗಾದರೂ ಪ್ರಕೃತಿಗೆ ವಿರೋಧವಾಗಿ ಮತ್ತೊಂದರಿಂದ ಹುಟ್ಟಿರುವದಕ್ಕೆ ಇದು ಸೌಂಜ್ಞೆ. ಬದಕು—ಕೆಲಸ; ದೀರ್ಘಾಯುಷ್ಯ (ಒಮ್ಮೆಲ್ಲ ಒಮ್ಮೆ ಸಿಕ್ಕರೆ ಸಾಯುವನು) ಮದ್ದು=ಔಷಧ.

೧೦೮೧. ಕೆಸರು ಮೃದುವಾದ ವಸ್ತುವೆಂದು ಕಾಲಿಡಲು ಕೊಳಕು ಮುಳು. ನಟ್ಟಂತೆ ಇವರ ಸ್ನೇಹವು ಘಾತವಾಗಿರುದು.

೧೦೮೨. ಕೈಗಳ್ಳ = ಚಿಲ್ಲರಕಳ್ಳ. ಹಳ್ಳಕಾಣು=ನಾಶವಾಗು.

೧೦೮೩. ನಾಯಿಗಳು+ಆರು=ಅರಿಷಡ್ವರ್ಗಗಳು.

೧೦೮೫. ಕೊಂದು ತಿನ್ನುವ ಕಂದ=ಮಾಂಸಾಹಾರಿ.

೧೦೮೬. ನರಕದ ನಡುಮನೆ=ಭಯಂಕರ ಶಿಕ್ಷೆಗೆ ಪಾತ್ರವಾದದ್ದು. ರೌರವ=ನರಕವಿಶೇಷ.

೧೦೮೭. ಬಲಿಚಕ್ರವರ್ತಿಯು ವಾಮನ ಅವತಾರದಲ್ಲಿ (ಸರಿನೋಡಿ ಪದ್ಯ ೬೬೨ )ಯೂ ದುರ್ಯೋಧನನು ಭಾರತಯುದ್ಧದಲ್ಲಿಯೂ ಛಲದಿಂದ ನಾಶವಾದರು.

೧೦೮೮. ಸ್ಮರ=ಕಾಮ. ಟೀ॥ ಶಿವನು ಕಾಮನನ್ನು ಸುಟ್ಟನೆಂಬ ಸಂಗತಿಯು ಪುರಾಣಸಿದ್ಧವಾಗಿದ್ದರೂ ಅವನು ಸಾಯದೆ ಈಗಲೂ ಸ್ತ್ರೀಪುರುಷರಲ್ಲಿ ಯಥಾಪ್ರಕಾರವಾಗಿ ಜೀವಿಸುತ್ತಿರುವೆನೆಂದು ತಾತ್ಪರ್ಯ.

೧೦೮೯. ತಾ॥ ಪರಸ್ತ್ರೀಯರಲ್ಲಿ ಸಹವಾಸವಿರಬಹುದು; ಆದರೆ ಸಮಾಗಮವಿರಲಾರದು.

೧೦೯೦. ತಾ॥ ಲೋಕಸಂಗ್ರಹಾರ್ಥವಾಗಿ ಜೀವಿಸತಕ್ಕ ಮನುಷ್ಯನು

ಸಾಧ್ಯವಾದರೆ ಬ್ರಹ್ಮಚಾರಿಯಾಗಿರುವದು ಉತ್ತಮ. ಇದು ಆಗದಿದ್ದರೆ ಲಗ್ನವಾಗುವದು ಮಧ್ಯಮ. ವ್ಯಭಿಚಾರಮಾಡುವದು ಕನಿಷ್ಟ.

೧೯೨. ಸಂದತೋಳ್=ಪರಾಕ್ರಮದ ಕೈಗಳು. ಬಂಧುಗಳು = ರಾವಣನ ತಂಗಿಯಾದ ಶೂರ್ಪಣಖಿ ಮೊದಲಾದ ಬಂಧುಗಳು.

೧೯೩. ಗಡ=ನಿಶ್ಚಯವಾಗಿ. ಸೂ॥ ರಾವಣನು ಸೀತೆಯು ದೆಸೆಯಿಂದ ರಾಮನಿಂದ ಪಾಂಡವರ ಪತ್ನಿಯಾದ ದ್ರೌಪದಿಯು ದೆಸೆಯಿಂದ ಕೀಚಕನು ಭೀಮನಿಂದ ಸಾಯಬೇಕಾಯಿತು !

೧೯೪. ಅಗಳು=ಕಂದಕ. ಮುಗಿಲುಮುಟ್ಟು=ಬಹು ಎತ್ತರವಾದ. ನೆಗೆ=ಅಪಹರಿಸು ಹಗಲೆದ್ದು=ಹಗಲಿನಲ್ಲಿ ಕದ್ದೊಯ್ದು.

೧೯೫. ನಂಟು=ಸ್ನೇಹ. ಸರಿನೋಡಿ ಪದ್ಯ. ೧೯೩.

೧೯೬. ಸುರಪ=ಇಂದ್ರ. ಹಂಸ=ಬ್ರಹ್ಮ ಶಶಿ=ಚಂದ್ರ ಕರಕರದ=ಭೀಕರನಾದ. ಟೀ॥ಇಂದ್ರನು ಗೌತಮ ಋಷಿಯ ಹೆಂಡತಿಯಾದ ಅಹಲ್ಯಾದೇವಿಯನ್ನು ಮೋಹಿಸಿ ಅವನ ಶಾಪದಿಂದ ಮೈಯ್ಯಲ್ಲ ಯೋನಿಯುಗುರುತುಗಳಿಂದ ತುಂಬಿದವನಾದನು. ಬ್ರಹ್ಮನು ಸ್ವಂತ ಮಗಳಾದ ಸರಸ್ವತಿಯನ್ನು ಮೋಹಿಸಿ ಕಷ್ಟಕ್ಕೊಳಗಾದನು. ಚಂದ್ರನು ಗುರುವಿನ ಹೆಂಡತಿಯನ್ನು ಕೂಡಿ ಬೃಹಸ್ಪತಿಯ ಶಾಪದಿಂದ ಕ್ಷಯರೋಗಿಯಾದನು. ಭೀಕರನಾದ ರಾವಣನು ಸೀತೆಯ ದೆಸೆಯಿಂದಲೂ ಬಲಿಷ್ಟನಾದ ಕೀಚಕನು ದ್ರೌಪದಿಯ ದೆಸೆಯಿಂದಲೂ ಸತ್ತರು. ಹೀಗಾಗಿ ಪರಸ್ತ್ರೀಯನ್ನು ಮುಟ್ಟದರೆ ಖಂಡಿತವಾಗಿ ಹಾನಿತಪ್ಪುವದೆಂದು ತಾತ್ಪರ್ಯ.

೧೯೭. ನಾರಿ=ಸೀತೆ ಜಾರೆ=ದ್ರೌಪದಿ ?

೧೯೮. ಪ್ರಸ್ತ=ಪ್ರಸ್ತಾಪ. ಗೊಡವೆ. ಹಸ್ತದಲಿ=ಶರೀರಬಲದಲ್ಲಿ ಕುಸ್ತಿಯಲಿ ಕಾಮಬಲ=ಸ್ತ್ರೀಯುದ್ಧದಲ್ಲಿ ಗೆಲ್ಲತಕ್ಕವನು ಕಾಮನೇ ( ಇವನನ್ನು ಜೈಸಿದವರಿಲ್ಲ ) ( ಭೀಮನು ಕೀಚಕನ ಎಲುವನ್ನು ಮುರಿದನು. )

೧೯೯. ವೆಗ್ಗಳಸರಸ=ಅತಿಸ್ನೇಹ. ಕಿಗ್ಗಳ = ಹರಿದು ಜೋಳಿಗೆಯಾದ (ಅರಸಾಳುಬಂದರೆ ತಗಾದೆ ಹೆಚ್ಚು )

೧೧೦೦. ಮೊಬ್ಬು = ಯೌವನದ ಮದದಿಂದ ಬಂದ ಮೈಮರವು ಉಬ್ಬಿ=ಸೊಕ್ಕಿನಿಂದ ಬಾಳಬರು=ಇರುವದಕ್ಕೆ ಬರು. ತಬ್ಬು=ಮೋಹಿಸು ಅಪ್ಪಿಕೊಳ್ಳು.

೧೧೦೧. ಹರದ=ವ್ಯಾಪಾರಿ( ಬಾಕಿ ಬೇಗನೇ ಕೊಡದಿದ್ದರೆ ) (ಮಾನತೆಗೆಯುವವನು ).

೧೧೦೨. ಒಡಲ ಹಿಡಿದು+ಆಡು= ಲೋಭತ್ವವಮಾಡು; ದೇಹಭ್ರಾಂತಿಯುಳ್ಳವನಾಗು. ನುಡಿಯ ಹೋಗಾಡು= ಮಾತುತಪ್ಪಿಸು. ತ್ರಿಕರಣಶುದ್ಧನಾಗಿರಬೇಕೆಂದು. ತಾತ್ಪರ್ಯ.

೧೧೦೪. ಕೊಟ್ಟ=ದಾನಧರ್ಮ ಮಾಡಿ ಬಿಟ್ಟ=ಕ್ಷಮಿಸಿ ಹಿಡಿ=ತಪ್ಪು ಹಿಡಿ. ಹಂಗಿಸು.

೧೧೦೫. ಕ್ಷೀರ=ಹಾಲು. ಸಾರ= ರಸ. ಅರ್ಕ.

೧೧೦೬. ಅಮೃತ=ಹಾಲು ಹೋಗು=ವ್ಯಭಿಚಾರಮಾಡು. ಕಾದುಏಳೆ= ಬರೆಕೊಡು.

೧೧೦೭. ಪುರುಷ=ಗಂಡ! ಕೊಂಬ= ತೆಗೆದು ಕೊಳ್ಳುವ ಸುರರು=ದೇವತೆಗಳು.

೧೧೦೯. ಕುಣಿತ=ಆತುರ.

೧೧೧೧. ಮಾಳಿಗೆಯಮನೆ=ಅಂತಸ್ತು,

ಉಪ್ಪರಿಗೆ= (ಶುದ್ಧ ಹವೆಯದೆಸೆಯಿಂದ.) ಗೂಳಿರುವ ಪಶು=ಜಾತಿಯಹೋರಿಗಳು ಹುಟ್ಟುವದಕ್ಕೆ! ಮೆಯಿಸಿದ ಗೂಳಿಬೇಕಾಗುವದು.

೧೧೧೨. ಹಡಗು=ಕೊಡುತ್ತದೆ.

೧೧೧೪. ಕರ+ತಲ+ಆಮಲಕ= ಕೈಯ್ಯಲ್ಲಿ+ನೆಲ್ಲಿಕಾಯಿಯಿದ್ದಂತೆ ಅಂದರೆ ಪ್ರತ್ಯಕ್ಷ.

೧೧೧೫. ತಾ|| ಮಾನಕೊಟ್ಟರೆ, ಮಾನದೊರೆಯುವದು. ಅವರೆ=ಧಾನ್ಯದ ಹೆಸರು. ಇದು ಅವರೆತಿಂದು ಹೂಸಿದಂತೆ ಅಪಮಾನಕಾರಕವಾಗಿರುವದು

೧೧೧೬. ಈಶತ್ವ=ಜಿತೇಂದ್ರಿಯತ್ವ ಈಶ=ಅರಸ, ದೊಡ್ಡವ ದೇವರು. ತಾ|| ಲೋಕದಲ್ಲಿ ಸ್ಥಾನದಿಂದ ದೊಡ್ಡವನು ದೊಡ್ಡವನಲ್ಲ ಮಾನವಂತನೇ ದೊಡ್ಡವನು.

೧೧೧೭. ಹಂಗು=೧ ನೀರು ಹಣಿಸು (೨) ಸೇವೆಮಾಡು ಹಿಂಗಿದೆ=ಬಿಡದೆ

೧೧೧೮. ರಾಗ=ಕೋಪ. ವಿಷಯ ಪ್ರೀತಿ. ಭೋಗ=ಭೋಜನಾದಿ ಅತಿಸುಖಗಳು. (ಪಥ್ಯಮಾಡಬೇಕಾಗಿರುವದರಿಂದ)

೧೧೧೯. ಗಡಣ=ಸಮೂಹ (ಅತಿ ಪ್ರೀತಿ) ತಾ|| ಲೋಭಿ ಯಾವದಕ್ಕೂ ಹೇಸನು.

೧೧೨೧. ನಾಭಿ=ಹೊಕ್ಕಳು. ಊರು=ತೊಡೆ ತಾ|| ಕೌರವನು ಲೋಭತ್ವಮಾಡಿ ಪಾಂಡವರಿಗೆ ರಾಜ್ಯದಲ್ಲಿ ಬರತಕ್ಕ ಪಾಲನ್ನು ಕೊಡದೆ ಹೋದ್ದರಿಂದ ಭೀಮನು ದು ರ್ಯೋಧ ನ ನ

ಎರಡೂ ತೊಡೆಗಳನ್ನು ಶೀಳಿಬಿಟ್ಟನು. ಇದೇ ಲೋಭತ್ವದ ಫಲ.

೧೧೨೩. ಉದ್ದು+ಉರುಟು ಮಾತಾಡುವ ಗರ್ವದಿಂದ ಹೆಚ್ಚು ಕಡಿಮೆ ಮಾತಾಡು ಹೋಗಾಡಿ = ಕಳೆದ. ಕೊಂಡು.

೧೧೨೪. ಗರ್ವಿಯೂ = ಕುರುಡನೂ ಒಂದೇ.

೧೧೨೬. ನೀತದೇಶ = ಸೃಷ್ಟಿಸಲ್ಪಟ್ಟ ಭೂಮಿ ಅಂದರೆ ದೇಹ.

ನೀತಿಯಮನೆ=ಸದಸದ್ವಿವೇಕ ಶಕ್ತಿ. ಮನಸಾಕ್ಷಿ. ಅದು=ಈ ಶರೀರವು.

ತಾ॥ ಪಾಪಿಷ್ಟರಿಗೆ ಈ ಶರೀರವು ಶೆರೆಮನೆಯಾಗಿಯೂ ಪರಿಶುದ್ಧರಿಗೆ ಅರಮನೆಯಂತೆಯೂ ಇರುವದು.

೧೧೨೭. ಧನ=ಹಣ, ಕನಕ=ಭಂಗಾರ, ದಿನಕರ=ದಿವಸವನ್ನು ಬೆಳಗುವವ=ಸೂರ್ಯ.

೧೧೩೨. ಕ್ಷೇಮವೂ ಹಣವೂ ಇರುವವರೆಗೆ ಹೆಂಡರುಮಕ್ಕಳ ಪ್ರೀತಿ.

೧೧೩೩. ಕನಿ=ಕೋಪಿಸು. ಮನಸಿಜ+ಅರಿ=ಮನಸಿನಲ್ಲಿಹುಟ್ಟಿದ=ಕಾಮುನಿಗೆ+ವೈರಿ ಅಂದರೆ (ಅವನನ್ನು ಕೊಂದವ)=ಶಿವ. ಘನಕೆಘನ=ಉತ್ತರೋತ್ತರವಾಗಿ.

೧೧೩೪. ಬಾಳಿಕೆ=ದೀರ್ಘಾಯುಷ್ಯ. ಮನಘನ=ಮನದಣಿ, ಬೇಕಾದಷ್ಟು.

೧೧೩೫. ಆರಯ್ಯು=ಜಾಗ್ರತೆಯಿಂದ, ವಿವೇಕದಿಂದ.

೧೧೩೭. ಇಚ್ಛೆ=ಸಂತೋಷಪಡಿಸುವದಕ್ಕೆ ಅವರ ಇಚ್ಛೆಯಂತೆ. ಮುಂಡಾಡು=ಮುದ್ದಾಡು ಪ್ರೀತಿಸು.

೧೧೩೮. ಕೆಂಡವಾಗು=ಸಿಟ್ಟಿಗೇಳು ಜಾರು=ತಪ್ಪು

೧೧೪೦. ದಿಂಡೆಯ=ದುಷ್ಟ, ನೀಚ, ಖಂಡಿಸು=ಶಿಕ್ಷಿಸು.

೧೧೪೧. ಮೆಚ್ಚಿಸುವಡೆ+ಒಲಿದವರ ಬಿಚ್ಚು=ಭಿಕ್ಷುಕ.

೧೧೪೨. ಕುಂತಿದೇವಿಯು ಮಗನಾದ ಕರ್ಣನನ್ನು ಅರ್ಜುನನಿಂದ ಕೊಲ್ಲಿಸಿದ ಮೇಲೆ ಲೋಕದಲ್ಲಿ ಯಾರನ್ನು ನಂಬಬೇಕು.

೧೧೪೩. ದಾನದಲ್ಲಿ ಬಲಿಯು ಗರ್ವಪಟ್ಟರೆ ವಿಷ್ಣುವು ಅವನನ್ನು ಯಾಕೆ ಕೊಲ್ಲಬೇಕು. ಅದರಿಂದ ದೇವರನ್ನೂ ನಂಬಲಾಗದೆಂದು ತಾತ್ಪರ್ಯ ಸ. ನೋ. ೬೬೨.

೧೧೪೪. ತನ್ನಬೆನ್ನು ತನಗೆ ಕಾಣದು. ಕುನ್ನಿ=ನೀಚ.

೧೧೪೫. ಹೊಟ್ಟೆಗೆ+ಉಣ (ಲಿಕ್ಕೆ) ಕೊಟ್ಟವಂಗೆ ಬಹು......ಹುಟ್ಟು= ಪುನರ್ಜನ್ಮ.

೧೧೪೭ ಕೀಳ=ಗುಡಿಸಲು, ಬಡತನ ಕೀಳ=ಹೊಲೆಯ.

೧೧೪೯. ಉತ್ತರೆ=ಉತ್ತರೆ (ಅಸಲಿ) ಮಳೆ. ಇದರಮೇಲೆ ಬೆಳೆಯು ಅವಲಂಬಿಸಿರುವದರಿಂದ ಕರ್ನಾಟಕದಲ್ಲಿ ಇದು ವಿಶೇಷ ಮಳೆಯೆನಿಸಿರುವದು ಬರೆ=ಆಗದೆಹೋಗು.

೧೧೫೦. ತತ್ವಮಸಿ=ವೇದಾಂತಿ. ಜ್ಞಾನಿ ತಾ॥ಆಗಬಾರದ್ದು ಆದರೆ ಕಷ್ಟ.

೧೧೫೧. ಒತ್ತಿಹರಿ=ಧಡಮಾರಿಬರು. ಸಾಕು=ಮೊರೆಹೊಗು.

೧೧೫೨. ಉಳ್ಳವ = ಸಾವುಕಾರ. ಹಳ್ಳು=ಊಟದಲ್ಲಿ ಹರಳು ಕಡಿದಂತೆ ನೋವಾಗುವದು) ಬಡವನು ಯಥಾರ್ಥಮಾಡಿದರೂ ಕೇಳಲಿಕ್ಕೆ ಮನಸ್ಸಾಗುವದಿಲ್ಲ.

೧೧೫೩. ಅಹುದು=ಸತ್ಯ ಬಲ್ಲಂತೆ=ಮನಸ್ಸಿಗೆ ಬಂದಂತೆ.

೧೧೫೪. ಬಾಯಿಂದ ಜೊಲ್ಲು ಬಿದ್ದಂತೆ ಅಸಹ್ಯಿಸುವರು.

೧೧೫೬. ಜಳ್ಳು = ಹುರುಳಿಲ್ಲದ ಮಾತು. ಜೊಲ್ಲೊಡನೆ = ಮಾತಾಡಲಿಕ್ಕೆ ಬಾರದಂತೆ ತೊದಲಿಸುತ್ತ.

೧೧೫೭. ಮಡಿ=ರೇಶಿಮೆಯವಸ್ತ್ರ. ಅರಿವೆ=ಹರಕ ವಸ್ತ್ರ.

೧೧೬೧. ರತಿದೇವಿ = ಹರೆಯದ ಹೆಂಗಸು, ಶ್ರುತಿ=ಶಬ್ದ. ವಿಷಯ.

೧೧೬೩. ಗರುವರುಗಳು= ಶ್ರೇಷ್ಠರು. ನಲ್ಲಳು=ಹೆಂಣು.

೧೧೬೬. ಲೋಕಕ್ಕೆ+ಅವಶ್ಯ. ಏಕಾಕಿ=ಒಂದೇ ಮಾತ್ರ. ಹೊಂಬೇರು=ಹೊನ್+ಬೇರು=ಹಣ.ನಾಕ=ಸ್ವರ್ಗ. ಬೇರು=ಮೂಲ. ಪುಣ್ಯ=ಧರ್ಮ ಅಲ್ಲದೊಡೆ=ಇಲ್ಲದೆ ಹೋದರೆ.

೧೧೬೭. ಉಣ್ಣದೆ ಉರಿ= ವ್ಯರ್ಥವಾಗಿ ಸೊಕ್ಕುಮಾಡು.

೧೧೬೮. ಮಣ್ಣು=ಭೂಮಿ, ರಾಜ್ಯ.

೧೧೬೯. ತಾ॥ ಕಣ್ಣು ಪವಿತ್ರವಾದದವುಗಳನ್ನು ನೋಡುವದರಿಂದ ಪುಣ್ಯವೂ ಕೆಟ್ಟದ್ದನ್ನು ನೋಡುವದರಿಂದ ಪಾಪವೂ ಜ್ಞಾನಚಕ್ಷುವಿನಿಂದ ಇಹದಲ್ಲಿಯೇ ಮೋಕ್ಷವೂ ಪ್ರಾಪ್ತವಾಗುವದರಿಂದ ಇದು ಶ್ರೇಷ್ಠವೆಂದು ಹೇಳಲ್ಪಟ್ಟಿತು.

೧೧೭೦. ಹಣ್ಣದೆ+ಇಹುದು=ಮಾಡದಿರುವದು ಕಣ್ಣಿನ ಆಶೆಯನ್ನು ಕೊಂದವರು ಕ್ವಚಿತ.

೧೧೭೧. ತಾ॥ ಇವು ಮೂರು ನಿನ್ನ ಸ್ವತಂತ್ರದಲ್ಲಿಲ್ಲದ್ದರಿಂದ ನೀನು ಕೆಟ್ಟಕಾಲಕ್ಕೆ ಎರಡನೆಯವರಿಗೆ ದೋಷ ಕೊಡದೆ ನನ್ನಿಂದ ನಿನೇ ಕೇಡಿಗೆ ಕಾರಣನೆಂದ ತಿಳಿಯತಕ್ಕದ್ದು.

೧೧೭೨. ತಾ॥ ಮಾನಭಂಗಪಡಿಸಿ ಚಿಂತೆಯಿಂದ ಕೊಲ್ಲುವದಕಿಂತ ಒಮ್ಮೆಲೇ ತುಳಿದುಕೊಲ್ಲುವದು ಉತ್ತಮ. ಚಿಂತೆಯಿಂದ ಸಾಯುವದು ನೀರು

ಕುದ್ದು ಕುದ್ದು ಆರಿಹೋದಂತಿರುವದು.

೧೧೭೩. ಟೀ॥ ಹಲ್ಲುಗಳ ನಡುವಿನಲ್ಲಿರುವ ಗವಿಯಲ್ಲಿ ಸಾಧುವಿನಂತೆ ಕೂತಿದ್ದರೂ ದುಷ್ಟರ ನಾಲಿಗೆಯು ಉತ್ತಮರನ್ನು ಪರಿಪರಿಯಾಗಿ ಮಾನಭಂಗ ಮಾಡುವದು.

೧೧೭೪. ಸುತ್ತಲಾಡುತಿಹ=ಸಿಕ್ಕ ಹಾಗೆ ಮಾಡುವ.

೧೧೭೫. ಹೊಂದಿ=ಪ್ರೀತಿಯಿಂದ. ಹಿಂದೆಸತ್ತವರ=ಹಿರಿಯರ ಅಜ್ಜ ಅಮ್ಮ ಮೊದಲಾದವರ.

೧೧೭೬. ಕ್ರೀಡೆ=ಆಟ ತರುಣತ್ವ= ತರುಣೀಸಕ್ತ.

೧೧೮೨. ಇದ್ದುದು=ಆಸ್ತಿ. ನೀಡಿ= ಹಾಳುಮಾಡಿ. ಬಿದ್ದುಬರು=ಘಟಿಂಗ ತನಮಾಡು. ಸದ್ದು=ಕೀರ್ತಿ ಎದ್ದು ಹೋಗು=ನಿಸ್ಸಂತಾನವಾಗು.

೧೧೮೪. ಭಂಗಿ = ಗಾಂಜಾ. ಗುಂಗು=ಅಮಲು. ಆಡುವ =ಲಾಗ ಹೊಡೆಯುವ

೧೧೮೫. ಟೀ॥ ಎಲೆಯನ್ನುತಿಂದು ತಂಬಾಕಸೇದುವನಬಾಯಿ ಈಚಲಹಾಕುವ ತೊಗಲಿನಕಪಾಲಿಯಂತೆ ದುರ್ವಾಸನೆಯಾಗಿರುವದು.

೧೧೮೬. ಗಾಳಿದೂಳಿಯದಿನ=ಬೆಸಿಗೆಯಕಾಲ. ಮಾಳಿಗೆ=ಮೇಲಂತಸ್ತು.

೧೧೮೮. ಕಡುಕ=ಕಿವಿಯಆಭರಣ. ಒಡಕು = ಜಗಳ.

೧೧೮೯. ಕೂಚು = ಯುದ್ಧಕಲೆ. ಮಾರ್ಚಿಂಗವಿವೇಕ. ಪಾಳ್ಯ=ಸೈನ್ಯ.

೧೧೯೦. ಈರೈದು ತಲೆಯ=ರಾವಣ.

೧೧೯೧. ಅಳವು = ದೀರ್ಘಾಯುಷ್ಯ. ಅತ್ತಲೇಅಕ್ಕು=ನಾಶವಾಗು= ಸಾಯು.

೧೧೯೨. ಆಡಿ=ಜೂಜಾಡಿ. ಚತುರಂಗದ ಆಟದಲ್ಲಿ ಪಾಂಡವರು ಕೌರವರಿಗೆ ಸೋತು ರಾಜ್ಯವನ್ನು ಕಳಕೊಂಡರು. ಕೂಡಿದ ಪಂಚಪಾಂಡವರಲ್ಲಿ ಉಳಿದನಾಲ್ವರು=ಅರ್ಜುನಾದಿ ನಾಲ್ಕು ಅಣ್ಣ ತಮ್ಮಂದಿರು.

೧೧೯೪. ತಾ॥ ಜೂಜಾಡಿ ಹಣ ಹೋದರೆ ಸಹಾಯಕರು ಇಲ್ಲ.

೧೧೯೫. ಅಲ್ಪಕಾಲಕ್ಕಿರುವ ಮನುಷ್ಯನಿಗೆ ಒಳ್ಳೇದರಲ್ಲಿ ಹೇವವಿರುವದು ಉತ್ತಮ.

೧೧೯೬. ಬಲಿದು=ಸೊಕ್ಕಿಗೆದ್ದು. ಕೆಟ್ಟಪಂಥವು ಅಯೋಗ್ಯ. ಸುಗ್ರೀವನ ಅಣ್ಣನಾದ ವಾಲಿಯ ಕಥೆಯು ಇದಕ್ಕೆ ದೃಷ್ಟಾಂತವಾಗಿದೆ.

೧೧೯೭. ಸೊಡರು=ದೀಪ. ಒಪ್ಪಚಿ=ಬಹು ಸ್ವಲ್ಪ. ದೀಪವು ಎಣ್ಣೆಯನ್ನು (ಲಂಚವಾಗಿ) ತೆಗೆದುಕೊಂಡು ಸ್ವಲ್ಪಬೆಳಕನ್ನು ಕೊಡುವದು. ಆದರೆ

ಸೂರ್ಯನು ಏನೂತೆಗೆದುಕೊಳ್ಳದೆ ಜಗತ್ತಿಗೆಲ್ಲ ಪ್ರಕಾಶವನುಂಟುಮಾಡು ವನು ಇದು ಉತ್ತಮರ ಲಕ್ಷಣ.

೧೯೮. ಕಡೆ=ಅಂತ್ಯ. (ಎಷ್ಟುಹ ಣಕೊಟ್ಟರೂ ಸ್ವಲ್ಪವೇ. ಅದು ಅವ್ ಲ್ಯ.) ಛಿದ್ರಿಸು=ಜಗಳ ಹುಟ್ಟಿಸು. ಗತಿ= ಪರಿಣಾಮ.

೧೯೯. ವಿದ್ಯವೇ ಸೌಂದರ್ಯ ಮೂರ್ಖತ್ವವೇ ಕುರೂಪ.

೧೨೦೨.ಸೋದರ=(ಸಹ+ಉದರ) ಒಡುಟ್ಟಿದವ. ಅಧ್ವಾನಕೆ+ಆದರೆ=ಕ ಷ್ಟಕಾಲದಲ್ಲಿ+ಸಹಾಯಮಾಡಿದರೆ ರಾ ಜ್ಯ=ಸ್ವದೇಶ.

೧೨೦೩. ತಾ॥ ವಿದ್ಯೆಕ್ಕೆ ಎಲ್ಲಿಹೋದ ರೂ ಮಾನ.

೧೨೦೫. ತಾ॥ಹದ್ದು ಹಾವಿಗೆ ಹೆದ ರದೆ ಹೇಗೆ ಅದನ್ನು ಎರಗಿಕೊಂಡು ಹೋಗುವದೋ ಹಾಗೆಯೇ ಉದ್ಯೋ ಗಿಯು ಕಷ್ಟಕೆಲಸಕ್ಕೆ ಹಿಂಜರಿಯಲಾ ಗದು.

೧೨೦೬. ಬೆರೆವ = ಉದ್ಯೋಗದಲ್ಲಿ ತತ್ಪರನಾಗಿರುವವ. ಭೋಗ = ಸುಖ ಮೋರೆ=ಸ್ವರಶಿಕ್ಷಣ.

೧೨೦೮. ಅರ್ತಿಯಿಂ = ಮನಸ್ಸು ಕೊಟ್ಟು, ಪ್ರೀತಿಯಿಂದ, ಅರಚು= ಒದರು

೧೨೧೦. ಆಯತ ಗುಟ್ಟು ಚಂದ

೧೨೧೫. ದೇವಾಂಗದ ದುಸ್ತು=ಲಂ ಗೋಟಿ; ಕೌಪೀನ. ಲಂಗೋಟಿಕಳೆ ದರೆ ಎಷ್ಟುನಾಚಿಕೆಯೋ ಅಷ್ಟು ನಾಚಿ ಕೆ. (ಹೀಗೆ ಕೆಲವರ್ತಿ ಸರ್ವಜ್ಞನಿಗೆ ಆಗಿರಬಹುದು)

೧೨೧೭. ಹೊಲಬು=ಭಾವ,ಇಂಗಿತ, ಬಂದು=ಯೊಗ್ಯವಾದ ಸಣ್ಣಮಾತು.

೧೨೧೮. ಮನಿಸು=ಖೇದ. ಮಾ ತೀಲಿ=ಕುವಾದದಲ್ಲಿ.

೧೨೧೯. ಸಂಪದ=ಸೌಖ್ಯ. ಸಿದ್ಧಿ.

೧೨೨೦. ಯಾತಿ=(ನೀರ ತುಂಬಿದ ಕಪ್ಪಲಿ, ಮೊಟ್ಟೆ ಆತುಕೊಳ್ಳು=ಸಿದ್ಧ ವಾಗು.

೧೨೨೧. ಮಥಿಸಲ್ಕೆ=ತಿಕ್ಕಾಟದಿಂದ ಜಗಳಹುಟ್ಟುವದು ಮಾತಿನಿಂದಲೇ ಕೋಪ. ಕೋಪದಿಂದ ಜಗಳ, ಜಗ ಳದಿಂದ ಮರಣ,

೧೨೨೨. ಶಶಿ=ಚಂದ್ರನಂತೆಸುಖ ಕರ, ಕೂರ್+ದಸಿ=ಮೊನೆಯಾಗಿಕೆತ್ತಿ ದಗೂಟ.

೧೨೨೩. ಹೊತ್ತಾಗಿ = ಸಮಯ ಮೀರಿ ಕೈಜಾರಿದ=ಕಳೆದ, ಒಡೆದು ಹೋದ.

೧೨೨೪. ಹೋದಲ್ಲಿ=ತಕ್ಕವೇಳೆಯು ಬಾರದೆ(ಕಳೆದುಹೋದಲ್ಲಿ)

೧೨೨೫. ಮತ್ತೊಂದು=ಹೊಸತ ರವ. ತೂತು ಬೀಳು=ಕೆಲಸಕ್ಕೆಬಾರದೆ ಇರು.

೧೨೨೬. ಸದರ=(ಸಂಸ್ಕೃತ ಚತುರ) ೧ ಸುಲ ಭಕರ(೨)ಜ್ಞಾನ.. ಕೂತಲ್ಲಿ ಆಳು ಗುಣದಿಂದಶ್ರಮವಿಲ್ಲದೆ ಎಲ್ಲರೂ ಒಳಗಾಗುವರು.

೧೨೨೭. ಒತು=ಹೊಂದಿಕೆಯಾಗಿ. ಒಲಿದು.

೧೨೨೯. ಮೇಟವಿದ್ಯ=ಒಕ್ಕಲುತನ. ರಾಟೆ=ಕೃಗಾರಿಕೆಯ ಯಂತ್ರ ಆಟ=ವ್ಯವಸ್ಥೆ.

೧೨೩೦. ಇರ್+ಮೆ = ಎರಡಾವರ್ತಿ,=ಉತ್ತು ( ಉಳು ಧಾ, ) ರಂಟೆ ಹೊಡೆ.. ತನ್ನ+ಎತ್ತರವು+ಅಹುದು=ಆಳುದ್ದ ಬೆಯುವದು.

೧೨೩೧. ಭಿತ್ತೊಮ್ಮೆ=ಬಿತ್ತಿದ್ದನ್ನು ಒಮ್ಮೆ. ನೆತ್ತರಸುಡು=ವ್ಯರ್ಥವಾಗಿ ಕಷ್ಟಪಡು.

೧೨೩೨. ನಲ್ಲ=ಉತ್ತಮವಾದ ಬಲಿಷ್ಠ. ಬಲವಿಲ್ಲದ=ಶಕ್ತಿ; ದುಡ್ಡು.

೧೨೩೫. ಹದಬೆದೆ=ಬಿತ್ತುವಸಮಯ. ಕೂರಂಬು=ಹದನವಾದಬಾಣ ತಾ|| ದುಡಿಯದೆ ದೇವರನ್ನು ಬೈದು ಫಲವಿಲ್ಲ

೧೨೩೭. ತುರು+ಕರು+ದನ+ಕರ ಅಂದರೆ ಹೈನ. ಭಾಜನ=ಅಂತೆ; ಕಾರಣ ಉಂಟಾದರೆ=ಇದ್ದರೆ, ಉಣಲುಂಟು=ಊಟದ ಸೌಖ್ಯರ್ಯವಿರುವದು.

೧೨೩೮. ಕಾಲವಾರರಲಿ=ಷಡ್ರುತುಗಳಲ್ಲಿ. ಬಾಲೆಬೋಳಿ = ಚಿಕ್ಕಪ್ರಾಯದಲ್ಲಿ ರಂದೆಯಾದವಳು. ಕೋಲಾಣಿ ಹೂ ಇದರಸರ.

೧೨೩೯. ತಾ|| ಐಶ್ವರ್ಯವು ಅಸ್ಥಿರ. ಬಡತನವೇ ಸ್ಥಿರ.

೧೨೪೦. ತಿದ್ದದಾ=ಕೆಲಸಕ್ಕೆಬಾರದ. ಸಾಧುವಾಗದ. ಉಳು=ಹೊಲದ ಕೆಲಸಮಾಡು, ಬಿದ್ದನಡು=ಆಲಸ್ಯಮೈಗಳ್ಳತನಮಾಡುವವ.

೧೨೪೧. ಕೀತಿರುವ=ಕೀವದಿಂದ ತುಂಬಿದ ವ್ರಣ=ಹುಣ್ಣು. ಕೂತಿರು=ದುಡಿಯದೆ ಕೂಡ್ರು.

೧೨೪೩. ಅಟ್ಟಣ=ಅಂತಸ್ತಿನಮನೆ. ಬೋಡ=ಹಲ್ಲಿಲ್ಲದವ. ಒಳೆ=ಬಿರುದಿನ ಬಳೆ ಕಡಗ.

೧೨೪೪. ಆಡಿ=(೧)ಸ್ನೇಹಮಾಡಿ. (೨)ಮಾತುಕೊಟ್ಟು ಅಳುವು=ಪಶ್ಚಾತ್ತಾಪಪಡು.

೧೨೪೫. 'ಕಳ್ಳನಹೆಂಡತಿ ಎಂದಾದರೂ ಮುಂಡೆ'. (ನಡಿಯಲಿಕ್ಕೆ ಬರುವದಿಲ್ಲ)

೧೨೪೬. ಮದ್ದಿಗೆ=(೧)ತುಬಾಕಿಯ ಮದ್ದು [(೨)ಔಷಧ.

೧೨೪೮. ತಾ||ಬಡವನಿಗೆ ಇದ್ದಲಿಯ ಕಿಮ್ಮತ್ತು ಸಹ ಇಲ್ಲ.

೧೨೪೯. ತಾ|| ಬಡತನವೆಂಬ ಹುಲಿಯು ಅವನೊಂದಿಗಿರಲು ಅಂಥವನಿಗೆ ಸಹಾಯಮಾಡುವದಕ್ಕೆ ಎಲ್ಲರೂ ಹೆದರುವರು. ಅಂದರೆ ಧೈರ್ಯಪಡರು.

೧೨೫೦. ತುಪ್ಪದಾ=ಎಷ್ಟು ಪ್ರೀತಿ ತೋರಿಸಿದರೂ ಸವಿಮಾತಾಡಿದರೂ ತುರುಕನನ್ನು ನಂಬಕೂಡದು ಒಪ್ಪು= ವಿಶ್ವಾಸವಿಡು ಒಪ್ಪಾದ=ಹೊರಗೆ ಉತ್ತಮನಾಗಿ ತೋರುವ. ಸಪ್ಪಗೆ ಇಪ್ಪ= ಬಹುವಿನಯುಉಳ್ಳವನಂತೆ ತೋರುವ.

೧೨೫೧. ಹರುಕ = ಜಗಳಗಂಟಗ ಕರಕ+ಅನ್ನ=ಹೊತ್ತಿದಆಹಾರ

೧೨೫೨. ರೊಟ್ಟಿ=ಈಚಲಹುಳಿಹಾದರೋಟ್ಟಿ. ಭೇಟಿ=ಲಗ್ನವಾಗದಹುಡಿಗಿ ಪಲ್ಲು=ಸೌಟು ಇದು ಮುಸಲ್ಮಾನಿ ಭಾಷೆಯ ಹಾಸ್ಯ.

೧೨೫೫. ಇಲ್ಲಿ ತೆಲುಗರಮೂಲವು ಹೇಳೋಣವಾಗಿದೆ. ಅಂದರೆ ಇವರು ರಾಕ್ಷಸಸ್ತ್ರೀಯಲ್ಲಿ ಗಂಡುಕಪಿಗೆ ಹುಟ್ಟಿದ್ದು, ರಾವಣನವೈರಿಯಾದ ರಾಮನು ಇವರಿಗೆ ಹೆಸರಿಟ್ಟದ್ದರಿಂದ ತೆಲುಗರೆಂದು ರೂಢಿಯಾಯಿತೆಂದು ತಾತ್ಪರ್ಯ. ಹೀಗಾಗಿ ಹನಮಂತನೇ ಇವರ ಮೂಲಪುರುಷನೆಂದು ನಾರಾಯಣ ಶಾಸ್ತ್ರಿಗಳು. ಸಟೀಕತಾತ್ಪರ್ಯ.

೧೨೫೬. ಟೀ॥ ಬಿದರಸಪಾತ್ರೆಯಲ್ಲಿ (ಡಂಬಿನತುಂಡು) ಹಾಲನ್ನು ಹಿಂಡಿಕೊಳ್ಳುವರು ಮಣ್ಣುಗಡಿಗೆಯಲ್ಲಿ ನೀರುತರುವರು ಮಾನವುಳ್ಳ ಸ್ತ್ರೀಯರಿಗೆ ಅವಳು ಇವಳು ಎಂದೆನ್ನುವರು. ಇಂಥವರನ್ನು ಅಳವಾದಗುಂಡಿಗೆ ಹಾಕತಕ್ಕದ್ದು.

೧೨೫೭. ಇದು ತಮಿಳ ಭಾಷೆಯ ಹಾಸ್ಯ.

೧೨೫೮. ಕಾಳಕೂಟ = ಮರಣಕರವಾದ ವಿಷ. ನಂಬಿದಹಗೆ=ನಂಬಿದಲ್ಲಿ ತಿಳಿಯದಂತೆ ಕುತ್ತಿಗೆಕೊಯ್ಯುವದು. ಹಾಳೂರ ಚುರಚಿ=ಇದರ ಸುಂಕವು ಹತ್ತಿದರೆ ಬಹಳ ತುರಿಸುವದು ಗಾಳಿ= ಸ್ನೇಹ.

೧೨೫೯. ಮುಗಳಿ=ಒಂದುತರದ ಬಿಳಿಜಾಲಿ. ನೆಗಳು=ಮೊಸಳೆ.

೧೨೬೦. ನಿಡುಗೇಶ = ಉದ್ದವಾದ ಹೆಳಲಿನಕೂದಲುಳ್ಳ. ಕುರುಳು = ಉಂಗರಗೂದಲು.

೧೨೬೨. ಕತ್ತೆಯಾಕೊಳೆ=ಯಾವಾಗಲು ಮೈಲಿಗೆಯಾಗಿರುವ.

೧೨೬೪. ಕಿಬ್ಬದಿಯಕೀಲು=(ಕಿರಿಬದಿ) ಎಡಗಡೆಯ ತೊಡೆಕೀಲು ಸಾಲಿಗ=ಸಾಲಕೊಟ್ಟವನು.

೧೨೬೫. ಬೆಂದಿರು=ಬಹಳವಾಗಿ ಅಡಚಣೆಯುಲ್ಲಿರು ಈಯ್ + ಕೊಡು. ಹೇರಿಟ್ಟೆ=ಹೆರ್+ಈಟೆ=ದೊಡ್ಡ +ಈಟಿ

೧೨೬೬. ಮೂರಿ=ಬಹಳವಾಗಿ. ಮಣ್ಣುತೂರು=ಶಪಿಸು. ಬೈಯ್ಯು.

೧೨೬೭. ಬೆಂಬಲವಿಡಿ=ಬೆನ್ನುಹತ್ತಿ ಗಂಟುಬೀಳು ದೇವಸ್ಥಾನದ ಕಂಭವು

ನಿಂತಿರುವಂತೆ ಏನೂ ಮಾತಾಡದಿರುವನು.

೧೨೬೮. ಬೋರಾಡು=ಬಹಳವಾಗಿ ಅಳು. ಹಾರಾಡು=ಸಂತೋಷದಿಂದ ಜಿಗಿ. ಈರಾಡಿ=ಮೇಲೆಬಿದ್ದು ಜುಲುಮೆಮಾಡಿ. ಚೀರಾಡು=ಒದರು ಗದ್ದಲ ಮಾಡು.

೧೨೭೧. ಒಳ್ಳೆಯುವಮಾತು=ಪ್ರೀತಿಯಿಂದ ಉಳ್ಳೊಡವೆ=ಕೊಡತಕ್ಕಹಣ. ಇಲ್ಲವೆ ತನ್ನಆಸ್ತಿ. ಬೊಳ್ಳಿಡು=ಬಹಳ ಗದ್ದಲಮಾಡಿ ಹೆದರಿಸು.

೧೨೭೨. ಟೀ॥ ಸಾಲತಂದರೆ ಮತ್ತೆ ಕೊಟ್ಟೇನು ನನ್ನನ್ನು ಹಿಡಿಯಲಿಕ್ಕೆ ನಾನು ಕಳವು ಮಾಡಿದವನೇ ಎಂದು ಜಗಳತಗೆದು ಕೊಟ್ಟವರನ್ನೇ ಹೆದರಿಸಿಕೊಳ್ಳುವನು.

೧೨೭೩. ಟೀ॥ ಸ್ವಲ್ಪ ತಡವಾಯಿತಷ್ಟೇ ಹಿಡಿಯಲಿಕ್ಕೆ ನಾನೇನು ಗಂಟು ಮುಳುಗಿಸಿಕೊಂಡು ಹೋಗುವನೇ ಎಂದು ಕೊಟ್ಟವನನ್ನೇ ಬೈದು ನಾಚಿಸಿ ಕಳುಹಿಸುವನು.

೧೨೭೭. ಬೇರ=ಬಡ್ಡಿ. (ವ್ಯಾಪಾರ) ಕೇಶವಗೀರು=ಕೂದಲು (ಶಾಟ) ಹರಿ.

೧೨೭೯. ಹೊಲ್ಲನು=ಬೇಡವಾಗುವನು. ಅಲ್ಲದಗುಣದ = ದುಷ್ಟ. ಕಲ್ಲೆದೆ=ಕೆಟ್ಟಧೈರ್ಯ.

೧೨೮೦. ಕೆಟ್ಟ=ಕಳೆದ. ಕುಂಭ=ಗಡಿಗೆ.

೧೨೮೨. ತಾ॥ ಅಕ್ಕಸಾಲಿಗನು ಊರಲ್ಲಿ ಒಬ್ಬೊಬ್ಬರನ್ನೇ ಹಾಳುಮಾಡುವ ರಾಕ್ಷಸನಂತಿರುವವನೆಂದು ತಿಳಿಯಬೇಕು.

೧೨೮೩. ಹಣವಿಗೆ=೪ ಆಣೆ ೮ ಪೈಯಲ್ಲಿ ಈಸ = ವೀಸ ಹಣದ $\frac{1}{16}$ ಭಾಗ=೩$\frac{1}{2}$ ಪೈ. ಇಪ್ಪಣ=ಎರಡು ಹಣ=೯. ಆ. ೪. ಪೈ. ಬೇಳೆ=ಹಾಗದ ಅರ್ಧ. ೭ಪೈ. ತ್ರಿಣಯ=ಈಶ್ವರ ಮುಕುಟ=ಕಿರೀಟ ಟೊಣೆ=ಹೊಡೆ; ಕಳವುಮಾಡು ತಾ॥ ದೇರವ ಸಾಮಾನಗಳನ್ನು ಮಾಡಬೇಕಾದರೂ ಅಕ್ಕಸಾಲಿಗನು ಕಳವುಮಾಡದೇಬಿಡನೆಂದು ತಾತ್ಪರ್ಯ.

೧೨೮೪. ಚಿಮ್ಮಾಡಿ = ಹೊರಗೆ ಚಿಮ್ಮಿ. ಕುಡಿಮಗುಚಿ=ತುದಿಯನ್ನು ಮಣಿಸಿ. ಪೊಡೆವ+ಎಡೆಗಳ+ಒಳಗೆ=ಸುತ್ತಿಗೆಯಿಂದ ಹೊಡೆಯುವ ಸ್ಥಳದ ಸುತ್ತುಮುತ್ತು. ಸವಳಿಸಿ=( ಕಸ ) ಕೂಡಿಸಿ ಪಡೆ=ತೆಗೆದುಕೊಳ್ಳು ಪ್ರತಿವೆರಸಿ=ತಿರುಗಿ ಕರಗಿಸಿ(ತೆಗೆದುಕೊಳ್ಳುವನು)

೧೨೮೫. ಎಡೆ+ಆಡಿಸು = ಇದನ್ನು ತಾ ಅದನ್ನು ಕೊಡು ಎಂದು ತಿರುಗಾಡಿಸುತ್ತ. ಇಲ್ಲವೆ ತಾನೇ ಅತ್ತಿತ್ತ ಅಡ್ಡಾಡುತ್ತ. ತವೆ=ವಿಶೇಷವಾಗಿ ಚನ್ನಾಗಿ. ಬಹಳವಾಗಿ. ಕವಿದಿರಲು=ಕತ್ತಲೆಯಲ್ಲಿ ತವಕ=ಹಸ್ತಚಾತುರ್ಯದಿಂದ.

೧೨೮೭. ಹದುಗಿಸು=ಮುಚ್ಚು. ವೇದಿಸಿ =(ನೀವು ಮೋಸಹೋಗಿದ್ದೀರೆಂದು ಹೆದರಿಸಿ) ತೊಂದರೆಗೊಳಿಸಿ. ಕಣ್ಣಿಗೆತೋರಿಸುತ್ತ = ವಂಚನೆಮಾಡಿ. ಇವು ಭಂಗಾರವನ್ನು ಕದಿಯುವ ರೀತಿಗಳು.

೧೨೮೮. ಟೀ॥ ತೂಕವು ಕಡಿಮೆ ಇದ್ದರೂ ಆ ಕಡೆಗೆನೇ ಇಳಿಯುವದು. ಸಮವಾಗಲೆಂದುಸ್ವಲ್ಪ ಒತ್ತಿದರೆ ಅಲ್ಲಿಯೇ ಇರುಕಿನಿಲ್ಲುವದು. ವಿಧವಿಧವಾಗಿ ಪಾದರಸವನ್ನು ಅಲ್ಲಲ್ಲಿಗೆ ಹಚ್ಚಿ ಬಹು ಯುಕ್ತಿಯಿಂದ ಮಾಡಿದ ಅಕ್ಕಸಾಲಿಗನ ತಕ್ಕಡೆಯನ್ನು ಎಂದಿಗೂ ಪ್ರಯೋಗಿಸಬೇಡ!

೧೨೮೮. ಚಿಕ್ಕಟು=ಚಿಕ್ಕಾಡು (ಕೀಟ) ತ್ವಮ್ಮಟ=ಚಿಮುಟಿಗೆ.

೧೨೯೦. ಸಂಚಕ = ಮುಂಗಡ ಅಂಚಿತ=ಚೀಲ. ಒದರು=ಜಾಡಿಸು, ಕೊಡಹು ಹೀಗಾದರೆ ಅಕ್ಕಸಾಲಿಗನು ಮೋಸಮಾಡುವದು ಕಷ್ಟ.

೧೨೯೧. ಅಡ್ಡಬಡ್ಡಿ = (ಹೆಚ್ಚು) ಚಕ್ರಬಡ್ಡಿ. ದಾರಿಯು ಮಧ್ಯದಲ್ಲಿ ಬಿದ್ದ ಕೊರಡು. ಕರ=ಹೇಗಾದರೂ ರೊಡ್ಡ=ಎಡಗೈ ಅಭ್ಯಾಸದವ.

೧೨೯೨. ಅಣಿಬಿ=ಆಳಿಂಬೆ ಕಣಕದ ಕಲ್ಲು=ವಜ್ರದುಂಡೆಯುಕಲ್ಲು.

೧೨೯೩. ಬಣಜಿಗನು ಎಲ್ಲತರದ ಮೋಸವನ್ನು ಬಲ್ಲವನು ಛ.ಕ. ಪಾಠ ಭೇದ. ಒಣಕೂಳನು=ಬಹುಲೋಭಿ.

೧೨೯೪. ಕಟ್ಟಾಸೆ = ಕಲ್ಲಿನಿಂದ ಕಟ್ಟಿಸಿಕೊಳ್ಳುವ ಆಶೆ

೧೨೯೫. ಹೊಟ್ಟು=ಮೇವು. ಇಟ್ಟೆಡೆ=ಜಾತ್ರೆಯುಸ್ಥಳ.

೧೨೯೬. ತುಂಬು=ಒಕ್ಕಲು, ವಸತಿ

೧೨೯೭. ಕಾ॥ ವರ್ತಕನನ್ನು ನಂಬುವದೂ ಮರವು ಕರಗಸವನ್ನು ನಂಬುವದೂ ಒಂದೇ

೧೨೯೮. ಇವರು ತಿಳಿಯದಂತೆ ರಕ್ತವನ್ನು ಅಂದರೆ ಸಾರರಸಂಪಾದನೆಯನ್ನು ತಿನ್ನುವರು.

೧೩೦೦. ಜಾಲಗಾರ=ಕಸವನ್ನು ಜಾಲಿಸಿ ಬಂಗಾರಚೂರುಗಳನ್ನು ತೆಗೆಯುವವ.(ಇವನಲ್ಲಿ ದಾನಧರ್ಮವಿಲ್ಲ.) ಅರ್ಥಾಂತರ, ಮೀನುಗಾರ.

೧೩೦೨. ಕೋಳಿಗಳನ್ನು ತಿಂದರೂ ನರಿಯು ಹೇಗೆ ನಾಯಿಗೆ ಅಂಜುವದೋ ಹಾಗೆಯೇ ಎಷ್ಟುದೊಡ್ಡವನಾದರೂ ಗಂಡನು ಮನೆಯಹೆಂಡತಿಗೆ ಅಂಜಿ ಬಾಳ್ವೆಮಾಡಬೇಕಾಗುವದು!

೧೩೦೩. ಉಣ್ಣದೆ ಉರಿಯುವರು= ಅಲ್ಪಲಾಭಮಹಾಗರ್ವ. ಗಾಜುಗಾರ= ಬಳೆಗಾರ.

೧೩೦೪. ಓಜ=ಆಚಾರಿ, ಗುರು ಅಕ್ಕಸಾಲಿಗ ಹೂಜೆ=ನೀರುಕುಡಿಯುವ ಮಣ್ಣಿನಪಾತ್ರೆ ಭಾಂಡದೊಳಗಲ್ಲ = ನಾಲ್ಕುದಿನಬಾಳುವ ಕಿನ್ಮೃತ್ತಿನ ಪಾತ್ರೆಯೊಳಗೆ ಎಣಿಕೆಯಾಗದು.]

೧೩೦೫ ಕ್ಷೀಣಿಸುವಕುತ್ತ=ಕ್ಷಯರೋಗ.

೧೩೬೮. ಟೀ॥ ಏಣಾಂಕಧರ=ಶಿವ ಟೀ॥ ಯಾರು ದೇವರನ್ನು ಕಡಂರೂ ಗಾಣಿನು ಮಾತ್ರ ಎಂದಿಗೂ ಆತನನ್ನು ಕಾಣನೆಂಬದು ನಿಶ್ಚಯ (ಇದು ಹಾಸ್ಯ ಹೇಗಂದರೆ-ಸಾಕ್ಷಾತ್ ಶಿವನೇ ನಂದಿಯನ್ನೇರಿ ಭೂಮಿಗೆ ಇಳಿದುಬಂದರೂ ಗಾಣಿಗನು ಅವನ ಎತ್ತನ್ನುಮಾತ್ರ ನೋಡುವನಲ್ಲದೆ ಬಯಸಿದ್ದಕ್ಕಿಂತಲೂ ಹೆಚ್ಚಾದದ್ದನ್ನುಕೊಡುವ ಈಶ್ವರನೇ ತನ್ನೆದುರಿಗಿದ್ದರೂ ಅವನನ್ನು ಕಾಣನು! ಸಾಧ್ಯವಾದರೆ ಅವನಿಂದಲು ತನ್ನ ಗಾಣವಾಡಿಸಿಕೊಳ್ಳುವನು! ಅಂದರೆ ಸ್ವಾರ್ಥಿಗೆ ಅಲ್ಪಲಾಭವಲ್ಲದೆ ಪ್ರಸಂಗಾನುಸಾರ ವಿಪರೀತ ಕೇಡೂ ಆಗುವದೆಂದು ತಾತ್ಪರ್ಯ.

೧೩೦೭. ಕೂಡಿಲ್ಲದವಗೆ=ಹೆಂಡತಿ ಇಲ್ಲದವನಿಗೆ. ನೇಯುವದಕ್ಕೂ, ಬಹು ಜಾಣತನವು ಬೇಕು.

೧೩೦೮. ಬುಗ್ಗೆ=ನೀರಿನಝರಿ. ತಗ್ಗಿನಗದ್ದೆ –ಕೆರೆಯನೀರು ದೊರೆಯುವದರಿಂದ ಇದಕ್ಕೆ ಒಳ್ಳೇದು.

೧೩೧೨. ನೋಡಿ=ತಿಳಿದೂತಿಳಿದು.

೧೩೧೩. ಗಾಡ =ಘಟ್ಟಿಯಾಗಿ.

೧೩೧೪. ಕಷ್ಟವಿಲ್ಲದೆ ಇನೊಬ್ಬರ ದುಃಖ ತಿಳಿಯದು.

೧೩೧೬. ವೃತ್ತಿ=ದುಡಿದುತಿನ್ನುವ ಸ್ವಭಾವ. ಕೆಲಸ.

೧೩೧೭. ಬಿಂಕ=ಗರ್ವ.

೧೩೧೮. ಹೆಣ್ಣು=ಉತ್ತಮ ಸ್ತ್ರೀ. ಸೂತ್ರ=ಕ್ಷತ್ರಿಯ ತಂದೆಯಿಂದ ಬ್ರಾಹ್ಮಣತಾಯಿಯಲ್ಲಿಹುಟ್ಟಿ ಸೇವೆಗೆ ಉತ್ತಮನೆನಿಸಿದವ.

೧೩೧೯. ಗಡಿಯನಾಡು= ಮೇರೆಯ ಪ್ರದೇಶ. ಅಡಿ+ಇಟ್ಟಡೆ+ಇಲ್ಲ= ತಡಮಾಡಿದರೆ ಕೇಳುವಹಾಗಿಲ್ಲ. ಈ ನಾಲ್ಕಕ್ಕೆ ನಿಂತ ಕಾಲಿನ ಮೇಲೆಯೇ ಹಣಕೊಡಬೇಕೆಂದು ತಾತ್ಪರ್ಯ.

೧೩೨೦. ಭಂಡೆ=ನಾಚಿಗೆಗೇಡಿ ಹೆಂಗಸು. ಮಿಂಡಿ=ಸೂಳೆ. ಕೊಂಡೆಯ= ಗುಪ್ತಚಾರ. ಚಾಡಿಹೇಳುವವ.

೧೩೨೧. ಗುಂಡುಗಳು=ಲಂಗರ. ಬೈತ್ರ=ಹಡಗು.

೧೩೨೩. ಕಿಗ್ಗಳ = ನೀಚವೃತ್ತಿ. ಘಾತಕತನ.

೧೩೨೪. ಗುಣ=ವಿವೇಕ.

೧೩೨೫. ಟೀ॥ ಹನುಮಂತನಿಂದ ಲಂಕಾಪಟ್ಟಣವೂ ಅಗ್ನಿಯು ಆಹಾರವನ್ನು ಬೇಡಲು ( ಫಲ್ಗುಣ ) ಅರ್ಜುನ

ನಕೃಷ್ಣರಿಂದ ಖಾಂಡವನವೂ ಶಿವನಿಂದ ತ್ರಿಪುರವೂ (ನೋಡಿ ಪದ್ಯ ೧೮೨) ಹಾಳಾದಂತೆ. ಅರಸರ ಸಾಕಿರುವ ಚಾಖೋರರಿಂದ ಜಗತ್ತೇ ನಾಶವಾಗುವದು.

೧೩೨೬. ಕಿರಿದುರಜ = ಬೆಳ್ಳಿಯ ಚೂರು. ನುರಿದ = ಕೆಟ್ಟುಹೋದ. ಜಗಳನೊಂದಿಸಲಿಕ್ಕೆ ದೊಡ್ಡವರಿಗೂ ಇನ್ನೊಬ್ಬರಿ ಇಲ್ಲವೆ ಕಿರಿಯರ ಸಹಾಯಬೇಕಾಗುವದೆಂದು ತಾತ್ಪರ್ಯ.

೧೩೨೭. ಅರಿವು=ಜಾಣತನ. ಹೊಳೆಯ ಮಿನಿನ ಬೇಟಿಗೆ ಬಂಗಾರದ ಬಾಣವನ್ನು ಪ್ರಯೋಗಿಸಿದಂತಾಗುವದು.) ಇದಕ್ಕೆ ತೊರೆಬೇಟಿಯೆಂದು ಹೆಸರು

೧೩೨೮. ಜ್ಞಾನಿಗಳು ಬೈಗಳನ್ನು ನೀಚರಗಾಯನವೆಂದು ನಗುತ್ತಾ ಕೇಳುವರು.

೧೩೩೦. ಕೋಡಗ = ಅವಿವೇಕಿ, ಮೂರ್ಖ. ಕಾಡಾಡಿ=ಕಾಡುಮನುಷ್ಯ. ಈಡಾಡು ಒಗೆದು ಬಿಡು.

೧೩೩೧. ಕಟ್ಬಾಳು=ಬಲಿಷ್ಠ. ನೆರವು=ಸಂಗತಿ ಸೆಟ್ಟಿಗೆ ತೊದಲನುಡಿ= ತಾ॥ ವ್ಯಾಪಾರಿ ಸುಳ್ಳು ಹೇಳಲಾಗದು. [೨] ದೊಡ್ಡವರಿಗೆ ವಾಕ್ಚಾತುರ್ಯ ಬೇಕು. ನಿಷ್ಠುರ=ಸಿಟ್ಟು.

೧೩೩೨ ಬಗೆಯ = ಎಲ್ಲ ತರದ. ಹೊಗೆ=ಕಷ್ಟ.

೧೩೩೩. ಕಟ್ಟೆ ಇಟ್ಟಂತೆ=ಸಿದ್ಧಾಂತ ಸುಳ್ಳಾಗದು. (ಇಮಗಾದೆ)

೧೩೩೪. ಅಂಡೆ=ಗಡಿಗೆ. ಮುಂಡೆ= ನೀಚಸ್ತ್ರೀ.

೧೩೩೫. ಗತಿಗೇಡಿಯಾಗು= ನಾಶನವಾಗು. ರತಿ=ವ್ಯಭಿಚಾರ.

೧೩೩೬. ದೊಡ್ಡವರು ದೊಡ್ಡ ತಪ್ಪು ಮಾಡಿದರೆ ಯಾರದೂ ಆಕ್ಷೇಪವಿಲ್ಲ, ಸಣ್ಣವರು ಸಣ್ಣ ತಪ್ಪು ಮಾಡಿದರೆ ಎಲ್ಲರೂ ಬುದ್ಧಿಹೇಳುವರು.

೧೩೩೭. ತಾ॥ ಆಳು ತನಗೆ ಕೆಲಸಗೊತ್ತುಂಟೆಂದು ಹೆಗ್ಗಳಿಸಿಕೊಂಡರೆ ಹೆಚ್ಚು ಕೆಲಸ ಮೈಮೇಲೆ ಬೀಳುವದು.

೧೩೩೮. ತಾ॥ ಹೌದಪ್ಪನ ಚಾವಡಿಯಲ್ಲಿ ಹೌದಪ್ಪ ಅಲ್ಲಪ್ಪ ಚಾವಡಿಯಲ್ಲಿ ಅಲ್ಲಪ್ಪ. ತಾ॥ ಹೊತ್ತು ಬಂದ ಹಾಗೆ ಹೋಗುವವ.

೧೩೩೯. ಮಸಣ=ಸಂ. ಸ್ಮಶಾನ. ಸುಡುಗಾಡು. ಅಶನ= ಅನ್ನ ವಸನ= ವಸ್ತ್ರ. ತಾ॥ ಚಿಂತೆಮಾಡಿ ಫಲವಿಲ್ಲ. ದುಡಿಯಬೇಕು.

೧೩೪೦. ಗೀತವಿದ್ಯಕಲಿತ= ಗೀತೆಗಳಲ್ಲಿ ಹೇಳಲ್ಪಟ್ಟ ತತ್ವವನ್ನು ಅರಿತ. ಅಂದರೆ ಜ್ಞಾನಿಗಳ. ಮಾತನ್ನು ಜಾತರ=ಉತ್ತಮಸ್ವಭಾವವುಳ್ಳವರ ;ರೀತಿ= ಯೋಗ್ಯವಾಗಿ. ಅವರ ಸೇವೆ ಮಾಡಿ. ಟೀ॥ ಉತ್ತಮ ಅನುಭವಸ್ಥರೂ ಜ್ಞಾನಿ

ಗಳೂ ಆಗಿರುವವರ ಬುದ್ಧಿ ಮಾತನ್ನು ಕೇಳದೆ ದುಷ್ಟರ ಆಲೋಚನೆಯನ್ನನು ಸರಿಸುವವರು ನಾಶವಾಗುವರು.

೧೩೪೧. ಎಷ್ಟು ಕಷ್ಟ ಬಂದರೂ ದೇವರಲ್ಲಿ ಅವಿಶ್ವಾಸ ಮಾಡಲಾಗದು.

೧೩೪೩. ಬಲ್ಲಿದ=ಜಾಣ. ಬಲ= (೧)ಸಾಧಿಸುವಶಕ್ತಿ (೨) ಆತ್ಮಬಲ. ಸಾಹಿತ್ಯ=ಸಾಧನೆ. ಅನುಕೂಲ. (೨) ಕಾನ್ಯಶಕ್ತಿ. ೩ ವಾಕ್ಚಾತುರ್ಯ.

೧೩೪೫. ಮುಟ್ಟಿದ+ಎರಚು=ಪ್ರಾಪ್ತವಾದ ಸಂಕಟ. ಅಭಯ=ಧೈರ್ಯ. ದಾತಾರ=ಸಹಾಯಕ. ತಂದೆ ನೆಟ್ಟನೇ ದೈವ=ನಿಶ್ಚಯವಾಗಿ ದೇವರೆಂತಲೇ ಭಾವಿಸಬೇಕು.

೧೩೪೬. ಇವುಗಳನ್ನು ಯಾರಿಂದಲೂ ಬೇರೆ (ಮಾಡಲಾಗದು.)

೧೩೪೮. ಒಂದಕ್ಕೆ=ಲಿಂಗಾಂಗಕ್ಕೆ ಬ್ರಹ್ಮಕ್ಕೆ ಎಣೆ=ಭೇದ; ಬೆಲೆ. ಸಂದಿಲ್ಲ ಎರಡಕ್ಕೆ=ಪಾಪವಿದ್ದಲ್ಲಿ ಪುಣ್ಯವಿರುವ ಹಾಗಿಲ್ಲ ಇವುಗಳಿಗೆ ಪರಸ್ಪರವಿರೋಧ ಮೂರಕ್ಕೆ ಎಡೆಯಿಲ್ಲ=ತ್ರಿಮೂರ್ತಿಗಳಿಗೆ ಸ್ಥಿರವಾದ ಇರುವಿಕೆಇಲ್ಲ. ಇವು ಪರಬ್ರಹ್ಮನ ರೂಪಾಂತಂಗಳಷ್ಟೆ. ನಾಲ್ಕಕ್ಕೆ=ಹಿಂದೂಮುಂದಿಲ್ಲ=ದಿಕ್ಕುಗಳಿಗೆ ಸ್ಥಳನಿಯಮವಿಲ್ಲ ೨. ೩. ೪. ಇವುಗಳಿಗೆ ಬೇಕಾದರೆ ಇನ್ನು ಅನೇಕ ಅರ್ಥಗಳನ್ನು ಮಾಡಿಕೊಳ್ಳಬಹುದು.

೧೩೪೯. ಆಸೆ=ಹಸಿವೆ. ದೋಸೆ= ಪಕ್ವಾನ್ನ. ಬಾಸಿಂಗ=ಮದುಮಗನು ಕಟ್ಟಿಕೊಳ್ಳುವ ಹೂವಿನದಂಡೆ.

೧೩೫೦. ಕಷ್ಟೆಯಾದವಳ ತಲೆಬೇನೆ=(೧)ಕೆಲಸಮಾಡಿ ಬೇಸತ್ತವಳತಲೆನೋವು. (೪)ಬೋಳಿಗೆ ಕೂದಲುಬೆಳದು ಉಂಟಾದ ತಲೆನೋವೆಂದು ಕೆಲವರು.

೧೩೫೦. ಒಪ್ಪ=ಕೂಟಕ್ಕೆ ಸಮ್ಮತಿಸು. ಚಪ್ಪೆ=ಸಪ್ಪಗೆ(ನಕ್ಕರು) ವ್ಯರ್ಥ.

೧೩೫೨. ಸಜ್ಜೆಯಲಿ+ಇಹನ=ನೀಚ ಮಾತುಗಳನ್ನಾಡುವ;ಗುಟ್ಟುಒಡೆಯು; ಜಗಳಗಂಟರು ಸವಿಮಾತು=ಇಚ್ಛಕನುಡಿ.

೧೩೫೬. ತಪ್ಪುಮಾಡಿಡವರನ್ನು ಕತ್ತೆಯಮೇವ ಮೆರಿಸುವದರಿಂದ — ಬತ್ತಲೆಜಲವಹೊಗನಲ್ಲ– ಗಂಗೆಯುಪವಿತ್ರವಾಗಿರುವದರಿಂದ ಅಂತ್ಯಂತ=ಅತಿ ಆಟಿ ಹೊಕ್ಕಬಳಿಕೆ.

೧೩೫೭. ಕಣ್ಗೊಪ್ಪ=ಚಂದತೊಪ್ಪಲು ನೀರು. ಮಂಜು = ಕೊನಗಬ್ಬು= ಕಬ್ಬಿನಸೋಗೆ.

೧೩೫೮. ಒಲೆಯಮೇಲೆ ಕಾಯುವದಕ್ಕೆ ಇಟ್ಟಹಾಲನ್ನೂ ಹಟದಯುದ್ಧದಲ್ಲಿ ಉಂಟಾದ ಕಠಿಣಸ್ಪರ್ಧೆಯನ್ನೂರತಿಕ್ರೀಡೆಗೊಳಗಾದ ಸ್ತ್ರೀಯನ್ನೂ ಭಯಂಕರವಾದ ಕಾಡಿನಲ್ಲಿ ಬಿದ್ದಕಾಲು

ದಾರಿಯನ್ನೂ ಬಿಟ್ಟು ಅರಿಕ್ಷಣ ತೊಲಗಿದರೆ ಇವು ತಿರುಗಿ ಮತ್ತೊಮ್ಮೆ ಸಿಕ್ಕಲಾರವು.

೧೩೫೯. ಮಾತಿನಮಾಲೆ=ವಿಶೇಷ ಅರ್ಥವಿಲ್ಲದೆ ಸುಮ್ಮನೆ ಹೇಳುವ ನುಡಿಗಟ್ಟುಗಳು. ಹಾತೆ=ಜೆಂಡುಗಹುಳ. ಹುಲ್ಲು ಸರವೆ=ಹುಲ್ಲಿನಿಂದ ಮಾಡಿದ ಹಗ್ಗ. ಇವು ವಿಶೇಷ ಪ್ರಯೋಜನಕ್ಕೆ ಬಾರದವುಗಳು.

೧೩೬೦. ಇವುಗಳನ್ನು ಆಗಲೇ ನೋಡತಕ್ಕದ್ದು ತಡಮಾಡಿದರೆ ಕೈಗೆ ಸಿಕ್ಕುವದಿಲ್ಲ.

೧೩೬೨. ಬಿಂಕದ=ಒಯ್ಯಾರದ. ಸೊಂಕು=ಹತ್ತು.

೧೩೬೩. ದಯವಿಲ್ಲ= ಎಲ್ಲವನ್ನು ಸುಡುವದು. ಮಂಕ= ಮೂರ್ಖ, ಹುಚ್ಚ ಶಂಕಿನಾಧ್ವನಿಗೆ ಪ್ರತಿಯಿಲ್ಲ=ಇದಕ್ಕಿಂತ ದೊಡ್ಡ ಧ್ವನಿಯನ್ನುಂಟುಮಾಡುವ ಸ್ವಾಭಾವಿಕವಸ್ತು ಇಲ್ಲ. ಹಿಂದೆ ಯುದ್ಧದಲ್ಲಿ ಶಂಖವನ್ನು ಭ್ಯೂಗಲಿನಂತೆ ಪ್ರಯೋಗಿಸುತ್ತಿದ್ದರು!

೧೩೬೪. ಮುನಿಸು=ಸಿಟ್ಟು-- ಇದು ಗಂಭೀರ ಮೃಗವಾಗಿರುವದರಿಂದ. ಮತ್ಸರಬುದ್ಧಿ ಇಲ್ಲ.

೧೩೬೫. ಅಳಿಯನ ಮನಿಯಲ್ಲಿರುವದು ನಾಚಿಕೆ ಹಾಗೂ ಮಗಳ ಮಕ್ಕಳಿಗೆ ಆಸ್ತಿಯ ಹಕ್ಕು ಇಲ್ಲದ್ದರಿಂದ.

೧೩೬೬. ಹಾಸು=ಹಾಸಿಗೆ. ಪೂಸು= ಎಣ್ಣೆಹಚ್ಚು. ವಿೂಹ=ಜಳಪ. ಭಾಷ ......ಗೆಳೆತನ=ಒಬ್ಬರಭಾಷೆ ಒಬ್ಬರಿಗೆ ತಿಳಿಯದಗಂಡಹೆಂಡರು- ಮೋಟಗೈಬಿ ಸಿದ ಬಾ ಎಂಬದೂ ತಿಳಿಯುವದಿಲ್ಲಹೋ ಗೆಂಬದೂತಿಳಿಯುವದಿಲ್ಲ ಅದರಂತೆಯೇ

೧೩೬೮. ಅಬ್ಬೆ=ಅಜ್ಜಿ, ಮುದುಕಿ

೧೩೭೦. ಹಿರಿಯರ ಪದ್ಧತಿಯೆಂದು ಕೆಟ್ಟದ್ದನ್ನು ಅನುಸರಿಸಲಾಗದು.

೧೩೭೧. ವಿತರಣ=ಉದಾರಗುಣ. ಸಾಗರನ ಚಪಲತೆ=ಅಂಗಚಾಪಲ್ಯ. ತೀವ್ರಓಟ. ಚಾರುತರರೂಪು=ಚಲ್ವಿಕೆ ಅತಿಶೌಂದರ್ಯ. ಚದುರತನ=ಜಾಣ ತನ. ಹೋರು=ಪ್ರಯತ್ನಿಸು ಇವು ಹು ಟ್ಟನಿಂದಲ್ಲದೆ ಪ್ರಯತ್ನದಿಂದ ಪ್ರಾಪ್ತ ವಾಗವು ಒಂದುವೇಳೆ ದೊರೆತರೂ ಎ ಲ್ಲರಿಗೆ ಸಾಧ್ಯವಲ್ಲ.

೧೩೭೨. ಪಡೆದುಂಬ=ದೇಹವಿಕ್ರ ಯಮಾಡಿ ಬದುಕುವ. ತುಡುಗುಣಿ= (೧) ತುಡುಗುಮಾಡಿ ತಿನ್ನುವಳು. (೨) ಕಳ್ಳ.

೧೩೭೩. ಸ್ವಾತಂತ್ರ್ಯವನ್ನು ಕಳೆದು ಕೊಂಡವನು ನೀಚಸ್ಥಿತಿಯಲ್ಲಿರುವನು. ದೇಶಿಗ=ಪರದೇಶಿ; ಅನಾಥ. ಇಂಥವ ರು ಯಾವಾಗಸತ್ತರೂ ಒಂದೇ.

೧೩೭೪. ಬರು=ಊಟಕ್ಕೆಬರುವವ ಕರೆಯದಲೆ=ಕರೆಯದೆ ಎಂದು ಇರತ ಕ್ಕದ್ದು.

ಈ ರೂಪವ್ಯಾಕರಣ ಸಮ್ಮತವಲ್ಲ ಆದರೂ ಬಳಿಕೆಯಲ್ಲಿದೆ.

೧೩೭೫. ಬುದ್ಧಿಕೊಡು=ತಿಳಿಯದ ಸಮಯದಲ್ಲಿ ವಿಚಾರಹೇಳು. ಉಪದೇಶಿಸು. ಬಿದ್ದಿರಲುನೋಡು=ಅಸ್ವಸ್ಥದಲ್ಲಿರುವಾಗ ಸಹಾಯಮಾಡು.

೧೩೭೬. ಅಳಿಯ+ಊರತಳವಾರ ಕಳೆಯುಳ್ಳ=ಸುಂದರಿಯಾದ ಹೊಳಲು ಊರು ಇವರಿಗೆ ಬೇಕಾದದ್ದನ್ನು ಕೊಡದೆ ಹಾಗೆಯೇ ಹೊರಗೆ ಹಾಕುವ ಹಾಗಿಲ್ಲ. ಮಗಳಿಗೆ ಕಷ್ಟಕೊಡದಂತೆ ಅಳಿಯನಿಗೆ ಆತಿಥ್ಯ ಮಾಡಬೇಕಾಗುವದು.

೧೩೭೭. ಕೇಶರಿ=ಸಿಂಹ. ದುರಿತ=ಪಾಪಹರ=ದೇವರು. ಉರವಣಿಸಿ=ಶೀಘ್ರವಾಗಿ ಮೈಮೇಲೆ. ಬರುವ ಪರಿಣಾಮ=ಸುಖ.

೧೩೭೮. ಹಾಡುವದು ಬಾರಿಸುವದು ಕುಣಿಯುವದು ಮುಂತಾದವುಗಳು ಅಂದರೆ ಊರಿನಲ್ಲಿ ನಡೆಯುವವ ಆಟ, ನೋಟ ಮೊದಲಾದವುಗಳೂ ಪ್ರಿಯರ ಮಚ್ಚಿಗೆಯೂ, ಗುಟ್ಟಿನ ಸಂಗತಿಗಳೂ ಊರಿನಲ್ಲಿರುವ ಅಧಿಕಾರಸ್ಥರ (ಗೌಡನ) ಪ್ರೇರಣೆಯಿಂದ ಕೆಟ್ಟುಹೋಗುವವು. ದೊಡ್ಡವರು ಒಳ್ಳೇಕಾರ್ಯಗಳನ್ನು ಕೆಡಿಸುವದಕ್ಕೆ ಪ್ರಯತ್ನಿಸಿದರೆ ಅಂದರೆ ಜೇಬುದ್ಧಿಯನ್ನು ಹುಟ್ಟಿಸಿದರೆ ಬಹಳ ಕೇಡಾಗುವದೆಂದು ತಾತ್ಪರ್ಯ.

೧೩೭೯. ಮತ್ತು+ಅರಗು ಮಧು=ಜೇನು ನೆಲೆ=ಮೂಲ, ಹುಟ್ಟುವ ರೀತಿ ತಾ|| ಲೋಕದಲ್ಲಿ ಗುಣದಿಂದ ಪ್ರಸಿದ್ಧಿಗೆಬಂದವರು ಚಿಕ್ಕಂದಿನಲ್ಲಿ ಬಹಳ ಕಷ್ಟವನ್ನು ಸೋಸಿರುವರು.

೧೩೮೦. ತಾ|| ತನ್ನಂತೆ ಇನ್ನೊಂದು ಪ್ರಾಣಿಯನ್ನು ಕೂಡಲೆ ಇವುಗಳಲ್ಲಿ ಸ್ಪರ್ಧೆಯುಂಟಾಗುವದು.

೧೩೮೧. ನಲ್ಲ=ಹರೆಯದವ. ಒಲ್ಲಿ=ಹೆಂಡತಿ ತರುಣಿ. ಒಲ್ಲ=ಲಗ್ನವಾಗುತ್ತಿಯೋ ಎಂದು ಕೇಳಿದರೆ ಮನಸ್ಸಿದ್ದರೂ ಮರ್ಯಾದೆಗೋಸ್ಕರ ಒಲ್ಲೆನೆಂದು ಹೇಳುವನು ತಾ|| ಬಯಸಿದ್ದು ಸಿಕ್ಕದಿದ್ದರೆ ಹಣ್ಣು ಹುಳಿಯೆಂದು ಹೇಳಿದ ಹಾಗೆ.

೧೩೮೩. ಅಂಬರ=ಆಕಾಶ. ಹೊರಗಾಗು = ಜಾತಿಭ್ರಷ್ಟನಾಗು ಪ್ರೀತಿಕೇಡು. ಉಳಿವವರು=ನಿತ್ಯಜೀವಿಗಳು. ಸಾಯದವರು.

೧೩೮೪. ಘನ = ( ಪದ್ಯ ೫೧೬ ) ಗಂಗೆ=ನೀರು ಕಂಗಳು=ಕಣ್ಣುಗಳು.

೧೩೮೫. ಸೋಮಶಂಕರ = ಶಿವ. ಅಧಿದೈವ=ಶ್ರೇಷ್ಠದೇವರು. ಭೀಮನೇಭಕ್ತ ಇದು ಹೇಗೋ ತಿಳಿಯದು.

೧೩೮೬. ನೆಲೆ=ಆಧಾರ, ನಿಲುಗಡೆ=( ಇದುಮಾಯ )

೧೩೮೭. ಶ್ರೀಶೈಲ = ಇದುದಕ್ಷಿಣದಲ್ಲಿ ಪ್ರಸಿದ್ಧವಾದ ಜಾತ್ರೆಯಸ್ಥಳ. ಕುಲಗಿರಿಗಳಲ್ಲೊಂದು.

೧೩೮೯. ಕೈಸೇರಿದ. ಸ್ವಂತ ಆಸ್ತಿ. ಚಾರು = ಸುಂದರಿಯಾದ ಬೀರು = ಬಿಟ್ಟುಬಿಡು.

೧೩೯೩. ಹತ್ತೆಂಟ ಕಾಲದ + ಎಡನು+ಅಕ್ಕು=೧೦-೮ ವರ್ಷ ತಡ ವಾದಿತಷ್ಟೇ. ತಾ॥ ಎಷ್ಟು ಅತ್ತರೂ ಕಡೆಗೆ ಎಲ್ಲರೂಹೋಗಬೇಕಲ್ಲಾ!

೧೩೯೭. ಕಳವ=ಕಳ್ಳತನವ:ಡು ವನ.ಮಾರಿ = ಮರಣ ಬಾಲೆಯರಬರಿ ನೋಟ=ಭೋಗಕ್ಕೆಅನುಕೂಲ ಇಲ್ಲದೆ ಸುಮ್ಮನೆ ಕಣ್ಣಿನಿಂದನೋಡಿ ಆಶೆಮಾ ಡುವ ಹರೆಯದಹುಡುಗ ಹುಡುಗೆಯರ ನೋಟ.

೧೪೦೧. ಅಕ್ಕಿಯಲ್ಲಿ ತೆಂಗಿನಕಾ ಯನ್ನಿಟ್ಟರೆ ಅದುಕೆಡುವದೆಂದುಹೇಳಿಕೆ ಇರುವಂತೆಯೂ (ಜಾನಕ್ಕಿ) ಸೀತೆ ಯಿಂದ ಲಂಕೆಯು ಹಾಳಾದಂತೆಯೂ ಕಣಿಕದಲ್ಲಿ ಮೆಕ್ಕಿಕಾಯನಿಟ್ಟರೆ ಹಿಟ್ಟೆಲ್ಲ ಕಹಿಯಾಗುವಂತೆಯೂ ದುಷ್ಟಬುದ್ಧಿ ಹೊಕ್ಕಲ್ಲಿಕೇಡಾಗುವದೆಂದುತಾತ್ಪರ್ಯ

೧೪೦೨. ಕಚ್ಚು = ಮತ್ಸರ. ಹೊತ್ತು=ಹೆಚ್ಚಾಗು ಬೆಂದರೆ,=ನಾಶ ವಾದರೆ. ಹಬ್ಬ=ಸಂತೋಷ.

೧೪೦೩. ಎತ್ತರವಾದದ್ದುಮುರಿ ದೀತು ಗಿಡ್ಡವಾದ್ದು ಉಳಿದೀತು ಅಂದರೆ ದೀನನಿಗೆ ಸುಖ,ಗರ್ವಿಗೆನಾಶನ

೧೪೦೫. ಅರಿತು = ಭೋಗೆಚ್ಛೆ ಯನ್ನು ತಿಳಿದು ಇದು ಎಲ್ಲರಿಗೆಸಾಧ್ಯ ವಾಗದಿದ್ದರೂ ಹೀಗಾಗಬೇಕೆಂಬ ಅಪೇ ಕ್ಷೆಯುಮಾತ್ರ ಯಾರನ್ನೂಬಿಟ್ಟಿರುವದಿಲ್ಲ.

೧೪೦೬. ತಾ॥ ಮುದ್ದು=ಗುಣವಂತ ಎದ್ದು=ಕಾಲಕೆದರಿಜಗಳತೆಗೆದು. ಸಮ ರ್ಥರನ್ನು ನಾಶಮಾಡುವದಕ್ಕೆ ವಿನಾ ಕಾರಣ ಅಸೂಯಪಡುತ್ತಿರುವನೀರು ಕೂಡಿದರೆ ಅದರಿಂದಉತ್ತಮರಿಗೆ ಕೇಡಾ ಗದು.

೧೪೦೭. ಬೇಗೆ=ಬೆಂಕಿ; ರಾತ್ರಿ. ಮೂಗ=ಮೂಕ. ಗರ್ವಿಷ್ಠ. ಆಗದರ= ವೈರಿಗಳನ್ನು ನಡುವಿರಳು=ಮಧ್ಯರಾತ್ರಿ.

೧೪೦೯. ಟೀ॥ ವಿಷಯಲಂಪಟನಾದ ಲ್ಲಿಯೂ ಸಾಲಗೊಯಿಕನಾದಲ್ಲಿಯೂ. ನಿರುದ್ಯೋಗಿಯಾದಲ್ಲಿಯೂ, ದೇವ ರನ್ನು ಬಿಟ್ಟು ಬಿಟ್ಟು ನಡೆದುಕೊಂಡ ಲ್ಲಿಯೂ ಏನುಮಾಡಬೇಕೆಂದು ತಿಳಿ ಯದೆ ಹೋಗುವದು ಆಶ್ಚರ್ಯವಲ್ಲ.

೧೪೧೦. ಮಾನಿಸು = ಬಹಿರಂಗ ಮಾಡು. ಹೇಳು. ಎಗ್ಗ=ಹುಚ್ಚ ಮೂ ರ್ಖ. [ಅಪಮಾನವಾಗು.]

೧೪೧೨. ಮನಭಂಗ = ಮನಸ್ಸು ಮುರಿ ಘನ=ಆರೋಗ್ಯಕ್ಕೆ ಮೂಲ ವಾದ ನಿದ್ರೆಹೋಗು=ಜ್ಞಾನ ತಂತು ಗಳು ಬಲಶಿಂನವಾಗಿ ಬಂದರೋಗ.

೧೪೧೩. ಕೆಟ್ಟಮೈಹೆಂಗಸು=ಉಷ್ಣ ವುಳ್ಳವಳು. (ಕಡಜನಹುಳದ ಮನೆ ಯನ್ನು ಮುಟ್ಟಬಾರದು.)

೧೪೧೪. ಕೆಲನಾಗು=ಇಭ್ಭಾಗವಾಗು. ಹಲವುತುಂಡಾಗು. ಹೋಳಾಗು

೧೪೧೫. ಬಾಗು=ಬುದ್ಧಬರು ಹೇಗ=ಮೂಢ.

೧೪೧೭. ಕುಲಕರಣಿಯು ಸಂಗಡ ದ್ವೇಷವು ತನ್ನ ನಾಶಕ್ಕೆನೇ ಕಾರಣ

೧೪೧೮. ಇತ್ರದಣಿ=ದಾನಶೂರನಾಗು.

೧೪೨೦. ನೀರಬೊಬ್ಬಳಿ = ನೀರಿನ ಗುರಳಿ. ಕ್ಷಣಭಂಗುರವಾದ ಸಂಸಾರ ಸುಖ, ಶರೀರ. ಸಾರಿ=ಭೋಗದಲ್ಲಿ ಮುಳುಗಿ. ಸಾರಗುಣಿಯಾಗು=ಸಾರವಾದ ಸತ್ವಗುಣವುಳ್ಳವನಾಗು, ಪುರುಷೋತ್ತಮನಾಗು. ನಿಜತಿಳಿ=ನಿನ್ನನು ಅರಿತುಕೊ. ಸರು ...... ಸರ್ವ ಕಾರಣಿಕ=ಅವತಾರಿಕ ಪುರುಷ, ೧. ಮಹಾತ್ಮ, ೨. ಸರ್ವರವಿಚಾರವನ್ನು ತಿದ್ದುವವ.

೧೪೨೧. ಆಚಾರ ಸಂಪನ್ನನು ಶೀಲ ಸಂಪನ್ನನಾಗಿರಬೇಕು. ದೂಷಣ ಭೂಷಣಗಳನ್ನಳಿದು ನೀತಿಯನ್ನೇ ನೆಡಿಸುವವನಿಗೆ ದೇವರಷ್ಟು ಮಾನದೊರೆಯುವದು.

೧೪೨೨. ಆಟಕ್ಕುವಾಕೆ=ಹೆಂಡತಿ. ಬೆಟ್ಟತ್ತು=ಸ್ವಲ್ಪವಾದರೂ. ಸಟ್ಟುಗದಿ ಗೋಣು ಮುರಿವಳು = ಹುಟ್ಟಿನಿಂದ ಹೊಡೆದುಕೊಲ್ಲುವಳು ಇಲ್ಲವೆ ಅಡಿಗೆಯಲ್ಲಿ ವಿಷಹಾಕುವಳು. ಅಲಗಿಲ್ಲದೆ= ಕೈಯಲ್ಲಿ ಕತ್ತಿ ಇಲ್ಲದಿದ್ದರೂ ಕಾಡಿಸಿ ತನ್ನ ಆಧೀನತೆಯಲ್ಲಿಟ್ಟುವಳು. ಹೆಂಡತಿಯೊಡನೆ ದ್ವೇಷಕಟ್ಟಿಕೊಂಡರೆ ಕೇಡಾಗುವದೆಂದು ತಾತ್ಪರ್ಯ.

೧೪೨೩. ಕೆಡೆಕೆಡೆದು=ಸಿಕ್ಕಲ್ಲಿ (ಬಿದ್ದು) ಮೈಗಳ್ಳನಾಗಿ ಕಂಡೆ=ಕೈಚೂರಿ

೧೪೨೪. ಓಲಯ್ಸು=ಅಧಿಕಾರಿಗಳನ್ನು ಮೆಚ್ಚಿಸು. ಮೇಲು=ದೊಡ್ಡವ. ಸೋಲದಬುದ್ಧಿ=ಆತ್ಮನಿಶ್ಚಯ. ಸ್ವಂತ ವಿಚಾರ, ಭಾಗ್ಯದಕೀಲು = ಸುಖದ ಮೂಲ.

೧೪೨೬. ಊರನರಿ = ಕುತಂತ್ರಿ. ಸ್ವಾರ್ಥಿ.

೧೪೨೭. ವಿಶ್ವಬಂಧುವಿಗೆ ಸರ್ವರೂ ಸ್ನೇಹಿತರೇ.

೧೪೨೮. ನಕ್ಷತ್ರ ತೆಗೆಯುವನು. ರಂಧ್ರ=ದೇಹದಲ್ಲಿ ಒಂಭತ್ತು ರಂಧ್ರಗಳು ಇಲ್ಲವೆ ನವದ್ವಾರಗಳು ಇರುವದರಿಂದ ಇದು ಒಂಭತ್ತಕ್ಕೆ ಸಂಜ್ಞೆಗತಿ= ಸೂರ್ಯನು ಹಾದುಹೋಗುವ ಮಾರ್ಗ. ಸ್ಥಾನರಾಶಿ, ಸೂರ್ಯನು ತಿಂಗಳಿಗೊಂದರಂತೆ ೧೨ ರಾಶಿಗಳಲ್ಲಿ ತಿರುಗುವನು. ಆದಿತ್ಯರು = ಸೂರ್ಯನು. ಒಂದಾಗಿ ಅರ್ಥಿಸುತ=ಒಂದೇ ಎಂದು

ತಿಳಿದು. ಅಂದಿನತಿಥಿ=ಆ ದಿವಸದ ತಾರೀಖು. ತಿಥಿ ಎಂಬ ಶಬ್ದವು ಚಂದ್ರಮಾನದ ೧೫ ದಿನಸಗಳಿಗೆ ಪ್ರಯೋಗವಾಗುವದು. ಮುಂದೆಬರು=ಸಂಗಡಲೇ ತಿಳಿದುಬರು. ಸೂತ್ರ—ಯಾವದೊಂದು ದಿವಸದ ನಕ್ಷತ್ರ ತಿಳಿಯಬೇಕಾದರೆ ಒಂಭತ್ತರಿಂದ ಅಂದರೆ ಧನುರಾಶಿಯಿಂದ ಆ ದಿವಸ ಸೂರ್ಯನಿರುವ ರಾಶಿಗೆ ಎಣಿಸಿದರೆ ಯಾವ ಸಂಖ್ಯೆಬರುತ್ತದೋ ಆ ಸಂಖ್ಯೆಗೆ ತಿಥಿಯ ಸಂಖ್ಯೆಯನ್ನು ಕೂಡಿಸಿ ಬರುವದೇ ನಕ್ಷತ್ರ ಸಂಖ್ಯೆಯಾಗುವದು. ಇದರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಒಂದು ಹೆಚ್ಚಿಗೆಕೂಡಿಸಬಹುದು ಇಲ್ಲವೆ ಕಳೆಯಬಹುದೆಂದು ಜ್ಯೋತಿಷ್ಯ ಶಾಸ್ತ್ರನಿಯಮವಿದೆ. ಉದಾ ೧೮೬೨ ನೆಯ ಇಸ್ವಿ ) ನೆಯ ಜುಲೈಯಲ್ಲಿ ಹಿಂದೂ ಪಂಚಾಂಗದ ಪ್ರಕಾರ ತಿಥಿಯು ಆಷಾಢಶುದ್ಧ, ನಾಲ್ಕು (೪) ಇರುವದು. ಆ ದಿವಸದಲ್ಲಿ ಸೂರ್ಯನು ಮಿಥುನ ರಾಶಿಯಲ್ಲಿರುವವರಿಂದ ಧನುರಾಶಿಯಿಂದ ಅಲ್ಲಿಗೆ ಎಣಿಸಿದರೆ ೭ ಬರುತ್ತದೆ. ಇದಕ್ಕೆ ತಿಥಿಯ ಸಂಖ್ಯೆಯನ್ನು ಕೂಡಿಸಿದರೆ ೭+೪=೧೧ ಬರುವದು. ಇದು ಸಮವಾಗದ್ದರಿಂದ ಹಿಂದಿನ ನಿಯಮದಂತೆ ೧ ಕಳೆಯಬೇಕು ಅಂದರೆ ೭+೪=೧೧—೧=೧೦ ಬಂದಂತಾಯಿತು. ಹತ್ತನೆಯ ನಕ್ಷತ್ರವೆಂದರೆ ಮಘಾ. ಇದೇ ಆ ತಿಥಿಯಲ್ಲಿರುವ ನಕ್ಷತ್ರರಾಶಿ. ಕೃಷ್ಣ (ಬಹುಲ) ಪಕ್ಷವಾದರೆ ಶುಕ್ಲ (ಶುದ್ಧ) ಪಕ್ಷದ ೧೫ ತಿಥಿಗಳನ್ನಲ್ಲದೆ ಕೃಷ್ಣಪಕ್ಷದ ತಿಥಿಗಳನ್ನೂ ಅದಕ್ಕೆ ಕೂಡಿಸಬೇಕು. ಈ ಸಂಖ್ಯೆಯು ೨೭ ಕ್ಕಿಂತ ಹೆಚ್ಚಾದರೆ ನಕ್ಷತ್ರ ಸಂಖ್ಯೆಯಾದ ೨೭ ಳನ್ನು ಅದರಲ್ಲಿ ಕಳೆದು ಉಳಿದ ಸಂಖ್ಯೆಯೇ ನಕ್ಷತ್ರ ಸಂಖ್ಯೆಯೆಂದು ತಿಳಿಯುತಕ್ಕದ್ದು. ಉದಾ—ಇಸ್ವಿಸನ್ ೧೮೬೨ನೆಯ ಜುಲೈ ೨೫ ನೆಯ ತಾರಿಖಿನಲ್ಲಿ ತಿಥಿ ಆಷಾಢ ಬಹುಲಪಕ್ಷ ೧೪. ಇರುವದು. ಆಗ ಸೂರ್ಯನು ಕರ್ಕಾಟಕದಲ್ಲಿರುವನು ಹಿಂದೆ ಹೇಳಿದಂತೆ ಧನುರಾಶಿಯಿಂದ ಈ ರಾಶಿಗೆ ಎಣಿಸಿದರೆ ೮ ಬರುತ್ತದೆ. ಇದಕ್ಕೆ ತಿಥಿಗಳು ಶುದ್ಧ ಪಕ್ಷದವು ೧೫ ಬಹುಲಪಕ್ಷದವು. ೧೪ ಕೂಡಿಸಲಾಗಿ ೮+೧೫+೧೪=೩೭ ಬರುವದು. ಇದರಲ್ಲಿ ನಕ್ಷತ್ರ ಸಂಖ್ಯೆ ೨೭ ಕಳೆದರೆ ೩೭—೨೭—೧೦ ಬರುತ್ತದೆ. ಇದು ಸಮವಲ್ಲದ್ದರಿಂದ ಹಿಂದಿನ ಸೂತ್ರದ ಪ್ರಕಾರ ೧ ಕಳೆಯಬೇಕು. ಅಂದರೆ ೯ ಆಯಿತು ಇದೇ ಆ ದಿವಸವಲ್ಲಿದ್ದ ನಕ್ಷತ್ರರಾಶಿ. ಇದು ಆಶ್ಲೇಷ. ಸೂ॥ ಈ ಲೆಕ್ಕವು ಕೆಲವು ಸಾರಿ ಹೊರಡುವದಿಲ್ಲ. ಇದು ಸೂತ್ರದೋಷವೋ ಇಲ್ಲವೆ ಜ್ಯೋತಿಷ್ಯ ಸೂತ್ರವನ್ನು ಕನ್ನಡಿಸುವಲ್ಲಿ ಮಾಡಿದ

ದೋಷವೋ ಇಲ್ಲವೆ ಆದರ ಅರ್ಥವನ್ನು ಸರಿಯಾಗಿ ತಿಳಿಯದೆ ಉಂಟಾದ ದೋಷವೋ ಹೇಳಲಾಗದು. ಅಂತೂ ಇದು ಚಂದ್ರಮಾನ ಗಣಿತವೆಂದು ನೆನಪಿನಲ್ಲಿಡತಕ್ಕದ್ದು.

೧೪೨೯. ಕರಣತೆಗೆಯುವದು ಗತವಾದಮಾಸ=ಹೋದತಿಂಗಳ ಸಂಖ್ಯೆ. ಗತಿಯಿಂದ=(ದಕ್ಷಿಣಾಯನ ಉತ್ತರಾಯಣ ಎಂಬ ಎರಡುಗತಿಗಳು ಇದು ೨ಕ್ಕೆ ಸಂಜ್ಞೆ ಎರಡರಿಂದ ದ್ವಿಗುಣಿಸಿ=ಎರಡಷ್ಟುಮಾಡಿ. ಪ್ರತಿಪದ=ಸೌರಮಾನತಿಂಗಳ ಮೊದಲನೆಯ ದಿವಸ, ಕರಣ=ಬವ, ಬಾಲವ, ಕೌಲವ, ತೈತುಲ, ಗರಜ, ವಣಜ, ಭದ್ರ, ಶಕುನಿ, ಚತುಷ್ಪಾತ್, ನಾಗವಂಕಿ, ಮಸ್ತುಘ್ನಂ ಎಂಬ ಹನ್ನೊಂದುಕರಣಗಳು. ದಿನ ಒಂದಕ್ಕೆ ೨ ಅತೀತವಾಗುತ್ತವೆ. ಆದ್ದರಿಂದ ೫॥ ದಿವಸಕ್ಕೆ ಒಮ್ಮೆ ಅವು ತೀರುತ್ತ ಬರುತ್ತವೆ. (೧) ಉದಾ—ಸನ್ ೧೮೬೨ ಇಸ್ವಿ ೧ನೆಯ ಜುಲೈ ಚೈತ್ರ ವೈಶಾಖ ಜೇಷ್ಠ ಎಂಬೀ ಮೂರು ಮಾಸಗಳು ಗತಿಸಿ ಹೋಗಿವೆ. ಹಾಗಾದರೆ ಈ ಮೂರನ್ನು ೨ ರಿಂದ ಗುಣಿಸಬೇಕಾಯಿತು. ೩×೨=೬. ಆಗ ಪಾಡ್ಯ ಮೊದಲಾದ ತಿಥಿಗಳು ೪ ಆಗಿವೆ ಈ ನಾಲ್ಕು ಅದಕ್ಕೆ ಕೂಡಿಸಿದರೆ ೬+೪=೧೦ ಆಯಿತು. ಈ ಪ್ರಕಾರ ದಿವಸಕ್ಕೆ ಇರುವ ಚತುಷ್ಟಕರಣ ಹೊರಡುತ್ತದೆ. (೨) ಉದಾ—ಸನ್ ೧೮೬೨ ಇಸ್ವಿ ಮಾರ್ಚ ೨೯ರಲ್ಲಿ ೧೧×೨=೨೨+೨೯ ತಿಥಿಗಳು ಅಂತೂ ೫೧ ಇದರಲ್ಲಿ ೪೪ ಕಳೆದರೆ ೭ ಉಳಿಯುವದು. ಇಲ್ಲಿ ೫೧ರಲ್ಲಿ ೪೪ ಕಳೆಯಬೇಕಾಯಿತು. ಯಾಕಂದರೆ ೧೧ ಕರಣಗಳು ಮಾತ್ರವೇ ಇರುತ್ತವೆ. ಈ ಲೆಕ್ಕವು ಕೆಲವುಸಾರಿ ತಪ್ಪುವದರಿಂದ ಸೂತ್ರವು ಸಂಶಯಾಸ್ಪದವಾಗಿದೆ.

೧೪೩೦. ಯೋಗತೆಗೆಯುವದು=ಆದಿಯ+ಆ+ಮಾಸ=ಆರಂಭವ ತಿಂಗಳಿಂದ ಅಂದರೆ ಚೈತ್ರಮಾಸದಿಂದ ಲೆಕ್ಕಿಸಿನಡೆಯುವ ತಿಂಗಳವರೆಗೆ ಕಳೆದುಹೋದತಿಂಗಳ ಸಂಖ್ಯೆಯನ್ನು ಎಣಿಸಿ ವೇದದಿಂ ತಾ ಗುಣಿಸಿ=೪ರಿಂದ ಗುಣಾಕಾರಮಾಡಿದರೆ (ವೇದಗಳು ೪ಕ್ಕೆ ಸೌಂಜ್ಞೆ) ಯೋಗವು ತತ್ಕ್ಷಣವೆ. ಬಂದು ಹೋಗುವದು. (೧) ಉದಾ—೧೮೬೨ ಜುಲೈಗೆ ಗತಿಸಿದ ತಿಂಗಳ ಸಂಖ್ಯೆ ೩×೪ರಿಂದ ಗುಣಿಸಿದರೆ ೧೨ ಬರುವದು. ಇದಕ್ಕೆ ಆಡಿನದ ತಿಥಿ ಅಂದರೆ ೪ ಕೂಡಿಸಿದರೆ ೧೨+೧೬ ಬರುತ್ತದೆ ಇದೇ ೬೦ನೆಯ ಯೋಗ. ಇದಕ್ಕೆ ಸಿದ್ಧಯೋಗವೆಂದು ಹೆಸರು ಒಟ್ಟುಯೋಗಗಳು ೨೭.

(೨) ಉದಾ. ೧೮೬೨ ಇಸ್ವಿ ೨೯ ಮಾರ್ಚಿಗೆ ಕಳೆದ ತಿಂಗಳ ಸಂಖ್ಯೆ.

೧೧×೪=೪೪ ಇದಕ್ಕೆ ತಿಥಿಗಳನ್ನುಕೂಡಿಸಿದರೆ (೧೪+೧೫)=೨೯. ೪೪+೨೯=೭೩ ಬರುತ್ತದೆ. ಇದರಲ್ಲಿ ೫೪ ಕಳೆದರೆ ೭೩−೫೪=೧೯ ಇದೇ ೧೯ನೆಯ ಯೋಗ. ಇದಕ್ಕೆ ಪರಿಘವೆಂದು ಹೆಸರು ಈ ಲೆಕ್ಕವು ಒಮ್ಮೆ ಸರಿಯಾಗಿಬರುತ್ತದೆ ಒಮ್ಮೆ ಬರುವದಿಲ್ಲ.

೧೪೩೧. ಟೀ॥ ಕಳೆದ ತಿಂಗಳ ಸಂಖ್ಯೆಯನ್ನು ತಪ್ಪದೆ (ಕುಂದದೆ) ಎರಡಷ್ಟು ಮಾಡಿ ಬಂದಸಂಖ್ಯೆಗೆ ಆದಿನದ ತಿಥಿಯ ಸಂಖ್ಯೆಯನ್ನು ಕೂಡಿಸಿದರೆ ಬರುವದೇ ನಕ್ಷದ ಸಂಖ್ಯೆಯಾಗುವದು.

ಉದಾ−(೧) ಸನ್ ೧೮೬೨ ಜುಲೈ ೨೫ರಲ್ಲಿ ಆ ದಿವಸದ ತಿಥಿಗಳು ಕೂಡಿ ೨೯. ಕಳೆದುಹೋದ ತಿಂಗಳಸಂಖ್ಯೆ ೩. ಇದನ್ನು ಇಮ್ಮಡಿಮಾಡಿ ತಿಥಿಗಳನ್ನುಕೂಡಿಸಿದರೆ ೩×೨=೬+೨೯=೩೫ ಬರುತ್ತದೆ. ಇದರಲ್ಲಿ ೨೭ ಕಳೆದರೆ ೮ ಉಳಿಯುತ್ತದೆ. ಜೋತಿಷ್ಯಸೂತ್ರದಂತೆ ಇದಕ್ಕೆ ೧ ಕೂಡಿಸಿದರೆ ೯ ಬರುತ್ತದೆ. ಇದೇ ಆದಿವಸದ ನಕ್ಷತ್ರ. ಅಂದರೆ ಆಶ್ಲೇಷ. ಈ ಲೆಕ್ಕವು ಯಾವಾಗಲೂ ಸರಿಯಾಗಿದೆ.

೧೪೩೨. ತಿಥಿಗಳಲ್ಲಿ ನಂದೆ, ಭದ್ರೆ, ರಿಕ್ತ, ಪೂರ್ಣ, ಜಯವೆಂಬ ೫ ವಿಧ. ಒಂದೊಂದುವಿಧಕ್ಕೆ ಮೂರುತಿಥಿಗಳು ಇವುಗಳ ಸಂಖ್ಯೆಯು ಆ ದಿನದ ತಿಥಿಯ ಸಂಖ್ಯೆಗೆ ಸರಿಯಾದರೆಗ್ರಹಣವಾಗುವದು.? ಇವರ ಅರ್ಥವು ಸ್ಪಷ್ಟವಿಲ್ಲ.

೧೪೩೩. ಟೀ॥ ತನ್ನದೇಹ ಛಾಯವನ್ನು ತನ್ನ ಪಾದದಿಂದ ಅಳೆದು ಬಂದ ಸಂಖ್ಯೆಯನ್ನು ಇಮ್ಮಡಿಮಾಡಿ ಅದಕ್ಕೆ ೧೧ ಕೂಡಿಸಿ ಬಂದದನ್ನು ೨೧೦ರಿಂದ ಭಾಗಿಸಿದರೆ ಹೊರಡುವ ಸಂಖ್ಯೆಯೇ ನಡೆಯುವ ಘಳಿಗೆಯಾಗುವದು. ಸೂ॥ ಮಧ್ಯಾಹ್ನ ೧೨ ಘಂಟೆಯ ಒಳಗಾಗಿ ಛಾಯವನ್ನು ಅಳೆದರೆ ೨೧೦ ರಿಂದ ಭಾಗಿಸಿ ಬಂದ ಉತ್ತರವೇ ಘಳಿಗೆಯು ಸಂಖ್ಯೆ ಎಂದು ತಿಳಿಯತಕ್ಕದ್ದು.

(೧) ಉದಾ=ದೇಹ ಛಾಯ ೧೧ ಅಡಿ ಇದೆ, ೧೦+೧೦=೨೦+೧೧=೩೧. ಇದನ್ನು ೨೧೦ರಿಂದ ಭಾಗಿಸಿದರೆ ೨೧೦÷೧೩=$6\frac{2}{3}$ $\frac{4}{1}$ ೬।೨೪ಇದೇ ಆಗಿನ ಘಳಿಗೆ. ಇಂಗ್ರೆಜಿ ಲೆಕ್ಕದ ಪ್ರಕಾರ. ೧ ಗಳಿಗೆಯೆಂದರೆ ೨೪ ನಿಮಿಷ. ೨॥ ಘಳಿಗೆಯೆಂದರೆ ೧ತಾಸು. ಇದು ಮುಂಜಾನೆಯಛಾಯ. ಆರು ತಾಸಿನಮೇಲೆ ದೇಹಛಾಯವು ಇಷ್ಟಾದರೆ ಹೊತ್ತು ಮುಳುಗುವದಕ್ಕೆ ೬।೨೪. ಘಳಿಗೆ ಉಳಿದಿವೆ ಎಂದು ತಿಳಿಯಬೇಕು. ಈ ಸೂತ್ರವು ಪೂರ್ಣಸರಿಯಾಗಿದೆ.

೧೪೩೪. ಭಗಣ. ನಕ್ಷತ್ರ, ರಿಕ್ಷ=(ಸಂ ಋಕ್ಷ) ನಕ್ಷತ್ರ ಟೀ॥ ಸೂರ್ಯನು ಮೃಗಶಿರನಕ್ಷತ್ರ ಮೊದಲ್ಗೊಂಡು

ಮೂರು ಅಂದರೆ ಮೃಗ, ಆರ್ದ್ರ, ಪುನರ್ವಸು ಈ ಈ ಮೂರು ನಕ್ಷತ್ರಗಳಲ್ಲಿದ್ದ ಯಾವದೊಂದು ದಿವಸದಲ್ಲಿ ಚಂದ್ರನು ಮಘ ನಕ್ಷತ್ರವನ್ನು ಬಿಟ್ಟಿರುವ ಹಾಗೆ ಯೋಗವಾದರ ಆ ವರ್ಷ ಮಳೆಗಾಲ ವಿಪರೀತವಾಗುವದು. ಒಂದು ವರ್ಷದಲ್ಲಿ ಸೂರ್ಯನು ೨೭ ನಕ್ಷತ್ರಗಳನ್ನು ೧೫ ದಿವಸಕ್ಕೆ ಒಂದರಂತೆ; ಚಂದ್ರನು ದಿನಕ್ಕೆಒಂದರಂತೆ ಒಂದು ತಿಂಗಳಲ್ಲಿ ದಾಟಿ ಹೋಗುತ್ತಾರೆ.

೧೪೩೫. ಮೃಗಧರ=ಚಂದ್ರ. ಮೃಗ=ಮೃಗಶಿರನಕ್ಷತ್ರ ಮಿಗೆ=ತರುವಾಯ ಟೀ॥ ಅಗಿಯ ಹುಣ್ಣಿಮೆ ಹೋಗಿ ಮೂರುದಿವಸದಲ್ಲಿ ಚಂದ್ರನು ಮೃಗಶಿರ ನಕ್ಷತ್ರದಲ್ಲಿದ್ದರೆ ಜಗತ್ತಿಗೆ ಸಾಕುಬೇಕಾಗುವಷ್ಟು ಮಳೆಯಾಗುವದು. ಸೂ॥ ಅಗಿಯಹುಣ್ಣಮೆಹೋದ ಮೂರುದಿವಸಕ್ಕೆ ಮೃಗಶಿರನಕ್ಷತ್ರ ಬರುವದು ಸಾಧ್ಯವಿಲ್ಲ! ಆದ್ದರಿಂದ ಬೇರೆ ಪಾಠವಿರಬೇಕೆಂದು ಕೆಲವರು.

೧೪೩೭. ಮಾರ್ತಂಡ=ಸೂರ್ಯ. ಸಂದಿಸಿ ಯೇಸಿಯೆ ಪರಿವೇಷ=ಕೆರೆಕಟ್ಟಿದರೆ ನಿಚ್ಚ=ಯಾವಾಗಲು. ದಿನಾಲು ಕುಂದಣಿಗೆ=ಅವಲಕ್ಕಿ ಕುಟ್ಟುವ ಒನಿಕೆ. (ಯ ಪೆಟ್ಟು) ಹಾನಿಗೆ ಸೌಂಜ್ಞೆ ಟೀ॥ ಪ್ರತಿ ದಿನದಲ್ಲಿಯೂ ಸೂರ್ಯಚಂದ್ರರಿಗೆ ಗುಡಿಕಟ್ಟುತ್ತಿದ್ದರೆ ದೇಶಕ್ಕೆ ಹಾನಿಯಾಗುವದು. ಇದೆ ೧೯೦೩ನೆಯ ಸಪ್ಟಂಬರ ತಿಂಗಳಲ್ಲಿ ಸೂರ್ಯನಿಗೆ ಕೆರೆ ಕಟ್ಟಿತ್ತು. ಇದರಿಂದ, ಎಲ್ಲೆಲ್ಲು ಮಹಾಪ್ರಳಯ, ಭೂಕಂಪ, ಜಪಾನ, ಸಿಸಲಿಗಳ, ಜ್ವಾಲಾಮುಖಿಗಳಿಂದ ಅನಾಹುತಗಳಾದವೆಂದು ಹೇಳುವರು.

೧೪೩೭. ಟೀ॥ ಮುಂಜಾನೆ ಮೋಡವು ಕೂಡಿ ಸಂಜೆಗೆ ಹರಿದುಹೋಗುತ್ತ ಬೆಳಿಗ್ಗೆ ಇದ್ದ ಕಪ್ಪು. ಬಣ್ಣವು ಹೋಗಿ ಬೂದಿಯ ಬಣ್ಣವಾಗುತ್ತ ನಡೆದರೆ. ಮಳೆಯು ಬರುವದಿಲ್ಲ.

ಇಲ್ಲಿ. W. ಎಂಬವರು ಕತ್ತಲೆಯು ಬಣ್ಣವೆಂತಲೂ ೯. ೩. ಪ್ರತಿಗಳಲ್ಲಿ ಕತ್ತೆ ಕಣ್ಣಾಗೆ ಎಂತಲೂ ಪಾಠಗಳಿರುವವು.

೧೪೩೮. ಟೀ॥ ವಾಯುವ್ಯದಿಕ್ಕಿನಿಂದ ಗಾಳಿ ಬೀಸಿ ಮೋಡಗಳು ಎದ್ದರೆ ಬಹು ತೀವ್ರವಾಗಿ (ವಹಿಲದಿಂ). ದೊಡ್ಡ ಮಳೆಯಾಗುವದು. ಅದೇ ನೈರುತ್ಯದಿಕ್ಕಿನಿಂದ ಬೀಸಿದರೆ ಬಂದಮೋಡವು ಗಾಳಿಗೂಡಿ ಓಡಿಹೋಗುವದು. ‡ ಅಳಿದು ಅಳಿದುಂಂ= ಬಿಟ್ಟು ಬಿಟ್ಟು. ಅರ್ಕನು=ಸೂರ್ಯನು. ಉದಯಿಸಲು = ಕಾಣಿಸಿಕೊಂಡರೆ. ತಳುವದೇಬಕ್ಕು=ತಪ್ಪದೇ ಆಗುವದು.

‡ ವಾಯುವಿನಿಂ ವೃಷ್ಟಿಭೇದ, ವಿವೇಕ ಚಿಂತಾಮಣಿ

೧೪೪೦. ಟೀ ॥ ಪೂರ್ವದಿಕ್ಕಿನಲ್ಲಿ (ಅಡರಿ) ವಿಶೇಷವಾಗಿ ಮಿಂಚಿ. ಪಶ್ಚಿಮದಿಕ್ಕಿನಲ್ಲಿ ಮಳೆಬಿಲ್ಲು (ಧನುವೇಳೆ) ಮೂಡಿ, ಉತ್ತರಕ್ಕೆ ದೊಡ್ಡಗಾಳಿಯು ಬೀಸಲಿಕ್ಕೆ ಹತ್ತಿದರೆ ಮಳೆಯು ತಡವಿಲ್ಲದೆ ಬರುವದು.

೧೪೪೧. ಪಂಕ+ಜ+ಆರಾತಿ=ಕೆಸರಿನಲ್ಲಿ+ಹುಟ್ಟಿದ್ದರ ಅಂದರೆ (ಕಮಲದ)+ವೈರಿ=ಚಂದ್ರ. ಭೋಂಕನೆ= ಬೇಗನೇ. ಟೀ॥ ದಕ್ಷಿಣದಿಕಿನಲ್ಲಿ ಮೋಡಗಳೆದ್ದು (ಶಂಕರನದೆಸೆ) ಈಶಾನ್ಯದಿಕ್ಕಿನಲ್ಲಿ ಮಿಂಚು ಹುಟ್ಟಿ ಚಂದ್ರನಿಗೆ ಕೆರೆಕಟ್ಟಿದ್ದಾರೆ ಮಳೆಯಾಗುವದು ನಿಶ್ಚಯ.

೧೪೪೨. ಟೀ ॥ ಗುರು, ಮೇಷರಾಶಿಗೆ ಬಂದರೆ ದೊಡ್ಡಮಳೆಯಾಗಿ ಎಲ್ಲತರದ ಧಾನ್ಯಗಳು ಬೆಳೆದು ಜನರಿಗೆ ಸುಖವಾಗುವದು. ೮ s ಪ್ರತಿಗಳಲ್ಲಿ ನೆರೆಹರುಷವಕ್ಕು ಎಂಬದರ ಬದಲಿಗೆ ಕರೆಯುಲ್ಹನಕ್ಕು ಎಂಬ ಪಾಠವಿದೆ.

೧೪೪೩. ಜಯ = ಆರೋಗ್ಯ. ಮಿಸುನಿ = (ಭಂಗಾರ) ಕಾಂತಿಯು.

೧೪೪೪. ಮಥನ=ಕಾಳಗ. ಜಗಳ. ಹತವಾಗು=ಸಾಯು.

೧೪೪೫. ಏಡಿ=ಕರ್ಕಾಟಕ ರಾಶಿ. ನೋಡೆ=ಪಂಚಾಗದಪ್ರಕಾರ ಇಲ್ಲವೆ ಅನುಭವದಿಂದತಿಳಿದು ಕಡೆಮಳೆ+ಅಕ್ಕು ಹಿಂಗಾರಿ = ವಿಶೇಷವಾಗುವದು. ಈಡೇರು=ಸುಖ ಹೆಚ್ಚು;

೧೪೪೬. ಸಿಂಗ=ಸಿಂಹ. ಸಂಗರ= ಯುದ್ಧ. ಅಂಗನೆಗೆ ಬಾಧೆಪಿರಿದಕ್ಕು= ವಿಷಮಜ್ವರ ಇನ್‌ಫ್ಲುಯಂಜ ಪ್ಲೇಗು ಇತ್ಯಾದಿ ಪಿಡುಗುಗಳು ಹೆಚ್ಚಾಗುವವು ಇದಕ್ಕೆ ಹೆಣ್ಣುಮಕ್ಕಳು ಆಹುತಿಯಾಗುವರು.

೧೪೪೭. ಕನ=ಕನ್ಯರಾಶಿ. ಚಿನ್ನದಮಳೆ = ಬೆಳೆಯುಸಮೃದ್ಧಿಯಿಂದ ಹಣವು (ಬಂಗಾರವು) ಕೂಡಿಬೀಳುವದು ಪಶುಕರೆಯುಕ್ಕು = ಹಾಲುಹೈನ ಸಮೃದ್ಧಿಯಾಗುವದು. ಮಂಡನದ= ಪುಷ್ಟರಾದ; ಸುಖದಿಂದ ಬೆಳೆದ.

೧೪೪೮ ನೆಲೆಯಾಗಿ=ಬಿಟ್ಟುಬಿಡದೆ. ನಿಲಕಾಲ=ಯಾವಾಗಲು ಇರುವ.

೧೪೪೯. ಚೇಳು = ವೃಶ್ಚಿಕರಾಶಿ. ಕೋಳಾಗು=ನಾಶವಾಗುವವು.

೧೪೫೦. ಬಿಲ್ಲು = ಧನುರಾಶಿ. ತಲ್ಲಣ=ಸಂಕಷ್ಟ. ಕ್ಷೋಭೆ. ಬೆಳೆಚನ್ನಾಗಿ ಆದರೂ ಜನರಿಗೆ ಸುಖವಿಲ್ಲ.

೧೪೫೧. ಮರಕತೋರಣ=ಎಲೆಗಳಿಂದ ಮಾಡಿದ [ಒಂದು ವಿಶೇಷತರದ ಶೃಂಗಾರ ಇದು ಸಂತೋಷಕ್ಕೆ ಗುರುತು.

೧೪೫೨. ಅಂಬರದ+ವರೆಗೆ=ಆಕಾಶಕ್ಕೆ ಮುಟ್ಟುವಷ್ಟು ಎತ್ತರ.

೧೪೫೩. ಮಾನಖಂಡುಗವಕ್ಕು= ಚಿಟ್ಟಗೆ ಖಂಡಗ ಜಿಳಿಯುವದು.

೧೪೫೫. ಟೀ॥ ಐದನೆಯ ನಕ್ಷತ್ರ ವಾದ ಮೃಗಶಿರಕ್ಕೆ [ತಾರೇಶ] ಚಂದ್ರ ನು ಬಂದಿರಲಾಗಿ ಲೋಕದಲ್ಲಿ ಅನೇಕ ಅನಾಹುತಗಳು ಉಂಟಾಗಿ ಪ್ಲೇಗು ರೋಗವು ಪ್ರಬಲವಾಗುವದು. ತಾರೆ ಎಂಬದಕ್ಕೆ ವಾಯುವೆಂದು ಕೆಲವರು ಅರ್ಥ ಮಾಡಿ ಮಳೆಯು ಧೂಮ್ರ ರೂಪವಾಗಿ ಹೋಗುವದೆಂದು ಟೀಕಿ ಸುವರು.

೧೪೫೬. (ಪಂಚತಾರೆ) =ಐದ ನೆಯ ನಕ್ಷತ್ರವಾದ ಮೃಗಶಿರ. ಮೃಗ ಲಾಂಛನ=ಚಂದ್ರ. ಟೀ॥ ಚಂದ್ರನು ರೋಹಿಣಿ ಮೃಗಶಿರ ನಕ್ಷತ್ರಗಳನ್ನು (ಸಹತಾರೆ) ತೀರ ಸಮೀಪಿಸಿ ಬಂದು ಕೃಷ್ಣಪಕ್ಷದಲ್ಲಿ ದಕ್ಷಿಣಶೃಂಗವು ತಗ್ಗಾ ಗಿದ್ದರೆ ಕಂಚಿಯಿಂದ ದಕ್ಷಿಣಭಾಗಕ್ಕೆ ಮಳೆಯಿಲ್ಲ. ಧಾನ್ಯವನ್ನು ಕೂಡಿಟ್ಟು ಕೊಳ್ಳದಿದ್ದರೆ ಕಷ್ಟವುವುಂಟಾಗುವದೆಂ ದು ತಾತ್ಪರ್ಯ.

೧೪೫೭. ತಾರೆ ಸಪ್ತಮಿ=೭ನೆಯ ನಕ್ಷತ್ರ ತುಲರಾಶಿ. ಟೀ॥ ಚಂದ್ರನು ತುಲರಾಶಿಯಲ್ಲಿದ್ದಾಗ ಹುಟ್ಟಿದ ಅರ ಸಿಗೆ ವಧತಾರೆಯಾದರೆ ಅವನು ಯುದ್ಧ ಮಾಡದೆ ಸೋತು ರಾಜ್ಯವು ಹಾಳಾ ಗುವದು+ಈ ಪದ್ಯದ ಅರ್ಥವು ಸಂದಿ ಗ್ಧವಾಗಿದೆ ಮೂಲವೂ ಸರಿಯಾಗಿ ದೊರೆತಿರುವದಿಲ್ಲ.

೧೪೫೮. ಕಟ್ಟು+ಇದಿರು=ನೆಟ್ಟಗೆ ಎದುರಿನಲ್ಲಿ ತೊಟ್ಟು=ಗುರಿಯಬಿಂದು. ಒಟ್ಟಯಿಸಿ=ಅಲಕ್ಷಮಾಡಿ. ಮಾರಿ=ಸೊ ಕ್ಕಿನಿಂದ ಟೀ॥ ಯಾರಾದರು ನೆಟ್ಟಗೆ ಎದುರಿನಲ್ಲಿ ಸೀತರೆ ತಡಮಾಡದೆ ಪ್ರಯಾಣವನ್ನು ನಿಲ್ಲಿಸಬೇಕು. ಇದನ್ನು ಲಕ್ಷಿಸದೆ ಸೊಕ್ಕಿನಿಂದ ಮುಂದಕ್ಕೆಸಾ ಗಿದರೆ ಗುರಿಗಟ್ಟಿ ಹೊಡೆದಂತೆ ಕೇಡು ಉಂಟಾಗುವದು.

೧೪೫೯. ಟೀ॥ ಎಡಕ್ಕೆ ಸೀತರೇನಾ ಯಿತು? ಬಲಕ್ಕೆಸೀತರೇನಾಯಿತು? ಹೀ ಗಯೇ ಹಿಂದಕ್ಕೆ ಹೋದರೆ ಜೊತೆಗಾ ರನು ತಪ್ಪುವನಲ್ಲ? ಬಹಳದೂರ ಬಂದೆ ಇನ್ನು ಹಿಂದಕ್ಕೆ ಹೇಗೆ ಹೋಗಲಿ? ಎಂ ದು ಸಂದೇಹಮಾಡದೆ ಒಂದು ಅಡಿ ಯನ್ನಾದರೂ ಮುಂದಿಡದೆ ಪ್ರಯಾ ಣವನ್ನು ನಿಲ್ಲಿಸಬೇಕು (ಇಲ್ಲವಾದರೆ ಕೇಡಾಗುವದು)

೧೪೬೦. ಟೀ॥ ಯಾವದೊಂದು ಕೆಲಸಕ್ಕೆ ಸಿದ್ಧಿಸುವಾಗ ಇಲ್ಲವೇ ಮಾ ರ್ಗದಲ್ಲಿ ಹೋಗುತ್ತಿರುವಾಗ ಗೊತ್ತಿಲ್ಲ ದೆ ಅಕಸ್ಮಾತ್ತಾಗಿ ಶೀನುಬಂದರೆ ಇಲ್ಲವೆ ಯಾರಾದರು ಸೀತದ್ದು ಕೇಳಿಬಂದರೆ ಅ ಲ್ಲಿಯೇ ಪ್ರಯಾಣನಿಲ್ಲಿಸಬೇಕು. ಇಲ್ಲ ವಾದರೆ ಜೀವ ಘಾತವಾಗುವದು

೧೪೬೧. ಟೀ ॥ ತಾನಾಗಲಿ ಇನ್ನೊಬ್ಬರಿಗಾಗಲಿ ಪ್ರಯಾಣ ಮಾಡುತ್ತಿರುವಾಗ ನಾಯಿ, ಕತ್ತೆ, ಮಂಗ ಮೊದಲಾದ ಪಶುಗಳಲ್ಲಿ ಯಾವದಾಗಲಿ ಸೀತರೆ ಭಯವೇ ಸರಿ. ಹೀಗಾಗಲು ಸಂಗಡಲೇ ಪ್ರಯಾಣನಿಲ್ಲಿಸಬೇಕು.

೧೪೬೨. ಟೀ ॥ ಒಂದುಸಾರೆ ಸೀತರೆ ಅಶುಭ ಎರಡುಸಾರೆ ಸೀತರೆ ಒಳ್ಳೇದು ಕೆಮ್ಮಿಕ್ರೇಕರಿಸಿ ಉಗುಳದರೆ ಮತ್ತಷ್ಟು ಒಳ್ಳೇದು. ಇಂಥ ಉತ್ತಮ ಫಲವು ಬ್ರಹ್ಮನಿಗೂ ಇಲ್ಲ ಅಂದರೆ ಹೀಗೆ ಶಬ್ದಮಾಡಿ ಉಗುಳುವ ಲೇಸು ನಿರ್ಗಣನಾದ ಬ್ರಹ್ಮನಿಗೂ ಇಲ್ಲ.

೧೪೬೩. ಮನ್ನಿಸು = ಲಕ್ಷಿಸು ಆತಂಗೆ=ಪ್ರಾಮಾಣಿಕನಿಗೆ.

೧೪೬೪. ಒಕ್ಕು =+ಆಗೆ=ಶಕುನವು ಸಂಭವಿಸಿದರೆ. ಬಲಗಾದಡೆ+ಒಕ್ಕು+ಅದು. ಟೀ ॥ ಬಲಗಡೆಯಲ್ಲಿ ಶಕುನವಾದರೆ ಆ ಶಕುನವು ಒಳ್ಳೇದು. ಶಕುನದಮೇಲೆ ಶಕುನವಾದರೆ ನಾಯಿ ಮಿಾಸಲನೀರನ್ನು ನೆಕ್ಕಿದಂತೆ ಅಪಶಕುನವಾಯಿತೆಂದು ತಿಳಿಯಬೇಕು.

೧೪೬೫. ತಳಿಗೆ=ಪರಾತ. ಅಗಲವಾದಪಾತ್ರೆ ತಲೆ=ಕುತ್ತಿಗೆ. ಬೆಳಕಿನಲ್ಲಿ ಯಾರೂ ಕನ್ನಕೊರೆದು ಕಳವುಮಾಡರು. -ಉಳಿಯುದವರು ಸಾಯುದವರು (ಶಾಶ್ವತಜೀವಿಗಳು.)

೧೪೬೬. ಮೊಗ್ಗೆ=ಮುಗ್ಗಿ. ಕೋಷ್ಟಕ. ಗಣಿತ. ಗುಣಿಸು = ಲೆಖ್ಖ; ಪಂಚಾಂಗನೋಡಿ ಗಣಿತಹಾಕಿಹೇಳು. ಮೊಗ್ಗರದ=ಹಿಂಡುಗಟ್ಟಿ ತಿರುಗುವ ಹೆಗ್ಗಡೆಯೇ+ಬಲ್ಲ==(ಇವರ ಠಕ್ಕನ್ನೆಲ್ಲ) ಊರಗೌಡನು ಇಲ್ಲವೆ ಬುದ್ದಿವಂತನಾದ ಹಿರಿಯನುಬಲ್ಲನು.

೧೪೬೭. ತಾಂಬೂಲದಲ್ಲಿ ಆಯಾಪದಾರ್ಥಗಳನ್ನು ಹಾಕಿದರೆ ಸ್ತ್ರೀಯರು ವಶವಾಗುವರೆಂಬ ತಂತ್ರವಿದ್ಯೆಯೂ ಹಾವುಗಾರನು ಪುಂಗಿಊದಿ ಎಲುವಿನಲ್ಲಿ ಮಂತ್ರಶಕ್ತಿಯುಂಟೆಂದು ತೋರಿಸುವ ಕಣಕಟ್ಟೂ ಜೋಯಿಸರು ನಕ್ಷತ್ರವನ್ನುನೋಡಿ ತಾಯಿತಾದಿ ಯಂತ್ರಗಳನ್ನು ಕಟ್ಟುವದೂ ಇವುಮೂರು ಹೇಗಾದರೂ ಸುಳ್ಳೆಂದು ತಿಳಿಯಬೇಕು.

೧೪೬೮. ಟೀ ॥ ಹಸಿದರೆ ತಿನ್ನಲಿಕ್ಕೆ ಕೂಳಿಲ್ಲ. ಯಾವಾಗಲು ಜನರು ಪಂಚಾಂಗವನ್ನು ಕೇಳಲಿಕ್ಕೆಬರುವದರಿಂದ ಒಸೆದು + ಏಳ = ಕಿರಿದುಕೊಳ್ಳಲಿಕ್ಕೆ ಹೋದೇನಂದರೆ ಹೊತ್ತಿಲ್ಲ. ಇಂಥ ದರಿದ್ರ ಜೋಯಿಸರ ತೊಂದರೆಯೇ ಬೇಡ.

೧೪೬೯. ಜೋಯಿಸನಕೆಲಸ ದೊಡ್ಡದಾದರೂ ಪ್ರಾಪ್ತಿಯು ಅಲ್ಪವೆಂದು ತಾತ್ಪರ್ಯ ಪುಟ೩೦

೧೪೭೦. ಬಟ್ಟೆ=ಮಾರ್ಗ ಹೊಟ್ಟೆ

ಜಾಲಿಯ ಮುಳ್ಳು=(ದಪ್ಪಸಾದ)ಡಬ್ಬ ಜಾಲಿಯಮುಳ್ಳು .ಗಿಜವಾಯಿ=ಜೋಲುಬಾಯಿ = ( ಮಾತಾಡಲಿಕ್ಕೆ ಬಾರದಬಾಯಿ ) ಬೆಪ್ಪ. ಪೆದ್ದ.

೧೪೭೧. ಅಗ್ಗ = ಸ್ವಲ್ಪಕ್ರಯಕ್ಕೆ ಸಿಕ್ಕುವ. ಸುಗ್ಗಿ=ಧಾನ್ಯದ ವಿಪುಲತೆ. ಅಗ್ಗಸುಗ್ಗಿ = ಉತ್ತಮವಾದ ಸುಗ್ಗಿ. ಡೊಗ್ಗ=ಮಂದವಾದ. ದಪ್ಪನಹೆಗ್ಗುಳದಕಾಡಿ=ದೊಡ್ಡಮೆಕ್ಕೆ; ಪುಟ್ಟಿಯ ಹಣ್ಣು. ಕೆಕ್ಕರ (ನಾಡು) +ಎಗ್ಗು+ ( ಎನ್ನಬಹುದೇ ) =ಕೀಳ ೧೪೭೨. ಉಳ್ಳವರು=(೧) ದೇಶದಲ್ಲಿರುವವರೆಲ್ಲ. (೨) ಸಾವುಕಾರರು ? ತಳ್ಳಿ=ಗೊಡವೆ; ಸಮಂಧ.

೧೪೭೩. ಗಾವುದ = ನಾಲ್ಕುಹರದಾರಿ, ಅಂದರೆ ಬಹುದೂರ. ನೆರಳಿಲ್ಲ= ಗಿಡಗಳಿಲ್ಲ. ಬೈಲು ಹೆಚ್ಚು

೧೪೭೪. ಬಿಂಕ=ಸೊಕ್ಕು; ಸೊಗಸು, ಟೀ॥ ದಕ್ಷಿಣದೇಶದ ಸೊಗಸನ್ನು ಏನೆಂದು ಹೇಳಲಿ ಈಶ್ವರನಪೂಜೆಯಕಾಲದಲ್ಲಿ ಪ್ರತಿಮನೆ ಮಠಾಂತರಗಳಲ್ಲಿಯೂ ಶಂಖಿನೊಳಗಿಂದ ಹುಟ್ಟಿಬರುವ ಧ್ವನಿಯು ಗಂಭೀರವಾಗಿ ಕೇಳಿಸುತ್ತಿರುವದು.

೧೪೭೫. ಟೀ॥ ಪೂರ್ವದೇಶದವರು ಸಂಗೀತಪ್ರಿಯರು ( ಕೋಪಿಷ್ಟರು ) ಉತ್ತರದವರು ( ಯೋಗಿಗಳು) ಪಾರಮಾರ್ಥಿಕರು. ಪಶ್ಚಿಮದವರು ರೋಗಿಗಳು. ದಕ್ಷಿಣದವರು ಭೋಗಾಸಕ್ತರು. ಇದು ಸಾಮಾನ್ಯವಾಗಿ ಎಲ್ಲದೇಶಗಳಿಗೆ ಹತ್ತುತಕ್ಕನಿಯಮವೋ ಇಲ್ಲವೆ ಈ ದಿಕ್ಕುಗಳು ಯಾವದೊಂದುವಿಶಿಷ್ಟ ದೇಶಕ್ಕೆ ಸಂಮಂಧಿಸಿದವುಗಳೋ ತಿಳಿಯದು.

೧೪೭೬. ಅಟ್ಟು+ಉಂಬದು=ಹಿಟ್ಟು ಮುದ್ದೆ ಸುಟ್ಟು ಉಂಬದು = ರೊಟ್ಟಿ. ತಟ್ಟಿ= ಪರಾತ ತಾಬಂಡಿ. ಮುಷ್ಟಿಲಿ+ ಉಂಬುವದು = ಮುಟ್ಟಿಗೆ ಮಾಡಿ ಉಣ್ಣುವರು.

೧೪೭೭. ಉಡುಹೀನ= ಉಡುಪು ಚನ್ನಾಗಿಲ್ಲ. ನುಡಿಹೀನ= ಮಾತುಚನ್ನಾಗಿಲ್ಲ. ಸಡಗರದವರು=ಅಲಂಕಾರಪ್ರಿಯರು.

೧೪೭೮. ಟೀ॥ ಪೂರ್ವದವರು ಅರ್ಧತಲೆಕಾಣುವಂತೆ ರುಮಾಲಸುತ್ತುವರು ಉತ್ತರದವರು ಹೊರೆಯಷ್ಟು ದೊಡ್ಡ ರುಮಾಲ ಸುತ್ತುವರು. ಪಶ್ಚಿಮದವರು. ಉದ್ದ ಚುಂಗುಬಿಡುವರು. ದಕ್ಷಿಣದವರು ಬಕ್ಕ ತಲೆಯಿಂದಿರುವರು.

೧೪೭೯. ತೊಗೆ=ತೋವೆ ಕಾಳ್+ ಎಮ್ಮೆ=ಕಪ್ಪಾದಎಮ್ಮೆ. ( ಹಿಂಡಲಿಕ್ಕೆ ಉತ್ತಮವಂತೆ ) ಕರೆ=ಹಿಂಡು ಮೇಳ= ರುಚಿ ಸೌಖ್ಯ.

೧೪೮೦. ಹವಣುಳ್ಳ = ಒಪ್ಪುವ. ಹವಣ ರುಚಿಕಟ್ಟು.

೧೪೮೧. ಅಣಕ = ಅಚ್ಚುಕಟ್ಟು ಹೂರಣತುಂಬಿದಕರಿಗಡಬೂ ಹರಿಯು ದಎಮ್ಮೆಯ ಹೈನವೂ ಆಗಲೆ ತೆಗೆದು ಕಾಸಿದ ತುಪ್ಪವೂ ಗೆಲವಿನಿಂದ ಮನೆ ಗೆಲಸವನ್ನು ಮಾಡುವಹೆಂಡತಿಯೂ ಆದರೆ ಬೆಳವಲದ ಸೌಖ್ಯವನ್ನು ಏನೆಂ ದುಹೇಳಲಿ.

೧೪೮೨. ಬೆಳವಲದಲ್ಲಿ ಕಡಲೆಮೊ ದಲಾದ ವಿವಿಧಧಾನ್ಯಗಳು ಬೆಳೆದರೂ ಬೇಸಿಗೆಯಲ್ಲಿ ಬರಿಯಹೊಲವನ್ನು ನೋಡುವವನೊಬ್ಬನು ಇಲ್ಲಿ ಏನದೆ! ಇದು ಸುಡುಗಾಡೆಂದು ಈ ನಾಡನ್ನು ಜರಿಯಬಹುದು. ಇಂಥವನಬಾಯೊ ಳಗೆ ಪುಡಿಗಡಬು ಅಂದರೆ ಸೂಸಲ ತುಂಬಿದ ಕರಜೀಕಾಯಿ ಬುಡ್ಡಿಹೋ ಳಿಗೆ ಮೊದಲಾದವಗಳು ಬಿದ್ದರೆ ಬೆಳವ ಲದ ಸೌಖ್ಯವು ಏನೆಂದು ಆಗತಿಳಿಯು ವದು.

೧೪೮೩. ಕಸುಗಾಯಿ = ತಿನ್ನಲಿಕ್ಕೆ ಬಾರದವಿವಿಧಫಲಗಳು. ಹೆಗ್ಗಿಡವು = ದೊಡ್ಡದೊಡ್ಡಗಿಡಗಳು ನಾಡು=ಜನ ರಿರುವ ಸ್ಥಳ. ಆಡಿದಮಾತುನಿಜವಿಲ್ಲ= ಜನರು ನಂಬಿಕೆಗೆ ಯೋಗ್ಯರಲ್ಲ.

೧೪೮೪. ಸೀತಧಾತುಗಳು = ಹವೆ ತಂಪು, ಛಳಿಜ್ವರಕ್ಕೆ ಅನುಕೂಲ ಸೀತ ವನ್ನುಂಟುಮಾಡುವ ಪೇರಲ ಸೀತಾ ಫಲ ಮೊದಲಾದ ಹಣ್ಣುಹಂಪಲಗಳು ಬೆಳೆಯುವವು. ಬಾತಿಹವು ಕುಕ್ಷಿಗಳು= ಛಳಿಜ್ವರದಿಂದ ಗುಲ್ಮವುಬೆಳೆದುದೊಡ್ಡ ದಾಗಿರುವದರಿಂದ ಹೊಟ್ಟೆದೊಡ್ಡದಾ ಗಿರುವದು. ಪಾತಕರುಮರದಿತಿರಿದುಂಬ ನಾಡಿಗೆ······ಬಹರು =(೧) ಮರದಪಾ ತ್ರೆಗಳನ್ನು ಹಿಡಿದು ಭಿಕ್ಷೆಬೇಡುವ ಪಾ ಪಿಗಳು ಇರುವದೇಶಕ್ಕೆ (೨) ಲೋಹ ದಪಾತ್ರೆಗಳಿಗಿಂತ ಮರದಪಾತ್ರೆಗಳು ಹೆಚ್ಚೆಂದು ರಿ॥ ವಿರ್ತರು–ಹಣ್ಣುಹಂಪ ಲಗಳನ್ನು ತಿಂದು ಜೀವಿಸುವವರು ಇ ರುವ ಅಂದರೆ ಅಕ್ಕಡಿಧಾನ್ಯಗಳು ಕಡಿ ಮೆಬೆಳೆಯುವ ನಾಡಿಗೆಂದು ಕೆಲವರು. ಹೇಗಾದರೂ ಇಲ್ಲಿ ಛಳಿಜ್ವರದಿಂದ ಅ ನೇಕ ರೋಗಗಳಿಗೆ ಒಳಗಾಗಿ ಹೊಟ್ಟೆ ಬೆಳೆದು ಕೆಲಸಮಾಡಲಿಕ್ಕೆ ಆಗದೆ ಕಡೆ ಗೆ ಊರೂರು ಸಂಚಾರ ಮಾಡುತ್ತ ಹೊಟ್ಟೆಹೊರಕೊಳ್ಳುವ ಈ ಜನರು ಮಹಾಪಾಪಿಗಳಾದ್ದರಿಂದ ರಿಂದಲೇ ಇಂಥ ಸ್ಥಿತಿಯಲ್ಲಿರುವರೆಂದು ತಾತ್ಪ ರ್ಯ. ಇಂಥ ಅನಾರೋಗ್ಯವಾದ ಅನಿ ಷ್ಟದೇಶಕ್ಕೆ ಬರಲಿಕ್ಕೆ ಯಾರು ಮನಸ್ಸು ಮಾಡ್ಯಾರೆಂದು ಅರ್ಥಮಾಡುವದೇ ವಿಹಿತ.

೧೪೮೫. ಬೆಲ್ಲ =ಕಬ್ಬುವಿಶೇಷ. ಬಿಳೆ ಎಲೆ=ಕೋಮಲವಾದ ಅಂಬಾಡಿಎಲೆ.

ವೀಳ್ಯದಲ್ಲಿ ಮೇಲಾದದ್ದು. ಒಳ್ಳೇಹ ಅಸು=ದಿವ್ಯಹಲಸು ಮೆಲ್ಲಲ್ಕೆ=ಹಂಣ ಹಂಪಲಗಳನ್ನು ತಿನ್ನುವದಕ್ಕೆ.

೧೪೮೬. ಕಿಚ್ಚು=ಉರವಲ. ಕೆಸರು=ಯಾವಾಗಲೂವಃಳೆ. ಬೆಚ್ಚನ+ಆ+ಮನೆ=ಕಟ್ಟಿಗೆಅಗ್ಗವಿದ್ದು ಅಗ್ಗಿಷ್ಟಿಗೆ ಯಾವಾಗಲೂ ಇಡಬಹುದಾಗಿರುವದರಿಂದ. ಮಾಳಿಗೆಮನೆಯಂದು ಕೆಲವರು. ಇಚ್ಛೆಗೆಬರುವ=ಮನಸ್ಸಿನ ಅಪೇಕ್ಷೆಯನ್ನು ತಿಳಿದು(ಕೂಡುವ) ನಡೆದುಕೊಳ್ಳುವ ಅನುಕೂಲಳಾದ.ಮೆಚ್ಚು=ಸುಖ.

೧೪೮೭—೮೮. ಸ್ತ್ರೀಪುರುಷರಲ್ಲಿ ವಿವಿಧ ಜಾತಿಗಳಿರುವವು. ಆಯಾ ಜನರು ವಾಸಿಸಬಿಕ್ಕೆ ಯೋಗ್ಯವಾದ ದೇಶಗಳು ಈ ಎರಡು ಪದ್ಯಗಳಲ್ಲಿ ಹೇಳೋಣವಾಗಿದ.

೧೪೮೯. ಟೀ॥ ಕಾಮಾಪೇಕ್ಷೆಯುಳ್ಳ ವಿವಿಧಪುರುಷರು ನೋಡುವ ತರವು ಬೇರೆಬೇರೆಯಾಗಿರುವದು

೧೪೯೦. ಟೀ॥ ಹಸ್ತನಿಗೆ (ಜಂಗೆ) ಮೀನುಗಂಡುಗಳನ್ನು ಒತ್ತಿಸಿಕೊಳ್ಳುವದರಲ್ಲಿಯೂ ಚಿತ್ತಿನಿಗೆ ಮುಂಗಾಲ ಹರುಡುಗಳನ್ನು ಒತ್ತಿಸಿಕೊಳ್ಳುವದರಲ್ಲಿಯೂ ಶಂಖಿನಿಗೆ ಕೈಗಳನ್ನು. ಪದ್ಮಿನಿಗೆ ತಲೆಯನ್ನು ಒತ್ತಿಸಿಕೊಳ್ಳುವದರಲ್ಲಿಯೂ ಇಷ್ಟ.

೧೪೯೧. ಟೀ॥ ಗಂಡನೆಂದರೆ ಹಸ್ತನಿಗೆ ಪಂಚಪ್ರಾಣ. ಚಿತ್ತನಿಗೆ ಬಹು ಗರ್ವ. ಶಂಖನಿಗೆ ಬಹು ನಾಚಿಕೆ. ಪದ್ಮಿನಿಗೆ ಲಕ್ಷವೇ ಇಲ್ಲ. ಇಲ್ಲವೇ ಪುರುಷನ ಇಷ್ಟದಂತೆ ಇರುವಳು. ಇಲ್ಲವೆ ಹಸ್ತಿಯು ಪ್ರೇಮಸ್ವಭಾವದವಳು, ಚಿತ್ತಿನಿಯು ಕೋಪವುಳ್ಳವಳು, ಶಂಖನಿಯು ನಾಚುವವಳು ಪದ್ಮಿನಿಯು ಬೇಗನೆ ವಶವಾಗುವಳು ಎಂತಲೂ ಅರ್ಥಮಾಡಬಹುದು.

೧೪೯೨. ಟೀ॥ ಎರಡುಮೊಲೆಗಳ ಮಧ್ಯದಲ್ಲಿ ಹಸ್ತಿನಿಗೆ ನಾಲ್ಕುಬೆರಳು, ಚಿತ್ತಿನಿಗೆ ಮೂರುಬೆರಳು, ಪದ್ಮಿನಿಗೆ ಒಂದೇ ಬೆರಳು, ಅಂತರವಿರುವದು. ಇಲ್ಲಿ ಸ್ತನಗಳಗಾತ್ರದಂತೆ ವಿವಿಧಜಾತಿಗಳು ಮಾಡಲ್ಪಟ್ಟಿವೆ.

೧೪೯೩. ಟೀ ॥ ಚಿತ್ತಿನಿಯಲಕ್ಷಣ—ತಿಗಗಳು ತುಂಬಿ ದುಂಡಾಕಾರವಾಗಿಯೂ ಬೆವರು ಬೇವಿನ ವಾಸನೆಯಾಗಿಯೂ ಸಣ್ಣ ನೊಲೆಯುವಳಾಗಿಯೂ ಕ್ರೀಡಾಪೇಕ್ಷೆಯಿಂದ ಮುರುಕಿಸುತ್ತ ಅತ್ತಿತ್ತ ತಿರುಗುತ್ತಿರುವಳಾಗಿಯೂ ಇರುವವಳೇ ಚಿತ್ತಿನಿಯು.

೧೪೯೪. ಟೀ ॥ ಶರೀರವು ಎತ್ತಿನಾಕಾರದಷ್ಟು ಭಾರವಾಗಿದ್ದು ತಲೆಯೂ ಸೊಂಟವೂ ದಪ್ಪವಾಗಿದ್ದು ನಡೆಯುವಾಗ ಇನ್ನೊಬ್ಬರಿಗೆ ಕೇಳಿಸುವಷ್ಟು ದೀ

ರ್ಘಶ್ವಾಸವನ್ನು ಬಿಡುವ ದೊಡ್ಡ, ಆಳಿನಂತಿರುವ ಪುರುಷನು ಹಸ್ತಿನಿಗೆ ಯೋಗ್ಯವಾಗಿರುವನು.

೧೪೯೫. (ಅಕ್ಕಳಿಸಿದ) ತೆಳ್ಳಗೆ ಬಳಸೇರಿದ ಹೊಟ್ಟೆಯೂ ( ಬೆಕ್ಕಿನಕಣ್ಣಿನ ಮೋರೆ ) =ನೀಲಾಕ್ಷಿ. ಅಕ್ಕಳಿ= ಮೈತುಂಬ ಹೆದರಿಕೆಇದ್ದಾಗ್ಯೂ ಕೋಪವುಳ್ಳವನಂತೆ ತೋರಿಸಿಕೊಳ್ಳುತ್ತಿರುವ ಬಹು ಸಿಡುಕಿನ ಬಡಗನು ಚಿತ್ತಿನಿಗೆ ಯೋಗ್ಯ. ೧೪೯೬. ಟೀ ॥ ಸುಂದರವೂ ಆಗಲವೂ ಇರುವ ಶರೀರವುಳ್ಳ ಹುಡುಗನಿಗೆ ಆಗಲೇ ಯೌವನವು ಬಂದು ಮೀಸೆ ಚಿಗುರಿ ಒಳ್ಳೇಮೈಕಟ್ಟಿನಿಂದಲೂ ಉದ್ದವಾಗಿದ್ದರೂ ಬಾಗದಬೆನ್ನಿನಿಂದಲೂ ದಪ್ಪವಾದ ಸೊಂಟದಿಂದಲೂ ಶೋಭಿಸುವ ಪುರುಷನನ್ನು ಶಂಖಿನಿಯು ವರಿಸುವಳು.

೧೪೯೭. ಟೀ ॥ ಮದಸಿಬೆದೆಬಂದ ಆನೆಯಂತೆ ಕಾಮೋದ್ರೇಕವುಳ್ಳವನಾಗಿಯೂ ಹಾಸ್ಯರಸದಿಂದ ತುಂಬಿ ಬಹು ಜಾಣತನದಿಂದ ಅನೇಕಾರ್ಥವುಳ್ಳ ಶೃಂಗಾರದ ನುಡಿಗಳನ್ನುನುಡಿಯುವವನೂ ಪದ್ಮಿನಿಗೆ ಪ್ರಿಯನಾಗಿರುವನು.

೧೪೯೮. ಟೀ॥ ಕಾಮಶಾಸ್ತ್ರ (ಕಲೆ) ಯಲ್ಲಿ ಹೇಳಿರುವ ಬಗೆಬಗೆಯ ಬಂಧನ ಚುಂಬನಾದಿ ಕಲೆಗಳನ್ನು ಮನನಮಾಡಿಕೊಂಡು ಅವುಗಳನ್ನು ಸುರತದಲ್ಲಿ ಪ್ರಯೋಗಿಸುವ ಪುರುಷನಿಗೆ ಹಸ್ತಿನಿಯು ತೀವ್ರವಾಗಿ ವಶವಾಗುವಳು.

೧೪೯೯. ಟೀ॥ ಎರಳೆಯ ಕಣ್ಣುಳ್ಳವಳಾಗಿದ್ದು ರತಿಯಿಂದ ಪೀಡಿತಳಾದ ಚಿತ್ತಿನಿಯ ಮನೋ ವ್ಯಾಪಾರವನ್ನು ಅವಳ ಅಂಗಚೇಷ್ಟೆಗಳನ್ನೂ ಚನ್ನಾಗಿ ತಿಳಿದು ಪ್ರೀತಿಯೆಂಬ ಸದ್ಗುಣರಸದಿಂದ ಮನಮುಟ್ಟಿ ಕೂಡಿದರೆ ಅಂಥ ಪುರುಷನನ್ನು ಸಾಯುವವರೆಗೂ ಬಿಡದೆ ಅಂಟಿಕೊಂಡಿರುವಳು.

೧೫೦೦. ಟೀ॥ (ಪಾಟಿಸಿದದೈನ್ಯ)= ನೋಡುವದರಲ್ಲಿಯೂ ಪ್ರೇಮರಸಗಳಲ್ಲಿಯೂ ಬಹು ನಮ್ರತೆಯುಳ್ಳವಳಾಗಿಯೂ ಕ್ರೀಡೆಯಲ್ಲಿ ಕೋಪವನ್ನು ಚಿಗುರಿಸುವವಳಾಗಿಯೂ ಶಂಖಿನಿಯು ಪುರುಷನಲ್ಲಿ ಆಸಕ್ತಳಾಗಿರುವಳು.

೧೫೦೧. ಟೀ ಮುಂಗೂದಲಗಳನ್ನು ಹಿಡಿದು ಚುಂಬಿಸುತ್ತ ಸಿಟ್ಟಿಗೆ ಎಬ್ಬಿಸಿ ಮೈಮೇಲೆಹೋಗಿ ಆಲಂಗಿಸುತ್ತ ಹವಳದಂತೆ ಕೆಂಪಾದತುಟಿಗಳನ್ನು ಕಚ್ಚಿ ಬಗೆಬಗೆಯ ಬಾಹ್ಯ ಸುರತರಗಳನ್ನು ಮಾಡುವವನನ್ನು ಪದ್ಮಿನಿಯು ಮೋಹಿಸುವಳು.

೧೫೦೪. ಜಗ=ಮನೆ, ಅಯ್ಸು= (ಇರುವದು) ಒಳ್ಳೇದು. ಟೀ॥ ಮನೆಯೊಳಗೆ ಮಗಳು, ಅಕ್ಕ ತಂಗಿ, ಇಲ್ಲವಾದರೆ ಸೊಸೆ, ನಾದುನಿ ಹೆಂಡತಿ, ತಾಯಿ

ಇವರಲ್ಲಿ ಯಾರಾದರು ಒಬ್ಬರು ಹೆಂಗಸರು ಇದ್ದರೆ ಒಳ್ಳೇದು.

೧೫೦೪. ನೆಲ್ಲಕ್ಕಿಯಂತೆ ಸುಲಿವಲ್ಲ=ಅಕ್ಕಿಯಂತೆ ಬೆಳಗಿದ ಹಲ್ಲುಳ್ಳ. ನಲ್ಲಳು=ಹೆಂಡತಿ.

೧೫೦೮. ಬೆಕ್ಕಿಗೆ ವ್ರತವಿಲ್ಲ=ಎಷ್ಟು ಹೊಡೆದರೂ ತುಡುಗುಮಾಡಿ ತಿನ್ನುವದನ್ನು ಬಿಡದು.

೧೫೦೯. ತವಕದ+ಆತುರದವಳ = ಕಾಮಬಾಧೆಯಿಂದ ರತಿಕ್ರೀಡೆಗೆ ಸಿದ್ಧಳಾದ. ನವರತಿ ಒದಗಿಳ = ಆಗಲೇ ಮೈನೆರೆದ. ಸೊಬಗು = ಸೌಂದರ್ಯ. ಯುವತಿ=ಯೌವನಸ್ತ್ರೀ. ಅವುಕು = ಅಪ್ಪು, ಆಲಂಗಿಸು.

೧೫೧೦. ರತಿಕಲೆಯಾಳತಿಚದುರೆ= ರತಿಕ್ರೀಡೆಯಲ್ಲಿ ನಿಪುಣಳೂ. ಮಾತಿನೊಳಗೆ+ಅತಿ+ಮಿತಿಯು = ಸಾವಿರಕ್ಕೆ ಒಂದು ಮಾತಾಡುವವಳು. ಹೊರಗೆ ಮೌನಿಯಂತೆ ಕಾಣುವವಳು. ಖತಿ + ಕಳೆದ+ಮೊಗ = ಸಂತೋಷಯುಕ್ತವಾದ ಮನೋಹರ ಮುಖವುಳ್ಳವಳು. ಸೊಬಗು=ಚಲ್ವಿಕೆ. ಸುದತಿ= (ಸೊಗಸಾದ ಹಲ್ಲುಳ್ಳವಳು.) ಹೆಂಗಸು.

೧೫೧೧. ಮೊಲೆಗಳು + ಉಗಿದವಳು+ಆಗಿ=ಮೊಲೆಗಳು ಒತ್ತಿ ಮುಂದಕ್ಕೆ ಮೊನೆಯಾಗಿ ಹಾಯ್ದುವಳಾಗಿ ಕಾಮಿನಿ=ಯೌವನಸ್ತ್ರೀ.

೧೫೧೨. ಮತಿಯೊಳು+ಅತಿಚದುರಾಗಿ=ಮಾತುಕಥೆ ಇಲ್ಲವೆ ವಿಚಾರದಲ್ಲಿ ಬಹುಜಾಣನಾಗಿ ರತಿ+ಕೇಳಿಗೆ =ಒಳಗಾಗಿ=ಕೂಟಕ್ಕೆ ತ್ವರಿತಳಾಗಿ. ಅತಿಗಳೆದರು +ಯಾರು=(ಇಂಥವಳನ್ನು ಮನಸ್ಸಿನಿಂದ) ಒಲ್ಲೆ.ಅನ್ನುವವರು ಯಾರು?

೧೫೧೩. ರುದ್ರತಾ, ಕರ್ತನು=; ಶಿವನು ತಾನು ಸ್ವತಃ ಸೃಷ್ಟಿಕರ್ತನು. ಅರ್ಧನಾರಿಯು ಆದ=( ಹೀಗಿದ್ದಾಗ್ಯೂ) ಪಾರ್ವತಿಗೆ ಸೋತು ತನ್ನ ಅರ್ಧ ಶರೀರವನ್ನೇ ಕೊಟ್ಟಿದ್ದಾನೆ. ಅರ್ಧಾಂಗಿಯೆಂದರೆ ಹೆಂಗಸೆಂದು ರೂಢಿಯಲ್ಲಿ ಹೇಳಿದರೂ ನಿಜವಾದ ಅರ್ಧಾಂಗಿಯು ಶಿವನೇ ಆದ್ದರಿಂದ ಇವನಿಗೆ ಅರ್ಧನಾರೀಶ್ವರನೆಂದು ಹೆಸರು. ಹೀಗಾದಬಳಿಕ ಉಳಿದವರ ಗತಿಏನು?

೧೫೧೪. ಟೀ॥ ತ್ರಿಮೂರ್ತಿಗಳು ಹೆಣ್ಣಿಗೆ ಆಧೀನರಾಗಿರುವರು: ಹೇಗಂದರೆ ಲಕ್ಷ್ಮಿಯು ವಿಷ್ಣುವಿನ ಎದೆಯಮೇಲೆ ತುಳಿದು ನಿಂತಿರುವಳು. ಗಂಗೆಯು ಶಿವನ ತಲೆಯಮೇಲೆ ಹತ್ತಿ ಕೂತಿರುವಳು ಬ್ರಹ್ಮನು ಮಗಳಾದ ಸರಸ್ವತಿಯನ್ನು ಮೋಹಿಸಹೋಗಿ ತನ್ನ ತಲೆಯನ್ನೇ ಕಳಕೊಂಡಿರುವನು. ಹೀಗೆ ಇಂಥಿಂಥ ದೇವತೆಗಳು ಸ್ತ್ರೀವಶರಾದಬಳಿಕ ಜಿತೇಂದ್ರಿಯರೆನ್ನಿಸಿಕೊಳ್ಳುವ ಹಿರಿಯರು ಯಾರಾದರು ಉಳಿದಿರುವರೇ?

ತ್ರಿಮೂರ್ತಿಗಳ ಹೆಂಡರು ತಮ್ಮ ಗಂಡರಿಗೆ ಹೀಗೆ ಮಾಡಿದ ಬಳಿಕ ಉಳಿದ ಹೆಂಗಸರು ಗಂಡಸರನ್ನು ತಿರಸ್ಕರಿಸುವದೇನಾಶ್ಚರ್ಯವೆಂದು ನಾರಾಯಣ ಶಾಸ್ತ್ರಿಗಳು.

೧೫೧೫. ಟೀ॥ (ಅಚ್ಯುತ) ವಿಷ್ಣುವು ಕೃಷ್ಣನಾಗಿ ೧೬೦೦೦ ಗೋಪಿಸ್ತ್ರೀಯರನ್ನೂ (ಅಜ) ಬ್ರಹ್ಮನು ಸರಸ್ವತಿಯನ್ನೂ ದೇವೇಂದ್ರನು ಅಹಲ್ಯೆಯನ್ನೂ ಮೋಹಿಸಹೋಗಿ ಮೈಯೆಲ್ಲ ಯೋನಿಯನಾಗಿರಲು ಹೆಣೆಂದರೆ ಉಚ್ಚೆಯ ಬಚ್ಚಲವೆಂದು ತಿರಸ್ಕರಿಸುವದು ಯಾತಕ್ಕೆ?

೧೫೧೬. ಟೀ॥ ಯೋನಿಯು ತೊಡೆಗಳ ಮಧ್ಯದಲ್ಲಿರುವ ತಗ್ಗಿನಕುಣಿ ಎಂದು ಸ್ತ್ರೀಯರನ್ನು (ಅಗ್ಗ) ತಿರಸ್ಕರಿಸಿ ಮಾತಾಡಬೇಡ (ಭಗ್ಗ) ಶಿವ ಮೊದಲಾದವರು ದೇವತೆಗಳು ನೂರುವರ್ಷದ ವರೆಗೆ ಉಮೆಯನ್ನು ಕ್ರೀಡಿಸಿ ಮನ್ಮಥ ಯುದ್ಧವನ್ನು ಮಾಡಿದರು. ಈ ಪ್ರಕಾರ ಅನೇಕ ದೇವತೆಗಳು ಯುದ್ಧದಲ್ಲಿ ಹಾಳಾಗಿ ಹೋಗಿರುವರು ಕಂಡ್ಯಾ!

೧೫೧೭. ಟೀ॥ ಚಿಕ್ಕಂದಿನಲ್ಲಿ ನೋಡಿದರೆ ಸ್ತ್ರೀಯರ ಮರ್ಮೇಂದ್ರಿಯವು ಎಳೆಕರವು ಕೆಸರಿನಲ್ಲಿ ತುಳಿದರೆ ಮೂಡುವ ಹೆಜ್ಜೆಯ ಗುರುತಿನ ಆಕಾರವಾಗಿರುವದು. ಅದೇ ಯೌವನವು ಬಂದು ಸೀರೆಯನ್ನುಟ್ಟು ನಿರಿಗೆಯನ್ನು ಹೊಯಿದು ನಿಂತುಕೊಂಡರೆ ಆ ಸ್ಥಳಕ್ಕಾಗಿ ಜನರು ಹೊಡೆದಾಡಿಕೊಳ್ಳುವರು.

೧೫೧೮. ಟೀ॥ ಹೆಣ್ಣು ಸಣ್ಣದಿರುವಾಗ ಹೆಕ್ಕಿಕೊಂಡುತಿನ್ನಬಹುದಾದ ಎಂಜಲಿನಂತೆ ಅಲಕ್ಷಕ್ಕೊಳಗಾಗಿರುವದು. ಅದೇ ನೆರೆತಮೇಲೆ ಭೋಗಕ್ಕೆ ಯೋಗ್ಯವಾಗಿ ಸಕ್ಕರೆಯಂತೆ ರುಚಿಸುವದು.

೧೫೧೯. ಊರು=ತೊಡೆ ಟೀ॥ ಎರಡು ತೊಡೆಗಳು ಕೂಡುವ ಮಧ್ಯಪ್ರದೇಶದಲ್ಲಿ ಕಟ್ಟಲ್ಪಟ್ಟಿರುವ ಕಾಮನ ಮನೆಯಲ್ಲಿ ಜಗತ್ತಿನ ಜನರೆಲ್ಲ ಬಿದ್ದುಕೊಂಡಿರುವರಕಟಾ!

೧೫೨೦. ಟೀ॥ ಎರಡು ತೊಡೆಗಳು ಕೂಡುವ ಸಂದಿಯಲ್ಲಿ ಗಾಯದಂತೆ ಕಾಣುತ್ತಿರುವ ಸ್ತ್ರೀಯರ ಮರ್ಮೇಂದ್ರಿಯ ಜಗತ್ತಿನಲ್ಲಿ ಸ್ತೋತ್ರಕ್ಕೆ ಯೋಗ್ಯವಾಗಿರುವದು. ಇಂಥ ಭಯಂಕರ ಸ್ಥಳಕ್ಕೆ ಹರಿಹರ ಬ್ರಹ್ಮಾದಿಗಳು ಕೂಡ ಭ್ರಾಂತರಾಗಿ ಅದರಲ್ಲಿ ವಾಸಮಾಡುವದಕ್ಕೆ ಮೆಚ್ಚಿಕೊಂಡರು!

೧೫೨೧. ಪುಲ್ಗೆ = ಚಿಗರಿ, ಹಲ್ಲು ಬೆಳ್ಳಗೆ ಇಡು=ಶುದ್ಧಾಚಾರದಲ್ಲಿ ಹೆಚ್ಚು ಕಲ್ಲಮೇಲಿರು=ಗುಡ್ಡದಲ್ಲಿ ವಾಸಿಸುನಲ್ಗೆ=ಸ್ತ್ರೀ. ಸನ್ಯಾಸಿಗೂ ಸ್ತ್ರೀಯರಯೋಚನೆಯು ಬಿಟ್ಟಿಲ್ಲವೆಂದು ತಾತ್ಪರ್ಯ.

ತೋಟದಾ ಬೇಲಿಯನು ದಾಟದವರಾರಣ್ಣ । ಶೀಟಾದ ಹೆಣ್ಣು ಮುದುಕನಿಗಿರೆ, ಕಣ್ಣು- । ಮೀಟದವರಾರು? ಸರ್ವಜ್ಞ ॥

ಹಿತ್ತಲದಲ್ಲಿರುವ ತೋಟದ ಬೇಲಿಯನ್ನು ಸಹಜವಾಗಿ ಎಲ್ಲರೂ ಜಿಗಿದು ಒಳಗೆ ಪ್ರವೇಶಿಸುವರು. ಹಾಗೆಯೇ ಮುದುಕನ ಹರೆಯದ ಹುಡುಗಿಯನ್ನು ಲಗ್ನವಾದರೆ ಹೆಸರಿಗೆ ಒಂದು ಬೇಲಿ ಹಚ್ಚಿದಂತಾಗಿ ಎಲ್ಲರೂ ಆಕೆಯನ್ನು ಅನುಭೋಗಿಸುರೆಂದು ತಾತ್ಪರ್ಯ ಈ ಪಾಠವು ಉತ್ತಮವಾಗಿದೆ.

೧೫೨೩. ಟೀ॥ ರಾಣಿಯ ಕೈಯಲ್ಲಿರುವ ಬೆಲೆಯುಳ್ಳ ನುತ್ತು ಒಡೆದು ಹೋದರೆ ಒಂದು ದುಗ್ಗಾಣಿ ಕಿಮ್ಮತ್ತಾದರೂ ಬಾರದು ಆದರೆ ಸ್ತ್ರೀರತ್ನವು ಒಡೆದುಹೋದರೆ (ಮೈನೆರೆದರೆ) ಲಕ್ಷಾನು ಲಕ್ಷ ರೂಪಾಯಿ ಬೆಲೆಬಾಳುವದು. ಅಂದರೆ ಚಲುವೆಯಾದ ಹೆಣ್ಣು ದೊಡ್ಡದಾದ ಮೇಲೆ ಬಹಳ ಹಣ ಸಂಪಾದನೆಯಾಗುವದು. ಅಂದರೆ ಶ್ರೀಮಂತರು ಲಗ್ನವಾಗುವರೆಂದು ತಾತ್ಪರ್ಯ.

೧೫೨೪. ಗಂಜಳಬಾವಿ = ಹುಲ್ಲು ಬೆಳೆದು ಮುಚ್ಚಿಹೋದದ್ದು (ಯೋನಿ) ಗಂಜಳ=ದರ್ಭೆಯ ಹುಲ್ಲು ( ಮರ್ಮಕೇಶ,) ಗುಂಜುಂಟು=ಕಾಲಿಗೆಸುತ್ತುವ ಬಳ್ಳಿ. ಸ್ತ್ರೀಯು ಬಳ್ಳಿಯು ಬೆಳೆದುಸಕೆರಿನಿಂದ ತುಂಬಿದ ಭಾವಿಗೆ ಸರಿಯಾಗಿದ್ದಾಳೆ. ಇದರಲ್ಲಿ ಈಸುವದು ಬಹಳ ಗಂಡಾಂತರಕಾರವಾಗಿರುವದರಿಂದ ಬಹು ಜಾಗ್ರತೆಯಿಂದಿರಬೇಕೆಂದುತಾತ್ಪರ್ಯ.

೧೫೨೫. ಯೋನಿ+ಜ=ಯೋನಿಯಲ್ಲಿ ಹುಟ್ಟಿದವ ಅಂದರೆ ಮನುಷ್ಯ. ತಾ॥ ಸ್ತ್ರೀಯು ಸಂಸಾರ ಸುಖಕ್ಕೂ ಸಂತಾನವೃದ್ಧಿಗೂ ಮೂಲಕಾರಣಳಾಗಿರುವದರಿಂದ ಅವಳನ್ನು ಹೀನೈಸಲಾಗದು.

೧೫೨೬. ಕಾಮನ+ಆ+ಪುರ=ದೇಹ ಆ+ಮಹಾಕೆರೆ=ಯೋನಿ. ಹೇಮಹೆಮಿಗಳ=ಶ್ರೀಮಂತರು; ಮಹಾಪುರುಷರು. ನೇಮ=ನೆಚ್ಚಿಗೆ ಊರು=ಚುಚ್ಚು, ಕಡಿ ಸರಿನೋಡಿ ಪ್ರಸ್ತಾವನೆ ಪುಟ (೭೬)

೧೫೨೮. ಧಾರವು ಬಿಲ್ಲಿನ ಕಟ್ಟಿಗೆಗಿಂತ ಬಹು ಜಿನುಗಾಗಿದ್ದರೂ ಬಿಲ್ಲನ್ನು ಬೊಗ್ಗಿಸುವ ಪ್ರಕಾರ ಸ್ತ್ರೀಯು ಅಬಲೆಯನ್ನಿಸಿಕೊಂಡರೂ ಬಲವಂತನಾದ ಪುರುಷನನ್ನು ಮಣಿಸಿಬಿಡುವಳು.

೧೫೨೯. ತಾ॥ ಹೆಣ್ಣು, ಹೊನ್ನು, ಮಣ್ಣು, ಸಿಕ್ಕುವದು ದೇವರದಯ.

೧೫೩೦. ತಾಳದ+ಓಲೆಯನು+ ಇಟ್ಟು=ತಾಳೆಡ ಎಲೆಯಿಂದ ಮಾಡಿದ ಕಿವಿಯ ಆಭರಣವನ್ನು ಇಟ್ಟು. ಬೇಳೆ ಮಣಿ=ಕಾಜಿನ ಸಣ್ಣಮಣಿ(ಕರಿಮಣಿ). ಟೀ॥ ಡೌಲುಮಾಡದೆ ಗುಣವಂತಳೂ

ಬುದ್ಧಿವಂತಳೂ ಆಗಿರುವ ಹೆಂಡತಿಯು ದೊರೆಯುವದು ಈಶ್ವರ ಕಟಾಕ್ಷ.

೧೫೩೧. ಉಲಿ=ಗಟ್ಟಿಸಿಮಾತಾಡು. ಕೆಲಿ=ಗಟ್ಟಿಸಿನಗು. ಬಲ್ಲತನ=ವಿವೇಕ.

೧೫೩೨. ಉರಿ=ಗರ್ವಿಸು. ಮೆರೆ=ಡೌಲುಮಾಡು. ಶಿರನೆತ್ತಿನೋಡು=ಪರ ಪುರುಷನನ್ನು ಅಪೇಕ್ಷಿಸು. ಸರಿಬಂದ ಸ್ಥಾನದಿರು=ಮರ್ಯಾದೆಯಿಂದಿರು.

೧೫೩೩. ದಂಡಿಗೆ=ಏಕದಾರಿ. ತಂತಿ ವಾದ್ಯ, ಶೃತಿ. ಕೆವಂಡ=ಕುರಿ.

೧೫೩೪. ಮೇರೆತಪ್ಪಿದನ=ಮರ್ಯಾದೆಗೇಡಿಯು ಮನ್ನಣೆ=ಸಹಾಯ; ಉಪಕಾರ.

೧೫೩೬. ಬಣ್ಣ=ವಸ್ತ್ರಾಭರಣ. ಮಳ...ಹೊಯಿದಂತೆ ಉಸುಗಿನಲ್ಲಿ ಬಿದ್ದ ಎಣ್ಣೆಯು ಕೈಗೆಬಾರದಿರುವಂತೆ ಎಷ್ಟು ಕಷ್ಟಪಟ್ಟರೂ ವ್ಯರ್ಥವೆಂದು ತಾತ್ಪರ್ಯ.

೧೫೩೭. ಬಂಡ=ಮೂಲಧನ, ಬಂಡವಲ. ಮಾಂಸವು ಲೋಪವಾಗಿ ಎಲವುಗಳು ಮಾತ್ರವೇ ಕಾಣುವ ಮುದಿನಾಯಿಯಕುಂಡೆಯಂತೆ ಪ್ರಾಪ್ತಿಯು ಸ್ವಲ್ಪವೂ ದೊರೆಯುದೆಂದು ತಾತ್ಪರ್ಯ

೧೫೩೮. ನೀರೊಳು + ಅಕ್ಷರವಬರೆದಂತೆ ಹೆಣ್ಣುಮಗಳೆಂದು ಎಲ್ಲರೂ ಆಕೆಯಿಂದ ಹಣಹರಕೊಳ್ಳುವದರಿಂದ ಆಕೆಯು ಮಾಡುವ ಪ್ರಯತ್ನವೆಲ್ಲ ನಿಷ್ಫಲವಾಗುವದು.

೧೫೪೨. ಅಕ್ಕರ=ಪ್ರೀತಿ [ಮಾಡುವವರು.]

೧೫೪೩. ಒಪ್ಪುಳ್ಳ = ಗುಣವಂತೆಯಾದ ಎಗ್ಗ=ಮೂರ್ಖ. ಒಪ್ಪು=ಸ್ವೀಕರಿಸು.

೧೫೪೪. ಲೇಸಪ್ಪ = ಮರ್ಯಾದೆಯಿಂದ ನಡೆಯುವ, ಟೀ॥ಹಾಲಿಗೆನೊಣ ಮುಟ್ಟಿತೆಂದು ಯಾರಾದರು ಅದನ್ನು ...ಬಿಡುವರೆ? ಹಾಗೆಯೇ ಪತಿವ್ರತೆಯಾದ ಸ್ತ್ರೀಗೆ ಸೇರಲಾರದೆ ಕೆಲವರು ಏನಾದರೂ ಹೆಸರಿಟ್ಟರೆ ನೀನು ಅಂಥವರ ಮಾತನ್ನು ನಂಬಿ ಆಕೆಯನ್ನು ಬಿಟ್ಟುಬಿಡಬೇಡ.

೧೫೪೬. ಹೋಟೆ=ಗಿಡದಹೊದರು ತಾ॥ ರುಚಿಕರವಾದ ಪಾನಕಗಳಿಗಿಂತ ಬುದ್ಧಿವಂತೆಯಾದ ಹೆಂಡತಿಯುಸಹವಾಸವೇ ಉತ್ತಮು.

೧೫೪೮. ವಿನಯ=ಪ್ರೀತಿ. ಬೂರಫಲ=ಬೂರಲಕಾಯಿ. ಇದರಲ್ಲಿ ಅರಳೆಯುಲ್ಲದೆ ಮತ್ತೇನು ತಿನ್ನಲಿಕ್ಕೆ ಸಿಕ್ಕುವದಿಲ್ಲ. ಜಿನುಗಿ=ವ್ಯರ್ಥವಾಗಿ ಹಾರಿ, ಒದರಿ.

೧೫೪೯. ಟೀ॥ ಸತ್ತವರಬಾಯಲ್ಲಿ ನೀರು ಹಣಿಸಿದರೆ ಅದು ಹೇಗೆ ಒಳಗೆ ಹೋಗುವದಿಲ್ಲವೋ ಮತ್ತು ಮಾಂಸವನ್ನು ತಿನ್ನುವಾಗ ಹೆಣವು ಹೇಗೆ ಮಿಸು

ಕದೆ ಬಿದ್ದುಕೊಂಡಿರುವದೋ ಹಾಗೆಯೇ ಮನಸ್ಸಿಲ್ಲದವಳಕೂಡ ಮಾಡುವ ಬಾಳ್ವೆ ಇರುವದು.

೧೫೫೧. ಓತಿರದ=ಪ್ರೀತಿಯಿಲ್ಲದ ಹೂತ ಹೂವಿನಿಂದ ತುಂಬಿದ.

೧೫೫೨. ಹರಕ=ಜಗಳಗಂಟಿ ತೊರೆ=ಹೇಳಿ ನೆರೆ=ಋತುಮತಿಯಾಗು. ದೊಡ್ಡವಳಾಗು.

೧೫೫೩. ಚೆಲ್ಲವಾಡು=ಚಲ್ಲಾಟವಾಡು, ಕ್ರೀಡಿಸು.

೧೫೫೫. ಮುಸುಡು=ಮುಖ, ಬೀಡು=ದಪ್ಪ. ತಾ॥ ಕುರೂಪಿಯಾಗಿ, ನೋಡುವವರಿಗೆ ನಗೆಬರುವಂತಿದ್ದರೂ ಗಂಡನನ್ನು ಪರಾಮರಿಸುವವಳೂ ಪತಿವ್ರತೆಯೂ ಆಗಿರುವವಳೇ ಹೆಂಡತಿ ಎಂಬಹೆಸರಿಗೆ ತಕ್ಕವಳೆಂದು ತಿಳಿಯುತಕ್ಕದ್ದು.

೧೫೫೬. ಟೀ॥ ಉಂಗುರಗೂದಲದಿಂದಲೂ ಕೈಗೆ ತೋಳಬಂದಿ, ಪಾಟ್ಲೆ, ನಡುವಿಗೆ ಒಡ್ಯಾಣ (ಕಟಿಸೂತ್ರ) ಮೊದಲಾದ ಆಭರಣಗಳಿಂದಲೂ ಭೂಷಿತಳಾಗಿ ಮೈಬೆವರು ಕಮಲದಹೂವಿನಂತೆ ವಾಸನೆಯುಳ್ಳವಳೇ ಅಪೇಕ್ಷಿಸತಕ್ಕವಳೆಂದು ತಿಳಿಯುದೆ (ಗೂಢ) ಮಂಕು ಕುರೂಪಿಯಾದರೂ ನಿನ್ನನ್ನು ವರಿಸಿದವಳೇ ಉತ್ತಮಳೆಂದು ತಿಳಿ. ಅರ್ಥಾಂತರ ಗಂಡನು ಮೆಚ್ಚಿದ್ದೇ ಮಾಣಿಕ ಅಂದರೆ Love is blind. ಎಂದು ರೆ॥ ವಿರ್ತರು.

೧೫೫೭. ಜೊನ್ನದ+ಇರು=ಬೆಳದಿಂಗಳಸಮಯ, ಶುಕ್ಲಪಕ್ಷ ಹೀಗಿದ್ದರೆ ಇಡೀವರ್ಷ ಬೇಸಿಗೆ ಇದ್ದರೂ ಚಿಂತೆ ಇಲ್ಲವೆಂದು ತಾತ್ಪರ್ಯ.

೧೫೬೦. ಅಳೆ=ಮಜ್ಜಿಗೆ ಸೂ॥ ಬಳೆಯಿಲ್ಲದೆ ಕೋಮಲಕೈಯು ಮುರಿದ ಡೊಂಬರಗಳದಂತೆ ಇರುವದು, ಅಂದರೆ ರಂಡೆಮುಂಡೆಯ ಕೈ ಅಶುಭಸೂಚಕವಾಗಿರುವದರಿಂದ ಬಳೆಯಿಲ್ಲದಿರುವದು ಅಸಹ್ಯವೆಂದೆಣಿಸಲ್ಪಟ್ಟಿದೆ.

೧೫೬೧. ಬತ್ತದೆ+ಇವ=ಯಾವಾಗಲೂ ಹಿಂಡುವ. ಹೈನು=ದನ.

೧೫೬೩. ಕುಳ್ಳ=ಗಿಡ್ಡ.

೧೫೬೫. ತೊಗೆ=ತೋವೆ, ಸಾರು. ಇವಿಲ್ಲದ ಊಟ=ಒಣಅನ್ನ. ಬೆರಣಿ= ಅಡವಿಯಲ್ಲಿಬಿದ್ದು ಒಣಗಿದಕುಳ್ಳು; ಕಾಕುಳ್ಳು.

೧೫೬೬. ಲೋವೆ=ಇಳಿಚಪ್ಪರ, ಪಡಸಾಲೆ. ಇದು ಇದ್ದರೆ ಮನೆಗೋಡೆಗಳು ಭದ್ರ. ಸವಿ=ಬೆಲ್ಲ. ಸಕ್ಕರೆ.

೧೫೬೯. ಆಸರ=(ಸಂ) ಆಶ್ರಯ, ಕಂಭ; ಮಡಿಗೆ. ಇಲ್ಲವೆ ಅಸ್ತಿವಾರ.

೧೫೭೦. ಆಸರದವಳು=ಸ್ವಲ್ಪಕೆಲಸ ಮಾಡುತ್ತಲೇ ಬೇಸರಿಯುವಳು.

೧೫೭೧. ಹಸನ=ಶುಚಿ; ಶುದ್ಧಶರೀರ.

೧೫೭೨. ಹರಿಕೆ=ಆಶೀರ್ವಾದ. ನೆರಿಕೆ=ಬೇಲಿ ಕಟ್ಟ; ಮರೆ. ಅರೆಗ=ವಿವೇಕ.

೧೫೭೩ .ಅರುಪಲು=ಬಿನ್ನಹಮಾಡಿಕೊಂಡರೆ ಅರಿ=ಆಲೈಸು. ದೊರೆ=ಅರಸು ಕುರುಪು=ಸೌಂಜ್ಞೆ. ತಿರುಗಿಆಡು=ಪ್ರತ್ಯುತ್ತರಕೊಡು. ಇಟ್ಟಿ=ಈಟಿ.

೧೫೭೫. ಬಂದು = ಕೈಯ್ಯಲ್ಲಿದ್ದು. ಹೊಂದಿ ಹೋಗದ=ಭಟ್ಟಂಗಿಸಾರಿದರೂ ವೈರಿಯಮೈಮೇಲೆ ಹೋಗದ.

೧೫೭೬ ಇಂಥವಳ ಮನೆಯು ದುರ್ವಾಸನೆಯೂ ದುಃಖಕರವೂ ಆಗಿರುವದು.

೧೫೭೭. ಕೆಚ್ಚಲ=ಹೈನ. ನೆಚ್ಚಿಗಿಲ್ಲದಳ=ಪ್ರೀತಿ ಇಲ್ಲದ; ಭರವಸಕ್ಕೆ ಯೋಗ್ಯವಲ್ಲದ ಶ್ರಾವಣದಕಿಚ್ಚು=ಬೇಸಿಗೆಯಬಿಸಲು.

೧೫೭೮. ಸಂಚಿ=ತಾಂಬೂಲಸಾಮಗ್ರಿ ಕಿಲಬು+ಇಡಿದ=ತುಂಬಿದ.

೧೫೮೧. ತಾ॥ ಪ್ರಾಯಹೋದವಳನ್ನು ಲಗ್ನವಾಗುವದು ಒಣಗಿದಹೊಲವನ್ನು ಹರಗಿ ಬಿತ್ತಿದಂತಿರುವದು

೧೫೮೨. ವೋಚಿದಹೆಣ್ಣು=ವಿಧವೆ ಪೇಚಾಟ=ಜಗಳ.

೧೫೮೩. ಬಿದ್ದವೊಲೆಯುಳು=ಪ್ರಾಯಹೋದವಳು; ಮುದುಕಿ. ತಿದ್ದದ ಎತ್ತು=ಹೂಡಿ ಸಾಧಿಸದಹೋರಿ.

೧೫೮೫. ಬಣ್ಣವಬರೆ=ಬೇರೊಂದು ರೀತಿಯಿಂದ ಹೇಳು. ಸುಳ್ಳುಹೇಳು. ಪತಿವ್ರತೆಯಂತೆನಟಿಸು.

೧೫೮೬. ಗೋಟು+ಅಡಿಕೆ=ಕಲ್ಲಿನಂತೆಗಟ್ಟಿಯಾಗಿರುವ ಅಡಿಕೆ. ಬಾಟೆ=ಬೀದಿ; ಮಾರ್ಗ, ಇಂಥಮನೆಗೆಧೊಳುಬಹಳ (ಹ್ಯಾಗೂ ಕೇಡಾಗುವ ಗಂಡಾಂತರವಿರುವದು.)

ತಾಟಕಿ=ಜಗಳಹಚ್ಚುವ ಇಲ್ಲವೆ ಕುಂಟಲತನ ಮಾಡುವಹೆಂಗಸು.

೧೫೮೮. ನಂಜು=ವಿಷ; ದ್ವೇಷ ಗುಂಜಾಟ=ಜಗಳ, ತೊಂದರೆ.

೧೫೮೯. ಅಂದ=ಚಲ್ವಿಕೆ, ಲಕ್ಷಣ. ಚಂದ=(೧) ವಸ್ತ್ರಾಭರಣ; (೨) ಆತಿಥ್ಯ; (೩) ಮಾನ ಮರ್ಯಾದೆ.

೧೫೯೦. ಹೊಡೆದೊಯ್ಯುವಾರಿಲೇಸು=ಪಿಡುಗು ಬಂದುಸಾಯುವದು ಉತ್ತಮ.

೧೫೯೧. ಹೊಸೆ=ಕೆಲಸಮಾಡು ಕುಸಿದುಹೋಗು=ಫಕ್ಕನೆಸಾಯು. ಅಸಮಾನ=ಇಜ್ಜೋಡಾದ ತಾ॥ ಉಪವಾದರೂ ಇರಬಹುದು ಮೂರ್ಖಹೆಂಡತಿಯು ಬೇಡ!

೧೫೯೩. ಕಾಳುಬುದ್ಧಿ=ಕೆಟ್ಟಚಾಳಿ. ವ್ಯಭಿಚಾರ.

೧೫೯೪. ಕೇಳದೆ+ಇಮ್ಮೆ=ಎರಡು

ಸಾರಿ ಒದರಿದರೂ ಕೇಳದ ಹೆಮ್ಮಾರಿ= ಪ್ಲೇಗು.

೧೫೯೫. ಮೇಡು= ಗುಡ್ಡದ ಓರೆ. ಜೋಡಿಲ್ಲದ= ಇಜ್ಜೋಡು. ಕಾಡಿಗೆ ಗಣ್ಣ=(೧)ಕಪ್ಪುಕಣ್ಣು; ಕಣ್ಣಿನ ಲಕ್ಷಣ. (೨) ಕಾಡಿಗೆ ಹಚ್ಚಿದ ಕಣ್ಣು. ಚನ್ನಾಗಿ ಕಾಣದ ಕಣ್ಣು ಅಂದರೆ ಅರುವಿಲ್ಲದವಳೆಂದು ಕೆಲವರು.

೧೫೯೬. (೧) ಜರಿ= ಬಯ್ದಾಡು (೨)ಮೈಗಳ್ಳ ಉರಿ=ನಾಶವಾಗು.

೧೫೯೭. ಸೋರುಗಣ್ಣಾಕೆ= (೧) ಸ್ವಲ್ಪ ಮಾತಿಗೆ ಅಳುವ; ಡೋಕಾರ (೨) ಜಗಳತರುವ.

೧೫೯೮. ಸಂಚಿನ= ಬೇತು ಮಾಡುವ, ಜಗಳಹಚ್ಚುವ ಮಿಂಚಾಗಿಬರು= ಮನಸ್ಸು ತಿಳಿದಾಗ ಮನೆಗೆ ಬರು.

೧೫೯೯. ಬಂಡು = ಬೈಯುವ. ತುಂಡು=ವಿದ್ಯಾಹೀನ, ಅವಿವೇಕಿ.

೧೬೦೦. ಟೀ॥ ಸೂರ್ಯನ ಹೆಂಡತಿಯೂದ ಛಾಯೆಯು ಸೂರ್ಯನ ಬೆನ್ನು ಹತ್ತಿರುವಂತೆ ಕಾಮ ವಾಸನೆಯೆಂಬ ದೇಹದ ನೆರಳು ಎಲ್ಲರ ಬೆನ್ನು ಹತ್ತಿರುವದು ಇಂಥ ನೆರಳನ್ನು ಅಂದರೆ ಸ್ತ್ರೀ ಮೋಹವನ್ನು ಕೊಲ್ಲುವದಕ್ಕೆ ಸಮರ್ಥನಾದ ಯಮನು ಅದನ್ನು ನುಂಗಿ ಇಲ್ಲದಂತೆ ಮಾಡಲಿಕ್ಕೆ ಅರಿಯನು. ಅಂದರೆ ಯಮನೂ ಸ್ತ್ರೀವಶನೆಂಬ ತಾತ್ಪರ್ಯ. ಅರ್ಥಾಂತರ– ...... ಎಲ್ಲವನ್ನು ಸುಡುವದಕ್ಕೆ ಶಕ್ತನಾದ ಅಗ್ನಿಯು ತಾನೇ ಕಾಮಾಗ್ನಿಗೆ ಒಳಗಾಗಿ ಸಪ್ತಋಷಿಗಳ ಹೆಂಡರನ್ನು ಕೆಡಿಸುವದಕ್ಕೆ ಬೇರೆ ಬೇರೆ ಮಾಯಾ ರೂಪಗಳನ್ನು ತಾಳಿದನು. ಇಂಥವರು ಹೀಗೆ ಮೋಸ ಹೋಗಿರಲು ಹೆಣ್ಣು ತಿರಸ್ಕಾರಕ್ಕೆ ಯೋಗ್ಯವಾಗಿದ್ದು ಇದನ್ನು ಯಾರೂ ನಂಬತಕ್ಕದ್ದಲ್ಲವೆಂಬ ತಾತ್ಪರ್ಯ.

೧೬೦೨. ಶೀಲ=ಉತ್ತಮಸ್ವಭಾವ. ದೃಢಮನ=ನಿಶ್ಚಂಚಲ ಮನಸ್ಸು.

೧೬೦೩. ನಾರು+ಏಳು=ಪುಂಡಿಯ ನಾರಿನಂತೆ ಎಳೆಬಿಡು. ಮೋರೆನೋಡು= ಒಮ್ಮೊಮ್ಮೆ ಪಶ್ಚಾತ್ತಾಪಕ್ಕೆ ಒಳಗಾಗುವದರಿಂದ. ಮಲರೋಗ= ಮೂರ್ಛೆ; ಹುಚ್ಚು.

೧೬೦೪. ಟೀ॥ ನೀರಿನಲ್ಲಿದ್ದ ಕಲ್ಲು ಹೊರಗೆ ತೊಯಿದಿದ್ದರೂ (ಚಂದ್ರಕಾಂತದಂತೆ) ಒಳಗಿನಿಂದ ಹಸಿಯನ್ನು ಬಿಡುವಂಥಾದ್ದಲ್ಲ. ಹಾಗೆಯೇ ಸ್ತ್ರೀಯ ಪ್ರೀತಿಯು ಹೊರಗಿನ ಪೂರ್ತಿಗೆ ಇರುವದಲ್ಲದೆ ಮನಃಪೂರ್ವಕವಾದದ್ದಲ್ಲವೆಂದು ತಾತ್ಪರ್ಯ.

೧೬೦೫. ಟೀ॥ ನೀರಿಗೂ ಬೆಂಕಿಗೂ ಸ್ನೇಹವುಂಟಾಗುವದು ಅಸಾಧ್ಯ. ಹೀಗಿದ್ದರೂ ಎತ್ತರವಾದ ಕೆರೆಯು ದಂತೆ

ಯ ಮೇಲಿರುವ ಉರಿಯ ಛಾಯವು ಕೆಳಗೆ ನೀರಿನಲ್ಲಿ ಬಿದ್ದಿರುವದನ್ನು ಕಂಡು ಬೆಂಕಿಯು ನೀರಿಗೆ ಮೆಚ್ಚಿರುವದೆಂದು ಹೇಳುವದು ಹೇಗೆ ಮೂರ್ಖತನವೋ ಹಾಗೆಯೇ ಸ್ತ್ರೀಯು ತನ್ನೊಬ್ಬನನ್ನೇ ಪ್ರೀತಿಸುವಳೆಂದು ನಂಬಿರುವದು ಮೂರ್ಖತನವೇ. ಪುರುಷರಿಗಿರುವ ಈ ಹುಚ್ಚು ಒಂದು ಆನುವಂಶಿಕ ರೋಗವೇ ಎಂದು ತಿಳಿಯತಕ್ಕದ್ದು-ಉರಿಯು ನೀರಿನಲ್ಲಿ ಹೊಯಿದಾಡುವಂತೆ ಸ್ತ್ರೀಯರ ಸ್ವಭಾವವು ಚಂಚಲವೆಂದು ಕೆಲವರು.

೧೬೦೬. ತಾ|| ಸ್ತ್ರೀ ಮೋಹಕ್ಕೆ ಮೆಚ್ಚಿ ಹಣ ವೆಚ್ಚ ಮಾಡುವವನು ಹಾಳಾಗುವನು!

೧೬೦೭. ಸೂ|| ಸ್ತ್ರೀಪುರುಷರ ದೇಹಗಳೆರಡೂ ಮಣ್ಣಿನಿಂದಾದಾಗ್ಯೂ ಗುಣದಿಂದ ಸ್ತ್ರೀಯು ಸುಟ್ಟ ಹಂಚನ್ನು ಹೋಲುವದರಿಂದ ಅಂದರೆ ಮೋಸ ಕಾಪಟ್ಯಗಳುಳ್ಳವಳಾಗಿರುವದರಿಂದ ಇಲ್ಲಿ ಹೆಣ್ಣನ್ನು ಹಂಚಿಗೆ ಹೋಲಿಸಿದ್ದಾಯಿತು. (ಸರಿನೋಡಿ ಪದ್ಯ ೩೦೨)

೧೬೦೮. ಟೀ|| ಮಾಳಿಗೆಯ ಮೇಲೆ ಒಣಗಲಿಕ್ಕೆ ಹಾಕಿದ ಜೋಳವು ಮೊಳೆತು ತೆನೆಯಾಗುವದೆ ? ಎಂದಿಗೂ ಇಲ್ಲ. ಹೀಗಿದ್ದರೂ ಸ್ತ್ರೀಯು ತನ್ನನ್ನು ಮೆಚ್ಚಿರುವಳೆಂದು ಆಕೆಯ ಬೆನ್ನುಹತ್ತಿ ತಿರುಗುವವನು ಉಣ್ಣೆಗೋಸ್ಕರ ದನದ ಬೆನ್ನುಹತ್ತಿಹೋಗುವ ಬೆಳ್ಳಕ್ಕಿಯಂತೆ ಆಕೆಯ ದಾಸನಾಗಿರುವನೆಂದು ತಾತ್ಪರ್ಯ.

೧೬೦೯. ಚದುರೆ= ಹರವುಸ್ತ್ರೀ. ಹದಿರು=ರೀತಿ ಗುಣ. ಚದುರ=ಜಾಣ, ಗಟ್ಟಿಗ. ಕಣಿತೆ ಕೇಳು. ಬೆಳ್ಳಾಳ=ಬಡಕ, ಭೋಳೆಮನುಷ್ಯ. ಬಿದಿರಿಹಾಕು=ಬಿಸಾಡು; ಚಿಮ್ಮಿಬಿಡು.

೧೬೧೦. ಕೌತುಕ=ಯುಕ್ತಿ, ವಂಚನೆ. =ಆಳವಾದ ನೀರು. ಹೆಂಗಸರ ಮನಸ್ಸನ್ನು ತಿಳಿಯುವದು ಅಸಾಧ್ಯವೆಂದು ತಾತ್ಪರ್ಯ.

೧೬೧೧. ನೆಗಳು=ಮೊಸಳೆ. ಬಗೆ=ವಿಚಾರ, ಗುಣ. ರೀತಿ. ತಾ|| ಇಂಥ ಅಸಾಧ್ಯ ಸಂಗತಿಗಳು ಸಂಘಟಿಸಬಹುದು ಆದರೆ ಹೆಣ್ಣನ್ನು ಮಾತ್ರ ಎಂದಿಗೂ ನಂಬಕೂಡದು.

೧೬೧೨. ಯಾತದ ಗಣೆ= ಹತ್ತಿ ಇಳಿಯುವ ಕಪ್ಪಲಿಯ ಕಂಭ. ಕಾತು ಫಲವಾಗು=ಕಾಯಿಬಿಟ್ಟು ಹಣ್ಣಾಗು.

೧೬೧೩. ಸೇಡುಗೊಳ್ಳು = ತಂಡಿ ಹಿಡಿದು ನಡಗು. ಹುಡಿ=ಒಣನೆಲ.

೧೬೧೪. ಕಲ್ಲು ಕುಣಿದಂದು=ಸೂತ್ರಧಾರಿಯು ಕಲ್ಲಿನ ಗೊಂಬೆಗಳನ್ನು ಕುಣಿಸುವದು ಕಷ್ಟ.

೧೬೧೮. ಸ್ವರ್ಗಕ್ಕೆ ದಾರಿ ಸ್ತ್ರೀಯಲ್ಲಿ ಭಕ್ತಿಸ್ವಭಾವವು ವಿಶೇಷವಿರುವದರಿಂದ. ಮಾರಿ=ಮೃತ್ಯು.

೧೬೧೯. ಸುಳಿದಾಟ= ('ಹೊತ್ತು ನೋಡಿ) ಹಗಲೆಲ್ಲ ಬರು.

೧೬೨೦. ಪಡಿಯಾಸೆ ಹರದಂಗೆ = ವ್ಯಾಪಾರಿಗೆ ತೂಕ, ಅಳತೆಗಳು ಕೊಡುವದಕ್ಕೆ ಕಡಿಮೆಯೂ ತೆಗೆದುಕೊಳ್ಳುವದಕ್ಕೆ ಹೆಚ್ಚೂ ಇರಬೇಕೆಂಬ ಆಸೆ. ಜಡೆಯಾಸೆ=ಕೂದಲು ಉದ್ದ ಇರಬೇಕೆಂಬ ಆಸೆ. ಬೂದಿಗೊರವ=ಸನ್ಯಾಸಿ. ಎಡೆಯ ಆಟ=ತಿರುಗಾಟ.

೧೬೨೧. ಮುಟ್ಟಾಟದಾಸೆ=ಆಲಿಂಗನೆ ಚುಂಬನಾದಿಗಳ ಆಸೆ.

೧೬೨೨. ಕರೆ=ಹಿಂಡಿಕೊಳ್ಳು ಗೊಲ್ಲ=ಗೌಳಿಗ ನಿರಿ=ನೀರಿಗೆಗಳನ್ನು ತೀಡು ಮರೆ=ಏಕಾಂತಸ್ಥಳ.

೧೬೨೩. ಮಂಜು, ಮಳೆ=ಇಬ್ಬನ್ನಿಯೂ ಮಳೆಯೂ, ನಂಜುತ +ಉಣುವ=ತಿಳಿಯದಂತೆ ವ್ಯಭಿಚಾರ ಮಾಡುವ.

೧೬೨೪. ಮಂಡೆಯಲಿ... ತಲೆಗೆ ಧಕ್ಕೆ ಆಗುವದರಿಂದ. ಹಾದರಕೆ...ಹೊಲ್ಲ=ಪರರು ನೋಡುವರೆಂಬ ಹೆದರಿಕೆ ಇರುವದರಿಂದ ಚುಂಬನಾದಿ ಸುರತದ ಆಟಗಳನ್ನು ಆಗುವಹಾಗಿಲ್ಲ.

೧೬೨೫. ಕಾಕು=ವ್ಯರ್ಥವಾದ.

೧೬೨೬. ತಾಮಸ=ಹುಚ್ಚು.

೧೬೨೭. ಅವಳು+ಒಲ್ಲಳು. ಗಿಡಗಳೇನು ಮಾಡಿದವು ಅಕಟ!

೧೬೩೩. ತೂಯ್ಯಲು=(೧) ನೀರು, ಹಸಿ. (೨) ಪಾಯಸ. ಕೈಯಲ್ಲಿ+ಇಲ್ಲದ=ಹಣವಿಲ್ಲದ. ವಿಟಗಾರನ ಹುಯ್ಯಲುಳ್ಳ=ಹೊಡೆದಾಟಕ್ಕೆ.

೧೬೩೪. ಚಾಟು=ಚಪ್ಪರ. ಸ್ವಂತ ಮನೆ. ನೋಟ=ನೊಂಡಗೈಯ್ಯವ.

೧೬೩೫. ಟೀ|| ಪ್ರೇಮಕ್ಕೆ ನೋಟವೇ ಮುಖ್ಯ. ಕ್ರೀಡೆ ಆದಬಳಿಕ ಇವುಗಳ ಉಪಯೋಗವಿಲ್ಲ.

೧೬೩೮. ಸುಗುಡಿ=ವ್ಯೆನೆರೆಯದಾಕೆ ಸಕ್ಕರೆ=ಸವಿಯೂಟ. ಪಾಯಸ.

೧೬೩೯. ಡೋರುಮೈಯಾದ=ಬೆಂಡಾದ; ನಿರಿಗೆಗಟ್ಟಿದ.

೧೬೪೦. ಒಂದರೆ=ಒಂದುಪಕ್ಷಕ್ಕೆ. ಸಂದಿಸಿ=ಗಂಡನನ್ನು ಕೂಡಿ.

೧೬೪೧. ರಸವರಿತ=ರಸ ಆರಿದ; ಹುಳತ.

೧೬೪೩. ಚೊಕ್ಕದಳ=ಶುದ್ಧ ಶರೀರವುಳ್ಳವಳ.

೧೬೪೪. ಮೇಳ=ರುಚಿಕಟ್ಟು. ಕಾಳೆಮ್ಮೆ=ಕಪ್ಪಾದ ಎಮ್ಮೆ. ಉತ್ತಮ ಹೈನ. ಕೀಳಿನಕೂಳು=ಅಮೇಧ್ಯ. ತಿಪ್ಪೆಯ ಕಸ.

೧೬೪೭. ವೀರ್ಯವು ಒಮ್ಮೆ ಹೋದಮೇಲೆ ತಿರುಗಿ ಎಷ್ಟು ಪ್ರಯತ್ನಿಸಿದರೂ ಜ್ಞಾನತಂತುಗಳು ಮುಂಚಿನಸ್ಥಿತಿಗೆ ಬಾರದೆಂದು ತಾತ್ಪರ್ಯ.

೧೬೪೯. ಎಳಸಿ=ಭೋಗೇಚ್ಛೆಯಿಂದ. ಕಳಕಳ=ಚಿಂತೆ, ಹಳಿ=ಅಪಮಾನ.

೧೬೫೦. ಕುಳಿ=ಕುಣಿ, ಯೋನಿ. ಮೀರಿದ=ಎತ್ತರದಲ್ಲಿರುವ.

೧೬೫೧. ಹೋಟಿ = ಗಿಡದಹೊದರು. ತೀಟಿ=ಕಾಮಬಾಧೆ. ತೀರು=ವ್ಯಭಿಚಾರಮಾಡಿ ತೀರಿಸಿಕೊಳ್ಳು ನರಕ=ಅಮೇಧ್ಯ.

೧೬೫೨. ಟೀ॥ ಕೋಟಿಪೌನುಗಳನ್ನು ಕೊಟ್ಟರೂ ರತಿಸುಖಕ್ಕೆ ಸಮುವಲ್ಲ. ಇಂಥ ಕಾಮಕ್ರೀಡೆಗೆ ಕೂಟಕ್ಕಿಂತ ಬೇಟವೇ ಮೂಲವೆಂದು ಹೇಳಬೇಕು.

೧೬೫೩. ಗೋಟು=ನೀಚ ಸ್ತ್ರೀ.

೧೬೫೫. ಕಗ್ಗು=ಬರ ಅಸಹ್ಯನೋಟ ಕಿಗ್ಗಳ=ನೀಚಭೋಗ.

೧೬೬೦. ಕತ್ತೆಯಾಕಿವಿ=(ಯೋನಿ) ಇದು ಅಕಾಲ ಅಯೋಗ್ಯ ಗಮನಕ್ಕೆ ಸೂಚನೆ.

೧೬೬೧. ಕಂಕಿ =ರೋಗಿಷ್ಟಿ. ನಿರ್ವಾಂಸಿ. ಮಂಕಿ=ಹುಚ್ಚಿ.

೧೬೬೨. ಮಾಗಿಗೆ=ಚಳಿಗಾಲದಲ್ಲಿ. ಸ್ತ್ರೀಯರ+ಅತಿ+ಭೋಗ.

೧೬೬೩. ಅಸಿಯಳು=ಬಸುರಾಗದವಳು ಕೃಶಾಂಗಿ.

೧೬೬೪. ಬಿಚ್ಚೋಲೆಕತಾಳೆಯ ಎಲೆಯಿಂದ ಮಾಡಿದ ಕಿವಿಯ ಆಭರಣ.

೧೬೬೫. ಅಚ್ಚಬಣ್ಣ=ಏಕವರ್ಣದ ಚಂದ್ರಕಾಳಿ ಸೀರೆ. ಕಿಚ್ಚುಕಾಣಯ್ಯ=ಯಾವಾಗಲು ಕಾಮಾಗ್ನಿಯಿಂದ ಉರಿಯುವವಳು.

೧೬೬೭. ಹತ್ತ=ಬಿಗಿಯಾಗಿ. ಒತ್ತಡಿಕೆ=ಕೊರೆದ ಅಡಿಕೆ; ಹಲ್ಲುಸುಲಿ=ಹಲ್ಲುತಿಕ್ಕು ಉಜ್ಜು.

೧೬೬೮. ಕೆತ್ತಿಸಿದಹರಳೋಲೆ=ಕೆತ್ತಿದವಜ್ರದ ಹರಳುಕೂಡ್ರಿಸಿದ ಕಿವಿಯ ಆಭರಣ. ಕಾಮ+ನೋಡಿ+ಎತ್ತಿದ ಇಲ್ಲವೆ ಕಾಮನು+ಓಡಿ=ಎತ್ತಿದ.

೧೬೬೯. ಸರಿನೋಡಿ ಪದ್ಯ ೧೫೫೫.

೧೬೭೨. ಕಟ್ಟೆಳಿದು=ಹೆಳಲು ಬಿಚ್ಚಿಬಿಚ್ಚಿ. ಮುಡಿ=ಹೂವಿಡು.

೧೬೭೩. ಉಲಿಗನಮರಿ=ಹಾಲಕ್ಕಿ, ಇಲ್ಲವೆ ಗೀಜುಗನಹಕ್ಕಿ. ಅಂದರೆ ಸಣ್ಣಧ್ವನಿತೆಗೆದು ಸೋಗಿನಿಂದ ಮಾತಾಡುವದಕ್ಕೆ ಸೌಂಜ್ಞೆ. ತಲೆಗುತ್ತಿ=ತಲೆಬಾಗಿ. ನೆಲೆವನೆ=ಗೀಬು; ಮೂಲಸ್ಥಾನ.

೧೬೭೪. (ದೊಡ್ಡಧ್ವನಿತೆಗೆದು ನಗುವಳು.) ನೆಲನ ಅಗಿ=ನೆಲದ ಹಕ್ಕಳಿ ಎಬ್ಬು.

೧೬೭೫. ನೀರನೆರಳು=ಪ್ರತಿಬಿಂಬ (ಜನರು ನೋಡುವಂತೆಹೆಳಲು ಹಾಕು) ನೀರು= ಸೂಕ್ಷ್ಮವಾದ. ಮೀರು=ಒಳಗಾಗದೆ ಇರು, ಬಿಟ್ಟುಬಿಡು.

೧೬೭೭. ನೇವರಿಸು=ಬಾರಿಬಾರಿಗೆ ಉಜ್ಜು ಕೈಯಿಂದ ತೀಡು. ಉರದ=+ಓರೆ+ಸೆರಗ. ಇಲ್ಲವೆ ಉರ+ತೋರೆ=ಎದೆಯನು ತೋರಿಸುವ ಉದ್ದೇಶದಿಂದ.

೧೬೮೦. ಅಡಿಟಿಪ್ಪಣಿ ನೋಡಿ ಪದನಾಡು ಎಂದಿರತಕ್ಕದ್ದು.

೧೬೮೪. ಕಣಕಾಲು = ಕೆಳಗಿನ ಸಣ್ಣ ಕಾಲು ಕುಣಿಕೆ=ಮುಖ್ಯಮಣಿ.

೧೬೮೫. ಅಣಕದಲಿ=ಮೋಹಕವಾಗಿ; ಸ್ವಲ್ಪವೇ ತೆರೆದು. ಟೊಣೆ=ಬಿಟ್ಟು ಬಿಡು. ಠಕ್ಕಿಸು.

೧೬೮೬. ಕಟ್ಟು=ಜಗಳಾಡು. ಮುಚ್ಚಳದಲುಂಬು=ದೀನಳಂತೆ ನಟಿಸು.

೧೬೯೦. ನೂಲುಂಡೆಯಂತೆ=ಗುಂಜುಗುಂಜಾಗಿ ಹಂಜಿಯ ಬುಟ್ಟಿಯಂತೆ ಇರು.

೧೬೯೧. ತಾ॥ ಹೇಸಿಕೆ ಬರುವಂತಿದ್ದರೆ ಯಾರೂ ಸಮೀಪಿಸರು.

೧೬೯೨. ಗಿಡನಿದ್ದ ವೈದ್ಯ=ಗಂಡಸು. ಆ ಬೇನೆ=ಕಾಮಜ್ವರ.

೧೬೯೪. ತಾ॥ ಇವರೆಲ್ಲರು ರಾತ್ರಿಯಲ್ಲಿ ಭೋಗಿಸಿ ಹಗಲಲ್ಲಿ ಯಾರಿಗೂ ಅರಿಯದವರಂತೆ ಆದರೆ ಸಂಭಾವಿತರಂತೆ (ಸುಕ್ಕಿ) ಮುದುರಿಕೊಂಡಿರುವರು=ಮರ್ಯಾದೆಯಿಂದಿರುವರು.

೧೬೯೫. ಕುದಿಸಿ=ಹುಗ್ಗಿ (ಪಾಯಸ) ಮಾಡಿ ಹೊಡೆ=ಹೊಟ್ಟೆತುಂಬ ಉಣ್ಣು.

೧೬೯೬. ತಾ॥ ರಕ್ತವನ್ನು ತಿಂದು-ತತ್ತಿ ಇಟ್ಟು ಹೋದಂತೆ-ಗಬಗಬನೆ ಉಂಡು.

೧೬೯೭. ಗಂಡುಗರಣಿಯನುಂಗಿ=ದೊಡ್ಡ ದೊಡ್ಡ ತುತ್ತುಮಾಡಿ ಯಾರೂ ನೋಡದಂತೆ ಉಂಡು ಗುಂಡಿಗೆ+ಇಕ್ಕು ಆಳವಾದ ತಗ್ಗಿನಲ್ಲಿ ಚಲ್ಲು.

೧೬೯೮. ನೆಲ್ಲಹುಲ್ಲಂತೆ ಬಳಕು=ಸಂಕಟ ಉಂಟೆಂದು ನರಳುತ್ತ ಭತ್ತದ ಹುಲ್ಲಿನಂತೆ ಮುರುಕಮಾಡಿ ಮಣಿ. (ಇಂಥವಳು ರುಚಿಕರವಾದ ಊಟವನ್ನೂ ಪರಪುರುಷರನ್ನೂ ಬಯಸುವಳು.)

೧೬೯೯. ಇಬ್ಬರು=ಮಿಂಡರು ಉಬ್ಬೆ=ಉಗಿಹಿಮ=ತಂಪು ಕೊಬ್ಬಿದಕರಿ=ಮದ್ದಾನೆ. ಗಬ್ಬ=ಬಸರು ನಿಲ್ಲುವದು. ಮದ್ದು=ಔಷಧ ಯೋಗ್ಯ ಶಿಕ್ಷೆ.

ಬದಿ=ಎದೆ; ಪಕ್ಕ. ಬಿದ್ದ=ಜೋಲುಬಿದ್ದ.

೧೭೦೧. ಮುದುಕರ ರತಿಕ್ರೀಡೆಯು ಹಾಳೂರಿನ ಹದ್ದು ಹಾರಿಹಾರಿ ಅಲ್ಲಿ ಏನೂ ಸಿಕ್ಕದೆ ಹೋಗುವಂತಿರುವದು.

೧೭೦೨. ತಾ॥ ಮುದಿಕಿಯು ಹಣದ ಆಶೆಗಾಗಿ ಕಾಮವಿದ್ದವಳಂತೆ ನಟಿಸುವ ದಕ್ಕೆ ಹೋಗಿ ಹರೆಯದ ಮಿಂಡನಿಗೆ ಗಂಟುಬಿದ್ದರೆ ನರಿಯು ಎಳೆತೆಂಗಿನ ಕಾಯನ್ನು ತಿಂದು (ಓಗಡಿನ ಬೆದರು ವಾಂತಿಮಾಡಿ ಮಾಡಿ ಹುಚ್ಚುಹಿಡಿದು ವಿಶ್ರಾಂತಿ ಇಲ್ಲದೆ ಅಡವಿಯೆಲ್ಲ ಓಡಾ ಡಿದಂತಾಗುವದು.

೧೭೦೩. ಭಂಡ=ಬೈಗಳು, ದುಷ್ಟ ಭಾಷೆ. ಡಿಂಡೆ=ದುಷ್ಟಸ್ತ್ರೀ.

೧೭೦೬. ನೀರೆ=ಚಲುವೆ ಲಡ್ಡುಗೆ= ಲಾಡು, ಸಕ್ಕರೆಯ ಉಂಡಿ ಹಸುಳೆ ಗಳ=ಚಿಕ್ಕಮಕ್ಕಳನ್ನು ತಡೆಬಿಡು=ಹರಿ ಹಿಡು.

೧೭೦೭. ನೇಣುಸರಿ=ಕಟ್ಟಿದಹಗ್ಗ ಬಿಚ್ಚಿಬಿಡು.

೧೭೦೯. ಟೀ॥ ಅಡಕೊತ್ತು ತರು ತ್ತೇನೆಂದು ಅರ್ಥದಾರಿಗೆ ಹಿಂದೆಹೋಗಿ ಪರಪುರುಷನನ್ನು ಕೂಡಿ ಬರುವಳು ಹೆಣ್ಣನ್ನು ಎಷ್ಟು ಕಾಯುತ್ತಿದ್ದರೂ ಕಣ್ಣುತಪ್ಪಿಸಿ ಮಾಡುವಳೆಂದು ತಾತ್ಪರ್ಯ.

೧೭೧೦. ಸಂಬಳಿಗೆ=ಎಲೆ ಇಡುವ ಚೀಲ ಕನ್ನದ ಸೂರೆಹೋಗಿತ್ತು=ವ್ಯಭಿ ಚಾರ ಕೃತ್ಯ ನಡೆದಿತ್ತು.

೧೭೧೨. ಆಲ, ಅತ್ತಿ, ಮರಗಳು ಹೂಬಿಟ್ಟಿದ್ದನ್ನು ಯಾರೂ ಕಂಡಿಲ್ಲ ವಂತೆ.

೧೭೧೫. ಕರುಳಿಗೆ ಹೇಸಿಕೆ ಇಲ್ಲ= ಮಗನು ಎಷ್ಟುಕೆಟ್ಟವನಾದರೂ ತಾಯಿ ಯ ಪ್ರೀತಿಯು ಹೋಗದು.

೧೭೧೬. ಕಾಲಸಿಗೆ ದಿನವಿಲ್ಲ=ಮರ ಣಕ್ಕೆ ಇಂಥ ದಿವಸವೆಂದು ನೇಮಕ ವಿಲ್ಲ.

೧೭೧೭. ಹೊರಸು =ಪಾರಿವಾಳ. ತೆನೆ=ಜುಟ್ಟು. ಕೆರಸಿ=ದೊಡ್ಡ ಪುಟ್ಟಿ.

೧೭೨೦. ಅಲಗಲಗು ಹಳಚಿ ಮಸೆ ಯಲ್ಲ=ಕತ್ತಿಗೆ ಕತ್ತಿಯನ್ನು ತಿಕ್ಕಿದರೆ ಹದವಾಗುವದಿಲ್ಲ.

೧೭೨೫. ತುಂಬೆ=ಒಂದು ತರದ ಹುಲ್ಲು.

೧೭೨೬. ಠಕ್ಕು=ತುಡುಗು ಗುಣ, ಕಂಕಿ=ಗುನಿ. ಇಕ್ಕಿ = ಬಿಟ್ಟುಕೊಟ್ಟು ಹೋಗು.

೧೭೨೭ ಚದುರ=ಬುದ್ಧಿ. ಒದ ರು=ಝಾಡಿಸಿ ಬಿಡು ಕೊಡಹು. ಬಿಕ್ಕ ಣ=ತೋಮರಿ.

೧೭೨೮. ಜೀನಸು=ಗುಣ. ಹಂದ ರ=ಎಲುಪಿನ ಪಂಜರ.

೧೭೨೯. ನೋಡಲು = ವಿಚಾರ ಮಾಡಿದರೆ ಕಂಬಿ=ಕಡ್ಡಿ ದೇಂಟು.

೧೭೩೧. ಟೀ॥ ಅಳ್ಳಾಡು=ಹೊಯಿ ದಾಡುತ್ತ ಹುಡುಕು ಸೂಳೆಯು ಬಳ್ಳಿ

ಯಂತೆ. ಅಬಲೆಯಾಗಿ ಕಂಡರೂ ಸೀಗೆ ಯು ಹೇಗೆ ದೊಡ್ಡ ಮರಗಳನ್ನು ಕೆಡಿಸಿ ಸಮೀಪದ ಮತ್ತೊಂದು ಮರ ವನ್ನು ಸುತ್ತುವದಕ್ಕೆ ಹೊಂಚಿಹಾಕು ವದೋ ಹಾಗೆಯೇ ಸೂಳೆಯು ಒಬ್ಬರ ಹಿಂದೊಬ್ಬರನ್ನು ಹಾಳುಮಾಡುವದಕ್ಕೆ ಯತ್ನಿಸುವಳೆಂದು ತಾತ್ಪರ್ಯ.

೧೭೩೩. ಕುಂದು=ಜ್ವರ, ಬೇನೆ.

೧೭೩೭. ಸುಳಿಗಾಳಿ = ಎಲ್ಲದಿಕ್ಕಿ ನಿಂದ ಬೀಸುವ ಗಾಳಿ. ದಳಗಾಲು= ದಪ್ಪವಾದ ಕಾಲು.

೧೭೩೮. ಅರಿವೆ = ಜೀರ್ಣವಾದ ಧೋತ್ರ, ಸೀರೆ ಮುರುಬಾಳ=ಹುಚ್ಚ.

೧೭೩೯. ಒಂದೆಲಗ ಒಂದುತರದ ವನಸ್ಪತಿ. ಬ್ರಹ್ಮಬಳ್ಳಿ? ಇದು ಉತ್ತಮ ವಾದದ್ದು.ಹೊಲ್ಲಎಂಬದು ಯಾತಕ್ಕೊ ತಿಳಿಯದು. ೭. ಕ. ಒಂದೆಲೆಯುಮೆಲ್ಲ= ಒಬ್ಬನೆ ಎಲೆಹಾಕಿಕೊಂಡು ಊಟಮಾ ಡುವದು ಯೋಗ್ಯವಲ್ಲವೆಂದು ನಾರಾ ಯಣಶಾಸ್ತ್ರಿಗಳು.

೧೭೪೧. ನುಚ್ಚುಗೂಳು = ಮಿಜ್ಜೆ ಯಾದ ಅನ್ನ. ಮಚ್ಚರ = ಮತ್ಸರ. ಮುಚ್ಚುಗಣ್ಣು ಹೊಲ್ಲ=ಕಣ್ಣು ಮಿಟು ವದಕ್ಕೆ ಯಾವಾಗಲು ಸಿದ್ಧವಾಗಿರ ಬೇಕಾಗಿದ್ದರಿಂದ (ಸೂಳೆ) ನಿದ್ರೆಮಾಡ ಕೂಡದೆಂದು ತಾತ್ಪರ್ಯ.

೧೭೪೩. ಶಬರ=ಬೇಡ; ಬೇಟೆಗಾರ ಗುಲ್ಲಾಟ=ಪ್ರೇಮದ ಬಾಹ್ಯ ಕಲಹ.

೧೭೪೭. ಬಳಿ=ಕಬ್ಬಿಣದ ಹಳಿ– ಮೊಲೆಯಾಸೆ = ಮೊಲೆಲಕ್ಷಣವಾಗಿರ ಬೇಕೆಂಬ ಆಸೆ.

೧೭೫೦. ಮಲೆಯು=ಗುಡ್ಡದದಾರಿ. ಸಂಚಾರಿ=ಗುಡ್ಡಗಾಡಿನಲ್ಲಿ ತಿರುಗಾಡು ವವ.

೧೭೫೧. ವಾನರ=ಮಂಗ. ದೀನ= ಹಣವಿಲ್ಲದವ, ಬಡವ.

೧೭೫೨. ಹದುಳ=ಗುಣ, ಯೋಗ ತ್ಯೆ. ಒದಗು=ಸಮೀಪಿಸು.

೧೭೫೪. ವೈಗಳ್ಳನಿಗೆ ಮರಣ. ಹೊದ್ದಿ ದನ=ಹೊಂದಿಕೊಂಡವನನ್ನು ವಿಟಗಾರ.

೧೭೫೫. ಏಳಿಗೆಹರಿ = ಸೂಸಿಹರಿ ಯುವ, ಎತ್ತರದಲ್ಲಿ ವಿರುದ್ಧದಿಕ್ಕಿಗೆ ಹರಿಯುವ.

೧೭೫೭, ರಂಭೆ=ಸೂಳೆ. ಮುನ್ನಿನ ಎಳ್ಳಿನ ಋಣ=ಪೂರ್ವದಲ್ಲಿ ಮಾಡಿದ ಅಲ್ಪಪುಣ್ಯದ ಫಲ, ಪಿಂಡೋದಕವನ್ನು ಹಾಕುವಾಗ ಇವುಗಳನ್ನು ಪ್ರಯೋಗಿ ಸುವರು.

೧೭೫೮. ಶಂಬು = ಸುಖಕೊಡು ವವ=ಶಿವ, ಸಹಜ=ಭಕ್ತ; ಜೀವಾತ್ಮ. ಚೆಂಬೊನ್ನ=ಬಂಗಾರ ಹಣ.

೧೭೬೦. ಅಣಿಮಾಡು=(ಕ್ರೀಡೆಗೆ) ಸಿದ್ಧಮಾಡು.

೧೭೬೨. ವಾರಾಂಗನೆ=ವೇಶ್ಯಾಸ್ತ್ರೀ (೧೭೬೧) ಸಿಗು=ವಶವಾಗು.

೧೭೬೩. ಹಂಡಕೆಂದ = ಚುಕ್ಕೆಗಳುಳ್ಳ ಎತ್ತುಗಳು ಹುಂಡಿ=ವ್ಯಾಪಾರಕ್ಕೆ ಬೇಕಾದಹಣ. ಸೂಳೆಗೆ ಅನೇಕ ಗಂಡರಿದ್ದರೂ ಬಾಧ್ಯತೆಯು ಹೆಣ್ಣಿಗಲ್ಲದೆ ಗಂಡಿಗಿಲ್ಲ. ಆದ್ದರಿಂದ ಸೂಳೆಗೆ ಎರಡು ( ಅಂಡು ) ತಿಗ ಇಲ್ಲವೆ ತೊಡೆಗಳು. ಅಂದರೆ ದೇಹವಿಕ್ರಯವೇ ಆಕೆಯ ವ್ಯಾಪಾರವೂ ಬೇಸಾಯವೂ ಎಂದು ತಿಳಿಯತಕ್ಕದ್ದು.

೧೭೬೪. ಟೀ॥ ಸೂಳೆಗೆ ( ಅಡ್ಡ ) ನಾಲ್ಕಾಣೆ ರೊಕ್ಕವಲ್ಲವೇ ಎಂದು ಅಲಕ್ಷ ಮಾಡಿ ಹೋಗಬೇಡ ಕ್ಷೌರಕ್ಕೂ ತಾಂಬೂಲಕ್ಕೂ ಹೂವ್ವು, ಸುಗಂಧ ಎಣ್ಣೆ ಮೊದಲಾದವುಗಳಿಗೂ ಕೂಡಿ ಮತ್ತೆ (ಎರಡಡ್ಡಗಳು ) ಎಂಟಾಣೆಬೇಕಾಗುವದು.

೧೭೬೫. ಸಿದ್ಧಾಯಮುನ್ನಿಲ್ಲ=ಶೆರಿಗೆ ಇಲ್ಲ. ತಾ॥ ಸೂಳೆಗೆ ಶರೀರವೇ (ಬದ್ದೆ) ಒಂದು ಹೊಲ ಈ ತರದ ಒಕ್ಕಲತನಕ್ಕೆ ಸರಕಾರದ ತೇಗೆ ಇಲ್ಲ.

೧೭೬೮. ರಚ್ಚೆಗೆಲೆ=ಲಜ್ಜೆ ಇಲ್ಲದ. ತಾ॥ ಸೂಳೆಯಬೆನ್ನು ಕಟ್ಟೆ ಹೊಡೆದಾಡುವವನು ಎಲ್ಲರೂ ನಡೆಯುವ ರಾಜಮಾರ್ಗವು ತನ್ನದೊಬ್ಬನದೇ ಎಂದು ವಾಜ್ಯಮಾಡಿದಂತಿರುವದು.

೧೭೭೧. ಆರವೆಮುರ = ಎಲ್ಲರೂ ಆರಾಮು ತೆಗೆದುಕೊಳ್ಳುವ ಕಟ್ಟೆಯಗಿಡ.

೧೭೭೨. ಸಪ್ಪಾದ=ಕ್ರೀಡೆಯು ಆಶೆಯು ತೀರಿದ.

೧೭೭೩. ಬಡವನು ಎಷ್ಟುರೊಕ್ಕ ಹಾಳುಮಾಡಿದರೂ ಸೂಳೆಯು ಸಾವುಕಾರನಿಗೆ ಕೊಡುವ ಸುಖವನ್ನು ಅವನಿಗೆ ಎಂದಿಗೂ ಕೊಡಳು.

೧೭೭೫. ಟೀ॥ ಸೂಳೆಗೆ, ಬಡವನೆಂದು ಗೊತ್ತಾದಾಕ್ಷಣಕ್ಕೆ ರೊಕ್ಕತೆಗೆದುಕೊಂಡು ಹೇಗಾದರು ಇಂದ್ರಿಯ ಪತನಮಾಡಿಸಿ ಹೊರಗೆ ನೂಕಿಬಿಡುವಳು.

೧೭೭೫. ಹೊದ್ದಿದರೆ ...ಎಂದು= ನಂಬಿ ನಿನ್ನನ್ನು ಕೂಡಿದರೆ ನೀನು ನನಗೆ ವಿಷಹಾಕಿದಿಯೆಂದು ಹೇಳಿ ಸುಳ್ಳೇ ಸಾಯುವಳೋ ಏನೋ ಎಂಬಂತೆ ನಟಿಸಿ ಭಯಹುಟ್ಟಿಸುವಳು.

೧೭೭೬. ತಾ॥ ಸೂಳೆಯ ಎಂಜಲು ತಿಂದರೆ ಎಲ್ಲರ ಎಂಜಲು ತಿಂದಹಾಗಾಯಿತು.

೧೭೮೦. ಟೀ॥ ಸೂಳೆಯ ಶರಿರವೇ ದಾರಕಟ್ಟಿದ ದಂಟಿನಕೋಲು ಆಕೆಯ ಮುಖವೇ ಗಾಳ. ಮೇಲೆ ತೇಲಾಡುವ ಬೆಂಡೇ ಮೇಳೈಸುವವಳು ಅಂದರೆ ಕುಂ

ಟಿಲಗಿತ್ತಿ. ?ರುವಯಶೌನಸ್ಥನೇ ಗಾಳಕ್ಕೆ ಬೀಳುವ ಮಿಾನ.

೧೭೮೧. ಕಾಡಕಗ್ಗೊರಲೆ=ಕಾಡಿನ ಕಾಮುಕಸ್ತೂರಿ. ತೀಡು = ಹತ್ತು ಸೋಂಕು.

೧೭೮೩. ಸಂತೆಯಂಗಡಿಸೂಳೆ = ಸಂತೆಯುದಾರಿಯಲ್ಲಿ ಘಟಿಂಗರಿಗಾಗಿ ಅಂಗಡಿಹಚ್ಚಿಕೊಂಡು ಕೂತಿರುವ ಸೂಳೆ. ಮಿಗಿಲುಸೂಳೆಯಂದರ್ಥ. ಮುಂತೊಲಿವ = ಕರೆಯುವ ಮುಂಚಿತವಾಗಿ ಬರುವ. ಜೋಗತಿ=ಎಲ್ಲವ್ವನಪೂಜಾರಿ?

೧೭೮೯. ಜಾಲೆ=೧ ಜ್ವಾಲೆ (೨) ಜಾಲೆಗಿಡ ಮರ=ಹಣ್ಣಿನಗಿಡ, ದೊಡ್ಡ ವೃಕ್ಷ. ವೋಳೆ=ಏಡಿ.

೧೭೯೭. ರಸ=ಪಾದರಸ, ಪಾರಜ. ಕಿಸು=(೧) ಕೆಂಪುಬಣ್ಣ (೨) ಸಿಂಧೂರ (೩)ತಾಂಬ್ರ ವಸುಘಟ=ಅಡಸಾಲೆಗಿಡ. ವಾದಿ=ರಸಜ್ಞ. ಹಸಿ = ಬಡತನದಲ್ಲಿ ಸಾಯು.

೧೭೯೮. ಶಶಕ = ಮೊಲ. ರುಷಿಕುಂಭ=ಅಟರೂಷ, ಒಂದುತರದ ವನಸ್ಪತಿ g. s. ರುಷಿಯ ರಾಕುಂಭ = ಕಮಂಡಲ.

೧೮೦೦. ಉತ್ತರಣೆ = ಉತ್ತರಾಣಿಗಿಡ. ಒಂದು ತರದಕಸ. ಉಪ್ಪಲಿಗೆ= ಮಕರಂಗ ಒಂದುತರದ ಸಣ್ಣಗಿಡ. ಮತ್ತೆ+ಅಲ್ಲ= ಶುಂಠಿ ? ಶಿಶುಮಾರ= ಮೊಸಳೆ. (ಗಿಡದಹೆಸರೋ ತಿಳಿಯದು.) ರಸ ಭಸ್ಮ= ( Oxide of mercury)ಪಾರಜ ಕೊಂದು ತಯಾರಿಸಿದ್ದು.

೧೮೦೧. ಗುಡ=ಇಪ್ಪೆ. ಮಾತುಲಂಗಕ=ಮಾದಳ.

೧೮೦೨. ತಾಳಕದಸತ್ವ=ಗಂಧಕದ ಅರ್ಕ (Sulphuric acid)ಬಾಳದ ಬಿಳಿ=ಬಿಳಿಬಾಳದಬೇರು. ತಾರೆ=ಬೆಳ್ಳಿ ಹೇಳಿದಂತೆ=ಉತ್ತಮತರದ.

೧೮೦೪. ವಂಗವೆರೆ=ಸೀಸವು ಬೆರೆಯಲಾಗಿ.

೧೮೦೫. ಹತ್ತಾರೆ= ಹತ್ತು+ಆರೆ. ಆರೆಯುಬಳ್ಳಿಯು ಹತ್ತು ಹೂಗಳು; ಇಲ್ಲವೆ ಆರೆಯಂಥ ಹೂವಿನ ೧೦ತರದ ಬಳ್ಳಿಗಳು.

೧೮೦೬. ತುತ್ತ = ಮೈಲುತುತ್ತೆ. ನಾಗ= (೧) ಸೀಸ. (೨) ಸಿಂಧೂರ. (೩) ನಾಗದಾಳಿ ಹತ್ತಿಬರು = ಉಂಟಾಗು.

೧೮೦೭. ಎರಡು = ಎರಡುಭಾಗ. ಇಲ್ಲವೆ ಅಳತೆ. ಅಂಜೆ=ಹಂಜೆ=ಅರಳೆ.

೧೮೦೮. ರಸ, ವಂಗ, ತಾರೆ = ಪಾರಜ, ಸೀಸ, ಬೆಳ್ಳಿ– ಹಸುಗೆ = ಭಾಗ=ಇವೆಲ್ಲ ಭಂಗಾರದ ಒಪ್ಪ ಉಂಟಾಗುವದಕ್ಕೆ ಹೇಳಿದ್ದೋ ತಿಳಿಯದು.

ಈ ವಿಷಯವಾಗಿ ರಸಜ್ಞರಲ್ಲಿ ಭಿನ್ನಾಭಿಪ್ರಾಯುಗಳುಂಟು.

೧೮೧೧. ಕುಂಡಲಿಯಿಪ್ಪ= ಸರ್ಪ ಇರುವಗಿಡ. ನಾಗದಾಳಿ ? ಮುಂಗಲಿಯು ವಿಷಪರಹರಿಸಿಕೊಳ್ಳುವದಕ್ಕೆ ತಿಕ್ಕುವಗಿಡವೆಂದು ಕೆಲವರು.

೧೮೧೩. ಕಾದ=ಗಳಿಸಿಇಟ್ಟ. ಹೇಮಕೆ+ಊದಲು.

೧೮೧೫. ವಿಷಮುಷ್ಟಿ = ವನಸ್ಪತಿ (Strychnia) ನಾಂಗುಲಿಕ=ಹಳದಿಹುವ್ವಿನಬಳ್ಳಿ. ವ್ಯಾಲಗಂಧಿ. ಅಗ್ನಿಶಿಖಿ (Gloriosa superba) ಶಶನಯನ=ಒಂದುತರದ ವನಸ್ಪತಿ. ಪಿತ್ತವರ=ಪಿತ್ತಘ್ನಬಳ್ಳಿ.

೧೮೧೬. ಕತ್ತೆಕಿರುಬನಗಿಡ. ಸಹದೇವಿ=ಕರಿಕೆ, ಇಲ್ಲವೆ ಜೇಕಿನಬೇರು. ಎತ್ತುನಾಲಿಗೆ=ಒಂದುತರದ ವನಸ್ಪತಿ (Tricho desma indicum) ತಿಲಕ=ಹಣೆಬೊಟ್ಟು. ಲೋಕ=ಸ್ತ್ರೀಲೋಕ. ಅತ್ತಸಾರು=ಬೆನ್ನುಹತ್ತಿಬರು.

೧೮೨೩. ಮುಗುಳುನಗೆ=ಮೊಗ್ಗಿನಂತಿರುವ ನಗೆ. ಹಗರಣದಮಾತು=ರಸಿಕನುಡಿ, ಶೃಂಗಾರ. ಬಗೆ=ಚಮತ್ಕಾರ.

೧೮೨೪. ಉಕ್ಕು=ಅತಿಸಂತೋಷಪಡು. ಮಿತಿಮೀರಿಮಾತಾಡು.

೧೮೨೬. ಸಾಂಬ್ರಾಣಿ = ಹಿರಿದಿನ ಕುದುರೆ. ಕೊಂಬೆ ಶೀಳು = ಬಲದಲ್ಲಿ ಭೀಮನೆನ್ನಿಸಿಕೊಳ್ಳು.

೧೮೨೮. ಕಾಟೆ=ಗಂಜಿ, ಆಹಾರ. ನಾಟೆಸೆವಬಿಲ್ಲು=ಲಿಂಗ; ಶಿಶ್ನ. ಕೋಟಲೆ=ತೊಂದರೆ.

೧೮೨೯. ಅಯ್ದು+ಅಲರ+ಅಂಬು=ಕಾಮನ ಕೈಯಲ್ಲಿರುವ ಐದುಹೂಬಾಣ. ಕಂದರ್ಪ=ಕಾಮ–ಇಲ್ಲಿ, ಕೂಳು ಕಾಮನಿಗೂ ಉಪ್ಪು. ಅವನಕೈಯ್ಯಲ್ಲಿರುವ ಬಿಲ್ಲಿಗೂ ತುಪ್ಪವು ಬಾಣಕ್ಕೂ ಸರಿ. ಮಾಡಲ್ಪಟ್ಟವೆ.

೧೮೩೩. ಹಣೆಕಟ್ಟುಹತ್ತುವದು=ಸೊರಗಿ ಹಣೆಎಲುವು ಮುಂದೆಹಾಯುವದು. (೨) ತಲೆನೋವು ಎದ್ದು ಹಣೆಗೆ ಪಟ್ಟಿ ಕಟ್ಟಬೇಕಾಗುವದೆಂದು ಕೆಲವರು ಕಣಕಾಲು=ಮೊನುಗಂಡ; ಕಿರಿಕಾಲು. ಅಣಕದ=ಹಾಸ್ಯದ.

೧೮೩೬. ರುಜೆ=ರೋಗ. ತನು ಒಡೆ=ಭೇದಿಸಿ ಜರ್ಜರವಾಗಿ [ decomposition] ಹಾಳೆಯಂತಕ್ಕೆ=ಸೊರಗಿ ಎಲೆಯಂತೆ ತಿಳುವಾಗು.

೧೮೪೪. ಗಂಡು=ಬಲಭಾಗ.

೧೮೪೫. ಸಿಕ್ಕಮಲವಕ್ಕು= ಮಲಬದ್ಧತೆ ಹೋಗುವದು. ಸಸಿನ = ಆರೋಗ್ಯ.

೧೮೪೬. ತಣ್+ಕೂಳು= ತಂಗೂ

ಸು. ಬೆಸಸು=ಚಿಕಿತ್ಸೆಗಾಗಿ ವಿಚಾರಿಸು.

೧೮೪೯. ನಾಲಿಗೆಯು ರುಚಿಯಿಂ ದಲ್ಲ ಹಸಿವೆಯಿಂದ ಊಟಮಾಡುವ ಠನು ಮುದಿಯಲ್ಲಿ ಹುಡುಗನಂತಿರು ಠನು.

೧೮೫೦. ರುಚಿಯುಮೇಳಾಡು = ರುಚಿಕರಪದಾರ್ಥಗಳನ್ನು ತಿನ್ನುವದ ಕ್ಕೆ ಅಪೇಕ್ಷಿಸು.

೧೮೫೪. ಹವನಾಗಿ = ಅರೋಗ್ಯ ಿಂದ ಭವಣೆ=ರೋಗ.

೧೮೫೭. ಹೆಮ್ಮಿಟಲಿ=ಹೆಮ್ಮುಟ್ಟಿಗೆ ಡದ ಎಲೆ. ಹೇರ್+ಎಕ್ಕೆ=ದೊಡ್ಡ ಎಕ್ಕೆ ಲೆ ರಮ್ಯದ=ಉತ್ತಮವಾದ. ರಸದಾ =ಕಬ್ಬು. ಒಮ್ಮಾನದಅರ್ಥ = ಅರ್ಥ ೀರು ಅಳತೆ, (ನೀರು).

೧೮೫೮. ತಕ್ಕಗಿಡ = ತಕ್ಕಔಷಧ ರೋಗ್ಯಚಿಕಿತ್ಸೆ.

೧೮೫೯. ಇದು (ಸುಣ್ಣದಹರಳು).

೧೮೬೦. ಮರನ್+ಹೊತ್ತಿ + ಬೇ ಯುವದು=ಕೋಲಿಗೆ ಬೆಂಕಿಹತ್ತಿದಂತೆ ಾಣುವದು (ಕೋಲಮಿಂಚು) ಉರಿ ಾಗಿ ಬೇಯ್ಯದು = ಉರಿಯಿಂದಲ್ಲ. ದ್ಯುತ್‌ಶಕ್ತಿಯಿಂದ ಪ್ರಕಾಶಿಸುವದು. ರಗಳ ನುಂಗಿ=(ಸಿಡಿಲುಬಡಿದು ಊ ಮನೆಗಳನ್ನು ಹಾಳು ಮಾಡುವದು= ಇದು ಗುಡುಗು). ಮರನೊತ್ತಿ ಅಂದ ರೆ ಮರವನ್ನುತಿಕ್ಕಿ ಉಂಟಾಗುವ ಬೆಂಕಿ ಎಂದು ಕೆಲವರು

೧೮೬೧. ಉರಿ = ಕೆಂಡದಂತಿರುವ ಪದಾರ್ಥ. ಸೂರ್ಯೋದಯ) ಬೇಲಿ= (೧) ಹಿತ್ತಲುಬೇಲಿ. (೨) ಕತ್ತಲೆ. (೩) ಭೂಲೋಕ. ಅರಿದು = ಆಶ್ಚರ್ಯ ಬಗೆ=ವಿಚಾರ. ಚೇಲಿ ಅಂದರೆ ನಿದ್ರಿಸು ವ ಕಣ್ಣಿಂದ ಕೆಲವರು ( ಇದು ಸೂ ರ್ಯನಬಿಸಿಲ).

೧೮೬೨. ಟೀ॥ ನೀರುಕಾಲಿಲ್ಲದೆ ಓ ಡುವದು. ಕೈಗಳಿಲ್ಲದೆ ತೆಪ್ಪ ಮೊದಲಾ ದವುಗಳನ್ನು ಊರಿಂದೂರಿಗೆ ಒಯ್ಯು ವದು. ಬಾಯಿಲ್ಲದೆ ರಭಸದಿಂದ ಘೋ ಷಿಸುವದು. (ಇದು ಹರಿಯುವ ಹೊಳೆ).

೧೮೬೩. ಇರಿ=ತಿವಿ, ಕಡಿ. ಏರ್= ಗಾಯ, ನೋವು ತಿರಿ...ಯುಣವಿಲ್ಲ= ಒಬ್ಬರಲ್ಲಿ ಇಸಿಕೊಂಡುಬಂದು ಅದನ್ನು ತಿರಿಗಿಕೊಡುವಹಾಗಿಲ್ಲ. (ಇದು ಬೆಂಕಿ).

೧೮೬೪. ಆಡಿದರೆ = ಬೆರಳಿನಿಂದ ಮಿಟಿದರೆ. ಆಡು= ನಾದಕೊಡು. ಆ ಡು=ನಾದಕೊಡು, ಆಡ =ಶಬ್ದಕೊಡು ವದಕ್ಕೆ. ಮರನ್+ಏರುವದು=ಷಿಡ್ಡು. ವೀಣೆ ಮೊದಲಾದ ಮರದಿಂದ ಮಾಡಿ ದ ವಾದ್ಯಗಳಮೇಲೆ ಹತ್ತುವದು. ಕೂ ಡದೆ= ವಾದ್ಯಗಳನ್ನು ಬಿಟ್ಟು ಕಡೆಗಾದ ರೆ. ಕೊಂಕಿನಡೆಯುವದು=ಸುತ್ತಿಕೊಂ ಡು ಹೋಗಿ ಬಿಡುವದು. ತುಂಡುತುಂ

ಡಾಗಿ ಕಡಿದರೆ ಒಣಗುವದಿಲ್ಲ. (ಇದು ವೀಣೆಯತಂತಿ).

೧೮೬೫. ಟೀ॥ ಕತ್ತಿಯಿಂದ ಹಸನಾಗಿ ಹೋದರೂ ತಿರುಗಿ ಮೊಳೆತು ಮತ್ತಷ್ಟು ವಿಪುಲವಾಗಿ ಬೆಳೆಯುವದ್ಯು ಬಿಸಾಡಿದರೆ ಭೂಮಿಯಲ್ಲಿನದದು =ನಾಟಿಸಿದರೂ ಬೆಳೆಯುವದಿಲ್ಲ (ಇದು ತಲೆಯು ಕೂದಲು).

೧೮೬೬. ಇದು ಮೆಣಸು. ಇಲ್ಲವೆ ಮೆಣಸಿನಕಾಯಿ.

೧೮೬೭. ಹತ್ತು ಸಾವಿರ ಕಣ್ಣು = ಪ್ರತಿಗರಿಯಲ್ಲಿಯೂ ಕಣ್ಣು. ನೆತ್ತಿಲಿ ಬಾಲ=ತಲೆಯಲ್ಲಿ ಜುಟ್ಟು. ಹುತ್ತಿನ ಹುಳು=ಹಾವು ಮೊತ್ತ=ಗುಂಪು (ಇದು ನವಿಲು).

೧೮೬೮. ಮಣಿ=ಗಂಟಿನ ಬಿದರಿನ ಕೋಲಿಗೆ ಹಗ್ಗಕಟ್ಟಿ ಹೈನವನ್ನು ಹೊತ್ತು ಒಯ್ಯುವದು (ಕೋಲು) ತನ್ನಸುತ್ತಲು ಮರದಕಟ್ಟಿಗೆ ಮಜ್ಜಿಗೆಯೊಳಗಿರುವ ಬೆಣ್ಣೆಯನ್ನು ಹಿಡಿದು ತಿನ್ನವೆ ಹೊರಗೆ ತರುವದು ಕಡಗೋಲೆಂದು ಕೆಲವರು).

೧೮೬೯. ಬಟ್ಟಲದಬಾಯಿ=ದುಂಡಾಕಾರ. ತನ್ನ ಹೆಂಡರನು=ಕತ್ತಲೆಛಾಯೆ ಎಂಬ ತನ್ನ ಹೆಂಡರನ್ನು ( ಇದು ಸೂರ್ಯ).

೧೮೭೦. ಸೊಲ್ಲು=ಮಾತು. ಸಂಗತಿ. (ಇದು ಚಿಗುರೆಯ ಬಲೆ).

೧೮೭೧. ಆಸನ = ಕೆಳಭಾಗ. ಸಾ ಸಿ=ಸಾಹಸಿ ಪ್ರಯತ್ನಗಾರ(ಇದು ಪಿಚ ಕಾರಿ, ಜೇಕಳಿ. ಕಾರಂಜಿ) ಬೇಸರಿಯ ದೆ=ಹೊತ್ತುಕೊಂಡು ತಿರುಗಿದರೆ ಅ ದರೆ ಬೇಟೆಯಾಡಿದರೆ. ಮೃಗಗಳನ್ನು ಕೊಲ್ಲುವದು ಅಂದರೆ ತುಬಾಕಿ ಎಂದು ನಾರಾಯಣಶಾಸ್ತ್ರಿಗಳು.

೧೮೭೨. ಹಲವುಮಕ್ಕಳು=ಕೋಳಿ ಯಮರಿಗಳು. ಜುಟ್ಟು = ತುರಾಯಿ ಜಾವವರಿ= ನಾಲ್ಕು ಗಂಟೆಗೆ ಕೂಗು. ಹೆಂಡತಿ = ಹೇಂಟೆ, ಹೆಣ್ಣು ಕೋಳಿ. (ಇದು ಹುಂಜ).

೧೮೭೩. ಇದರಲ್ಲಿ ಪ್ರತಿ ಒಂದಕ್ಕೆ ಎರಡರ್ಥವಿರುವದು. ಮಲ್ಲಿಗೆಗೆ ಹುಳಿಯಕ್ಕು=(೧) ಮಲ್ಲಿಗೆ ಹೂವಿಗೆ ಭ್ರಮರಗಳು ಬರುವವು. g. s. ಹೂವಿನ ಹುಡಿ (೨) ಮಲ್ಲಿ= ಮಣ್ಣಿನಪಾತ್ರೆಯಲ್ಲಿ ಹುಳಿ ಇಟ್ಟರೆ. ಆಗದು ಅಂದರೆ ಕಿಲುಬುವದಿಲ್ಲ. ಕಲ್ಲಿಗೆ ಗಂಟಕ್ಕು = ಕಲ್ಲಿಮೂಸಿಗೆ ಗಂಟು ಕಟ್ಟಬೇಕಾಗುವದು. ಇಲ್ಲವೆ ಬಗಲಂಗಿಗೆ ಕಸಿಇರುವದು. (೩) ಹೊಟ್ಟು, ಕುಳ್ಳು ಮೊದಲಾದವುಗಳನ್ನು ತರುವದಕ್ಕೆ ಹಗ್ಗದಿಂದ ಮಾಡಿದ ಕಲ್ಲಿಗೆ ಗಂಟುಗಂಟಿರುವದು. ಹಲ್ಲಿಗೆ ನೊಣನುಸವಿಯಕ್ಕು=(೧) ಹಲ್ಲಿನಲ್ಲಿ ನೊಣ ಜುಸಿಕ್ಕರೆ ಅದು ಸವಿಸವಿಹತ್ತುವದು

(೨) ಹಲ್ಲಿ ಎಂಬ ಪ್ರಾಣಿಯು ನೊಣವನ್ನು ತಿಂದು ಜೀವಿಸುವದು.

೧೮೭೪. ಮಣಿಯು ಮಾಡಿದ=ಹಲಿಗೆ ಕುಂಟಿಮಾಡಿದ (ಬಡಿಗ) ಹೆಣೆದು ಕಟ್ಟಿದ=(ಹೆಣಿಗೆಕಟ್ಟುವವ) ಕುಣಿದಾಡಿಸತ್ತ = (ನೆಯಿಕಾರ) ಸಂತೆಯೊಳು ಹೆಣನಮಾರಿದ =(ಜವಳಿ ಅಂಗಡಿಯಪ) ಇದು ಮಗ್ಗ ಹಾಸು, ನೆಯಿಕಾರ, ಅರಿವೆ ಇತ್ಯಾದಿ ಇಲ್ಲವೆ ಮಣಿ=ಸೀಸದಗುಂಡು. ಹೆಣಿ=ಬಲೆಹೆಣೆ, ಕುಣಿ. ದಾಡಿ ಸತ್ತ=ಬೆಸ್ತರವ. ಹೆಣ=ಮೀನು (ಇದು ಮೀನಿನ ಬಲೆಯಿಂದ ಕೆಲವರು.

೧೮೭೫. ಇಕ್ಕಳದಂತೆ ಕೊಂಡಿಯುಳ್ಳ ಏಡಿ ಚೇಳು ಮೊದಲಾದ ಜಂತುಗಳಿಗೆ ೮ ಕಾಲುಬೆರಳುಗಳಿರುವವು. ಇವುಗಳ ಹೆಸರೇ ಇಕ್ಕಳಕ್ಕೆ ಇಟ್ಟಿರುವದರಿಂದ ಇವಕ್ಕೆ ಎಂಟುಬಳ್ಳದ (ಬೆರಳಿನ) ನಾಮವೆಂದು ಹೆಸರು. ಇಕ್ಕಳದ ಎರಡು ತುಂಡುಗಳನ್ನು ಕೂಡಿಸುವ ಮೊಳೆಗೆ ಗಂಟಲಮುಳ್ಳೆಂದು ಹೆಸರು. ಬಂಟರನು = ತನಗಿಂತಲು ದೊಡ್ಡ ಸಾಮಾನುಗಳನ್ನು ಬಡಿಸುವದು=ಕಮ್ಮಾರ ಕುಲುಮೆಯುಲ್ಲಿ ಕಾಸಿ ಬಡೆಯುವದು (ಇದು ಇಕ್ಕಳ).

೧೮೭೬. (ಬೀಸುವಕಲ್ಲು)

೧೮೭೭. ಮುಂಡೆ= ಕಡಗೋಲಿನ ತಲೆ. ಬಾಯಿ=ಮಜ್ಜಿಗೆ ಗಡಿಗೆ. ಚಂಡಿಕೆ=ಕಡಗೋಲಿನ ತುದಿ. ಉಂಡೆ= ಬೆಣ್ಣೆಯಮುದ್ದೆ.(ಇದು ಕಡಗೋಲು).

೧೮೭೮. ವಿವಿಧಾಕಾರ ತೋರುವದು (ಮೋಡ).

೧೮೭೯. ಕಿಡಿಯುಗುಳಿ= ಬೆಂಕಿಸುರಿಸು. (ಇದುಬಾಣ).

೧೮೮೦. ಸೊಮ್ಮು= ಆಸ್ತಿ. ಅರಿವೆ ಅಂಚಡಿ ಹೊರುವದು= (ಜೋಳಿಗೆಯಲ್ಲಿ) ಇರಿಸಿಕೊಳ್ಳುವದು. (ಇದು ತೊಟ್ಟಿಲು).

೧೮೮೧. ಅರಮನೆ=ಸೆಟ್ಟಿಗೆ. ಕರ= ಕೈ. ವಂಶಜರ= ಕಬ್ಬಿಣದ ಸಾಮಾನುಗಳನ್ನು ತಿನ್ನು=ತಿಕ್ಕಿ ಸವಿಸು. (ಇದು ಅರ). [ಇದು ಕಪ್ಪಲಿ].

೧೮೮೨. ಪಾತಾಳ=ಬಾವಿ. ಸೀತಳ=ನೀರು.

೧೮೮೩. ಸಾಂಬ್ರಾಣಿ ಅಂವರೆ ಲವೆಂಡರ್; ಸುಗಂಧದ್ರವ್ಯಗಳಲ್ಲೊಂದು

೧೮೮೪. ನಾಡೆಲೆ=ಗಿಡಗಂಟೆ ಕೂಡೆ=ಸಾಕಲು ಬೆಳ್ಳಗೆ = ಹಾಲಿನಿಂದ ಊಡಿದಅರಿವೆ= ಮೊಲೆಗೆಹಾಕಿದ ಅರಿವೆಯುಚೀಲ. ಇದೇ ಅವಳಿಗೆ ಕುಪ್ಪುಸ. (ಇದು ಆಡು).

೧೮೮೫. ಹೆತ್ತುತಲೆ= ಉರಿಹತ್ತಿದ ಕೂಡಲೆ. ಮತ್ತೆ+ಆರುತಲೆ = ನಂದಿ ಹೋದಾಕ್ಷಣವೇ ಹೆತ್ತವ್ವನ=ಒಲೆಯೊಳಗಿನ (ಇದುಬೆಂಕಿ) (ಸವುಟು).

೧೮೬. (ನೊಣ). ೧೮೮೭ (ಹುಟ್ಟು, ಇಲ್ಲವೆ.

೧೮೮೮. ಹಿಂಗು = ಸಿಳ್ಳುಹಾಕು. ಹಿಗ್ಗು=ಒದರು. ಸಿಂಗಿ=ಚುಂಚುಪುಟ ಸಂಗ=ಸಾಕು ಪ್ರೀತಿ. (ಇದುಗಿಳಿ).

೧೮೮೯. ತನ್ನಗರಿಗಳನ್ನು ಬಾಣ ದಂತೆ ಸಿಡಿಸುವದು( ಇದ ಏದು ).

೧೮೯೦. ಇದು ಪಕ್ಷಿಗಳನ್ನು ಹೆದ ರಿಸುವದಕ್ಕೆ ಹೊಲದಲ್ಲಿಟ್ಟ ( ಬೆಚ್ಚು ).

೧೮೯೧. ಕುಡಿವಾಲ=ಸಣ್ಣಬಾಲ, ಕೂಡಿಸುವದಾರ ಮಣಿ=ಸೀಸದಮಣಿ. (ಇದು ಮೀನಿನ ಬಲೆ)

೧೮೯೨. ಅನೇಕ ಜನ್ಮಗಳಲ್ಲಿ ಬರು ವ (ದೇಹ)

೧೮೯೩–೯೪(ಸಾಣೆಕಲ್ಲು).

೧೮೯೫. ಒಣಗಿದಮರ =ಮಣಿ. ಬಿಣಿಲು=ಬೇರು. ಸಾವಿಗೆ. ತಣಿಗೆ= ತಳಿಗೆ. ಗಂಗಾಳ. (ಇದುಸಾವಿಗೆಯ ಮಣಿ).

೧೮೯೬. ಅಟ್ಟಿಳು = ಕುದಿಸಿದರು. ವಾಡಿಗ=ಹೂಗಾರ. ಹುವ್ವಿನಲ್ಲಿ ಹು ಟ್ಟಿದ್ದು, ಅಂದರೆ ಅಡಿಕೆ. ಕುಂಟಿಗೆ= ಹಳ್ಳದಲ್ಲಿ ಹುಟ್ಟಿದ್ದು. ಸುಣ್ಣ ದಹರಳು. ಹುಟ್ಟಿಯ ಮೂಗಹರಿದರು = ವೀಳ್ಯದ ಎಲೆಯ ತುಂಬು ನಾರು ಇತ್ಯಾದಿ ತೆಗೆ ದರು. ಭವಗೆಟ್ಟು=ತಿನ್ನಲ್ಪಟ್ಟು. (ಇದು ತಾಂಬೂಲ).

೧೮೯೭. (ಒಂದು ವರ್ಷ).

೧೮೯೮. ಕಪ್ಪು=ಕರಿಗುಡ್ಡೆ. ಬಿಳಿ= ಬಿಳಿಗುಡ್ಡೆ (ಇದು ಕಣ್ಣು).

೧೮೯೯. ದಾರದಿಂದ ಹೊ[illegible] (ಅಂಗಿ).

೧೯೦೦. ಯಾತ=ಕೈರಾಟಿ. ಚ[illegible] ಕಾತಕಾಯಿ=ದಾರ ಸುತ್ತಿದ ಕಂಡಿ[illegible] (ಇದು ಕಂಡಿಕೆ ಸುತ್ತುವರಾಟ).

೧೯೦೧. (ಮೀನಿನ ಬಲೆ).

೧೯೦೨ ? ೧೯೦೩ ? ೧೯೦[illegible] ೧೯೦೫ ? ೧೯೦೬ ? ೧೯೦೭ !

೧೯೦೮. (ಗಂಧದ ಗಿಡ).

೧೯೦೯. ? ೧೯೧೦ ? ೧೯೧[illegible] ೧೯೧೨ ? ೧೯೧೩ ? ೧೯೧[illegible] ೧೯೧೫ ? ೧೯೧೬ ? ೧೯೧[illegible] ೧೯೧೮ ?

೧೯೧೯.? ಹರೆಯಲ್ಲಿ=ಕಾಯಿ ಇ[illegible] ವಾಗ. ನೆರೆಯಲ್ಲಿ=ಪಕ್ವವಾದಾಗ. [illegible] ಸು=ಕೆಂಪು. (ಇದು ಮಾವಿನಹಣ್ಣು[illegible]

(೧೯೨೦ (ಗಾಳಿಯಪಟ).

೧೯೨೧.? ೧೯೨೨. ಸಂದಮೇಲೆ[illegible] ಕಡಿದಮೇಲೆ. ಬೆಂದಮೇಲೆ ಉರಿ=ಇ[illegible] ಲು. (ಕೊಡಲಿಯಕಾವು).

೧೯೨೩. (ಬೆಳಕಿಂಡಿ).

೧೯೨೪. ದಾನವರ ವೈರಿ = ಶಿ[illegible] ತೆಂಗಿನಕಾಯಿಗೆ ಮೂರು ಕಣ್ಣಿರುವ[illegible] ರಿಂದ ಇದಕ್ಕೂ ಶಿವನ ಹೆಸರು ಬಂ[illegible] ದೆ. (ಇದು ಎಳೆನೀರು).

೧೯೨೫ (ಗರಗಸ).

೧೯೨೬ ? ೧೯೨೭ ? ೧೯೨೮?

# ಸರ್ವಜ್ಞನ ಗ್ರಂಥದಲ್ಲಿ ಪ್ರಯೋಗವಾದ ಪರಮಾತ್ಮನ

## (ಶಿವನ) ಹೆಸರುಗಳು.

| ಹೆಸರು | ಪದ್ಯಹೆ | ಸರು | ಪದ್ಯ | ಹೆಸರು | ಪದ್ಯ |
|---|---|---|---|---|---|
| ನಂದಿಯನು ಏರಿದನ | ೧ | ಸರ್ಪಭೂಷಣ | ೧೦೫ | ಪಶುಪತಿ | ೨೫೬ |
| ಚಂದರನ ಸೂಡಿದನ | ೧ | ಈಶ್ವರ | ೧೦೬ | ಸದಾಶಿವ | ೨೬೭ |
| ಪನ್ನಗಧರ | ೨೪ | ಏಕವಸ್ತು | ೧೧೮ | ಪರಬೊಮ್ಮ | ೨೭೪ |
| ಮುಕ್ಕಣ್ಣ | ೪ | ಒಬ್ಬ. ಸರ್ವಜ್ಞ, ಕರ್ತ. | ೧೫೦ | ಪರಮಾತ್ಮ | ೨೭೭ |
| ಈಶ | ೫ | ದೇವ | ೧೫೧ | ಸರ್ವಾಂತರ್ಯಾಮಿ | ೨೭೯ |
| ಅಭವ | ೫ | ಮೃಡ | ೧೫೩ | ರೂಢಿಗೀಶ್ವರ | ೩೦೨ |
| ಖಂಡಪರಶು | ೧೨ | ಸೃಷ್ಟಿಗೀಶ್ವರ | ೧೫೬ | ಕಾರಣ ಪುರುಷ | ೩೧೬ |
| ಶಿವ | ೧೩ | ಆದಿದೈವ | ೧೫೯ | ಮೂಲವಸ್ತು | ೩೩೫ |
| ಚಂದ್ರಶೇಖರ | ೧೪ | ರುದ್ರ | ೧೭೦ | ನಿರುತ | ೩೩೯ |
| ಬಾಳಲೋಚನ | ೨೩ | ಶೂಲಿ | ೧೭೬ | ಇಂದುಧರ | ೩೮೭ |
| ಚನ್ನಮೂರುತಿ | ೨೪ | ಪುರಹರ | ೧೭೮ | ನಿಜವಿಜಯಬಿಂದು | ೩೯೯ |
| ಮೂರು ಕಣ್ಣೀಶ್ವರ | ೨೭ | ಶಂಭು | ೧೮೪ | ವಸುಧಿಗೀಶ್ವರ | ೪೨೧ |
| ಹರ | ೨೭ | ಮೂರು ಕಣ್ಣೀಶ | ೧೮೬ | ನಾಗಭೂಷಣ | ೪೫೫ |
| ಆತ. | ೨೮ | ತ್ರಿಣಯ | ೧೮೭ | ಶಾಶ್ವತ | ೪೭೦ |
| ಗುರುನಾಥ | ೨೮ | ನಿತ್ಯ | ೧೮೮ | ನಿಟಲಾಕ್ಷ | ೪೭೨ |
| ದೈವ | ೩೭ | ಲಿಂಗ | ೧೯೧ | ಶಂಕರ | ೪೭೫ |
| ಗುರುದೈವ | ೪೦ | ಜಾತ | ೧೯೩ | ಉನ್ನತದೇವ | ೪೯೬ |
| ಪರಮ | ೪೧ | ಬಳ್ಳ, ನರಿ. | ೨೦೦ | ಪಿನಾಕಿ | ೫೧೪ |
| ಬೊಮ್ಮ | ೫೮ | ಜಗದೀಶ | ೨೦೮ | ಘನ | ೫೧೬ |
| ನೀಲಕಂಠ | ೬೦ | ಪರಶಿವ | ೨೧೦ | ಭೂತೇಶ | ೫೬೯ |
| ಸದ್ಗುರು | ೭೬ | ಸ್ಮರಹರ | ೨೧೦ | ಯಂತ್ರವಾಹಕ | ೬೧೮ |
| ಅಸಮಾಕ್ಷ | ೭೭ | ದೇವರು | ೨೩೭ | ಪೊಡವಿಗೀಶ್ವರ | ೨೬೦ |
| ಆಗ ಮಾತೀತ | ೮೫ | ಉರಗಭೂಷಣ | ೨೩೯ | ಕಪ್ಪುಗೊರಳ | ೯೪೯ |
| ಭರಿತ | ೯೨ | ಮಾರಸಂಹರ | ೨೪೪ | ಮನಸಿಜಾರಿ | ೧೧೩೩ |
| ನಿರ್ದೇಹಿ | ೧೦೧ | ನಿರಂಜನ | ೨೪೬ | ಏಣಾಂಕಧರ | ೧೩೦೬ |
| ಜಗಲಿಂಗ | ೧೦೧ | ಶ್ರೀಚನ್ನ | ೨೫೦ | ಭಗ | ೧೫೧೬ |

# ವಚನಗಳ ವರ್ಣಾನುಕ್ರಮಣಿಕೆ.

## ಓ



## ಕ

* ಆಳು ಇದ್ದರೆ ಅರಸು

## ಖ



## ಗ

## ಜ



## ತ

## ದ

## ಯ



## ರ



## ಲ

# OPINIONS.

## E. P. Rice B. A.

DEAR SIR,

'I write to thank you very warmly for the copy of your critical collection of 'Sarvajna's Vachanas.' I congratulate you on having successfully overcome the difficulties and discouragements which at first beset you, and having brought to completion a very scholarly and much-needed piece of work.

The graphic account you have given of Sarvajna's manner of life, and the extent of his literary knowledge as evidenced by his own words, is of great interest. You have succeeded in bringing him out of the shadows, and making him stand out as a man of remarkable independence and character as well as of literary merit. For this, all lovers of the Kanarese people will be grateful to you; and one result of your work is likely to be that he will receive more respectful attention than he has hitherto enjoyed.

Your analysis of his grammer, vocabulary, metre etc will be appreciated by scholars. But I feel that the chief value of your work is that it presents us for the first time with a critically corrected text. The uncritical character of past collections of his verses, their wide differences from one another, their numerous inaccuracies and obscurities and the absence of any critical apparatus for improving this state of things, have been the principal causes of his neglect. You have made a long step towards remedying

these defects. There is of course much work yet to be done, but I trust that one result of this publication of your studies will be to revive interest in Sarvajna and bring to light additional and older manuscripts, so that in a second edition you may be able to reach a still higher degree of accuracy in the text. In the mean while all will be greatful for the purified text you have given, together with the various readings and the Alphabetical Index, and valuable Introduction.

With regard to Sarvajna's date, I am fully in accord with you that, so far as our present evidence goes, he should be placed in the Sixteenth Century. Although you have twice referred to me as of a different opinion a reference to pages 73 and 117 of the second edition of my 'Kanarese Literature' will show that I assigned that date to him, and had placed him in the section dealing with the Vijayanagara period. The parallels which you have pointed out between him and Somesvara and Nijaguna Yogi call for further study which may throw light on the subject.

That Sarvajna did not preface his verses with any praise of former poets is doubtless to be explained by the fact that he did not, like the classical poets, write for the learned, and his verses wers probably never issued as a complete work at all. They appear to have the character of way side sayings, *Obiter dicta*, *logia*, *table-talk*, and were probably preserved only in fragmentary collections made by himself and others.

The fact that he was no courtly poet, and that at the courts Lingayat literature was falling into disfavour while Vaishnavism was becoming dominant, may partly account for the neglect of his verses, and consequently for the numerous inaccuracies that have crept into them.

Accept my cordial thanks, and believe me

Sussex
West coomber, Hassocks,
*5th July 1925*

Yours Very Sincerely
*Edward. P Rice.*

---

## B. L. Rice Esq. C. I. E.

Dear Sir,

I beg to thank you for sending me a copy of your edition of the 'Sarvajna Vachanagalu', and I am sorry not to have acknowledged it sooner. But I had not time to examine it carefully before. I think you are entitled to the gratitude of the Kannada-speaking peoples for the complete and well-ordered arrangement of the work, and the aids you have provided for understanding the contents, in your commentary. The homely verses of the author cannot but have a good effect in promoting sound morals and encouraging the formation of character They should also tent to establish good understanding between the various classes in the Southern Maharatta country, among whom chiefly they are already so justly popular.

Hoping your work will have good circulation.

Greenhalgh
Harrow-on-the-Hill
*14th July 1925..*

Belive me
Yours Truly
*B L. Rice.*

---

## R. Narasimhacharyar M. A., M. R. A. S,

DEAR MR. UTTANGI

Please accept my cordial thanks for your courtesy in sending me a copy of your valuable book "Sarvajna Vachanagalu" I went through the introduction with great interest and also portions of the text and hasten to congratulate you on bringing out such an excellant edition of this popular work. I have nothing but admiration for your industry and perseverance and for the care in selecting the proper readings. The introduction treats exhaustively of all matters worth knowing about the author and his work.

Malleswaram
Bangalore
*30th January 1925.*

Yours Sincerely
*R. Narasimhachar.*

---

## Dewan Bahadur Rajasabhabhushana K. P. Puttanna Chetty Esq. K. T. C. I. E.

*First Councillor Retired*

DEAR MR. UTTANGI,

Please let me congratulate you on having brought out the best Edition of Sarvajna Murti's sayings that I have seen. The critical treatment adopted by you, the comparison and the collection of various manuscripts as well as printed versions, your comparative study of the work and your introduction exhaustively dealing with the author and his work make the present Edition in valuable

